# ಜಮಾಅತೆ ಇಸ್ಲಾಮಿ

# ನಡೆದು ಬಂದ ದಾರಿ

- ಕ್ರೋಡೀಕರಣ -

ಇಬ್ರಾಹೀಮ್ ಸಈದ್

ಎಂ. ಸಾದುಲ್ಲ

ಪಿ. ನೂರ್ ಮುಹಮ್ಮದ್

ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

## ಪ್ರಕಾಶಕರ ಮಾತು

ಭಾರತದ ಉಪ ಭೂಖಂಡದಲ್ಲಿ ಮೌ। ಸೈಯದ್ ಅಬುಲ್ ಆಲಾ ಮೌದೂದಿ(ರ) ಅವರು ಇಸ್ಲಾಮಿನ ಸಮಗ್ರ ಕಲ್ಪನೆಗಳನ್ನು ತಮ್ಮ ಲೇಖನಗಳ ಮೂಲಕ ವಿದ್ವಾಂಸರ ಮತ್ತು ಜನಸಾಮಾನ್ಯರ ಮುಂದಿಟ್ಟರು. ಅವರೊಂದಿಗೆ ಸ್ಪಂದಿಸಿದ ದೇಶದ ಸುಮಾರು 75 ವಿದ್ವಾಂಸರು 1941ರ ಆಗಸ್ಟ್ 25ರಂದು ಲಾಹೋರ್‌ನಲ್ಲಿ ಸಭೆ ಸೇರಿ 'ಜಮಾಅತೆ ಇಸ್ಲಾಮೀ' ಎಂಬ ಸಂಘಟನೆಗೆ ನಾಂದಿ ಹಾಕಿದರು.

'ಜಮಾಅತೆ ಇಸ್ಲಾಮೀ ನಡೆದು ಬಂದ ದಾರಿ' ಎಂಬ ಈ ಕೃತಿಯು ಜಮಾಅತ್‌ನ ಆರಂಭದಿಂದ ದೇಶ ವಿಭಜನೆಯವರೆಗಿನ ಅಂದರೆ 1941ರಿಂದ 47ರವರೆಗಿನ ಇತಿಹಾಸವನ್ನು ಒಳಗೊಂಡಿದೆ. ಅತ್ಯಂತ ದುರ್ಬಲಾವಸ್ಥೆಯಲ್ಲಿ ಆರಂಭಗೊಂಡ ಈ ಇಸ್ಲಾಮೀ ಆಂದೋಲನವು ಇಂದು ಬೆಳೆದು ಸುದೃಢವಾಗಿ ನಿಂತಿರುವ ಹಿನ್ನೆಲೆಯಲ್ಲಿ, ಜಮಾಅತ್‌ನಲ್ಲಿ ಹೊಸತಾಗಿ ಸೇರುವ ಯುವ ಪೀಳಿಗೆಯು ಅದರ ಇತಿಹಾಸವನ್ನು ಅರಿತಿರಬೇಕೆಂಬ ಅಗತ್ಯವನ್ನು ಮನಗಂಡು ಈ ಕೃತಿಯನ್ನು ರಚಿಸಲಾಗಿದೆ. ಉರ್ದುವಿನಲ್ಲಿ ಜಮಾಅತ್ ಕೇಂದ್ರವು 'ರೂದಾದೆ ಜಮಾಅತೆ ಇಸ್ಲಾಮೀ' ಎಂಬ ಹೆಸರಿನಲ್ಲಿ ಐದು ಭಾಗಗಳಲ್ಲಿ ಪ್ರಕಟಿಸಿದ ಗ್ರಂಥದಿಂದ ಆಯ್ದಭಾಗಗಳನ್ನು ಕ್ರೋಢೀಕರಿಸಿ ಈ ಕೃತಿಯನ್ನು ಸಿದ್ಧಪಡಿಸಲಾಗಿದೆ. ಈ ಕೃತಿಯು ಜಮಾಅತ್ ಬಂಧುಗಳಿಗೆಂಬಂತೆ ಜಮಾಅತ್‌ನ ಇತಿಹಾಸವನ್ನು ಪ್ರಾಮಾಣಿಕವಾಗಿ ಅರಿಯಲು ಉತ್ಸುಕರಾಗಿರುವ ಎಲ್ಲರಿಗೂ ಪ್ರಯೋಜನವಾಗಲೆಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

## ಅನುಕ್ರಮಣಿಕೆ

**1941**ರ ಆಗಸ್ಟ್ 26 (ಹಿ.ಶ.1360 ಶಅ್‌ಬಾನ್ 2)ರಂದು ಬೆಳಿಗ್ಗೆ ಲಾಹೋರ್‌ನಲ್ಲಿರುವ ತರ್ಜುಮಾನುಲ್ ಕುರ್‌ಆನಿನ ಕಛೇರಿಯಲ್ಲಿ ಜರಗಿದ ಜಮಾಅತೆ ಇಸ್ಲಾಮೀ ಸ್ಥಾಪನಾ ಸಭೆ ಜರಗಿತು. ಸಭೆಯಲ್ಲಿ ಒಟ್ಟು 75 ಮಂದಿ ಹಾಜರಿದ್ದರು. ಸಭೆಯಲ್ಲಿ ಮೌಲಾನಾ ಸೈಯದ್ ಅಬುಲ್ ಅಲಾ ಮೌದೂದಿಯವರು ತಮ್ಮ ಪ್ರಾಸ್ತಾವಿಕ ಭಾಷಣದಲ್ಲಿ ಹೀಗೆ ಹೇಳಿದರು:

"ಒಂದೊಮ್ಮೆ ನಾನು ಇತರ ಮುಸ್ಲಿಮರಂತೆಯೇ ಪರಂಪರಾಗತ ಧರ್ಮ ಸಂಪ್ರದಾಯಗಳಲ್ಲಿ ವಿಶ್ವಾಸವಿರಿಸಿ, ಅದರಂತೆ ಜೀವಿಸುವವನಾಗಿದ್ದೆ. ತರುವಾಯ ಈ ರೀತಿ ಪೂರ್ವಜರ ಅಂಧಾನುಕರಣೆಯಿಂದ ಪ್ರಯೋಜನವಿಲ್ಲವೆಂಬ ಪ್ರಜ್ಞೆ ಮೂಡಿದಾಗ ನಾನು ನನ್ನ ಸಂಪೂರ್ಣ ಗಮನವನ್ನು ಪವಿತ್ರ ಕುರ್‌ಆನ್ ಮತ್ತು ಪ್ರವಾದಿಚರ್ಯೆಯತ್ತ ಕೇಂದ್ರೀಕರಿಸಿದೆ. ಇಸ್ಲಾಮಿನ ನೈಜ ರೂಪವನ್ನು ಮನಗಂಡು ಮನಃಪೂರ್ವಕವಾಗಿ ಅದರಲ್ಲಿ ವಿಶ್ವಾಸವಿರಿಸಿದೆ. ತರುವಾಯ ಇಸ್ಲಾಮಿನ ಸಾಮೂಹಿಕ ರಂಗಗಳ ಹಾಗೂ ಅವುಗಳ ವಿಶದಾಂಶಗಳ ಅಧ್ಯಯನ ನಡೆಸಿದೆ. ಈ ಬಗ್ಗೆ ನನಗೆ ಸಂಪೂರ್ಣ ಮನಸ್ಸಂತೃಪ್ತಿಯಾದ ಬಳಿಕ ಆ ಸತ್ಯದೆಡೆಗೆ ಇತರರನ್ನು ಆಹ್ವಾನಿಸುವ ಪ್ರಯತ್ನಕ್ಕೆ ತೊಡಗಿದೆ. ಈ ಉದ್ದೇಶ ಸಾಧನೆಗಾಗಿ ಹಿಜರಿ 1352ರಲ್ಲಿ ತರ್ಜುಮಾನುಲ್ ಕುರ್‌ಆನ್ ಎಂಬ ಹೆಸರಿನ ಮಾಸ ಪತ್ರಿಕೆಯನ್ನು ಆರಂಭಿಸಿದೆ. ಆರಂಭದ ಕೆಲವು ವರ್ಷಗಳನ್ನು ಅಡ್ಡಿ ಆತಂಕಗಳ ನಿವಾರಣೆಗಾಗಿಯೂ ಇಸ್ಲಾಮಿನ ಒಂದು ಸ್ಪಷ್ಟ ಚಿತ್ರಣವನ್ನು ಮೂಡಿಸುವುದಕ್ಕಾಗಿಯೂ ವಿನಿಯೋಗಿಸಿದೆ. ತರುವಾಯ ಇಸ್ಲಾಮನ್ನು ಒಂದು ಆಂದೋಲನದ ರೂಪದಲ್ಲಿ ಪುನರುತ್ಥಾನಗೊಳಿಸಲು ಹೆಜ್ಜೆಯಿರಿಸಿದೆ. ಧರ್ಮನಿಷ್ಠೆಯನ್ನು ನಮ್ಮ ಜೀವನದ ಖಾಸಗಿ ರಂಗಕ್ಕೆ ಸೀಮಿತಗೊಳಿಸದೆ, ಸಾಮೂಹಿಕವಾಗಿ ಇಸ್ಲಾಮೀ ಪದ್ಧತಿಯನ್ನು ಕಾರ್ಯಗತಗೊಳಿಸಿ, ಅದಕ್ಕೆ ತಡೆಯೊಡ್ಡುವ ಶಕ್ತಿಗಳನ್ನು ಆ ಮಾರ್ಗದಿಂದ ದೂರ ಸರಿಸಲಿಕ್ಕಾಗಿ ಸಂಘಟಿತ ಪ್ರಯತ್ನಗಳನ್ನು ನಡೆಸುವುದೇ ಇಸ್ಲಾಮನ್ನು ಆಂದೋಲನ ರೂಪದಲ್ಲಿ ಪುನರುತ್ಥಾನಗೊಳಿಸುವುದರ ಉದ್ದೇಶವಾಗಿದೆ.

## ದಾರುಲ್ ಇಸ್ಲಾಮ್ ಸಂಸ್ಥೆ

ಕ್ರಿ.ಶ.1938ರಲ್ಲಿ (ಹಿ.ಶ.1357) ದಾರುಲ್ ಇಸ್ಲಾಮ್ ಸಂಸ್ಥೆಯ ರಚನೆಯು ಅದರ ಪ್ರಥಮ ಸೋಪಾನವಾಗಿತ್ತು. ಅಂದು ಕೇವಲ 4 ಮಂದಿ ಸಹಕಾರ್ಯಕರ್ತರಿದ್ದರು. ಅಂದು ಇಸ್ಲಾಮೀ ಆಂದೋಲನದೆಡೆಗೆ ಆಹ್ವಾನ ನೀಡುವ ಮತ್ತು ಜನಾಭಿಪ್ರಾಯ ರೂಪಿಸುವ ಕೆಲಸವಷ್ಟೆ ನಿರಂತರ ನಡೆಯುತ್ತಲಿತ್ತು. ಈ ಮಧ್ಯೆ ಹಿತೈಷಿ(ರಫೀಕ್)ಗಳ ಸಂಖ್ಯೆಯೂ ಹೆಚ್ಚುತ್ತಲಿತ್ತು. ಈ ವಿಚಾರಧಾರೆಯ ಜನರ ಸಣ್ಣ ಸಣ್ಣ ವರ್ತುಲಗಳೂ ರಚಿಸಲ್ಪಟ್ಟವು. ಸಾಹಿತ್ಯ ಪ್ರಕಾಶನ ಮತ್ತು ವೈಯಕ್ತಿಕ ಸಂಪರ್ಕಗಳ ಮೂಲಕ ಪ್ರಚಾರ ಕಾರ್ಯವು ಅವ್ಯಾಹತವಾಗಿ ನಡೆಯುತ್ತಲಿತ್ತು. ಈ

ರೀತಿ ಕೆಲವು ಸಮಯ ಕಳೆದ ಬಳಿಕ ಆಂದೋಲನದ ಪ್ರಭಾವ ಮತ್ತು ಪ್ರತಿಕ್ರಿಯೆಗಳ ಸೂಕ್ಷ್ಮ ಸಮೀಕ್ಷೆ ನಡೆಸಿದಾಗ, ಜಮಾಅತೆ ಇಸ್ಲಾಮಿಯ ಬುನಾದಿ ಹಾಕಿ ಇಸ್ಲಾಮೀ ಆಂದೋಲನವನ್ನು ಸಂಘಟಿತ ರೂಪದಲ್ಲಿ ಮುನ್ನಡೆಸಲು ಕಾಲಪಕ್ವವಾಗಿದೆಯೆಂದು ತಿಳಿಯಿತು. ಅದರಂತೆ ಹಿ.ಶ.1360ರ ಸಫರ್ ತಿಂಗಳಲ್ಲಿ ತರ್ಜುಮಾನುಲ್ ಕುರ್‌ಆನ್ ಪತ್ರಿಕೆಯಲ್ಲಿ ಪ್ರಸ್ತುತ ವಿಚಾರಧಾರೆಯನ್ನು ಅಂಗೀಕರಿಸಿ, ಸೇವೆ ಸಲ್ಲಿಸಬಯಸುವವರು ಪತ್ರಿಕಾಲಯಕ್ಕೆ ತಿಳಿಸುವಂತೆ ಸಾರ್ವಜನಿಕರನ್ನು ವಿನಂತಿಸಲಾಯಿತು. ಆ ಸಂಚಿಕೆ ಪ್ರಕಟವಾದ ಕೆಲವೇ ದಿನಗಳಲ್ಲಿ ಭಾರೀ ಪ್ರಮಾಣದಲ್ಲಿ ಬೆಂಬಲ ಸೂಚಕ ಪತ್ರಗಳು ಬರಲಾರಂಭಿಸಿದುವು. ತನ್ಮೂಲಕ ದೇಶದಲ್ಲಿ ಜಮಾಅತೆ ಇಸ್ಲಾಮಿಯ ರಚನೆ ಮತ್ತು ಅದರ ಮುನ್ನಡೆಗಾಗಿ ಸೇವೆ ಸಲ್ಲಿಸಲು ಸಿದ್ಧರಿರುವ ಬಹಳಷ್ಟು ಜನರಿದ್ದಾರೆಂಬುದು ತಿಳಿಯಿತು.

## ಜಮಾಅತೆ ಇಸ್ಲಾಮೀಯ ರಚನೆ

ಮೌಲಾನಾ ಮೌದೂದಿಯವರು ತಮ್ಮ ಭಾಷಣದಲ್ಲಿ ಪ್ರಸ್ತುತ ಇಸ್ಲಾಮೀ ಆಂದೋಲನದ ಹಾಗೂ ಮುಸ್ಲಿಮರಲ್ಲಿ ಸಾಮಾನ್ಯವಾಗಿ ಹುಟ್ಟುತ್ತಿದ್ದ ಅಥವಾ ಪ್ರಚಲಿತವಿರುವ ಆಂದೋಲನಗಳ ಪರಸ್ಪರ ವ್ಯತ್ಯಾಸವನ್ನು ವಿವರಿಸುತ್ತಾ ಹೀಗೆಂದರು-

1. ಇತರ ಆಂದೋಲನಗಳಲ್ಲಿ ಇಸ್ಲಾಮಿನ ಯಾವುದಾದರೂ ಕೆಲವು ಅಂಶಗಳನ್ನು ಅಥವಾ ಮುಸ್ಲಿಮರ ಯಾವುದಾದರೂ ಲೌಕಿಕ ಸಮಸ್ಯೆಗಳನ್ನೆತ್ತಿಕೊಂಡು ಅದರ ಬುನಾದಿಯಲ್ಲಿ ಆಂದೋಲನಗಳನ್ನು ಆರಂಭಿಸಲಾಗುತ್ತದೆ. ಆದರೆ ನಾವು ನೈಜ ಇಸ್ಲಾಮಿನೊಂದಿಗೆ ಹೊರಟಿದ್ದೇವೆ. ನಮ್ಮ ಆಂದೋಲನವು ಸಂಪೂರ್ಣ ಇಸ್ಲಾಮ್ ಆಗಿದೆ.

2. ಇತರ ಆಂದೋಲನಗಳು ಜಗತ್ತಿನ ಅನ್ಯ ಸಂಘ, ಸಂಸ್ಥೆ ಮತ್ತು ಪಕ್ಷಗಳ ಮಾದರಿಯಲ್ಲಿ ಸಂಘಟನೆಯನ್ನು ರಚಿಸುತ್ತವೆ. ಆದರೆ ನಾವು ಪ್ರವಾದಿವರ್ಯರು(ಸ) ರಚಿಸಿದ ಸಂಘಟನಾ ಸ್ವರೂಪವನ್ನೇ ಅಂಗೀಕರಿಸಿದ್ದೇವೆ.

3. ಇತರ ಆಂದೋಲನಗಳಲ್ಲಿ ಮುಸ್ಲಿಮ್ ಸಮುದಾಯದಲ್ಲಿ ಜನಿಸಿದವರೆಲ್ಲರನ್ನೂ ಸಂಘಟನೆಗೆ ಸೇರಿಸಿಕೊಳ್ಳುತ್ತಾರೆ. ಅಂತಹ ಸಂಘಟನೆಗಳಲ್ಲಿ ಚಾರಿತ್ರ್ಯವಿಲ್ಲದ ಬೇಜವಾಬ್ದಾರಿ ವ್ಯಕ್ತಿಗಳು ಕಾರ್ಯಕರ್ತರಾಗಿಯೂ ನಾಯಕರಾಗಿಯೂ ಸೇರಿಕೊಳ್ಳುತ್ತಾರೆ. ಆದರೆ ನಾವು ಯಾವ ವ್ಯಕ್ತಿಯನ್ನೂ ಆತನು ಮುಸ್ಲಿಮನಾಗಿರಬಹುದು ಎಂಬ ಭ್ರಮೆಯಿಂದ ಸಂಘಟನೆಗೆ ಸೇರಿಸಿಕೊಳ್ಳುವುದಿಲ್ಲ. ಪವಿತ್ರ ಕಲಿಮದ ಅರ್ಥ ಮತ್ತು ಉದ್ದೇಶವನ್ನೂ ತನ್ಮೂಲಕ ತಾನು ನಿರ್ವಹಿಸಬೇಕಾದ ಕರ್ತವ್ಯಗಳನ್ನೂ ಚೆನ್ನಾಗಿ ಗ್ರಹಿಸಿ, ಅದರಲ್ಲಿ ವಿಶ್ವಾಸವಿರಿಸಿರುವೆನೆಂದು ಓರ್ವ ವ್ಯಕ್ತಿಯು ಒಪ್ಪಿದ ಬಳಿಕವೇ ನಾವು ಆತನನ್ನು ಸಂಘಟನೆಗೆ ಸೇರಿಸಿಕೊಳ್ಳುವೆವು. ಸಂಘಟನೆಗೆ ಸೇರಿದ ಬಳಿಕ ಅದರಲ್ಲಿಯೇ ಮುಂದುವರಿಯಬೇಕಾದರೆ ಆತನು ಇಸ್ಲಾಮೀ ದೃಷ್ಟಿಯಲ್ಲಿ ವಿಶ್ವಾಸದ ಕನಿಷ್ಠ ಮೂಲಭೂತ ಬೇಡಿಕೆಯನ್ನಾದರೂ ಕಡ್ಡಾಯವಾಗಿ ಈಡೇರಿಸಬೇಕು. ಈ ವಿಧಾನದಿಂದ ಮುಸ್ಲಿಮ್ ಸಮುದಾಯದ ಸತ್ಯಸಂಧ ಮತ್ತು ಕರ್ತವ್ಯ ನಿಷ್ಠ ವ್ಯಕ್ತಿಗಳು ಮಾತ್ರ ನಮ್ಮ ಸಂಘಟನೆಯಲ್ಲಿ ಸೇರಿಕೊಳ್ಳುವರು. (ಇನ್‌ಶಾ ಅಲ್ಲಾಹ್)

4. ಇತರ ಸಂಘಟನೆಗಳ ದೃಷ್ಟಿಯು ಕೇವಲ ಭಾರತಕ್ಕೆ, ಭಾರತದಲ್ಲಿಯೂ ಕೇವಲ ಮುಸ್ಲಿಮ್ ಸಮುದಾಯಕ್ಕೆ ಸೀಮಿತವಾಗಿರುವುದು. ಹೆಚ್ಚೆಂದರೆ ಅವುಗಳಲ್ಲಿ ಕೆಲವು ಜಾಗತಿಕ ಮುಸ್ಲಿಮರ ಮಟ್ಟಿಗೆ ತಮ್ಮ ಗಮನವನ್ನು ವಿಶಾಲಗೊಳಿಸಬಹುದು. ಸಂಕ್ಷಿಪ್ತದಲ್ಲಿ ಆ ಸಂಘಟನೆಗಳೆಲ್ಲವೂ ಜನ್ಮತಃ ಮುಸ್ಲಿಮ್ ಸಮುದಾಯದಲ್ಲಿರುವವರಿಗೆ ಸೀಮಿತವಾಗಿದೆ. ಹಾಗೆಯೇ ಮುಸ್ಲಿಮರಿಗೆ ಸಂಬಂಧಿಸಿದ ಸಮಸ್ಯೆಗಳ ಬಗ್ಗೆ ಮಾತ್ರ ಆಸಕ್ತಿ ತೋರುತ್ತವೆ. ಅವರ ಚಟುವಟಿಕೆಗಳಿಂದ ಮುಸ್ಲಿಮೇತರರನ್ನು ಇಸ್ಲಾಮಿನೆಡೆಗೆ ಆಕರ್ಷಿಸುವ ಮಾತಂತಿರಲಿ, ಆ ಪೈಕಿ ಅನೇಕ ಸಂಘಟನೆಗಳ ಚಟುವಟಿಕೆಗಳು ಮುಸ್ಲಿಮೇತರರನ್ನು ಇಸ್ಲಾಮಿನ ಕಡೆಗೆ ಆಕರ್ಷಿಸುವ ನಿಟ್ಟಿನಲ್ಲಿ ವಿಘ್ನವಾಗಿ ಪರಿಣಮಿಸಿವೆ. ಆದರೆ ನಮ್ಮ ಆಂದೋಲನವು ನೈಜ ಇಸ್ಲಾಮ್ ಆಗಿದೆ. ಇಸ್ಲಾಮಿನ ಸಂದೇಶವು ಸಕಲ ಮಾನವರಿಗಾಗಿದೆ. ಆದ್ದರಿಂದ ನಮ್ಮ ದೃಷ್ಟಿಯು ಒಂದು ವಿಶಿಷ್ಟ ಸಮುದಾಯ ಅಥವಾ ದೇಶದ ತಾತ್ಕಾಲಿಕ ಸಮಸ್ಯೆಗಳಿಗೆ ಸೀಮಿತವಾಗಿಲ್ಲ. ಅದು ಸಂಪೂರ್ಣ ಮಾನವಕುಲ ಮತ್ತು ಲೋಕವನ್ನು ವ್ಯಾಪಿಸಿದೆ. ಸಂಪೂರ್ಣ ಮಾನವಕುಲದ ಜೀವನ ಸಮಸ್ಯೆಯೇ ನಮ್ಮ ಜೀವನ ಸಮಸ್ಯೆಯಾಗಿದೆ. ಪ್ರಸ್ತುತ ಸಮಸ್ಯೆಗಳಿಗೆ ಅಲ್ಲಾಹನ ಗ್ರಂಥ ಮತ್ತು ಪ್ರವಾದಿ ಚರ್ಯೆಗಳು ಸೂಚಿಸುವ ಪರಿಹಾರಗಳನ್ನು ಲೋಕದ ಮುಂದಿಡುತ್ತೇವೆ. ಅವು ಮಾನವನ ವಿಜಯ-ಸೌಭಾಗ್ಯಗಳ ಸೋಪಾನವಾಗಿವೆ. ತನ್ಮೂಲಕ ನಮ್ಮ ಸಂಘಟನೆಯಲ್ಲಿ ಹುಟ್ಟು ಮುಸ್ಲಿಮರಲ್ಲಿರುವ ನಿಷ್ಕಳಂಕ ಹಾಗೂ ಸತ್ಯಸಂಧ ಜನರಲ್ಲದೇ ಸತ್ಯನಿಷ್ಠ ಹಾಗೂ ನಿಷ್ಪಕ್ಷಮತಿಗಳಾದ ಮುಸ್ಲಿಮೇತರರೂ ಸೇರುವರು.

ಈ ವೈಶಿಷ್ಟ್ಯಗಳ ಬುನಾದಿಯಲ್ಲಿ ನಮ್ಮ ಸಂಘಟನೆಗೆ 'ಜಮಾಅತೆ ಇಸ್ಲಾಮಿ' (ಇಸ್ಲಾಮಿ ಸಂಘಟನೆ) ಮತ್ತು ನಮ್ಮ ಆಂದೋಲನಕ್ಕೆ 'ಇಸ್ಲಾಮಿ ಆಂದೋಲನ'ವೆಂಬ ಹೆಸರು ಕೊಡಲಾಗಿದೆ. ಯಾಕೆಂದರೆ ಈ ಸಂಘಟನೆಯ ವಿಶ್ವಾಸ, ಧ್ಯೇಯ, ಸಂಘಟನಾ ವ್ಯವಸ್ಥೆ, ಕಾರ್ಯ ವಿಧಾನಗಳೆಲ್ಲವೂ ಯಥಾವತ್ತಾಗಿ ಎಲ್ಲಾ ಕಾಲಗಳಲ್ಲಿಯೂ ಇಸ್ಲಾಮಿಗಿದ್ದುದೇ ಆಗಿದೆ. ಅದಕ್ಕೆ ಇಸ್ಲಾಮಿ ಸಂಘಟನೆಯೆನ್ನುವ ಹೊರತು ಬೇರೆ ಹೆಸರು ಸೂಕ್ತವಲ್ಲ. ಇಸ್ಲಾಮಿನ ಧ್ಯೇಯ ಸಾಧನೆಗಾಗಿ ಇಸ್ಲಾಮಿ ಕಾರ್ಯವಿಧಾನದಂತೆ ನಡೆಯುತ್ತಿರುವ ಆಂದೋಲನವಾಗಿರುವುದರಿಂದ ಇದು ಇಸ್ಲಾಮಿ ಆಂದೋಲನವಲ್ಲದೇ ಬೇರೇನಲ್ಲ.

## ಜಮಾಅತ್‌ನ ಸ್ಥಾನ

ಆದರೆ ಪ್ರವಾದಿತ್ವ ಕೊನೆಗೊಂಡ ಬಳಿಕ ಲೋಕದಲ್ಲಿ ಇಂತಹ ಆಂದೋಲನಗಳು ಉದಯಗೊಂಡಾಗಲೆಲ್ಲಾ ಅವು ಪ್ರಬಲವಾದ ದ್ವಿಮುಖ ಆಂತರಿಕ ವಿಪತ್ತುಗಳನ್ನು ಎದುರಿಸಬೇಕಾಯಿತು.

1. ಅಂತಹ ಸಂಘಟನೆ ಅಥವಾ ಆಂದೋಲನಗಳು ಆರಂಭವಾದ ಕೂಡಲೇ ಜನರು, ಪ್ರವಾದಿ ಮತ್ತು ಸಹಾಬಿವರ್ಯರ ಕಾಲದಲ್ಲಿದ್ದಂತಹ ಇಸ್ಲಾಮಿ ಸಂಘಟನೆಯ ಸ್ಥಾನಮಾನವೇ ತಮ್ಮ ಸಂಘಟನೆಗೂ ಇದೆಯೆಂಬ ಭ್ರಮೆಯಲ್ಲಿ ಸಿಲುಕುತ್ತಾರೆ. ಅರ್ಥಾತ್ ತಮ್ಮ ಸಂಘಟನೆಯಲ್ಲಿಲ್ಲದವರೆಲ್ಲರೂ ಮುಸ್ಲಿಮರಲ್ಲವೆಂಬ ತೀರ್ಪು ನೀಡಿ ಬಿಡುತ್ತಾರೆ. ಈ ನೀತಿಯು ಪ್ರಸ್ತುತ ಸಂಘಟನೆಯನ್ನು ಮುಸ್ಲಿಮರ ಒಂದು ಪ್ರತ್ಯೇಕ ವರ್ಗವನ್ನಾಗಿ ಮಾಡುವುದಲ್ಲದೇ

ಯಥಾರ್ಥ ಕರ್ತವ್ಯ ನಿರ್ವಹಣೆಯ ಬದಲಾಗಿ ಅವರ ಅಮೂಲ್ಯ ಸಮಯವು ಇತರ ಮುಸ್ಲಿಮರೊಂದಿಗಿನ ಕಚ್ಚಾಟ, ಮೇಲಾಟ, ವಾಗ್ಯುದ್ಧಗಳಲ್ಲಿ ವ್ಯರ್ಥವಾಗಿ ಹೋಗುತ್ತದೆ.

2. ಪ್ರಸ್ತುತ ಸಂಘಟನೆಗಳು ನೇಮಿಸುವ ಅವುಗಳ ಅಮೀರ್ ಅಥವಾ ಇಮಾಮ್‌ರಿಗೆ ಪ್ರವಾದಿವರ್ಯರ(ಸ) ಉತ್ತರಾಧಿಕಾರಿಗಳಾಗಿದ್ದ 'ಖುಲಫಾವುರ್ರಾಶಿದೀನ್'ರ ಸ್ಥಾನಮಾನ ಗಳಿವೆಯೆಂದು ಭ್ರಮಿಸುತ್ತಾರೆ. ಅರ್ಥಾತ್ ತಮ್ಮ ಇಮಾಮ್ ಅಥವಾ ಅಮೀರ್‌ರಿಗೆ ನಿಷ್ಠೆ ತೋರದವರನ್ನು ಧರ್ಮಭ್ರಷ್ಟರೆಂದು ಭಾವಿಸುತ್ತಾರೆ. ಕಾಲಕ್ರಮೇಣ ಅವರ ಸಂಪೂರ್ಣ ಶ್ರಮವು ತಮ್ಮ ಅಮೀರ್ ಅಥವಾ ಇಮಾಮ್‌ರ ನಾಯಕತ್ವವನ್ನು ಸಮರ್ಥಿಸಿಕೊಳ್ಳುವುದಕ್ಕೇ ವಿನಿಯೋಗವಾಗುತ್ತದೆ. ನಾವು ಈ ಉಭಯ ವಿಪತ್ತುಗಳಿಂದ ಪಾರಾಗಿ ಮುನ್ನಡೆಯಬೇಕಾಗಿದೆ. ಆರಂಭದಲ್ಲಿ ಪ್ರವಾದಿ ಮುಹಮ್ಮದ್(ಸ) ಅವರ ನಾಯಕತ್ವದಲ್ಲಿ ರೂಪುಗೊಂಡ ಇಸ್ಲಾಮಿ ಸಂಘಟನೆಗಿದ್ದ ಸ್ಥಾನಮಾನ ನಮ್ಮ ಸಂಘಟನೆಗಿಲ್ಲ. ಆ ಸಂಸ್ಥಾಪಿತ ಸಂಘಟನಾ ವ್ಯವಸ್ಥೆ ಅಸ್ತವ್ಯಸ್ತಗೊಂಡಿರುವ ಹಿನ್ನೆಲೆಯಲ್ಲಿ ಅದರ ಪುನರುತ್ಥಾನಕ್ಕಾಗಿ ಶ್ರಮಿಸುವ ಒಂದು ಸಂಘಟನೆಯ ಸ್ಥಾನವಷ್ಟೇ ವಾಸ್ತವದಲ್ಲಿ ನಮಗಿರುವುದೆಂಬುದನ್ನು ಚೆನ್ನಾಗಿ ತಿಳಿದಿರಬೇಕು. ಪ್ರವಾದಿವರ್ಯರ(ಸ) ನಾಯಕತ್ವದಲ್ಲಿ ರೂಪುಗೊಂಡ ಸಂಘಟನೆಯು ಲೋಕದಾದ್ಯಂತ ಒಂದೇ ಇಸ್ಲಾಮಿ ಸಂಘಟನೆಯಾಗಿತ್ತು. ಅದರ ಪರಿಧಿಯಿಂದ 'ಕುಫ್ರ್' ಮಾತ್ರ ಹೊರಗಿತ್ತು. ಆದರೆ ಅನಂತರ ಕಾಲಗಳಲ್ಲಿ ಪ್ರಸ್ತುತ ಪದ್ಧತಿ ಮತ್ತು ಚಟುವಟಿಕೆಗಳ ಪುನರುತ್ಥಾನಕ್ಕಾಗಿ ಪ್ರಯತ್ನಿಸುವ ಎಲ್ಲಾ ಜನರಿಗೂ ಒಂದೇ ಸಂಘಟನೆ ಅನಿವಾರ್ಯವೆಂದು ಹೇಳುವಂತಿಲ್ಲ. ಆ ರೀತಿಯ ಸಂಘಟನೆಗಳು ಏಕಕಾಲದಲ್ಲಿ ಅನೇಕ ಇರಬಹುದು. ಆ ಪೈಕಿ ಯಾವುದಕ್ಕೂ ತಮ್ಮದೇ ನಿಜವಾದ ಇಸ್ಲಾಮಿ ಸಂಘಟನೆ, ತಮ್ಮ ಅಮೀರ್ ಮಾತ್ರ ಸರ್ವ ಮುಸ್ಲಿಮರ ಅಮೀರ್ ಎಂದು ವಾದಿಸುವ ಹಕ್ಕಿಲ್ಲ. ನಮ್ಮ ಈ ಸಂಘಟನೆಯಲ್ಲಿ ಸೇರುವ ಜನರು ಆ ತಪ್ಪುಕಲ್ಪನೆಯಿಂದ ಮುಕ್ತರಾಗಬೇಕು. ಯಾಕೆಂದರೆ ಮುಸ್ಲಿಮ್ ಸಮುದಾಯದಲ್ಲಿ ಒಂದು ಪ್ರತ್ಯೇಕ ವರ್ಗ ನಿರ್ಮಾಣವಾಗುವುದನ್ನು ನಾವಿಚ್ಛಿಸುವುದಿಲ್ಲ. ಅಲ್ಲಾಹನ ಪವಿತ್ರ ಧರ್ಮಕ್ಕಾಗಿ ಏನಾದರೂ ಸೇವೆ ಸಲ್ಲಿಸುವ ಬದಲಾಗಿ, ಅದರಲ್ಲಿ ಇನ್ನಷ್ಟು ಹಾಳುಗೆಡಹುವುದಕ್ಕೆ ಕಾರಣವಾಗುವುದರಿಂದ ಆತನು ನಮ್ಮನ್ನು ರಕ್ಷಿಸಲಿ.

## ಜಮಾಅತ್‌ನ ಚಟುವಟಿಕೆ

ಜಮಾಅತೆ ಇಸ್ಲಾಮಿಗೆ ಈ ಲೋಕದಲ್ಲಿ ನಿರ್ವಹಿಸಲಿಕ್ಕಿರುವ ಕರ್ತವ್ಯಗಳ ಬಗ್ಗೆ ಯಾವ ಸಂಕುಚಿತ ಕಲ್ಪನೆಯನ್ನೂ ನೀವು ಇರಿಸಿಕೊಳ್ಳಬೇಡಿರಿ. ವಾಸ್ತವದಲ್ಲಿ ಜಮಾಅತ್‌ನ ಸೇವಾರಂಗವು ಒಂದಕ್ಕೆ ಸೀಮಿತವಾಗಿಲ್ಲ. ಮಾನವನ ಸಂಪೂರ್ಣ ಜೀವನ ವ್ಯಾಪ್ತಿಯು ಜಮಾಅತ್‌ನ ಕಾರ್ಯ ಕ್ಷೇತ್ರಕ್ಕೊಳಪಟ್ಟಿದೆ. ಇಸ್ಲಾಮ್ ಧರ್ಮವು ಸಂಪೂರ್ಣ ಮಾನವಕುಲಕ್ಕೆ ಇರುವುದಾಗಿದೆ. ಮಾನವನಿಗೆ ಸಂಬಂಧಿಸಿದ ಪ್ರತಿಯೊಂದು ವಿಷಯದೊಂದಿಗೂ ಇಸ್ಲಾಮಿಗೆ ಸಂಬಂಧವಿದೆ. ಆದ್ದರಿಂದ ಇಸ್ಲಾಮಿ ಆಂದೋಲನವು ಒಂದು ಸಾರ್ವತ್ರಿಕ ಆಂದೋಲನವಾಗಿದೆ. ಈ ಆಂದೋಲನದ ಸೇವೆಗೆ ಕೇವಲ ಕೆಲವು ವಿಶಿಷ್ಟ ಸಾಮರ್ಥ್ಯ ಮತ್ತು ಪ್ರತಿಭೆಗಳಿರುವ ಜನರ ಅಗತ್ಯ ಮಾತ್ರವಿರುವುದೆಂಬ ಭಾವನೆಯು ಸಂಪೂರ್ಣ ತಪ್ಪು. ಇದರಲ್ಲಿ ಎಲ್ಲರಿಗೂ ಕೆಲಸವಿದೆ. ಇಲ್ಲಿ ಯಾರೂ ಅನರ್ಹರಲ್ಲ. ತಂತಮ್ಮ ಶಕ್ತಿ ಸಾಮರ್ಥ್ಯಗಳಿಗನುಸಾರ ಪ್ರತಿಯೊಬ್ಬರೂ

ತಮ್ಮ ಪಾಲಿನ ಸೇವೆ ಸಲ್ಲಿಸಬಹುದು. ಸ್ತ್ರೀ-ಪುರುಷ, ಯುವಕ-ಮುದುಕ, ಹಳ್ಳಿಗ-ಪಟ್ಟಣಿಗ, ರೈತ-ಕಾರ್ಮಿಕ, ವ್ಯಾಪಾರಿ-ನೌಕರ, ಭಾಷಣಗಾರ-ಲೇಖಕ, ಸಾಹಿತಿ-ನಿರಕ್ಷರಿ-ವಿದ್ವಾಂಸರೇ ಮೊದಲಾದ ಸಮಾಜದ ಯಾವುದೇ ರಂಗಗಳಲ್ಲಿರುವ ಜನರಾದರೂ ಇಸ್ಲಾಮಿನ ವಿಶ್ವಾಸಗಳನ್ನು ಹೃತ್ಪೂರ್ವಕವಾಗಿ ಅಂಗೀಕರಿಸಿ ಅದರಂತೆ ನಡೆಯಲು ನಿರ್ಧರಿಸಿ, ಇಸ್ಲಾಮಿನ ಧ್ಯೇಯವನ್ನು ತಮ್ಮ ಜೀವನದ ಪರಮ ಧ್ಯೇಯವಾಗಿರಿಸಿ ಕಾರ್ಯೋನ್ಮುಖರಾಗ ಬಯಸುವವರೆಲ್ಲರೂ ಜಮಾಅತೆ ಇಸ್ಲಾಮಿಯಲ್ಲಿ ಏಕ ಪ್ರಕಾರವಾಗಿ ಸಹಭಾಗಿಗಳಾಗಬಹುದು. ಜಮಾಅತೆ ಇಸ್ಲಾಮಿಯ ಮುಂದಿರುವ ಕಾರ್ಯಕ್ರಮವು ಬಹಳ ಸರಳ ಹಾಗೂ ಸುಲಭವಾದುದಲ್ಲವೆಂಬುದನ್ನು ಇದರಲ್ಲಿ ಸೇರುವ ಪ್ರತಿಯೊಬ್ಬರೂ ಚೆನ್ನಾಗಿ ತಿಳಿದಿರಬೇಕು. ಅವರು ಲೋಕದ ಸಂಪೂರ್ಣ ಜೀವನ ಪದ್ಧತಿಯನ್ನು ಬದಲಿಸಬೇಕಾಗಿದೆ. ಅವರು ಜಗತ್ತಿನ ನೈತಿಕ, ರಾಜಕೀಯ, ನಾಗರಿಕ, ಸಾಮಾಜಿಕ, ಆರ್ಥಿಕ, ಪದ್ಧತಿಗಳಲ್ಲಿ ಆಮೂಲಾಗ್ರ ಬದಲಾವಣೆ ತರಬೇಕಾಗಿದೆ. ದೇವಧಿಕ್ಕಾರದ ಬುನಾದಿಯಲ್ಲಿ ಕಟ್ಟಲ್ಪಟ್ಟಿರುವ ಜೀವನ ಪದ್ಧತಿಗಳೆಲ್ಲವನ್ನೂ ತೊಲಗಿಸಿ ದೇವಾನುಸರಣೆಯ ಬುನಾದಿಯಲ್ಲಿ ಅವುಗಳನ್ನು ಪುನರುತ್ಥಾನಗೊಳಿಸಬೇಕಾಗಿದೆ. ಈ ವಿಷಯದಲ್ಲಿ ಆತನು ಎಲ್ಲಾ ಪೈಶಾಚಿಕ ಶಕ್ತಿಗಳೊಂದಿಗೂ ಹೋರಾಡಬೇಕಾಗುವುದು. ಈ ತ್ಯಾಗಭರಿತ ಕಾರ್ಯವನ್ನು ಬಹಳ ಕ್ಷುಲ್ಲಕವೆಂದು ಭ್ರಮಿಸಿ ಇದರಲ್ಲಿ ಪ್ರವೇಶಿಸುವವರು, ಇದರಲ್ಲಿರುವ ಸಂಕಷ್ಟಗಳ ಮಹಾಪೂರವನ್ನು ನೋಡಿ ಹಿಂಜರಿಯುವರು. ಅವರ ಮನೋಸ್ಥೈರ್ಯವು ಕುಸಿಯುವುದು. ಆದ್ದರಿಂದ ಈ ಹಾದಿಯಲ್ಲಿ ಮುಂದಡಿಯಿಡುವ ಪ್ರತಿಯೊಬ್ಬರೂ ಅದು ಎಷ್ಟು ದುರ್ಗಮವಾಗಿದೆಯೆಂಬುದನ್ನು ಮುಂಚಿತವಾಗಿ ತಿಳಿಯಬೇಕು. ಈ ಮಾರ್ಗದ ಮುನ್ನಡೆ ಅಥವಾ ಹಿನ್ನಡೆಯು ಖಂಡಿತಾ ಸಮಾನವಾಗಿಲ್ಲ. ಇಲ್ಲಿ ಹಿನ್ನಡೆಯುವುದೆಂದರೆ ಇಸ್ಲಾಮಿನ ಪರಿಧಿಯಿಂದ ಹೊರಹೋಗುವುದೆಂದರ್ಥ. ಅಂದರೆ ನಾನು ಹೇಳುತ್ತಿರುವ ಈ ಮಾತಿನ ಉದ್ದೇಶವು ನಮ್ಮ ಸಂಘಟನೆಯಿಂದ ಹೊರ ಹೋಗುವವರೆಲ್ಲರೂ ಧರ್ಮ ಭ್ರಷ್ಟರಾಗುವರೆಂದಲ್ಲ. ಬದಲಾಗಿ ಅಲ್ಲಾಹನ ಹಾದಿಯಲ್ಲಿ ಮುಂದಿಟ್ಟ ಹೆಜ್ಜೆಯನ್ನು ಕಷ್ಟ, ನಷ್ಟ, ಅಪಾಯಗಳ ಭೀತಿಯಿಂದ ಹಿಂದಿಡುವುದೆಂದರೆ ಅದರ ವಾಸ್ತವಿಕತೆ ಮತ್ತು ಸತ್ವದ ದೃಷ್ಟಿಯಿಂದ ಭ್ರಷ್ಟನಾಗುವನೆಂದೇ ಪರಿಗಣಿಸಲ್ಪಡುವುದು. ಆದ್ದರಿಂದ ಮುಂದಡಿಯಿಡುವುದಕ್ಕಿಂತ ಮುಂಚಿತವಾಗಿ, ಚೆನ್ನಾಗಿ ಆಲೋಚಿಸಿರಿ. ಮುಂದಿಟ್ಟ ಹೆಜ್ಜೆಯು ಯಾವ ಕಾರಣಕ್ಕೂ ಹಿಂದೆ ಸರಿಯಲಾರದೆಂಬ ದೃಢ ನಿರ್ಧಾರದಿಂದ ಮುನ್ನಡೆಯಿರಿ. ನಿಮ್ಮಲ್ಲಿ ಕಿಂಚಿತ್ತಾದರೂ ಲೋಪದೋಷಗಳಿವೆಯೆಂದು ನಿಮಗೆ ಸ್ವಯಂ ಭಾಸವಾಗುವುದಿದ್ದರೆ ಅಂಥವರು ಸಂಘಟನೆಯಲ್ಲಿ ಸೇರದಿರುವುದೇ ಉತ್ತಮ.

## ನಾಯಕತ್ವ

ಇಸ್ಲಾಮಿನ ವಿಶ್ವಾಸ ಸಿದ್ಧಾಂತಗಳನ್ನು ಹೃತ್ಪೂರ್ವಕವಾಗಿ ಒಪ್ಪಿ ಇಸ್ಲಾಮೀ ಧ್ಯೇಯ ಸಾಧನೆಗಾಗಿ ಕಾರ್ಯೋನ್ಮುಖರಾಗುವ ಜನರ ವೈಯಕ್ತಿಕ ಸ್ಥಾನವನ್ನು ಕೊನೆಗೊಳಿಸಿ, ಅಲ್ಲಾಹ್ ಮತ್ತು ಪ್ರವಾದಿವರ್ಯರ(ಸ) ನಿರ್ದೇಶದಂತೆ ಸಂಘಟಿಸಿ, ಭಾವೀ ಕಾರ್ಯಕ್ರಮದ ರೂಪರೇಷೆಗಳನ್ನು ನಿರ್ಧರಿಸಿ, ಸಂಘಟಿತ ಪರಿಶ್ರಮವನ್ನು ಆರಂಭಿಸುವುದೇ ನಮ್ಮ ಈ ಸಮಾವೇಶದ ಉದ್ದೇಶ. ನಿಮ್ಮನ್ನು ಸಂಘಟಿಸುವುದರೊಂದಿಗೆ ನನ್ನ ವೈಯಕ್ತಿಕ ಕೆಲಸ

ಮುಗಿಯಿತು. ನಾನು ಕೇವಲ ಆಮಂತ್ರಕ. ಮರೆತಿದ್ದ ವಿಷಯಗಳನ್ನು ನಿಮ್ಮ ಗಮನಕ್ಕೆ ತರಲು ಪ್ರಯತ್ನಿಸಿದೆ. ಇಂತಹ ಒಂದು ಶಿಸ್ತುಬದ್ಧ ಸಂಘಟನೆ ಸ್ಥಾಪನೆಯಾಗಬೇಕೆಂಬುದೇ ನನ್ನೆಲ್ಲ ಪ್ರಯತ್ನಗಳ ಗುರಿಯಾಗಿತ್ತು. ಸಂಘಟನೆ ರೂಪುಗೊಂಡ ಬಳಿಕ ನಾನೂ ನಿಮ್ಮಲ್ಲೋರ್ವನಾಗಿ ಬಿಡುತ್ತೇನೆ. ಇನ್ನು ಮುಂದೆ ನಮ್ಮ ಪೈಕಿ ಓರ್ವ ಅರ್ಹ ವ್ಯಕ್ತಿಯನ್ನು ಅಮೀರ್ ಆಗಿ ಚುನಾಯಿಸುವುದು ಸಂಘಟನೆಯ ಕೆಲಸ. ಮುಂದೆ ಶಕ್ತ್ಯಾನುಸಾರ ಕಾರ್ಯಕ್ರಮಗಳನ್ನು ರೂಪಿಸಿ ಕಾರ್ಯಗತಗೊಳಿಸಬೇಕಾದುದು ಆ ಅಮೀರ್‌ರ ಕರ್ತವ್ಯ. ನಾನು ನಿಮ್ಮನ್ನು ಆಮಂತ್ರಿಸಿರುವ ಹಿನ್ನೆಲೆಯಲ್ಲಿ ನಾನೇ ಇದರ ನಾಯಕನಾಗಬೇಕೆಂಬ ಭಾವನೆ ನನಗಿದೆಯೆಂದು ನಿಮ್ಮಲ್ಲಿ ಯಾರೂ ಭಾವಿಸಬಾರದು. ನಾನು ಅದನ್ನು ಸ್ವಲ್ಪವೂ ಆಗ್ರಹಿಸುವುದಿಲ್ಲ. ಈ ಮಹತ್ವಪೂರ್ಣ ಆಂದೋಲನದ ಸೂತ್ರಧಾರನಾಗುವ ಯೋಗ್ಯತೆ ನನಗಿದೆಯೆಂಬ ತಪ್ಪಭಿಪ್ರಾಯ ನನ್ನಲ್ಲಿಲ್ಲ. ನಾನು ಮಾತ್ರವಲ್ಲ, ಈ ಮಹತ್ಕಾರ್ಯದ ಘನ ಜವಾಬ್ದಾರಿಕೆಗಳನ್ನು ಬಲ್ಲವರಾರೂ ಅದನ್ನು ವಹಿಸಿಕೊಳ್ಳಲು ಅಷ್ಟು ಸುಲಭದಲ್ಲಿ ಮುಂದೆ ಬರಲಾರರು. ಒಂದು ನೈಜ ಇಸ್ಲಾಮೀ ವ್ಯವಸ್ಥೆಯ ಕೈಕೆಳಗೆ ಓರ್ವ ಸಾಮಾನ್ಯ ಸಿಪಾಯಿಯಾಗಿ ಸೇವೆ ಸಲ್ಲಿಸುವುದನ್ನು ಇಸ್ಲಾಮೇತರ ಪದ್ಧತಿಯಲ್ಲಿ ಅಧ್ಯಕ್ಷ ಅಥವಾ ಪ್ರಧಾನಿಯಾಗಿರುವುದಕ್ಕಿಂತ ಶ್ರೇಷ್ಠ ಭಾಗ್ಯವೆಂದು ನಾನು ಭಾವಿಸುತ್ತೇನೆ. ಆದ್ದರಿಂದ ಜಮಾಅತ್‌ನ ಸ್ಥಾಪನೆಗಿಂತ ಮುಂಚೆ ಎಲ್ಲಾ ಕೆಲಸಗಳನ್ನು ನಾನು ನನ್ನ ಜವಾಬ್ದಾರಿಕೆಯಿಂದ ನಿರ್ವಹಿಸುತ್ತಿದ್ದಂತೆ ಸಂಘಟನೆ ರೂಪುಗೊಂಡ ಬಳಿಕವೂ ನಾನೇ ಅದರ ನಾಯಕತ್ವವನ್ನು ವಹಿಸಬೇಕೆಂಬ ಕಲ್ಪನೆಯಿಂದ ನೀವಾರೂ ಉಪಕ್ರಮಿಸಬೇಡಿರಿ. ಜಮಾಅತ್ ರಚಿಸಲ್ಪಟ್ಟಿರುವುದರಿಂದ ನನ್ನ ಈ ತನಕದ ಹೊಣೆ ಕೊನೆಗೊಂಡಿದೆ. ಜಮಾಅತ್‌ನ ನಿರ್ಣಯದಂತೆ ಇನ್ನು ಮುಂದೆ ಈ ಹೊಣೆಗಾರಿಕೆ ವಹಿಸಲ್ಪಡುವ ವ್ಯಕ್ತಿಗೆ ವಿಧೇಯನಾಗಿ ಸಹಕಾರ ನೀಡಬೇಕಾದುದು ಜಮಾಅತ್‌ನ ಇತರರಂತೆ ನನಗೂ ಕಡ್ಡಾಯವಾಗಿದೆ.

## ಸಂಘಟನೆಯ ರೂಪ ರೇಖೆಗಳು

ಈ ಪ್ರಾಸ್ತಾವಿಕ ಭಾಷಣದ ಬಳಿಕ ಜಮಾಅತೆ ಇಸ್ಲಾಮಿಯ ಕರಡು ಸಂವಿಧಾನವನ್ನು ಓದಲಾಯಿತು ಮತ್ತು ಆ ಬಗ್ಗೆ ದೀರ್ಘ ಚರ್ಚೆಯಾಗಿ ಅದನ್ನು ಕೆಲವು ತಿದ್ದುಪಡಿ ಮತ್ತು ಸೇರ್ಪಡೆಗಳೊಂದಿಗೆ ಅಂಗೀಕರಿಸಲಾಯಿತು. ಅನಂತರ ಜಮಾಅತೆ ಇಸ್ಲಾಮಿಯನ್ನು ಆರಂಭಿಸುವ ನಿರ್ಣಯ ಕೈಗೊಳ್ಳಲಾಯಿತು. ತರುವಾಯ ಸಭಿಕರು ಒಬ್ಬೊಬ್ಬರಾಗಿ ಎದ್ದು ಗದ್ಗದ ಕಂಠದಿಂದ ಪವಿತ್ರ ವಾಕ್ಯ(ಕಲಿಮ)ವನ್ನು ಪುನರುಚ್ಚರಿಸುತ್ತಾ ಸಂಘಟನೆಯಲ್ಲಿ ಸೇರಿದರು. ಹೆಚ್ಚಿನವರ ಕಣ್ಣಾಲಿಗಳಿಂದ ಬಾಷ್ಪಹನಿಗಳು ಉದುರಿದುವು. ಕಲಿಮ ಉಚ್ಚರಿಸುವಾಗ ಪ್ರತಿಯೊಬ್ಬರೂ ಕರ್ತವ್ಯ ಪ್ರಜ್ಞೆಯಿಂದ ನಡುಗುತ್ತಿದ್ದರು. ತರುವಾಯ ಸಂಘಟನೆಗೆ ಬಲವನ್ನೂ ಭದ್ರತೆಯನ್ನೂ ಕುರ್‌ಆನ್ ಮತ್ತು ಸುನ್ನತ್‌ನ ಆಧಾರದಲ್ಲಿ ಮುನ್ನಡೆಯುವ ಸೌಭಾಗ್ಯವನ್ನೂ ಕರುಣಿಸಲೆಂದು ಅಲ್ಲಾಹನೊಡನೆ ಅವರೆಲ್ಲರೂ ಪ್ರಾರ್ಥಿಸಿದರು. ಆ ಬಳಿಕ ಮೌಲಾನಾ ಮೌದೂದಿ ಅವರು ಇಸ್ಲಾಮೀ ಸಂಘಟನೆಯ ಸ್ಥಾನ, ಅದರ ಧ್ಯೇಯ ಮತ್ತು ಕರ್ತವ್ಯಗಳನ್ನು ವಿವರಿಸುತ್ತಾ ಹೀಗೆಂದರು-

ಒಂದೇ ವಿಶ್ವಾಸ, ಒಂದೇ ಧ್ಯೇಯ, ಒಂದೇ ಕಾರ್ಯ ವಿಧಾನವನ್ನು ಅಂಗೀಕರಿಸಿದ

ಜನರು ಒಂದು ಸುಸಂಘಟಿತ ಸಂಘಟನೆಯಾಗಿರದೆ ನಿರ್ವಾಹವಿಲ್ಲ. ಅದೊಂದು ಸ್ವಾಭಾವಿಕ ಪರಿಣಾಮ. ಐಕ್ಯ ಮತ್ತು ಸಂಘಟನೆಯು ವಿಶ್ವಾಸದ ಏಕತೆಯ ಅನಿವಾರ್ಯ ಫಲ. ವಿಶ್ವಾಸ ವಿಭಿನ್ನವಾದರೆ ಮಾತ್ರ ಅನೈಕ್ಯ ಮತ್ತು ಭಿನ್ನತೆಯುಂಟಾಗುತ್ತದೆ. ಸಮಾನ ವಿಶ್ವಾಸವಿದ್ದರೂ ಸ್ವಾರ್ಥಕ್ಕಾಗಿ ಸಂಭವಿಸುವ ಭಿನ್ನತೆಯ ನೈಜ ಕಾರಣ, ಸ್ವಾರ್ಥವೇ ಒಂದು ಇಸ್ಲಾಮ್ ವಿರೋಧಿ ಸಿದ್ಧಾಂತವಾಗಿರುವುದರಿಂದಾಗಿದೆ. ಸ್ವಾರ್ಥವೆಂಬ ಸಿದ್ಧಾಂತವನ್ನು ನಂಬುವ ವ್ಯಕ್ತಿಯು ಇತರ ಎಲ್ಲಾ ವಿಷಯಗಳಲ್ಲಿ ಅನ್ಯರೊಡನೆ ಹೊಂದಿಕೊಳ್ಳುತ್ತಾ ತನ್ನದೇ ಆದ ಪ್ರತ್ಯೇಕ ಮಾರ್ಗವನ್ನು ಖಚಿತವಾಗಿ ನಿರ್ಮಿಸಿಕೊಳ್ಳುತ್ತಾನೆ. ಆದ್ದರಿಂದ ನೀವು ಅಲ್ಲಾಹನ ಸಾಕ್ಷ್ಯವಹಿಸಿ ಎಲ್ಲರಿಗೂ ಒಂದೇ ವಿಶ್ವಾಸ, ಒಂದೇ ಧ್ಯೇಯ, ಒಂದೇ ಕಾರ್ಯ ವಿಧಾನವಿರುವುದೆಂಬ ಪ್ರತಿಜ್ಞೆಗೈದಿರುವುದರಿಂದ ಒಂದೇ ಸಂಘಟನೆಯಾಗಿ ಮಾರ್ಪಟ್ಟಿದ್ದೀರಿ. ನೈಜ ಮುಸ್ಲಿಮನಿಗೆ ಸೂಕ್ತವಲ್ಲದ ಮಾರ್ಗವನ್ನವಲಂಬಿಸುವ ಸ್ವಾರ್ಥ ಪ್ರೇರಣೆಗಳಿಂದ ಅಲ್ಲಾಹನು ನಮ್ಮನ್ನು ಕಾಪಾಡಲಿ. ಇಂದಿನಿಂದ ನಮ್ಮ ಸಂಘಟಿತ ಜೀವನ ಆರಂಭವಾಗುತ್ತದೆ. ಆದ್ದರಿಂದ ನಮ್ಮ ಸಂಘಟಿತ ಚಟುವಟಿಕೆಗಳನ್ನು ಆರಂಭಿಸುವುದಕ್ಕಿಂತ ಮುಂಚಿತವಾಗಿ, ಇಸ್ಲಾಮಿ ಸಂಘಟಿತ ಜೀವನದ ವಿಧಿ ವಿಧಾನಗಳೇನೆಂಬುದನ್ನು ಚೆನ್ನಾಗಿ ತಿಳಿದಿರಬೇಕು. ಆ ಕುರಿತು ಕೆಲವು ಪ್ರಮುಖ ವಿಷಯಗಳನ್ನು ನಾನು ವಿವರಿಸುತ್ತೇನೆ-

1. ಜಮಾಅತ್‌ನ ಪ್ರತಿಯೋರ್ವ ವ್ಯಕ್ತಿಯೂ ಜಮಾಅತ್ ಮತ್ತು ಜಮಾಅತ್ ಬಂಧುಗಳ ಹಿತಾಕಾಂಕ್ಷಿಯಾಗಿರಬೇಕು. ಜಮಾಅತ್‌ಗೆ ಕೇಡು ಬಗೆಯುವುದು ಮತ್ತು ಜಮಾಅತ್ ಬಾಂಧವರೊಡನೆ ದ್ವೇಷ, ಮತ್ಸರ, ಸಂದೇಹ, ಕಿರುಕುಳಗಳು ಅತ್ಯಂತ ನೀಚ ಪಾಪವಾಗಿದೆ. ಅಲ್ಲಾಹ್ ಮತ್ತು ರಸೂಲರ ದೃಷ್ಟಿಯಲ್ಲಿ ಅದು ವಿಶ್ವಾಸ ದ್ರೋಹವೆನಿಸುವುದು.

2. ನಮ್ಮ ಜಮಾಅತ್‌ನ ಸ್ಥಾನವು ಇತರ ಲೌಕಿಕ ಪಕ್ಷಗಳಂತಲ್ಲ, 'ನನ್ನ ಪಕ್ಷವು ಸತ್ಯದಲ್ಲಿದ್ದರೂ ಅಸತ್ಯದಲ್ಲಿದ್ದರೂ ನಾನು ಅದರೊಂದಿಗಿರುತ್ತೇನೆ' ಎಂಬುದೇ ಅವುಗಳ ನಿಲುವು. ಆದರೆ ನಮ್ಮ ನಿಲುಮೆ ಹಾಗಿಲ್ಲ. ಅಲ್ಲಾಹನಲ್ಲಿರುವ ವಿಶ್ವಾಸದ ಸಂಬಂಧವೇ ವಾಸ್ತವದಲ್ಲಿ ನಮ್ಮನ್ನು ಜೋಡಿಸಿದೆ. ಅಲ್ಲಾಹನಲ್ಲಿ ವಿಶ್ವಾಸವಿರಿಸುವುದರ ಪ್ರಪ್ರಥಮ ಬೇಡಿಕೆಯು ನಮ್ಮ ಪರಸ್ಪರ ಮೈತ್ರಿ, ಹಗೆತನ, ಪ್ರೀತಿ, ದ್ವೇಷಗಳೆಲ್ಲವೂ ಅಲ್ಲಾಹನಿಗಾಗಿರಬೇಕು, ಅಲ್ಲಾಹನ ಅವಿಧೇಯತೆ ಮತ್ತು ಆತನ ನಿಯಮೋಲ್ಲಂಘನೆಯ ಬದಲಾಗಿ ಆತನ ನಿಯಮ ಪಾಲನೆಯಲ್ಲಿ ಪರಸ್ಪರ ಸಹಕರಿಸಬೇಕಾಗಿದೆ. ಜಮಾಅತ್‌ನ ಹಿತಾಕಾಂಕ್ಷಿಯಾಗಿರಬೇಕೆಂಬ ಕರ್ತವ್ಯವು ಅಲ್ಲಾಹನಿಂದ ನಮ್ಮ ಮೇಲೆ ವಹಿಸಲ್ಪಟ್ಟಿದೆಯೆಂಬುದರ ತಾತ್ಪರ್ಯವು ಜಮಾಅತನ್ನು ಬಾಹ್ಯ ಆಕ್ರಮಣದಿಂದ ರಕ್ಷಿಸುವುದಲ್ಲದೇ ಸಂಘಟನಾ ವ್ಯವಸ್ಥೆಯನ್ನು ಕೆಡಿಸುವ ಆಂತರಿಕ ರೋಗಗಳಿಂದಲೂ ಅದನ್ನು ಸುರಕ್ಷಿತವಾಗಿಡಲು ನಾವು ಸದಾ ಸಿದ್ಧರಾಗಿರಬೇಕಾಗುವುದು. ಜಮಾಅತನ್ನು ಸನ್ಮಾರ್ಗದಿಂದ ದೂರ ಸರಿಯಲು ಬಿಡಬಾರದು. ಅದರಲ್ಲಿ ತಪ್ಪಾದ ಧ್ಯೇಯ, ವಿಚಾರ ಮತ್ತು ವಿಧಾನಗಳು ಪ್ರಸಾರವಾಗದಂತೆ ಜಾಗ್ರತೆ ವಹಿಸಬೇಕು. ಅದರಲ್ಲಿ ಯಾರ ಸ್ವೇಚ್ಛಾಧಿಕಾರಕ್ಕೂ ಅವಕಾಶ ಕೊಡಬಾರದು. ಸ್ವಾರ್ಥ, ಗುಂಪುಗಾರಿಕೆಗಳಿಗೆ ಎಡೆಕೊಡಬಾರದು. ಅದರಲ್ಲಿ ಲೌಕಿಕ ಉದ್ದೇಶ ಮತ್ತು ವ್ಯಕ್ತಿ ಪೂಜೆ ತಲೆ ಹಾಕುವುದನ್ನು ತಡೆಯಬೇಕು. ಅದರ ಸಂವಿಧಾನಕ್ಕೆ ಚ್ಯುತಿ ಬಾರದಂತೆ ನೋಡಿಕೊಳ್ಳಬೇಕು. ಇವೆಲ್ಲವೂ ಜಮಾಅತ್‌ನೊಂದಿಗಿರುವ

ಅತಿದೊಡ್ಡ ಹಿತಾಕಾಂಕ್ಷೆಯಾಗಿದೆ. ಜಮಾಅತ್ ಬಾಂಧವರ ಹಿತಾಕಾಂಕ್ಷಿಗಳಾಗಿರುವುದೆಂದರೆ ಜಮಾಅತ್‌ನ ಜನರೊಂದಿಗೆ ಅವರ ಅನ್ಯಾಯ, ಅಕ್ರಮ ಮತ್ತು ಅಶಿಸ್ತುಗಳಲ್ಲಿ ಸಹಕರಿಸುವುದಲ್ಲ, ಬದಲಾಗಿ ಸತ್ಕಾರ್ಯಗಳಲ್ಲಿ ಸಹಕಾರ ನೀಡಿ, ದುಷ್ಕಾರ್ಯಗಳಲ್ಲಿ ಅಸಹಕಾರ ತೋರಿ ಸರ್ವಶಕ್ತಿಯನ್ನೂ ಉಪಯೋಗಿಸಿ ಅವರನ್ನು ಸರಿಪಡಿಸಲು ಪ್ರಯತ್ನಿಸುವುದಾಗಿದೆ. ಓರ್ವನು ದುರ್ಮಾರ್ಗದಲ್ಲಿ ಚಲಿಸುತ್ತಿರುವುದನ್ನು ಕಂಡಾಗ ಆತನಿಗೆ ಸನ್ಮಾರ್ಗವನ್ನು ತೋರಿಸಿಕೊಡುವುದು, ಅವನು ತನ್ನ ಮೇಲೆಯೇ ಅನ್ಯಾಯವೆಸಗುವುದನ್ನು ಕಂಡಾಗ ಅದರಿಂದ ಅವನನ್ನು ತಡೆಯುವುದೇ ಸತ್ಯವಿಶ್ವಾಸಿಗಳು ಪರಸ್ಪರ ತೋರಬಹುದಾದ ಹಿತಾಕಾಂಕ್ಷೆ. ಆದರೆ ಪರಸ್ಪರ ನೀತಿ ಬೋಧನೆಯಲ್ಲಿ ಅಪಹಾಸ್ಯ, ನಿಂದೆ, ದೂಷಣೆ ಇತ್ಯಾದಿಗಳನ್ನು ಬಿಟ್ಟು ಸ್ನೇಹ, ಸೌಹಾರ್ದ, ನಿಷ್ಕಳಂಕತೆ ಮತ್ತು ಸಹಾನುಭೂತಿಯ ಮಾರ್ಗವನ್ನು ಅವಲಂಬಿಸಬೇಕು. ನೀವು ಸುಧಾರಿಸಬಯಸುವ ವ್ಯಕ್ತಿಗೆ, ಅವರ ಅನೈತಿಕ ವರ್ತನೆ ಮತ್ತು ದುರ್ನಡತೆಗಳಿಂದ, ನಿಮ್ಮ ಮನನೊಂದಿರುವುದು ನಿಮ್ಮ ವ್ಯವಹಾರ ರೀತಿಯಿಂದಲೇ ಅವರಿಗೆ ಮನವರಿಕೆಯಾಗಬೇಕು. ತದ್ವಿರುದ್ಧವಾಗಿ ಅವರನ್ನು ನಿಂದಿಸಿ ನೀವು ಅಹಂಭಾವ ತಾಳಿದರೆ ಅದು ಅತ್ಯಂತ ಹಾನಿಕಾರಕವಾದೀತು.

3. ಜಮಾಅತ್‌ನೊಳಗೆ ಗುಂಪುಗಾರಿಕೆ ಮಾಡಬೇಡಿರಿ. ಒಳಸಂಚು, ಕುಪ್ರಚಾರ, ಅಧಿಕಾರ ಪೈಪೋಟಿ, ಪಕ್ಷಪಾತ, ಸ್ವಾರ್ಥ, ದ್ವೇಷ ಇತ್ಯಾದಿಗಳೆಲ್ಲವೂ ಸಾಂಘಿಕ ಜೀವನಕ್ಕೆ ಅಪಾಯಕಾರಿ. ಸಹಜವಾಗಿಯೂ ಇಸ್ಲಾಮಿ ಸಂಘಟನೆಯು ಅದನ್ನು ಸಹಿಸುವುದಿಲ್ಲ. ಅಂತೆಯೇ ಪರನಿಂದೆ, ದುರ್ನಾಮ, ದುರ್ಭಾವನೆಗಳು ಸಾಂಘಿಕ ಜೀವನದ ಮಾರಕ ರೋಗಗಳಾಗಿರುವುದರಿಂದ ಅವುಗಳಿಂದಲೂ ಮುಕ್ತವಾಗಿರಲು ಸದಾ ಪ್ರಯತ್ನಿಸಬೇಕು.

4. ಪರಸ್ಪರ ಸಮಾಲೋಚನೆಯು ಸಂಘಟಿತ ಜೀವನದ ಉಸಿರು. ಅದನ್ನು ನಿರ್ಲಕ್ಷಿಸಬಾರದು. ಜಮಾಅತ್ ಚಟುವಟಿಕೆಗಳ ಹೊಣೆಗಾರ ವ್ಯಕ್ತಿಯು ತನ್ನ ಪ್ರತಿಯೊಂದು ಕೆಲಸ ಕಾರ್ಯಗಳ ಬಗ್ಗೆ ಇತರ ಬಾಂಧವರೊಡನೆ ಕಡ್ಡಾಯವಾಗಿ ಸಮಾಲೋಚನೆ ನಡೆಸಬೇಕು. ಯಾವುದೇ ವಿಷಯದ ಕುರಿತು ಆತನು ಅಭಿಪ್ರಾಯ ಕೇಳಿದರೆ ಸದುದ್ದೇಶ ಪೂರ್ವಕ ಅದಕ್ಕೆ ತನ್ನ ಅಭಿಪ್ರಾಯ ನೀಡುವುದೂ ಕರ್ತವ್ಯವಾಗಿದೆ. ಸಾಂಘಿಕ ಸಮಾಲೋಚನೆಗಳಲ್ಲಿ ತನ್ನ ನೈಜ ಅಭಿಪ್ರಾಯವನ್ನು ಹೊರಗೆಡಹದಿರುವುದು ಸಂಘಟನೆಗೆ ಬಗೆಯುವ ದ್ರೋಹವಾಗಿದೆ. ತಾತ್ಕಾಲಿಕ ಲಾಭದ ದೃಷ್ಟಿಯಿಂದ ನೈಜ ಅಭಿಪ್ರಾಯಕ್ಕೆ ವಿರುದ್ಧವಾಗಿ ಅಭಿಪ್ರಾಯ ನೀಡುವುದರಿಂದಲೂ ಜಮಾಅತನ್ನು ವಂಚಿಸಿದಂತಾಗುವುದು. ಸಮಾಲೋಚನೆಯ ವೇಳೆ ತನ್ನ ಅಭಿಪ್ರಾಯ ನೀಡದೆ ಮೌನವಾಗಿದ್ದು, ಅದಕ್ಕೆ ವಿರುದ್ಧವಾಗಿ ಏನಾದರೂ ತೀರ್ಮಾನಿಸಲ್ಪಟ್ಟರೆ ಜಮಾಅತ್‌ನಲ್ಲಿ ಅನೈಕ್ಯ, ತಪ್ಪು ತಿಳುವಳಿಕೆ ಮತ್ತು ಒಡಕು ಹುಟ್ಟುವಂತಹ ಪ್ರಯತ್ನಗಳಿಗೆ ತೊಡಗುವುದು ಮಹಾ ವಂಚನೆಯಾಗಿದೆ.

5. ಸಾಂಘಿಕ ಸಮಾಲೋಚನೆಯಲ್ಲಿ ಸ್ವಂತ ಅಭಿಪ್ರಾಯಕ್ಕಾಗಿ ಹಠ ತೋರಬಾರದು. ತಮ್ಮ ಅಭಿಪ್ರಾಯ ತಿರಸ್ಕೃತವಾದರೆ ಸಂಘಟನೆಯೊಂದಿಗೆ ಅಸಹಕಾರ ತೋರುವುದು ಅಥವಾ ಸರ್ವಾನುಮತದ ಅಭಿಪ್ರಾಯಕ್ಕೆ ವಿರುದ್ಧವಾಗಿ ವರ್ತಿಸುವುದು ನ್ಯಾಯಬದ್ಧವೆಂದು ಕೆಲವು ಮೂರ್ಖರು ಭಾವಿಸುತ್ತಾರೆ. ಆದರೆ ಆ ನಿಲುಮೆಯು ವಾಸ್ತವದಲ್ಲಿ ಇಸ್ಲಾಮಿನ

ಸ್ಪಷ್ಟನಿಯಮಗಳಿಗೂ ಸಹಾಬಿವರ್ಯರ ಒಮ್ಮತದ ಚರ್ಯೆಗೂ ತೀರಾ ವಿರುದ್ಧವಾಗಿದೆ. ಯಾವುದಾದರೊಂದು ಸಮಸ್ಯೆಯು ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯ ವ್ಯಾಖ್ಯಾನಕ್ಕೆ ಅಥವಾ 'ನಸ್ಸ್' (ಸ್ಪಷ್ಟ ಪ್ರಮಾಣ)ಗಳಿಂದ ಆಯ್ದ ಉಪ ನಿಯಮಗಳಿಗೆ ಅಥವಾ ಲೌಕಿಕ ವಿಷಯಗಳಿಗೆ ಸಂಬಂಧಿಸಿದ್ದಾಗಿದ್ದ, ಈ ಉಭಯ ಸ್ಥಿತಿಗಳಲ್ಲಿಯೂ ಸಹಾಬಿವರ್ಯರು ಅವು ವಿವಾದಾಸ್ಪದವಾದಾಗ, ತಂತಮ್ಮ ಜ್ಞಾನ ಮತ್ತು ವಿಶ್ವಾಸದ ಆಧಾರದಲ್ಲಿ ಸ್ಪಷ್ಟ ಅಭಿಪ್ರಾಯ ನೀಡಿ ಅವುಗಳನ್ನು ಸಾಕ್ಷ್ಯಾಧಾರಗಳಿಂದ ಸಮರ್ಥಿಸುವ ನೀತಿಯನ್ನು ಅನುಸರಿಸುತ್ತಿದ್ದರು. ಸಂದರ್ಭವಶಾತ್, ಅವರ ಅಭಿಪ್ರಾಯಕ್ಕೆ ವಿರುದ್ಧವಾಗಿ ತೀರ್ಮಾನವಾದರೆ ಅವರು ತಮ್ಮ ಅಭಿಪ್ರಾಯವನ್ನು ಹಿಂತೆಗೆಯುತ್ತಿದ್ದರು ಅಥವಾ ತಮ್ಮ ಅಭಿಪ್ರಾಯವೇ ಸರಿಯೆಂದು ಭಾವಿಸುವುದರೊಂದಿಗೆ ಬಿಚ್ಚು ಮನಸ್ಸಿನಿಂದ ಜಮಾಅತ್‌ನೊಂದಿಗೆ ಸಹಕರಿಸುತ್ತಿದ್ದರು. ಈ ನೀತಿಯು ಸಂಘಟಿತ ಜೀವನಕ್ಕೆ ಅನಿವಾರ್ಯ. ಸಂಘಟಿತ ನಿರ್ಣಯವನ್ನು ತಿರಸ್ಕರಿಸಿ ಎಲ್ಲರೂ ಸ್ವಂತ ಅಭಿಪ್ರಾಯಗಳಿಗೆ ಜೋತುಬಿದ್ದರೆ ಕಟ್ಟಕಡೆಗೆ ಸಂಘಟನಾ ವ್ಯವಸ್ಥೆ ನುಚ್ಚುನೂರಾಗುವುದು.

6. "ಸಂಘಟನೆಯಿಲ್ಲದೆ ಇಸ್ಲಾಮಿಲ್ಲ. ಅಮೀರ್ (ನಾಯಕ) ಇಲ್ಲದೆ ಸಂಘಟನೆಯಿಲ್ಲ"ವೆಂಬುದು ಸಂಘಟಿತ ಜೀವನದ ಪ್ರಮುಖ ವಿಷಯ. ಈ ಶಾಶ್ವತ ನಿಯಮದಂತೆ ಸಂಘಟನೆಯ ನಿರ್ಮಾಣದೊಂದಿಗೆ ನಾವು ಓರ್ವ ಅಮೀರ್‌ರನ್ನು ಚುನಾಯಿಸುವುದು ಅಗತ್ಯವಾಗಿದೆ. ಅಮೀರ್‌ರ ಆಯ್ಕೆಯ ಬಗ್ಗೆ ನಾವು ಕೆಲವು ವಿಷಯಗಳನ್ನು ವಿಶೇಷವಾಗಿ ಗಮನಿಸಬೇಕು. ಅದನ್ನು ಬಯಸುವವರನ್ನು ಅದಕ್ಕೆ ಚುನಾಯಿಸಬಾರದು. ಯಾಕೆಂದರೆ ಈ ಘನ ಜವಾಬ್ದಾರಿಕೆಯ ಪ್ರಾಮಾಣಿಕ ಪ್ರಜ್ಞೆಯಿರುವ ಯಾವ ವ್ಯಕ್ತಿಯೂ ಸ್ವಯಂ ಅದನ್ನು ಅಂಗೀಕರಿಸುವ ಅಭಿಲಾಷೆ ವ್ಯಕ್ತಪಡಿಸಲಾರ. ಹೀಗಿರುತ್ತಾ ಯಾರಾದರೂ ಆ ಸ್ಥಾನವನ್ನು ಬಯಸಿದರೆ, ಅದು ವಾಸ್ತವದಲ್ಲಿ ಹೊಣೆಗಾರಿಕೆಯನ್ನು ವಹಿಸುವ ಬದಲಾಗಿ ಅಧಿಕಾರ ಮತ್ತು ಪ್ರತಿಷ್ಠೆ ಗಳಿಕೆಗೆಂದು ಭಾವಿಸಬೇಕು. ಆದ್ದರಿಂದ ಅಂಥವರಿಗೆ ಅಲ್ಲಾಹನ ಸಹಾಯ ಮತ್ತು ಬೆಂಬಲ ಎಂದೆಂದಿಗೂ ದೊರೆಯಲಾರದು. ಆಯ್ಕೆಯ ವಿಷಯದಲ್ಲಿ ಸದುದ್ದೇಶದೊಂದಿಗೆ ಪರಸ್ಪರ ವಿಚಾರ ವಿನಿಮಯ ನಡೆಸಬಹುದು. ಆದರೆ ಯಾರದೇ ಪರವಾಗಿ ಅಥವಾ ವಿರೋಧವಾಗಿ ಪಿತೂರಿ ಮತ್ತು ಪ್ರಚಾರ ನಡೆಸಬಾರದು. ವೈಯಕ್ತಿಕ ಪ್ರೀತಿ ಮತ್ತು ಸೌಹಾರ್ದ ಭಾವನೆಗಳೆಲ್ಲವನ್ನು ಹೃದಯದಿಂದ ಹೊರಹಾಕಿ ತಕ್ವಾ (ಅಲ್ಲಾಹನ ಭಯ ಭಕ್ತಿ) ಪವಿತ್ರ ಕುರ್‌ಆನ್ ಮತ್ತು ಪ್ರವಾದಿಚರ್ಯೆಯ ತಿಳುವಳಿಕೆ, ಇಸ್ಲಾಮಿನ ಸೂಕ್ಷ್ಮದೃಷ್ಟಿ, ಅಗಾಧ ಪಾಂಡಿತ್ಯ, ವ್ಯವಹಾರಗಳನ್ನು ಮನಗಂಡು ಸೂಕ್ತ ನಿರ್ಧಾರ ಕೈಗೊಳ್ಳುವ ಜಾಣ್ಮೆ, ಅಲ್ಲಾಹನ ಮಾರ್ಗದಲ್ಲಿ ದೃಢಚಿತ್ತತೆ ಇತ್ಯಾದಿ ಗುಣಗಳಲ್ಲಿ ಅತ್ಯುತ್ತಮ ಮತ್ತು ಪ್ರಾಮಾಣಿಕನು ಯಾರೆಂಬುದನ್ನು ನೀವು ಅವಲೋಕಿಸಬೇಕು. ಅಂತಹ ಗುಣಗಳಿರುವ ವ್ಯಕ್ತಿಯನ್ನು ನೀವು ಅಲ್ಲಾಹನ ಮೇಲೆ ಭರವಸೆಯಿಟ್ಟು ಚುನಾಯಿಸಬೇಕು. ಈ ರೀತಿ ಚುನಾಯಿಸಿದ ಬಳಿಕ ಅವರ ಹಿತಾಕಾಂಕ್ಷಿಗಳಾಗಿ ನಿಷ್ಠೆಯಿಂದ ಅವರೊಂದಿಗೆ ಸಹಕರಿಸಿ, ದುಡಿದು, ಸತ್ಕಾರ್ಯಗಳಲ್ಲಿ ಅವರನ್ನು ಅನುಸರಿಸಿ, ದುಷ್ಕಾರ್ಯಗಳಿಂದ ಅವರನ್ನು ತಡೆಯಲು ಪ್ರಯತ್ನಿಸುವುದು ನಮ್ಮ

ಕರ್ತವ್ಯವಾಗುತ್ತದೆ.

## ನಾಯಕನ ಆಯ್ಕೆ

ತರುವಾಯ ಅಮೀರ್‌ರ ಆಯ್ಕೆಯ ಬಗ್ಗೆ ತುಂಬಾ ಹೊತ್ತು ಚರ್ಚೆ, ಸಮಾಲೋಚನೆಗಳು ನಡೆದುವು. ಕೊನೆಗೆ ಅಧ್ಯಕ್ಷರ ಸ್ಥಾನಮಾನ, ಅರ್ಹತೆ ಮತ್ತು ಕರ್ತವ್ಯಗಳ ಬಗ್ಗೆ ಈ ಕೆಳಗಿನ ನಿರ್ಣಯ ಕೈಗೊಳ್ಳಲಾಯಿತು.

ಸಂಘಟನೆಗೆ ಓರ್ವ ಅಧ್ಯಕ್ಷರನ್ನು ಆರಿಸಬೇಕು. ಅವರ ಸ್ಥಾನಮಾನವು ಸಾಂಕೇತಿಕವಾಗಿ, 'ಅಮೀರುಲ್ ಮುಅ್‌ಮಿನೀನ್' ಎಂಬರ್ಥದಲ್ಲಿರುವುದಿಲ್ಲ. ಅವರು ಕೇವಲ ಈ ಸಂಘಟನೆಯ ನಾಯಕರಾಗಿರುತ್ತಾರೆ. ಅಲ್ಲಾಹ್ ಮತ್ತು ಪ್ರವಾದಿಯ(ಸ) ನಿರ್ದೇಶನಗಳಿಗೆ ವಿರುದ್ಧವಲ್ಲದ ಎಲ್ಲಾ ವಿಷಯಗಳಲ್ಲಿಯೂ ಸಂಘಟನೆಯ ಪ್ರತಿಯೊಬ್ಬ ವ್ಯಕ್ತಿಯು ಅವರನ್ನು ಕಡ್ಡಾಯವಾಗಿ ಅನುಸರಿಸಬೇಕು. ಅಧ್ಯಕ್ಷರ ಆಯ್ಕೆಯಲ್ಲಿ ದೇವನ ಭಯ ಭಕ್ತಿ, ಧರ್ಮಜ್ಞಾನ, ದೂರದೃಷ್ಟಿ, ಸ್ಥಿತ ಪ್ರಜ್ಞೆ, ಸ್ಥೈರ್ಯ, ದೃಢಚಿತ್ತತೆ, ನಿಷ್ಠೆ ಇತ್ಯಾದಿಗಳನ್ನು ಪರಿಗಣಿಸಲಾಗುವುದು. ಸಂಘಟನೆಯ ಆಹ್ವಾನವು ಅಧ್ಯಕ್ಷನ ವ್ಯಕ್ತಿತ್ವ ಅಥವಾ ನಾಯಕತ್ವದ ಬದಲಾಗಿ ಸಂಘಟನೆಯ ವಿಶ್ವಾಸ ಮತ್ತು ಧ್ಯೇಯದ ಕಡೆಗಿರುವುದು. ಆಯ್ಕೆಯ ವೇಳೆ ಪ್ರಸ್ತುತ ಗುಣಗಳ ಆಧಾರದಲ್ಲಿ ಹೆಚ್ಚು ಯೋಗ್ಯರಾದವರನ್ನು ಆ ಸ್ಥಾನಕ್ಕೆ ಆರಿಸಲಾಗುವುದು.

ತನಗಿಂತ ಯೋಗ್ಯವಾದ ಇನ್ನಾರಾದರೂ ದೊರೆತರೆ ಅವರಿಗಾಗಿ ತನ್ನ ಸ್ಥಾನವನ್ನು ಸ್ವಯಂ ತೆರವುಗೊಳಿಸುವರೆಂದು ಅಧ್ಯಕ್ಷರ ದೇವಭಕ್ತಿ ಮತ್ತು ಕರ್ತವ್ಯ ಪ್ರಜ್ಞೆಗಳಲ್ಲಿ ಭರವಸೆಯಿಡಬಹುದು. ಅಲ್ಲದೆ ಸಂದರ್ಭಾನುಸಾರ ಸಂಘಟನೆಗೆ ಅದರ ಧ್ಯೇಯದ ಬೇಡಿಕೆಯಂತೆ ಅಧ್ಯಕ್ಷರನ್ನು ಪದಚ್ಯುತಗೊಳಿಸಿ, ಬೇರೊಬ್ಬರನ್ನು ಚುನಾಯಿಸುವ ಅಧಿಕಾರವಿರುವುದು.

ಹಲವು ಸುತ್ತಿನ ಮಾತುಕತೆ, ಚರ್ಚೆ ಸಮಾಲೋಚನೆಗಳ ಬಳಿಕ ಸಭಿಕರೆಲ್ಲರೂ ಸರ್ವಾನುಮತದಿಂದ ಮೌಲಾನಾ ಸೈಯದ್ ಅಬುಲ್ ಆಲಾ ಮೌದೂದಿಯವರನ್ನೇ ಜಮಾಅತ್‌ನ ಅಮೀರ್ ಆಗಿ ಆಯ್ಕೆ ಮಾಡಿದರು. ತರುವಾಯ ಮೌ|ಮೌದೂದಿ ಅವರು ತನ್ನ ಸಂಕ್ಷಿಪ್ತ ಭಾಷಣದಲ್ಲಿ ಹೀಗೆಂದರು:

ನಾನು ಖಂಡಿತವಾಗಿಯೂ ನಿಮ್ಮೆಲ್ಲರಿಗಿಂತ ಅಧಿಕ ಪಾಂಡಿತ್ಯ ಮತ್ತು ದೇವಭಕ್ತಿಯುಳ್ಳವನಲ್ಲ. ಹಾಗೆಯೇ ಇತರ ಗುಣನಡತೆಗಳಲ್ಲಿಯೂ ನಾನು ನಿಮಗಿಂತ ಶ್ರೇಷ್ಠನಲ್ಲ. ಆದೇನಿದ್ದರೂ ನೀವು ನನ್ನಲ್ಲಿ ಭರವಸೆಯಿಟ್ಟು ಈ ಭಾರವನ್ನು ವಹಿಸಿಕೊಟ್ಟಿದ್ದೀರಿ. ಆದ್ದರಿಂದ ಆ ಭಾರವನ್ನು ವಹಿಸಿಕೊಳ್ಳುವ ಶಕ್ತಿಯನ್ನು ಕರುಣಿಸಲೆಂದೂ ನಿಮ್ಮ ಭರವಸೆಗೆ ಚ್ಯುತಿಬಾರದಿರಲೆಂದೂ ನಾನು ಅಲ್ಲಾಹನೊಡನೆ ಪ್ರಾರ್ಥಿಸುತ್ತೇನೆ. ನೀವೂ ಪ್ರಾರ್ಥಿಸಿರಿ. ಸಂಪೂರ್ಣ ದೇವ ಭಯ ಮತ್ತು ಕರ್ತವ್ಯ ಪ್ರಜ್ಞೆಯಿಂದ ನನ್ನ ಗರಿಷ್ಠ ಸಾಮರ್ಥ್ಯವನ್ನು ಈ ಕಾರ್ಯಕ್ಕಾಗಿ ವಿನಿಯೋಗಿಸಲು ಪ್ರಯತ್ನಿಸುತ್ತೇನೆ.

ಈ ಕರ್ತವ್ಯ ನಿರ್ವಹಣೆಯಲ್ಲಿ ಪ್ರಜ್ಞಾಪೂರ್ವಕವಾಗಿ ನಾನು ಯಾವ ಲೋಪವನ್ನೂ ಮಾಡಲಾರೆ. ನನ್ನ ತಿಳುವಳಿಕೆಯಂತೆ, ಅಲ್ಲಾಹನ ಗ್ರಂಥ, ಪ್ರವಾದಿಚರ್ಯೆ ಮತ್ತು 'ಖಿಲಫಾವುರ್‍ರಾಶಿದೀನ್'ರ ಹೆಜ್ಜೆಯನ್ನು ಅನುಗಮಿಸುವುದರಲ್ಲಿಯೂ ಅಸಡ್ಡೆ ತೋರಲಾರೆ.

ಆದರೂ ನನ್ನಲ್ಲೇನಾದರೂ ದೋಷ ಕಂಡು ಬಂದರೆ, ಅಥವಾ ನಾನು ಸನ್ಮಾರ್ಗದಿಂದ ದೂರ ಸರಿಯುತ್ತಿರುವೆನೆಂದು ನಿಮಗೆ ಭಾಸವಾದರೆ ನಾನು ಪ್ರಜ್ಞಾಪೂರ್ವಕವಾಗಿ ಹಾಗೆ ಮಾಡುತ್ತಿರುವೆನೆಂದು ಭ್ರಮಿಸದೆ ಸದುದ್ದೇಶ ಮತ್ತು ಹಿತಾಕಾಂಕ್ಷೆಯಿಂದ ನನ್ನನ್ನು ಸನ್ಮಾರ್ಗದತ್ತ ತಿರುಗಿಸಿರಿ. ನಾನು ನನ್ನ ಐಷಾರಾಮ ಮತ್ತು ಸ್ವಹಿತಾಸಕ್ತಿಗಳಿಗಿಂತ ಮಿಗಿಲಾಗಿ ಸಂಘಟನೆಯ ಹೊಣೆಗಾರಿಕೆ ಮತ್ತು ಹಿತಾಸಕ್ತಿಗಳಿಗೆ ಅಗ್ರಸ್ಥಾನ ನೀಡುವುದು, ಸಂಘಟನಾ ವ್ಯವಸ್ಥೆಯನ್ನು ಸಂರಕ್ಷಿಸುವುದು, ಸದಸ್ಯರ ಮಧ್ಯೆ ಸತ್ಯ ಮತ್ತು ನ್ಯಾಯ ನಿಷ್ಠೆಯಿಂದ ತೀರ್ಪು ನೀಡುವುದು, ಜಮಾಅತ್ ನನಗೊಪ್ಪಿಸಿರುವ ಅಮಾನತ್‌ಗಳನ್ನು ಕಾಪಾಡುವುದು, ನನ್ನ ದೇಹ, ಮನಮಸ್ತಿಷ್ಕಗಳ ಸಕಲ ಸಾಮರ್ಥ್ಯಗಳನ್ನೂ ಜಮಾಅತ್‌ನ ಧ್ಯೇಯಸಾಧನೆಗಾಗಿ ಮುಡಿಪಿಡುವುದು ನನ್ನ ಕರ್ತವ್ಯವಾಗಿದೆ. ನಾನು ಸನ್ಮಾರ್ಗದಲ್ಲಿರುವ ತನಕ ನನ್ನೊಡನೆ ಸಹಕರಿಸಿರಿ. ನನ್ನ ಆಜ್ಞೆಗಳನ್ನು ಅನುಸರಿಸಿರಿ. ಸದಭಿಪ್ರಾಯ, ಸಲಹೆ ಸೂಚನೆಗಳಿಂದ ನನಗೆ ಬಲನೀಡಿರಿ. ಜಮಾಅತ್‌ನ ಶಿಸ್ತನ್ನು ಭಂಗಗೊಳಿಸುವ ಎಲ್ಲಾ ಮಾರ್ಗಗಳಿಂದಲೂ ನಾನು ಮುಕ್ತನಾಗಿರಬೇಕಾಗಿದೆ. ಈ ಆಂದೋಲನದ ಮಹತ್ವ ಮತ್ತು ನನ್ನ ದೌರ್ಬಲ್ಯಗಳನ್ನು ನಾನು ಮನಗಂಡಿದ್ದೇನೆ. ಇದು ದೃಢಮನಸ್ಕರಾದ ಪ್ರವಾದಿಗಳಿಂದ ಆರಂಭವಾದ ಆಂದೋಲನವೆಂದು ನಾನು ಅರಿತಿದ್ದೇನೆ. ಪ್ರವಾದಿಗಳ ಬಳಿಕ ಮಾನವಕುಲದ ತೇಜಸ್ವೀ ಮಹಾ ಪುರುಷರು ಇದರ ನಾಯಕತ್ವ ವಹಿಸಿದ್ದರು. ಈ ಅತ್ಯುತ್ಕೃಷ್ಟ ಆಂದೋಲನದ ನಾಯಕತ್ವಕ್ಕೆ ನಾನೇ ಅರ್ಹನೆಂಬ ಭ್ರಮೆ ನನಗಿಲ್ಲ. ಬದಲಾಗಿ ಈ ಸಂದರ್ಭದಲ್ಲಿ ಈ ಮಹತ್ಕಾರ್ಯಕ್ಕೆ ನನಗಿಂತ ಯೋಗ್ಯ ವ್ಯಕ್ತಿ ದೊರೆಯದಿರುವುದು ದುರದೃಷ್ಟವೆಂದೇ ಭಾವಿಸುತ್ತೇನೆ. ನಾನು ಈ ನಾಯಕ ಪದವಿಯನ್ನು ನಿರ್ವಹಿಸುವುದರೊಂದಿಗೆ ಈ ಹುದ್ದೆಗೆ ಇನ್ನಷ್ಟು ಯೋಗ್ಯನಾದ ಓರ್ವ ವ್ಯಕ್ತಿಯನ್ನು ಸದಾ ಅರಸುತ್ತಿರುವೆನೆಂದು ನಾನಿಂದು ಮಾತು ಕೊಡುತ್ತೇನೆ. ಅಂತಹ ವ್ಯಕ್ತಿಯೋರ್ವರು ದೊರೆತರೆ ಅವರನ್ನು ಬೈಅತ್ ಮಾಡುವುದರಲ್ಲಿ ನಾನೇ ಮೊದಲಿಗನಾಗಿರುತ್ತೇನೆ. ಅಲ್ಲದೆ ನನಗಿಂತ ಯೋಗ್ಯರಾರೂ ದೊರೆತರೆ ಅವರನ್ನು ಅಧ್ಯಕ್ಷರಾಗಿ ನೇಮಿಸಬೇಕೆಂದು ಎಲ್ಲಾ ಸಾರ್ವಜನಿಕ ಸಭೆಯಲ್ಲಿಯೂ ಜಮಾಅತ್‌ನವರೊಂದಿಗೆ ವಿನಂತಿಸುತ್ತೇನೆ. ಈ ಸ್ಥಾನವನ್ನು ಅವರಿಗಾಗಿ ಸಂತೋಷದಿಂದ ತೆರವುಗೊಳಸುತ್ತೇನೆ. ಅಲ್ಲಾಹನಿಚ್ಛಿಸಿದರೆ, ನಾನು ಯಾವ ವಿಧದಲ್ಲಿಯೂ ಅಲ್ಲಾಹನ ಮಾರ್ಗಕ್ಕೆ ವಿಘ್ನವಾಗಿರಲು ಅವಕಾಶ ನೀಡಲಾರೆ. ಓರ್ವ ಅಯೋಗ್ಯನು ಈ ಸಂಘಟನೆಯ ಅಧ್ಯಕ್ಷನಾಗಿರುವುದರಿಂದ ನಾವು ಅದರಲ್ಲಿ ಸೇರುವುದಿಲ್ಲವೆಂದು ಆಕ್ಷೇಪಿಸಲು ಯಾರಿಗೂ ಎಡೆ ಮಾಡಿಕೊಡಲಾರೆ. ಎಂದಿಗೂ ಹಾಗಾಗಲಾರದು. ನೀವು ನನಗೆ ವಹಿಸಿರುವ ಈ ಸ್ಥಾನವು ಓರ್ವ ಯೋಗ್ಯವ್ಯಕ್ತಿಗೆ ಸದಾ ತೆರವಾಗಿರುವುದೆಂದು ನಾನು ಆಶ್ವಾಸನೆ ನೀಡುತ್ತೇನೆ. ಆದರೆ ಈ ಕರ್ತವ್ಯ ನಿರ್ವಹಣೆಗೆ ಯಾರೂ ಸಿದ್ಧರಿಲ್ಲದಿದ್ದರೆ, ನಾನು ಸಿದ್ಧನಿಲ್ಲವೆಂದು ಹೇಳಲಾರೆ. ನನ್ನ ಮಟ್ಟಿಗೆ ಈ ಆಂದೋಲನವು ನನ್ನ ಸಂಪೂರ್ಣ ಜೀವನದ ಧ್ಯೇಯವಾಗಿದೆ. ನನ್ನ ಜೀವನ್ಮರಣಗಳು ಇದಕ್ಕೆ ಮೀಸಲಾಗಿವೆ. ಇತರರು ಈ ಮಾರ್ಗದಲ್ಲಿ ಮುನ್ನಡೆಯಲಿ ನಡೆಯದಿರಲಿ, ನನಗಂತೂ ಈ ಮಾರ್ಗದಲ್ಲಿಯೇ ಮುನ್ನಡೆಯಬೇಕಾಗಿದೆ. ಇದರಲ್ಲಿಯೇ ಪ್ರಾಣ ಬಲಿಯರ್ಪಿಸಬೇಕಾಗಿದೆ. ಯಾರು ಮುನ್ನಡೆಯದಿದ್ದರೂ ನಾನು ನಡೆಯುತ್ತೇನೆ: ಯಾರೂ ಜತೆಗೆ ಬಾರದಿದ್ದರೂ ನಾನೊಬ್ಬನೇ ನಡೆಯುತ್ತೇನೆ. ಇಡೀ

ಲೋಕವೇ ನನ್ನನ್ನು ಒಗ್ಗಟ್ಟಿನಿಂದ ವಿರೋಧಿಸಿದರೂ ಅವೆಲ್ಲವನ್ನೂ ಏಕಾಂಗಿಯಾಗಿಯೇ ಎದುರಿಸಲು ನಾನು ಅಂಜಲಾರೆ.

ಕೊನೆಯದಾಗಿ, ಈ ಸಂದರ್ಭದಲ್ಲಿ ನಾನು ಇನ್ನೊಂದು ವಿಷಯವನ್ನು ಸ್ಪಷ್ಟಪಡಿಸಬಯಸುತ್ತೇನೆ 'ಫಿಕ್ಹ್' (ಕರ್ಮಶಾಸ್ತ್ರ) ಮತ್ತು 'ಇಲ್ಮುಲ್ ಕಲಾಮ್'ನಲ್ಲಿ (ತರ್ಕಶಾಸ್ತ್ರ)ನಾನು ಒಂದು ವಿಶಿಷ್ಟ ವಿಧಾನವನ್ನು ಅನುಸರಿಸುತ್ತೇನೆ. ನನ್ನ ಸ್ವಂತ ಅಧ್ಯಯನದ ಆಧಾರದಲ್ಲಿ ನಾನು ಅದನ್ನು ಅಳವಡಿಸಿಕೊಂಡಿದ್ದೇನೆ. ಕಳೆದ ಎಂಟು ವರುಷಗಳಿಂದ 'ತರ್ಜುಮಾನುಲ್ ಕುರ್‌ಆನ್' ಓದುತ್ತಿರುವವರಿಗೆ ಅದು ಚೆನ್ನಾಗಿ ತಿಳಿದಿರಬಹುದು. ಈಗ ನಾನು ಜಮಾಅತ್‌ನ ಅಮೀರೆಂಬ ಸ್ಥಾನವನ್ನು ಪಡೆದಿದ್ದೇನೆ. ಆದ್ದರಿಂದ 'ಫಿಕ್ಹ್' ಮತ್ತು 'ಇಲ್ಮುಲ್ ಕಲಾಮ್'ನ ಕುರಿತು ಈ ತನಕ ಬರೆದಿರುವ ಹಾಗೂ ಮುಂದೆ ಬರೆಯುವ ಅಥವಾ ಹೇಳುವ ಯಾವುದಕ್ಕೂ ಜಮಾಅತೆ ಇಸ್ಲಾಮಿ ಅಮೀರನ ತೀರ್ಪೆಂಬ ಸ್ಥಾನವಿರಲಾರದು. ಬದಲಾಗಿ ಅವು ನನ್ನ ಸ್ವಂತ ಅಭಿಪ್ರಾಯವಾಗಿರುವುದೆಂದು ಈ ಸಂದರ್ಭದಲ್ಲಿ ಸ್ಪಷ್ಟಪಡಿಸುತ್ತೇನೆ. ಅಂತಹ ಸಮಸ್ಯೆಗಳ ಕುರಿತು ನಾನು ಹೊಂದಿರುವ ಅಭಿಪ್ರಾಯಗಳನ್ನು ಜಮಾಅತ್‌ನ ಇತರ ವಿದ್ವಾಂಸರ ಮೇಲೆ ನಾನು ಹೇರ ಬಯಸುವುದಿಲ್ಲ. ಹಾಗೆಯೇ ನನ್ನ ಸಂಶೋಧನೆ ಮತ್ತು ಅಭಿಪ್ರಾಯ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವ ಶರ್ತ ಅಥವಾ ಕಾನೂನುಪರ ನಿರ್ಬಂಧಗಳನ್ನು ಜಮಾಅತ್ ನನ್ನ ಮೇಲೆ ಹೇರುವುದನ್ನೂ ನಾನು ಮೆಚ್ಚುವುದಿಲ್ಲ. 'ಫಿಕ್ಹ್' ಮತ್ತು 'ಇಲ್ಮುಲ್ ಕಲಾಮ್'ಗಳಿಗೆ ಸಂಬಂಧಿಸಿದ ನನ್ನ ಮಾತುಗಳನ್ನು ಇತರರ ಮುಂದೆ ಆಧಾರವೆಂಬ ನೆಲೆಯಲ್ಲಿ ಯಾರೂ ಪ್ರತಿಪಾದಿಸಬಾರದೆಂದು ಸರ್ವಶಕ್ತನಾದ ಅಲ್ಲಾಹನ ಮೇಲೆ ಆಣೆಯಿಟ್ಟು ನಾನು ನಿಮಗೆ ಆದೇಶಿಸುತ್ತೇನೆ. ಅಂತೆಯೇ ನಾನು ಸಂಶೋಧನೆಯ ಆಧಾರದಲ್ಲಿ ಧರ್ಮಬದ್ಧವೆಂದು ಅಂಗೀಕರಿಸಿರುವ ವೈಯಕ್ತಿಕ ಕರ್ಮಗಳನ್ನು ಇತರರು ಆಧಾರವಾಗಿಸಬಾರದು, ಯಾವ ವಿಷಯದಲ್ಲಿಯೂ ನನ್ನ ಅಂಧಾನುಕರಣೆ ಮಾಡಬೇಡಿರಿ. ಈ ಬಗ್ಗೆ ಎಲ್ಲರಿಗೂ ಸಂಪೂರ್ಣ ಸ್ವಾತಂತ್ರ್ಯವಿದೆ. ತಿಳುವಳಿಕೆಯುಳ್ಳವರು, ತಂತಮ್ಮ ಸಂಶೋಧನೆಯಂತೆ, ತಿಳುವಳಿಕೆ ಇಲ್ಲದವರು ಅವರ ವಿಶ್ವಾಸಯೋಗ್ಯ ಪಂಡಿತರ ಅಭಿಪ್ರಾಯದಂತೆ ನಡೆದುಕೊಳ್ಳಲಿ. ಮಾತ್ರವಲ್ಲದೆ ಇಂತಹ ವಿಷಯಗಳಲ್ಲಿ ನನ್ನೊಂದಿಗೆ ಭಿನ್ನಾಭಿಪ್ರಾಯವಿರಿಸುವ ಮತ್ತು ತಂತಮ್ಮ ಅಭಿಪ್ರಾಯಗಳನ್ನು ಅಭಿವ್ಯಕ್ತಗೊಳಿಸುವ ಸ್ವಾತಂತ್ರ್ಯ ಪ್ರತಿಯೊಬ್ಬರಿಗೂ ಇದೆ. ಆಂಶಿಕ ವಿಷಯಗಳ ಬಗ್ಗೆ ಭಿನ್ನಾಭಿಪ್ರಾಯವಿದ್ದರೂ ಪರಸ್ಪರ ವಿಚಾರ ವಿನಿಮಯ ನಡೆಸುತ್ತಾ ನಾವೊಂದು ಸಂಘಟನೆಯಾಗಿ ಮುಂದುವರಿಯಬಹುದು. ಅದರ ಸೂಕ್ತ ಮಾದರಿಗಳು ಸಹಾಬಿವರ್ಯರ ಜೀವನದಲ್ಲಿ ನಮಗೆ ದೊರೆಯುತ್ತವೆ.

## ಕಾರ್ಯಕಾರಿಣಿ ಸಭೆ

ಹಿಜರಿ 1360 ಶಅಬಾನ್ 4ರಂದು 'ಮಜ್ಲಿಸೆ ಶೂರಾ'ವನ್ನು ಚುನಾಯಿಸಲಾಯಿತು. ತರುವಾಯ ಜಮಾಅತ್‌ನ ಚಟುವಟಿಕೆಗಳನ್ನು ಹಲವು ವಿಭಾಗಗಳಾಗಿ ವಿಂಗಡಿಸಿ ಮುಂದಿನ ಕಾರ್ಯಕ್ರಮಗಳನ್ನು ಸಿದ್ಧಪಡಿಸಲಾಯಿತು. ಆ ಬಳಿಕ ಜಮಾಅತ್ ಅಮೀರ್‌ರು ಕಾರ್ಯಕಾರಿಣಿಯು ತಯಾರಿಸಿದ ಕಾರ್ಯಕ್ರಮಗಳನ್ನು ಸಭೆಯಲ್ಲಿ ವಿವರಿಸಿ, ಚಟುವಟಿಕೆಗಳ ಬಗ್ಗೆ ಸದಸ್ಯರಿಗೆ ಈ ಕೆಳಗಿನ ನಿರ್ದೇಶಗಳನ್ನು ನೀಡಿದರು.

1. ಜಮಾಅತೆ ಇಸ್ಲಾಮಿಯ ಇಬ್ಬರು ಸದಸ್ಯರಿರುವ ಎಲ್ಲಾ ಸ್ಥಳಗಳಲ್ಲಿಯೂ ಸ್ಥಾನೀಯ ಶಾಖೆಗಳನ್ನು ರಚಿಸಬೇಕು. ಅವರ ಪೈಕಿ ಹೆಚ್ಚು ಉತ್ತಮ ವ್ಯಕ್ತಿಯನ್ನು ಅಧ್ಯಕ್ಷನಾಗಿ ಆರಿಸಿ, ಆಯ್ಕೆಯ ವಿವರವನ್ನು ಕೇಂದ್ರ ಕಛೇರಿಗೆ ತಿಳಿಸಿ ಜಮಾಅತ್ ಅಧ್ಯಕ್ಷರ ಅಂಗೀಕಾರ ಪಡೆಯಬೇಕು. ಹಾಗೆಯೇ ಎರಡಕ್ಕಿಂತ ಹೆಚ್ಚು ಜಮಾಅತ್ ಸದಸ್ಯರಿರುವ ಪ್ರದೇಶಗಳಲ್ಲಿ ನಿಸ್ವಾರ್ಥಿಯಾಗಿದ್ದು ಸತ್ಯನಿಷ್ಠೆ, ನೈತಿಕ ಪ್ರಜ್ಞೆ, ಧರ್ಮನಿಷ್ಠೆ, ವಿವೇಕ, ಬುದ್ಧಿಚಾತುರ್ಯ ಹಾಗೂ ಇಸ್ಲಾಮಿ ಆಂದೋಲನದ ಸ್ವರೂಪವನ್ನು ಚೆನ್ನಾಗಿ ಗ್ರಹಿಸಿದ, ಆ ಪ್ರದೇಶದ ಜನರ ಗೌರವಕ್ಕೆ ಪಾತ್ರನಾದ ವ್ಯಕ್ತಿಯನ್ನು ಸ್ಥಾನೀಯ ಅಮೀರ್ ಆಗಿ ಆಯ್ಕೆ ಮಾಡಬೇಕು. ಆದರೆ ಸ್ಥಾನೀಯ ಶಾಖೆಯ ಸದಸ್ಯರು ಒಬ್ಬನನ್ನು ಅಮೀರ್ ಆಗಿ ಚುನಾಯಿಸಿದ ಮಾತ್ರಕ್ಕೆ ಆತನು ಅಲ್ಲಿನ ಅಮೀರ್ ಎನಿಸುವುದಿಲ್ಲ. ಜಮಾಅತ್ ಅಧ್ಯಕ್ಷರ ಅಧಿಕೃತ ಅಂಗೀಕಾರ ದೊರೆತ ಬಳಿಕವೇ ಈ ಆಯ್ಕೆ ಸಿಂಧುವಾಗುವುದು.

2. ಜಮಾಅತ್‌ನ ಸಮಗ್ರ ಒಳಿತಿಗಾಗಿ ಜಮಾಅತ್ ಅಧ್ಯಕ್ಷರು ಸ್ಥಾನೀಯ ಶಾಖೆಯ ಅಧ್ಯಕ್ಷ ಸ್ಥಾನಕ್ಕೆ ಅಥವಾ ಇತರ ಸ್ಥಾನಗಳಿಗೆ ಯಾರನ್ನಾದರೂ ನೇಮಿಸಿದರೆ ಅಥವಾ ಒಬ್ಬನನ್ನು ಆ ಸ್ಥಾನದಿಂದ ವಜಾಗೊಳಿಸಿ ಇನ್ನೊಬ್ಬನನ್ನು ನೇಮಿಸಿದರೆ ಯಾರೂ ಸಿಟ್ಟಾಗಬಾರದು. ಈ ವಿಷಯದಲ್ಲಿ ವ್ಯಕ್ತಿ ಪ್ರತಿಷ್ಠೆಗಿಂತ ಧ್ಯೇಯ ಸಾಧನೆಯ ಸೇವಾ ಮನೋಭಾವನೆಗೆ ಹೆಚ್ಚಿನ ಪ್ರಾಮುಖ್ಯವಿರುವುದು. ನೀವು ಜಮಾಅತ್‌ನ ಅಮೀರ್ ಆಗಿ ಆಯ್ಕೆಯಾದ ವ್ಯಕ್ತಿಯ ಮೇಲೆ ಭರವಸೆಯಿಡಬೇಕು. ಅವರು ಜಮಾಅತ್‌ನ ಸಮಗ್ರ ಹಿತಾಕಾಂಕ್ಷೆಯಿಂದಲೇ ಒಬ್ಬನನ್ನು ವಜಾಗೊಳಿಸಿದ್ದಾರೆ ಅಥವಾ ನೇಮಿಸಿದ್ದಾರೆಂದು ಭಾವಿಸಬೇಕು.

3. ಜಮಾಅತ್‌ನಲ್ಲಿ ಹೊಸತಾಗಿ ಸೇರಬಯಸುವವರಿಗೆ ಅವರ ಕಡ್ಡಾಯ ಕರ್ತವ್ಯಗಳನ್ನು ಮನವರಿಕೆ ಮಾಡಿಕೊಟ್ಟ ಬಳಿಕವೇ ಅವರಿಂದ ಪವಿತ್ರ ವಾಕ್ಯವನ್ನು ಹೇಳಿಸಬೇಕು. ಆದರೆ ಈ ವಿಶ್ವಾಸದ ನವೀಕರಣಕ್ಕೆ ಆತನು ಈ ಹಿಂದೆ ಮುಸ್ಲಿಮನಾಗಿರಲಿಲ್ಲ ಅಥವಾ ಈಗ ಮುಸ್ಲಿನಾಗುತ್ತಿರುವನೆಂದು ಅರ್ಥವಲ್ಲ. ಬದಲಾಗಿ ಆತನು ಅಲ್ಲಾಹನೊಂದಿಗೆ ಮಾಡಿದ್ದ ಕರಾರನ್ನು ಇನ್ನೊಮ್ಮೆ ನವೀಕರಿಸಿ ಅದನ್ನು ಮತ್ತಷ್ಟು ನಿಷ್ಕಳಂಕ ಮತ್ತು ದೃಢಗೊಳಿಸುವುದೇ ಅದರ ಉದ್ದೇಶ. ಜಮಾಅತ್‌ನೊಳಗಿಡುವ ಹೆಜ್ಜೆಯು ಯಥಾರ್ಥದಲ್ಲಿ ಜೀವನದ ಹೊಸ ಅಧ್ಯಾಯದ ಆರಂಭವಾಗಿದೆ. ಇಂದಿನಿಂದ ಶಿಸ್ತು ಬದ್ಧವಾದ ಸತ್ಯವಿಶ್ವಾಸಿಯ ಜೀವನವನ್ನು ಆರಂಭಿಸಬೇಕು. ತನ್ನೆಲ್ಲಾ ಪರಿಶ್ರಮವನ್ನು ಪ್ರಸ್ತುತ ಧ್ಯೇಯದ ಸಾಧನೆಗಾಗಿ, ಇಸ್ಲಾಮಿ ವ್ಯವಸ್ಥೆಯ ಅನುಷ್ಠಾನಕ್ಕಾಗಿ ವಿನಿಯೋಗಿಸಬೇಕು. ಈ ದೃಢ ಸಂಕಲ್ಪಕ್ಕೆ ಅಲ್ಲಾಹ್ ಮತ್ತು ಸತ್ಯವಿಶ್ವಾಸಿಗಳನ್ನು ನೀವು ಸಾಕ್ಷಿಯಾಗಿರಿಸುತ್ತೀರಿ.

4. ಜಮಾಅತ್ತನ್ನು ಸೇರಬಯಸುವ ಜನರಿಗೆ ಇಸ್ಲಾಮಿ ಆಂದೋಲನದ ಹೆಚ್ಚಿನ ಸಾಹಿತ್ಯ ಕೃತಿಗಳನ್ನು ಓದಿಸಬೇಕು. ತನ್ಮೂಲಕ ಅವರಿಗೆ ಇಸ್ಲಾಮಿ ಆಂದೋಲನದ ಎಲ್ಲಾ ಅಂಶಗಳೂ ಮನವರಿಕೆಯಾಗಿ, ಅವರಲ್ಲಿ ವೈಚಾರಿಕ ಮತ್ತು ಕ್ರಿಯಾತ್ಮಕ ಏಕತೆ ಮೂಡಿ ಬರುವುದು. ಈ ಬಗ್ಗೆ ಅವರಿಗೆ ಎಲ್ಲಾ ವಿಷಯಗಳೂ ಮೊದಲೇ ತಿಳಿದಿದೆಯೆಂದು ಭಾವಿಸಬಾರದು. ಈ ರೀತಿಯ ಊಹೆಯಿಂದ ಜಮಾಅತ್‌ಗೆ ಜನರನ್ನು ಸೇರಿಸಿಕೊಂಡರೆ ಜಮಾಅತ್‌ನ ಸದಸ್ಯರ ಮಾತು ಮತ್ತು ಕೃತಿಗಳಲ್ಲಿ ಪರಸ್ಪರ ವಿರೋಧಾಭಾಸ ಪ್ರಕಟವಾಗಬಹುದು.

ಅವಿದ್ಯಾವಂತ ಜನರಿಗೆ ನಮ್ಮ ಸಾಹಿತ್ಯಗಳ ಪ್ರಮುಖ ಭಾಗಗಳನ್ನು ಮನವರಿಕೆ ಮಾಡಿಸಿ ಆಂದೋಲನದ ಬೇಡಿಕೆಗನುಗುಣವಾಗಿ ಅವರ ವಿಚಾರಗಳನ್ನು ರೂಪಿಸಲು ಪ್ರಯತ್ನಿಸಬೇಕು. ಅದಕ್ಕಾಗಿ ನಮ್ಮ ಸಾಹಿತ್ಯಗಳ ಅಗಾಧ ಜ್ಞಾನವಿರುವ ಒಂದಿಬ್ಬರು ವ್ಯಕ್ತಿಗಳಾದರೂ ಪ್ರತಿಯೊಂದು ಸ್ಥಾನೀಯ ಶಾಖೆಯಲ್ಲಿ ಇರಬೇಕು.

5. ಸ್ಥಾನೀಯ ಶಾಖೆಗಳ ಅಧ್ಯಕ್ಷರು ತಂತಮ್ಮ ಕ್ಷೇತ್ರಗಳಲ್ಲಿರುವ ಜಮಾಅತ್ ಸದಸ್ಯರ ಪ್ರತಿಭೆಗಳನ್ನು ಚೆನ್ನಾಗಿ ಗಮನಿಸಿ ಅವರಿಗೆ ಅರ್ಹವಾದ ಕೆಲಸಗಳನ್ನು ವಹಿಸಿಕೊಡಬೇಕು. ವಹಿಸಿಕೊಟ್ಟ ಕೆಲಸವನ್ನು ಅವರು ಹೇಗೆ ನಿರ್ವಹಿಸುತ್ತಿದ್ದಾರೆಂದೂ ಗಮನಿಸಬೇಕು. ಈ ಬಗ್ಗೆ ಪ್ರತಿಯೊಬ್ಬ ಜಮಾಅತ್ ಸದಸ್ಯನೂ ನಿಷ್ಪಕ್ಷವಾಗಿ ತನ್ನ ಪ್ರತಿಭೆ ಮತ್ತು ಸಾಮರ್ಥ್ಯಗಳನ್ನು ಸ್ವಯಂ ಅವಲೋಕಿಸಿ ತನ್ನಿಂದ ಯಾವ ಕೆಲಸ ಸಾಧ್ಯವಾದೀತೆಂಬುದನ್ನು ನಾಯಕರಿಗೆ ಮನವರಿಕೆ ಮಾಡಿಕೊಡಬೇಕು.

6. ಸ್ಥಾನೀಯ ಶಾಖೆಗಳು ಸ್ಥಾಪಿಸಲ್ಪಟ್ಟಿರುವೆಡೆಗಳಲ್ಲಿ ಸದಸ್ಯರೆಲ್ಲರೂ ವಾರಕ್ಕೊಮ್ಮೆ ಒಂದೆಡೆ ಸಭೆ ಸೇರಬೇಕು. ಈ ಸಭೆಯಲ್ಲಿ ಗತವಾರದ ಚಟುವಟಿಕೆಗಳ ಸಮೀಕ್ಷೆ ಮತ್ತು ಪರಸ್ಪರ ಸಮಾಲೋಚನೆ ನಡೆಸಿ ಮುಂದಿನ ವಾರದ ಕಾರ್ಯಕ್ರಮಗಳನ್ನು ರೂಪಿಸಬೇಕು. 'ಬೈತುಲ್ ಮಾಲ್'ನ ಲೆಕ್ಕ ಪರಿಶೋಧನೆ ನಡೆಸಬೇಕು. ಜಮಾಅತ್ ವತಿಯಿಂದ ಪ್ರಕಟವಾದ ಹೊಸ ಸಾಹಿತ್ಯಗಳ ಅಧ್ಯಯನ ನಡೆಸಬೇಕು.

7. ಪವಿತ್ರ ಕುರ್‌ಆನ್, ಪ್ರವಾದಿಚರ್ಯೆ ಮತ್ತು ಸಹಾಬಿವರ್ಯರ ಜೀವನ ವಿಧಾನದ ಬಗ್ಗೆ ಸದಸ್ಯರಿಗೆ ವಿಶೇಷ ಕಾಳಜಿಯಿರಬೇಕು. ಕೂಲಂಕಷವಾಗಿ ಅವುಗಳನ್ನು ತಪ್ಪದೇ ಅಧ್ಯಯನ ಮಾಡುತ್ತಿರಬೇಕು. ಈ ಅಧ್ಯಯನವು ಪೂರ್ವಜರ ಬಗ್ಗೆ ತಿಳಿಯುವುದಕ್ಕಾಗಿ ಮಾತ್ರವಲ್ಲದೆ ಅದರಿಂದ ಸನ್ಮಾರ್ಗ ದರ್ಶನವನ್ನು ಪಡೆಯುವ ಉದ್ದೇಶದಿಂದ ಆಗಿರಬೇಕು. ಕುರ್‌ಆನ್ ಪ್ರವಚನ ಮಾಡಲು ಯೋಗ್ಯತೆಯುಳ್ಳವರಿದ್ದರೆ ಅದನ್ನೂ ಪ್ರಾರಂಭಿಸಬೇಕು.

8. ಅಲ್ಲಾಹನ ಸಂಬಂಧವೇ ಈ ಆಂದೋಲನದ ಉಸಿರು. ಅಲ್ಲಾಹನೊಡನೆ ನಮ್ಮ ಸಂಬಧವು ದುರ್ಬಲವಾದರೆ ಧರ್ಮದ ಸಂಸ್ಥಾಪನೆ ಮಾಡಲು ಮತ್ತು ಯಶಸ್ವಿಯಾಗಿ ಮುನ್ನಡೆಸಲು ನಮ್ಮಿಂದ ಸಾಧ್ಯವಾಗಲಾರದು. ಆದ್ದರಿಂದ ಕಡ್ಡಾಯ ಆರಾಧನಾ ಕರ್ಮಗಳೊಂದಿಗೆ ಸುನ್ನತ್‌ಗಳನ್ನೂ ಪಾಲಿಸಬೇಕು. ಸುನ್ನತ್(ಐಚ್ಛಿಕ) ನಮಾಝ್, ಉಪವಾಸ ಮತ್ತು ದಾನ ಧರ್ಮಗಳು ಮಾನವನ ಆತ್ಮ ಶುದ್ಧಿ ಮತ್ತು ನಿಷ್ಕಳಂಕತೆಗೆ ಪ್ರೇರಕವಾಗುತ್ತವೆ. ಕೇವಲ ತೋರಿಕೆಯಾಗದಿರಲು ಅವುಗಳನ್ನು ಆದಷ್ಟು ರಹಸ್ಯವಾಗಿ ಆಚರಿಸಲು ಪ್ರಯತ್ನಿಸಬೇಕು. ನಮಾಝನ್ನು ಸಂಪೂರ್ಣ ನಿಷ್ಠೆಯಿಂದ ಮನಃಪೂರ್ವಕವಾಗಿ ನಿರ್ವಹಿಸಬೇಕು. ಕಂಠಪಾಠ ಮಾಡಿರುವುದನ್ನು ಪದೇ ಪದೇ ಪುನರುಚ್ಚರಿಸುವಂತಾಗಬಾರದು. ಬದಲಾಗಿ ಅಲ್ಲಾಹನೊಡನೆ ನೀವೇ ಏನನ್ನೋ ಬೇಡುತ್ತಿರುವಂತೆ ನಮಾಝ್ ನಿರ್ವಹಿಸಬೇಕು. ನಮಾಝ್‌ನ ವೇಳೆ ಸರಿಯಾಗಿ ಆತ್ಮಾವಲೋಕನ ನಡೆಸಬೇಕು. ಅಂತರಂಗ ಬಹಿರಂಗಗಳನ್ನು ಚೆನ್ನಾಗಿ ಬಲ್ಲ ಅಲ್ಲಾಹನ ಮುಂದೆ ನಾವು ಮಾಡಿರುವ ಕರಾರಿಗೆ ನಮ್ಮ ಕೃತ್ಯಗಳು ವಿರುದ್ಧವಾಗಿವೆಯೇ? ನಮ್ಮ ಪ್ರತಿಜ್ಞೆಯು ನಿಷ್ಫಲವಾಗುತ್ತಿದೆಯೇ? ಎಂಬುದನ್ನು ಸರಿಯಾಗಿ ಗಮನಿಸಬೇಕು. ಈ ಆತ್ಮಾವಲೋಕನದಿಂದ ನಮ್ಮಲ್ಲೇನಾದರೂ ದೋಷವಿದೆಯೆಂದು ಮನಗಂಡರೆ, ಅದನ್ನು

ತೊರೆದು ಆ ಬಗ್ಗೆ ಅಲ್ಲಾಹನಲ್ಲಿ ಕ್ಷಮೆಯಾಚಿಸಿ, ಮುಂದೆ ಆ ದೋಷವು ಪುನರಾವರ್ತನೆಯಾಗದಂತೆ ಜಾಗ್ರತೆ ವಹಿಸಬೇಕು. ಆರಾಧನೆಗಳಲ್ಲಿ ನಿಮಗೆ ದಿನನಿತ್ಯ ನಿರ್ವಹಿಸಲು ಸಾಧ್ಯವಿರುವುದನ್ನು ತಪ್ಪದೆ ನಿರ್ವಹಿಸಬೇಕು. ಅಲ್ಲದೇ ಅಧಿಕೃತ ಹದೀಸ್‌ಗಳಿಂದ ದೃಢೀಕರಣವಿಲ್ಲದ ದಿಕ್ರ್ ಮತ್ತು ತಸ್ಬೀಹ್‌ಗಳನ್ನು ಸಂಪೂರ್ಣ ತ್ಯಜಿಸಬೇಕು. ಹದೀಸ್‌ಗಳ ಸಿಂಧುತ್ವಕ್ಕೆ ಹದೀಸ್ ಪಂಡಿತರನ್ನೇ ಅವಲಂಬಿಸಬೇಕು. 'ಮುಹದ್ದಿಸ್'ಗಳಲ್ಲದವರು, ಸ್ವಂತ ನೆಲೆಯಲ್ಲಿ ಅವರೆಷ್ಟೇ ಖ್ಯಾತ ನಾಮರಾಗಿದ್ದರೂ ಹದೀಸ್‌ಗಳ ಮಟ್ಟಿಗೆ ಅವರ ಮಾತುಗಳನ್ನು ಆಧಾರವಾಗಿ ಸ್ವೀಕರಿಸಬಾರದು. ದೋಷಪೂರ್ಣವೆಂದು ಸಾರ್ವತ್ರಿಕವಾಗಿ ತಿಳಿದಿರುವ ದುಷ್ಕೃತ್ಯಗಳಿಗಿಂತ, ಪ್ರತ್ಯಕ್ಷವಾಗಿ ಉತ್ತಮವೆಂದು ಭಾವಿಸಿ ಧರ್ಮದಲ್ಲಿ ಸೇರ್ಪಡೆಗೊಂಡ 'ಬಿದ್‌ಅತ್'(ಅನಾಚಾರ)ಗಳೇ ಅತ್ಯಂತ ಅಪಾಯಕಾರಿಯಾಗಿವೆ.

**ಕಾರ್ಯಕರ್ತರ ಗುಣವಿಶೇಷಗಳು**

9. ಜಮಾಅತ್‌ನ ಸದಸ್ಯರು ಒಂದು ಮಹಾನ್ ಘೋಷಣೆಯೊಂದಿಗೆ ಮಹತ್ವಪೂರ್ಣವಾದ ಕರ್ತವ್ಯ ನಿರ್ವಹಣೆಗೆ ಕಟಿಬದ್ಧರಾಗಿರುವರೆಂಬುದನ್ನು ಮರೆಯಬಾರದು. ಅವರ ನಡವಳಿಕೆಯು ಅವರ ಘೋಷಣೆಗಿಂತ ಕೆಳಮಟ್ಟದಲ್ಲಿದ್ದರೆ ಅವರು ಮತ್ತು ಅವರ ಈ ಘೋಷಣೆಯು ಲೋಕದಲ್ಲಿ ಅಪಹಾಸ್ಯಕ್ಕೀಡಾಗುವುದು ಖಚಿತ. ಆದ್ದರಿಂದ ಈ ಜಮಾಅತ್‌ನಲ್ಲಿ ಪ್ರವೇಶಿಸುವ ಪ್ರತಿಯೊಬ್ಬರೂ ತಮ್ಮ ದ್ವಿಮುಖ ಕರ್ತವ್ಯಗಳನ್ನು ಚೆನ್ನಾಗಿ ತಿಳಿದಿರಬೇಕು. ಅವರು ಅಲ್ಲಾಹನ ಮುಂದೆ ಜವಾಬ್ದಾರರೆಂಬುದು ಖಚಿತ. ಆದರೆ ಅಲ್ಲಾಹನ ದಾಸರ ಮುಂದೆಯೂ ಅವರ ಕರ್ತವ್ಯಗಳು ಬಹಳ ಕಠಿಣವಾಗಿದೆ. ನೀವು ಯಾವ ಊರಿನಲ್ಲಿ ನೆಲೆಸಿದ್ದರೂ ನಿಮ್ಮ ನಡವಳಿಕೆಯು ಸ್ಥಳೀಯರಿಗಿಂತ ಉತ್ತಮವಾಗಿರಬೇಕು. ಅಲ್ಲದೆ ಸದ್ಗುಣ, ಸಜ್ಜನಿಕೆ, ಧರ್ಮನಿಷ್ಠೆ, ಸಚ್ಚಾರಿತ್ರ್ಯಗಳಲ್ಲಿ ನೀವು ಮಾದರಿಯಾಗಿರಬೇಕು. ನಿಮ್ಮ ಕ್ಷುಲ್ಲಕ ತಪ್ಪುಗಳು ಜಮಾಅತ್ ಹಾಗೂ ಇಸ್ಲಾಮಿಗೆ ಕಳಂಕ ತರುವುದು. ತನ್ಮೂಲಕ ಅದೆಷ್ಟೋ ಜನರ ಮಾರ್ಗ ಭ್ರಷ್ಟತೆಗೆ ಅದು ಹೇತುವಾದೀತು.

10. ಜಮಾಅತ್ ಸದಸ್ಯರು ಮುಸ್ಲಿಮರಲ್ಲಿ ಒಂದು ಪ್ರತ್ಯೇಕ ವರ್ಗವಾಗುವಂತಹ ಎಲ್ಲಾ ಚಟುವಟಿಕೆಗಳನ್ನು ತೊರೆಯಬೇಕು. ನಮಾಝ್‌ನ ವೇಳೆ ನೀವು ಬೇರೆಯೇ ಜಮಾಅತ್ ಕಟ್ಟಿ ನಮಾಝ್ ಮಾಡಬೇಡಿರಿ. ತರ್ಕ ಮತ್ತು ವಾಗ್ವಾದಗಳನ್ನು ಸಂಪೂರ್ಣವಾಗಿ ಕೈ ಬಿಡಿರಿ. ಅಧ್ಯಯನಕ್ಕಾಗಿರದೆ ಹಠಸಾಧನೆ ಮತ್ತು ವಿರೋಧಕ್ಕಾಗಿ ಈ ಆಂದೋಲನವನ್ನು ಒಂದು ಚರ್ಚಾ ವಿಷಯವಾಗಿ ಮಾರ್ಪಡಿಸುವೆಡೆಗಳಲ್ಲಿ ಸಂಪೂರ್ಣ ತಾಳ್ಮೆ ವಹಿಸಿರಿ. ಮುಖ್ಯವಾಗಿ ನನ್ನನ್ನು ವಿರೋಧಿಸಿ ಮಾತಾಡುವಲ್ಲಿ ಅದನ್ನೆಂದೂ ಪ್ರತಿಭಟಿಸಬೇಡಿರಿ. ನನ್ನ ಮೇಲೆ ಹೊರಿಸುವ ಆರೋಪಗಳನ್ನು ನಾನೂ ಖಂಡಿಸುವುದಿಲ್ಲ. ನನ್ನ ಸಂಗಾತಿಗಳು ಈ ನಿರರ್ಥಕ ಕೆಲಸಕ್ಕಾಗಿ ತಮ್ಮ ಅಮೂಲ್ಯ ಸಮಯ ಮತ್ತು ಸಾಮರ್ಥ್ಯವನ್ನು ಹಾಳು ಮಾಡುವುದೂ ನನಗಿಷ್ಟವಿಲ್ಲ. ಆದರೆ ಯಾರಾದರೂ ಸತ್ಯಾನ್ವೇಷಣೆಯ ದೃಷ್ಟಿಯಿಂದ ಸಭ್ಯ ರೀತಿಯಲ್ಲಿ ವಿಮರ್ಶಿಸಿದರೆ, ನಮ್ಮ ನಿಲುಮೆಯ ಸಮರ್ಥನೆಗೆ ಅಗತ್ಯವಿರುವ ದೃಷ್ಟಾಂತಗಳನ್ನು ಅವರ ಮುಂದಿಡಬಹುದು. ಆದರೆ ಚರ್ಚೆಯಲ್ಲಿ ಉದ್ವಿಗ್ನತೆ ಕಂಡು ಬಂದರೆ ತಕ್ಷಣವೇ ಚರ್ಚೆ ಕೊನೆಗೊಳಿಸಬೇಕು. ಯಾಕೆಂದರೆ ವಾಗ್ವಾದವು ಅತ್ಯಂತ ವಿನಾಶಕಾರೀ ವಿಪತ್ತಾಗಿದೆ. ಅದರ

ಮೂಲಕ ಸಾವಿರಾರು ಕೆಡುಕುಗಳು ಉದ್ಭವಿಸಬಹುದು. ಆದರೆ ಯಾವ ಕೆಡುಕೂ ಅದರಿಂದ ನಿವಾರಣೆಯಾಗಲಾರದು.

11. ಇಸ್ಲಾಮಿ ಆಂದೋಲನಕ್ಕೆ ಒಂದು ವಿಶಿಷ್ಟ-ಸ್ವಭಾವವಿದೆ. ಅದಕ್ಕೊಂದು ವಿಶಿಷ್ಟ ಕಾರ್ಯವಿಧಾನವಿದೆ. ಇತರ ಆಂದೋಲನಗಳ ಕಾರ್ಯವಿಧಾನದೊಂದಿಗೆ ಇದಕ್ಕೆ ಯಾವ ಹೊಂದಾಣಿಕೆಯೂ ಇಲ್ಲ. ಇತರ ಸಾಮಾಜಿಕ ಆಂದೋಲನಗಳೊಂದಿಗೆ ನಿಕಟ ಸಂಬಂಧ ವಿರಿಸಿರುವ ಹಾಗೂ ಅವುಗಳ ಕಾರ್ಯವಿಧಾನ ಅಭ್ಯಾಸವಾಗಿ ಬಿಟ್ಟಿರುವ ಜನರು ಈ ಜಮಾಅತ್‌ಗೆ ಸೇರಿದ ಬಳಿಕ ತಮ್ಮಲ್ಲಿ ಹಲವು ಬದಲಾವಣೆಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ಬೃಹತ್ ಸಾರ್ವಜನಿಕ ಸಭೆ, ಮೆರವಣಿಗೆ, ಘೋಷಣೆ, ಧ್ವಜ, ಸಮವಸ್ತ್ರ, ಮತ ಪ್ರದರ್ಶನ, ಗೊತ್ತುವಳಿ, ಶ್ವೇತಪತ್ರ, ಅನಿಯಂತ್ರಿತ ಭಾಷಣ ಮತ್ತು ಉದ್ರೇಕಕಾರಿ ಬರಹ ಇತ್ಯಾದಿಗಳೆಲ್ಲವೂ ಇತರ ಆಂದೋಲನಗಳ ಜೀವಾಳವಾಗಿವೆ. ಆದರೆ ಇಸ್ಲಾಮಿ ಆಂದೋಲನದ ಮಟ್ಟಿಗೆ ಅವೆಲ್ಲವೂ ಮಾರಕವಾಗಿದೆ. ನಮ್ಮ ಕಾರ್ಯ ವೈಖರಿಯನ್ನು ನೀವು ಪವಿತ್ರ ಕುರ್‌ಆನ್, ಪ್ರವಾದಿಚರ್ಯೆ ಮತ್ತು ಸಹಾಬಿವರ್ಯರ ಜೀವನ ಕ್ರಮದಿಂದ ಕಲಿತು ಅದನ್ನು ಕಾರ್ಯಗತಗೊಳಿಸಲಿಕ್ಕೆ ಪ್ರಯತ್ನಿಸಬೇಕು. ಸಾರ್ವಜನಿಕರನ್ನು ನಮ್ಮ ಹಿಂದೆ ಒಟ್ಟುಗೂಡಿಸಿ ಅವರನ್ನು ಅಟ್ಟಿಕೊಂಡು ಹೋಗುವಂತೆ ನಾಲಗೆ, ಲೇಖನಿ ಮತ್ತು ಮತಪ್ರದರ್ಶನಗಳಿಂದ ನಾವು ಅವರನ್ನು ಮಂಕುಗೊಳಿಸಬಯಸುವುದಿಲ್ಲ. ನಾವು ಜನರಲ್ಲಿ ಇಸ್ಲಾಮಿನ ನೈಜ ಜ್ಞಾನವನ್ನು ಬೆಳೆಸಬೇಕಾಗಿದೆ. ವಾಸ್ತವಿಕಾಂಶಗಳನ್ನು ಅರಿತ ಬಳಿಕ ತಮ್ಮ ವೈಯಕ್ತಿಕ ಹಾಗೂ ಪರಿಸರದ ಸಾಮೂಹಿಕ ಜೀವನವನ್ನು ಆ ವಾಸ್ತವಿಕಾಂಶಗಳಿಗನುರೂಪವಾಗಿ ಪರಿವರ್ತಿಸಿ ನಿಷಿದ್ಧಗಳ ನಾಶಕ್ಕಾಗಿ ಪ್ರಾಣಾರ್ಪಣೆಗೂ ಸಿದ್ಧರಾಗುವ ಮನೋದಾರ್ಢ್ಯ ಅವರಲ್ಲಿ ಬೆಳೆಸುವುದೇ ನಮ್ಮ ಉದ್ದೇಶ. ಜನರ ಈ ಆಮೂಲಾಗ್ರ ಬದಲಾವಣೆಯು ಪೊಳ್ಳುಪ್ರದರ್ಶನ ಮತ್ತು ರಸಭರಿತ ಭಾಷಣಗಳಿಂದ ಸಾಧ್ಯವಿಲ್ಲ. ನಮ್ಮಲ್ಲಿರುವ ಭಾಷಣಗಾರರು, ತಮ್ಮ ಗತಕಾಲದ ಭಾಷಣ ಶೈಲಿಯನ್ನು ಬದಲಿಸಬೇಕು. ಹೊಣೆಯರಿತ ಸತ್ಯವಿಶ್ವಾಸಿಯೆಂಬ ನೆಲೆಯಲ್ಲಿ ಸಂತುಲಿತ ಭಾಷಣ ಮಾಡುವ ಅಭ್ಯಾಸವನ್ನು ಬೆಳೆಸಬೇಕು. ನಮ್ಮಲ್ಲಿರುವ ಲೇಖಕರು ಬೇಜವಾಬ್ದಾರಿ ಬರವಣಿಗೆಯನ್ನು ತೊರೆದು ಪ್ರತಿಯೊಂದು ಶಬ್ದದ ಬಗ್ಗೆಯೂ ಸ್ಪಷ್ಟೀಕರಣ ನೀಡಬೇಕಾಗಿದೆಯೆಂಬ ಪ್ರಜ್ಞೆಯಿಂದ ಬರೆಯುವ ಅಭ್ಯಾಸ ಬೆಳೆಸಬೇಕು.

12. ಇಸ್ಲಾಮಿ ಆಂದೋಲನದ ಕಾರ್ಯಕರ್ತರಲ್ಲಿರಬೇಕಾದ ಇನ್ನೊಂದು ವೈಶಿಷ್ಟ್ಯವೇನೆಂದರೆ, ಲೌಕಿಕ ಹಿತಾಸಕ್ತ ಜನರು ನಿಮ್ಮ ಸುತ್ತಮುತ್ತ ನಡೆಸುತ್ತಿರುವ ಕೋಲಾಹಲಗಳಿಂದ ದೂರವಿರುವುದು ಅದು ನಿಮ್ಮ ಆಂದೋಲನದ ಧ್ಯೇಯಕ್ಕೆ ವಿರುದ್ಧವಾಗಿದೆ. ಪಾರ್ಲಿಮೆಂಟ್ ಮತ್ತು ಪಂಚಾಯತ್ ಚುನಾವಣೆಗಳು, ಹಿಂದೂ-ಮುಸ್ಲಿಮ್-ಸಿಖ್ ಎಂಬ ಕೋಮು ಪೈಪೋಟಿಗಳು, ಪಕ್ಷ, ಪಂಗಡ, ಜಾತಿ, ಕುಲ, ವಂಶ ಮುಂತಾದ ಪಕ್ಷಪಾತಗಳಿಂದ ನೀವು ಮುಕ್ತರಾಗಿರಬೇಕು. ಈ ಎಲ್ಲಾ ಸಂಕುಚಿತ ಭಾವನೆಗಳಿಂದ ನೀವು ವಿಮುಕ್ತರಾಗಿ ನಿಮ್ಮ ಗಮನವನ್ನು ಸಂಪೂರ್ಣವಾಗಿ ನಿಮ್ಮ ಧ್ಯೇಯದತ್ತ ಕೇಂದ್ರೀಕರಿಸಬೇಕು. ಲೋಕದಲ್ಲಿ ನಡೆಯುವುದೆಲ್ಲವೂ ನಡೆಯುತ್ತಿರಲಿ. ದೈವಿಕ ಮಾರ್ಗದಿಂದ ಭ್ರಷ್ಟವಾದ ಎಲ್ಲಾ ಚಟುವಟಿಕೆಗಳೂ ನಿಮ್ಮ ಶಕ್ತಿ ಮತ್ತು ಸಮಯವನ್ನು ಹಾಳು ಗೆಡಹುವುದು. ವಾಸ್ತವದಲ್ಲಿ ನಿಮಗೆ ನಿಮ್ಮ

ಸಂಪೂರ್ಣ ಸಮಯ ಮತ್ತು ಬಲವ್ಯಯದ ಲೆಕ್ಕಾಚಾರವನ್ನು ಅಲ್ಲಾಹನಿಗೆ ಸಮರ್ಪಿಸಲಿಕ್ಕಿದೆ.

13. ಜಾಣ್ಮೆ ಮತ್ತು ಸದುಪದೇಶದಿಂದ ನೀವು ನಿಮ್ಮ ನಿಲುವಿನ ಪ್ರಚಾರ ಮಾಡಬೇಕು. ಜಾಣ್ಮೆಯೆಂದರೆ ನೀವು ಸಂಬೋಧಿಸುವ ಜನರ ಮನೋಗತವನ್ನು ಚೆನ್ನಾಗಿ ತಿಳಿದು, ಅವರ ತಪ್ಪು ತಿಳುವಳಿಕೆ ಮತ್ತು ಮಾರ್ಗ ಭ್ರಷ್ಟತೆಯ ಕಾರಣಗಳನ್ನು ಸರಿಯಾಗಿ ಮನಗಂಡು ಅವರ ಅಂತಸ್ತಿಗೆ ತಕ್ಕುದಾದ ವಿಧಾನವನ್ನು ಅವಲಂಬಿಸಬೇಕು. ನೀವು ಉಪದೇಶಿಸುತ್ತಿರುವುದು ನಿಮ್ಮ ಶತ್ರು ಅಥವಾ ವಿರೋಧಿಗಳೆಂದು ಭಾವಿಸದೆ ಅವರೊಡನೆ ಹಿತೈಷಿಗಳೆಂಬ ನೆಲೆಯಲ್ಲಿ ವ್ಯವಹರಿಸಬೇಕು. ಅತ್ಯಾದರಭಾವ ಮತ್ತು ಆಕರ್ಷಕ ಶೈಲಿಯಲ್ಲಿ ನೀವು ಅವರನ್ನು ಸನ್ಮಾರ್ಗಕ್ಕೆ ಆಹ್ವಾನಿಸಬೇಕು. ಅದಲ್ಲದೇ ಇನ್ನೆರಡು ವಿಷಯಗಳನ್ನೂ ಕಾರ್ಯಕರ್ತರು ಗಮನಿಸಬೇಕು. ಮೊದಲನೆಯದಾಗಿ ತನಗೆ ಮಾರ್ಗದರ್ಶನದ ಅಗತ್ಯವಿಲ್ಲವೆಂದು ಬಗೆದು ಕೇವಲ ಲೌಕಿಕ ಜೀವನದಲ್ಲಿಯೇ ತಲ್ಲೀನರಾಗಿರುವವರ ಬೆನ್ನು ಹಿಡಿಯಬಾರದು. ಅಂಥವರಿಂದ ಸಂಪೂರ್ಣ ದೂರವಿರಬೇಕು. ಎರಡನೆಯದಾಗಿ ಸಂದರ್ಭಕ್ಕನುಸಾರವಾಗಿ ಪ್ರಚಾರ ಕಾರ್ಯಕೈಗೊಳ್ಳಬೇಕು. ಯಾವನೇ ವ್ಯಕ್ತಿ ಅಥವಾ ಪಕ್ಷವು ಸತ್ಯದ ಕರೆ ಅಥವಾ ಸದುಪದೇಶಗಳನ್ನು ಆಲಿಸಲು ಸಿದ್ಧವಿಲ್ಲದಂತಹ ಸಂದರ್ಭಗಳಲ್ಲಿ ಅವನನ್ನು ಸತ್ಯದೆಡೆಗೆ ಆಹ್ವಾನಿಸುವುದು, ಒಮ್ಮೆಗೆ ಅವನು ತಾಳಿಕೊಳ್ಳಲು ಸಾಧ್ಯವಾಗುವುದಕ್ಕಿಂತ ಹೆಚ್ಚಿನ ಉಪದೇಶ ಅವನಿಗೆ ನೀಡುವುದು, ಆಸೆ-ಆಮಿಷ, ಎಚ್ಚರಿಕೆ, ಬೆದರಿಕೆ ಇತ್ಯಾದಿ ವಿಧಾನಗಳನ್ನು ಅಸಾಂದರ್ಭಿಕವಾಗಿ ಬಳಸುವುದರಿಂದ ಪ್ರಯೋಜನಕ್ಕಿಂತ ಹೆಚ್ಚು ಹಾನಿಯುಂಟಾಗುತ್ತದೆ. ಕೆಲವರು ಧಾರ್ಮಿಕ ಸೇವೆಯ ಹುಮ್ಮಸ್ಸಿನಿಂದ ಈ ಎಲ್ಲಾ ಮಿತಿ ಮೇರೆಗಳನ್ನೂ ಕಡೆಗಣಿಸುತ್ತಾರೆ. ವಾಸ್ತವದಲ್ಲಿ ಇಸ್ಲಾಮ್ ಒಂದು ಯುಕ್ತಿಪೂರ್ಣ ಧರ್ಮ. ಆದ್ದರಿಂದ ಅದರ ಪ್ರಚಾರಕರೂ ಯುಕ್ತಿವಂತರಾಗಿರಬೇಕು.

ಈ ನಿರ್ದೇಶನಗಳನ್ನು ನೀಡಿದ ಬಳಿಕ ಜಮಾಅತ್ ಅಧ್ಯಕ್ಷರು ಮತ್ತು ಸಲಹಾ ಮಂಡಳಿಯ ಸದಸ್ಯರು ಪ್ರತ್ಯೇಕವಾಗಿ ಸಭೆ ಸೇರಿ ಸರದಿ ಪ್ರಕಾರ ಒಬ್ಬೊಬ್ಬ ಸದಸ್ಯರನ್ನು ಕರೆದು ಅವರ ಸ್ಥಿತಿಗತಿ ಮತ್ತು ಪ್ರತಿಭೆಗಳನ್ನು ಗುರುತಿಸಿ ಅವರಿಗೆ ವಿವಿಧ ಕೆಲಸಗಳನ್ನು ವಹಿಸಿಕೊಟ್ಟರು. ಸ್ಥಾನೀಯ ಶಾಖೆಗಳು ಸ್ಥಾಪಿಸಲ್ಪಟ್ಟಿರುವೆಡೆಗಳಿಗೆ ಅಧ್ಯಕ್ಷರುಗಳನ್ನೂ ನೇಮಿಸಲಾಯಿತು.

## ಜಮಾಅತ್‌ನ ಕಾರ್ಯಾರಂಭ ಮತ್ತು ದೇಶದ ಪರಿಸ್ಥಿತಿ

1942ರ ಫೆಬ್ರವರಿಯಲ್ಲಿ ಜಮಾಅತ್ ಅಧ್ಯಕ್ಷರು ಲಾಹೋರ್‌ನಲ್ಲಿ ಸಲಹಾ ಸಮಿತಿಯ ಸಭೆಯೊಂದನ್ನು ಕರೆದರು. ಸದಸ್ಯರು ಒಬ್ಬೊಬ್ಬರಾಗಿ ಸಂಘಟನೆಯ ಸಾಮಾನ್ಯ ಸ್ಥಿತಿಗತಿಯ ಸಮೀಕ್ಷೆ ನಡೆಸಿ, ತಂತಮ್ಮ ಪ್ರದೇಶಗಳಲ್ಲಿ ನಡೆದ ಚಟುವಟಿಕೆಗಳನ್ನೂ ತಮ್ಮ ಅನುಭವಗಳನ್ನೂ ವಿವರಿಸಿದರು. ಇನ್ನು ಮುಂದೆ ಸಂಘಟನೆಯು ಯಾವ ರೀತಿ ಕಾರ್ಯೋನ್ಮುಖವಾಗಬೇಕೆಂಬುದನ್ನೂ ಸಲಹೆಯ ರೂಪದಲ್ಲಿ ಮುಂದಿಟ್ಟರು. ತರುವಾಯ ಜಮಾಅತ್ ಅಧ್ಯಕ್ಷರು ಸುದೀರ್ಘ ಭಾಷಣ ಮಾಡಿದರು. ಅವರು ತಮ್ಮ ಭಾಷಣದಲ್ಲಿ ಜಮಾಅತ್‌ನ ಚಟುವಟಿಕೆಗಳನ್ನು ವಿಶ್ಲೇಷಿಸಿ ಜಮಾಅತ್‌ನ ವ್ಯವಸ್ಥೆಯಲ್ಲಿ ಏನೆಲ್ಲಾ ಕೊರತೆಗಳಿವೆ? ಅವುಗಳ ಕಾರಣವೇನು? ಮುಂದೆ ಸಂಘಟನೆಯನ್ನು ಬಲಪಡಿಸಿ ಅದನ್ನು ಸುಸೂತ್ರವಾಗಿ

ಮುನ್ನಡೆಸಲು ಏನು ಮಾಡಬೇಕು? ಕಾರ್ಯಕ್ರಮಗಳು ಯಶಸ್ವಿಯಾಗಿ ಮುನ್ನಡೆಯದಿರಲು ಕಾರಣವೇನು? ಇತ್ಯಾದಿ ವಿಷಯಗಳನ್ನು ಸಭೆಯ ಮುಂದಿಟ್ಟರು. ಕೊನೆಯಲ್ಲಿ ಸರ್ವಾನುಮತದಿಂದ ಈ ಕೆಳಗಿನ ನಿರ್ಣಯಗಳನ್ನು ಕೈಗೊಳ್ಳಲಾಯಿತು-

1. ಜಮಾಅತ್‌ನೊಂದಿಗೆ ಮಾನಸಿಕವಾಗಿ ಇನ್ನೂ ಹೊಂದಿಕೊಳ್ಳದ ಹಾಗೂ ಜಮಾಅತ್‌ನ ಕಾರ್ಯವಿಧಾನವನ್ನು ಚೆನ್ನಾಗಿ ತಿಳಿಯದ ಕೆಲವರು ಜಮಾಅತ್‌ನಲ್ಲಿ ಸೇರಿರುವುದು ಕಂಡುಬಂದಿದೆ. ಜಮಾಅತ್‌ನ ಕೆಲವು ಸದಸ್ಯರ ಜೀವನದಲ್ಲಿ ಯಾವುದೇ ಉತ್ತಮ ಬದಲಾವಣೆ ಆಗಿಲ್ಲ. ಬಾಹ್ಯ ಪ್ರೇರಣೆಗಳಿಲ್ಲದೆ ನಿಸ್ವಾರ್ಥ ಭಾವನೆಯಿಂದ ಧ್ಯೇಯ ಸಾಧನೆಗಾಗಿ ಪ್ರಯತ್ನಿಸುವ ಸ್ವಭಾವ ಜಮಾಅತ್‌ನ ಕೆಲವು ಬಾಂಧವರಲ್ಲಿ ಇನ್ನೂ ಬೇರೂರಿಲ್ಲ. ಆದ್ದರಿಂದ ಈ ಕುಂದುಕೊರತೆಗಳ ನಿವಾರಣೆಗಾಗಿ ಜಮಾಅತ್‌ನ ಸ್ಥಾನೀಯ ಅಧ್ಯಕ್ಷರುಗಳು ಈ ಕೆಳಗಿನ ವಿಷಯಗಳನ್ನು ಗಮನಿಸುವಂತೆ ಆದೇಶಿಸಲಾಯಿತು.

I. ಕೇವಲ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸುವ ಉದ್ದೇಶದಿಂದ, ಪರಿಪಕ್ವವಾಗಿರದ ಜನರನ್ನು ಜಮಾಅತ್‌ಗೆ ಸೇರಿಸಬಾರದು. ಜಮಾಅತ್‌ನ ನಿಲುವನ್ನು ಚೆನ್ನಾಗಿ ತಿಳಿದಿರುವ ಜಮಾಅತ್‌ನ ಸಂವಿಧಾನದಲ್ಲಿರುವ ಹೊಣೆಗಾರಿಕೆಗಳನ್ನು ಅರಿತಿರುವ ಚಂಚಲ ಮನಸ್ಕರಲ್ಲದಂತಹ ಜನರನ್ನು ಮಾತ್ರ ಜಮಾಅತ್‌ಗೆ ಸೇರಿಸಬೇಕು.

II. ಜಮಾಅತ್‌ನ ಸದಸ್ಯರಾಗುವಂತೆ ಯಾರನ್ನೂ ಆಹ್ವಾನಿಸಬಾರದು. ಜಮಾಅತ್‌ನ ವಿಶ್ವಾಸ ಧ್ಯೇಯಗಳ ಪ್ರಚಾರವನ್ನು ಮಾತ್ರ ನಡೆಸಬೇಕು. ತರುವಾಯ ಅದರಿಂದ ಆಕರ್ಷಿತರಾಗಿ, ತಮ್ಮ ಜೀವನ ರೀತಿಯನ್ನು ಬದಲಾಯಿಸಿ, ಆ ಧ್ಯೇಯ ಸಾಧನೆಯ ಮಾರ್ಗ ಯಾವುದೆಂದು ಕೇಳಲಾರಂಭಿಸುವ ಜನರ ಮುಂದೆ ಮಾತ್ರ ಜಮಾಅತ್‌ನ ಸಂವಿಧಾನವನ್ನು ಇಡಬೇಕು. ಸಂವಿಧಾನದ ಅಧ್ಯಯನ ನಡೆಸಿದ ಬಳಿಕ ಓರ್ವನು ಜಮಾಅತ್‌ಗೆ ಸೇರಬಯಸಿದರೆ ಆ ಕೂಡಲೇ ಆತನನ್ನು ಸೇರಿಸಿಕೊಳ್ಳಬಾರದು. ಬದಲಾಗಿ ಆ ಬಗ್ಗೆ ಪುನಃ ಆಲೋಚಿಸಲು ಆತನಿಗೆ ಕಾಲಾವಕಾಶ ಕೊಡಬೇಕು. ಈ ರೀತಿ ಜಮಾಅತ್‌ನ ಕುರಿತು ಚೆನ್ನಾಗಿ ಆಲೋಚಿಸಿದ ಬಳಿಕ ಆತನು ಜಮಾಅತ್‌ನಲ್ಲಿ ಸೇರಲು ನಿರ್ಧರಿಸಿದರೆ ಆತನಿಗೆ ಪವಿತ್ರವಚನದ ಹೊಣೆಗಾರಿಕೆಗಳನ್ನು ಚೆನ್ನಾಗಿ ಮನವರಿಕೆ ಮಾಡಿಸಿ, ಅವನಿಂದ ಪವಿತ್ರವಚನವನ್ನು ಹೇಳಿಸಬೇಕು.

III. ಜಮಾಅತ್‌ಗೆ ಸೇರುವ ಸಂದರ್ಭದಲ್ಲಿ ತಾವು ಅಲ್ಲಾಹನೊಂದಿಗೆ ಮಾಡಿರುವ ಪ್ರತಿಜ್ಞೆಯನ್ನೂ ತಮ್ಮ ಜವಾಬ್ದಾರಿಕೆಗಳನ್ನೂ ಈಡೇರಿಸುವುದು ತಮ್ಮ ಕರ್ತವ್ಯವೆಂಬುದನ್ನು ಜಮಾಅತ್ ಸದಸ್ಯರಿಗೆ ಆಗಾಗ ಮನದಟ್ಟು ಮಾಡಿಕೊಡಬೇಕು. ಆ ಚಟುವಟಿಕೆಗಳು ಇತರರ ಪ್ರೇರಣೆಯನ್ನು ಅವಲಂಬಿಸಬಾರದು. ಬದಲಾಗಿ ಅವರಲ್ಲಿರುವ ಸತ್ಯವಿಶ್ವಾಸದ ಪವಿತ್ರ ಕಲ್ಪನೆಯೇ ಅವರ ಜೀವನದ ಧ್ಯೇಯ ಸಾಧನೆಯ ಮುಖ್ಯ ಪ್ರೇರಕವಾಗಿರಬೇಕು.

IV. ಜಮಾಅತ್ ಸದಸ್ಯರು ನಮಾಝ್‌ನ ಮಹತ್ವವನ್ನು ಚೆನ್ನಾಗಿ ತಿಳಿದು ಪೂರ್ಣಪ್ರಜ್ಞೆಯಿಂದ ಅದನ್ನು ನಿರ್ವಹಿಸಬೇಕು. ಪವಿತ್ರ ಕುರ್‌ಆನಿನ ಅರ್ಥ ತಾತ್ಪರ್ಯಗಳನ್ನು ತಿಳಿದುಕೊಂಡು ಅದನ್ನು ಓದಬೇಕು. ನಮಾಝ್ ಮತ್ತು ಕುರ್‌ಆನ್ ಪಾರಾಯಣದ ವೇಳೆಯಲ್ಲಿ ಆತ್ಮಾವಲೋಕನ ನಡೆಸಲು ಆದೇಶಿಸಬೇಕು. ತನ್ಮೂಲಕ ಆತ್ಮವು ಶುದ್ಧಗೊಂಡು ಅಲ್ಲಾಹನ ಸಂಪ್ರೀತಿಗಾಗಿ ಕಾರ್ಯನಿರ್ವಹಿಸುವ ಪ್ರಚೋದನೆಯು ಅವರ ಹೃದಯಗಳಲ್ಲಿ

ರೂಢ ಮೂಲವಾಗುವುದು.

V. ಪ್ರತಿಯೊಬ್ಬ ಸ್ಥಾನೀಯ ಅಧ್ಯಕ್ಷರೂ ಜಮಾಅತ್‌ನ ಸದಸ್ಯರ ಮೇಲೆ ನಿಗಾ ಇಡಬೇಕು. ಅವರಲ್ಲಿ ಗೋಚರವಾಗುವ ಕೊರತೆಗಳನ್ನು ದೂರೀಕರಿಸಲು ಯುಕ್ತಿಪೂರ್ವಕವಾಗಿ ಪ್ರಯತ್ನಿಸಬೇಕು.

2. ಸದಸ್ಯರಿಗೆ ಪ್ರಚಾರ ಮತ್ತು ಬೋಧನೆಯ ಕಾರ್ಯಗಳಲ್ಲಿ ಮಾರ್ಗದರ್ಶನ ನೀಡಬೇಕು. ಸದಸ್ಯರಿಗೆ ನೈತಿಕ ಸುಧಾರಣೆಯ ತರಬೇತಿ ನೀಡಬೇಕು. ಸಂಘಟನೆಯನ್ನು ಸರಿಯಾದ ಹಾದಿಯಲ್ಲಿ ಮುನ್ನಡೆಸಬೇಕು. ಇವೆಲ್ಲವೂ ಸ್ಥಾನೀಯ ಅಧ್ಯಕ್ಷರ ಕೆಲಸ. ಈ ರೀತಿಯ ಪ್ರಮುಖ ಹೊಣೆಗಾರಿಕೆಯ ನಿರ್ವಹಣೆಗೆ ಸ್ಥಾನೀಯ ಅಧ್ಯಕ್ಷರಿಗೂ ತರಬೇತಿ ಅಗತ್ಯ. ಆದ್ದರಿಂದ ಸ್ಥಾನೀಯ ಅಧ್ಯಕ್ಷರುಗಳು ವರ್ಷದಲ್ಲಿ ಒಂದೆರಡು ತಿಂಗಳು ಜಮಾಅತ್ ಅಧ್ಯಕ್ಷರೊಂದಿಗೆ ಇರಬೇಕು.

3. ಜಮಾಅತ್‌ನ ಅತ್ಯುತ್ತಮ ವಿಚಾರವಂತ ಹಾಗೂ ಬುದ್ಧಿವಂತರಾದ ಕೆಲವರು ಕೇಂದ್ರ ಕಚೇರಿಯಲ್ಲಿರಬೇಕು. ಕಾರ್ಯಕರ್ತರ ತರಬೇತಿಗೆ ಅಗತ್ಯವಿರುವ ಕೇಂದ್ರವೊಂದನ್ನು ಸ್ಥಾಪಿಸಬೇಕು. ಅದಕ್ಕಾಗಿ ಸ್ಥಳ ಮತ್ತು ಅಲ್ಲಿ ನಿಲ್ಲಬೇಕಾದ ಜನರ ಆಯ್ಕೆಯನ್ನು ಜಮಾಅತ್ ಅಧ್ಯಕ್ಷರಿಗೆ ವಹಿಸಿಕೊಡಲಾಯಿತು.

4. ಈ ತನಕ ಸಂದೇಶ ಪ್ರಚಾರಾರ್ಥವಾಗಿ ಸಾಹಿತ್ಯಗಳನ್ನು ರಚಿಸುವ ಹೊಣೆಯನ್ನು ಜಮಾಅತ್ ಅಧ್ಯಕ್ಷರಿಗೆ ವಹಿಸಿಕೊಡಲಾಗಿತ್ತು. ಈಗ ಜಮಾಅತ್‌ನಲ್ಲಿರುವ ಇತರ ಬರಹಗಾರರೂ ತಮ್ಮ ಯೋಗ್ಯತೆಗಳಿಗನುಸಾರ ಆ ಕೆಲಸದಲ್ಲಿ ಭಾಗಿಯಾಗಬೇಕಾಗಿದೆ.

5. ಜಮಾಅತ್‌ನ ಸಂವಿಧಾನದ ಬಗ್ಗೆ ಹೊರಗಿನಿಂದ ಬಂದ ದೂರುಗಳನ್ನೂ ಜಮಾಅತ್ ಸದಸ್ಯರಿಗೆ ಭಾಸವಾದ ಕುಂದು ಕೊರತೆಗಳನ್ನೂ ಚರ್ಚಿಸಿ ಅದರಲ್ಲಿ ಸರ್ವಾನುಮತದ ಕೆಲವು ಸಾಮಾನ್ಯ ತಿದ್ದುಪಡಿಗಳನ್ನು ಮಾಡಿ ಹೊಸ ಸಂವಿಧಾನವನ್ನು ಮುದ್ರಿಸಲು ತೀರ್ಮಾನಿಸಲಾಯಿತು.

## ಕೇಂದ್ರ ಕಚೇರಿಯ ಸ್ಥಾಪನೆ

1942ರ ಜೂನ್ 15ರಂದು ಪಂಜಾಬ್‌ನ ಗುರ್ದಾಸ್‌ಪುರ ಜಿಲ್ಲೆಯ ಪಠಾಣ್‌ಕೋಟ್ ಸಮೀಪದ ಜಮಾಲ್‌ಪುರದಲ್ಲಿ ಜಮಾಅತೆ ಇಸ್ಲಾಮಿಯ ಕೇಂದ್ರ ಕಚೇರಿ ಸ್ಥಾಪಿಸಲ್ಪಟ್ಟಿತು. ಜಮಾಅತ್ ಅಧ್ಯಕ್ಷರು ಕೆಲವು ಕಾರ್ಯಕರ್ತರ ಜತೆ ಅಲ್ಲಿ ನೆಲೆಸಿದರು.

ಸುಮಾರು 9 ತಿಂಗಳ ಬಳಿಕ 1943ರ ಮಾರ್ಚ್ ತಿಂಗಳಲ್ಲಿ ಹೊರಡಿಸಲಾದ ವರದಿಯಂತೆ 700 ಮಂದಿ ಜಮಾಅತ್‌ನ ಸದಸ್ಯರಾಗಿದ್ದರು. ಆ ತನಕ ಪಂಜಾಬ್, ಉತ್ತರ ಪ್ರದೇಶ, ಬಿಹಾರ್, ದಖ್ಖಣ ಮತ್ತು ಮದ್ರಾಸ್ ರಾಜ್ಯಗಳಲ್ಲಿ ಮಾತ್ರ ಜಮಾಅತ್‌ನ ಚಟುವಟಿಕೆಗಳು ನಡೆಯುತ್ತಿದ್ದವು. ಸಿಂಧ್, ಬಲೂಚಿಸ್ತಾನ್, ಗಡಿಪ್ರದೇಶ ಬಂಗಾಳ, ಮುಂಬೈ ಮತ್ತು ಮಧ್ಯ ಪ್ರದೇಶಗಳಲ್ಲಿ ಜಮಾಅತ್‌ನ ಸಂದೇಶ ಇನ್ನೂ ಮುಟ್ಟಿರಲಿಲ್ಲ. ಆ ತನಕ ಪ್ರಕಟಗೊಂಡ ಸಾಹಿತ್ಯಗಳಿಂದ ಹಾಗೂ ಸ್ಥಾನೀಯ ಶಾಖೆಗಳ ವರದಿಯಂತೆ ಎರಡು ವರ್ಷಗಳಲ್ಲಿ ಒಂದು ಲಕ್ಷ ಮಂದಿಗೆ ಜಮಾಅತ್‌ನ ಸಂದೇಶ ತಲುಪಿ ಅವರಲ್ಲಿ 10ಸಾವಿರ

ಮಂದಿ ಜಮಾಅತ್‌ನ ಸಂದೇಶದಿಂದ ಆಕರ್ಷಿತರಾಗಿದ್ದರು. ಮುಸ್ಲಿಮೇತರರಲ್ಲಿ ವಿಶೇಷ ಚಟುವಟಿಕೆಗಳು ಆ ತನಕ ನಡೆದಿರಲಿಲ್ಲ. ಆದರೂ ಆ ನಿಟ್ಟಿನಲ್ಲಿ ನಡೆದ ಅಲ್ಪ ಸ್ವಲ್ಪ ಚಟುವಟಿಕೆಗಳಿಗೂ ಉತ್ತಮ ಪ್ರತಿಕ್ರಿಯೆ ಕಂಡು ಬಂದಿತ್ತು. ಮುಸ್ಲಿಮೇತರರಲ್ಲಿ ಮುಸ್ಲಿಮರ ಕುರಿತಾದ ಐತಿಹಾಸಿಕ ಮತ್ತು ಕೋಮು ಪಕ್ಷಪಾತಗಳು ಜಮಾಅತ್‌ನ ಪ್ರಚಾರ ಕಾರ್ಯಕ್ಕೆ ವಿಘ್ನವಾಗದೆಂದು ಸಾಮಾನ್ಯವಾಗಿ ಅಂದೇ ಅಂದಾಜಿಸಲಾಗಿತ್ತು.

ಅಂದು ಜಮಾಅತ್‌ನ ಸಂದೇಶ ಪ್ರಚಾರಕ್ಕೆ ಕೇವಲ ಉರ್ದು ಭಾಷೆಯನ್ನು ಬಳಸಲಾಗುತ್ತಿತ್ತು. ಇಂಗ್ಲೀಷ್, ಹಿಂದಿ, ತಮಿಳು, ತೆಲುಗು, ಮಲೆಯಾಳ ಮುಂತಾದ ಭಾಷೆಗಳಲ್ಲಿ ಸಾಹಿತ್ಯಗಳನ್ನು ಸಿದ್ಧಪಡಿಸುವ ಪ್ರಯತ್ನ ಆರಂಭಗೊಂಡಿತ್ತು.

ಜಮಾಅತ್‌ನ ಸಂದೇಶ ತಲಪಿದ ಜನರಲ್ಲುಂಟಾದ ಮಾನಸಿಕ ಸುಧಾರಣೆಯು ಜಮಾಅತ್‌ನ ಚಟುವಟಿಕೆಗಳ ಪ್ರಮುಖ ಪರಿಣಾಮಗಳಲ್ಲೊಂದಾಗಿದೆ. ಸತ್ವಹೀನವಾಗಿದ್ದ ಹೃದಯಗಳಿಗೆ ಜಮಾಅತ್‌ನ ಸಂದೇಶಗಳು ಹೊಸ ಜೀವ ತುಂಬಿ, ನಿದ್ರಿಸಿದ್ದ ಹೃದಯಗಳನ್ನು ಬಡಿದೆಬ್ಬಿಸಿತು. ಪ್ರತಿಯೊಬ್ಬರೂ ಆತ್ಮಾವಲೋಕನ ನಡೆಸಲಾರಂಭಿಸಿರುವುದು ಜಮಾಅತ್ ಸಂದೇಶದ ಮೊದಲ ಪರಿಣಾಮ. ಧರ್ಮಸಮ್ಮತ-ನಿಷಿದ್ಧ, ಒಳಿತು-ಕೆಡುಕು, ಸತ್ಯ-ಅಸತ್ಯ ಇತ್ಯಾದಿಗಳ ವಿವೇಚನೆ ಅವರಲ್ಲಿ ಹಿಂದಿದ್ದ ಧರ್ಮನಿಷ್ಠೆಗಿಂತ ಹೆಚ್ಚು ವಿಕಾಸ ಹೊಂದಿ ಜೀವನದ ಎಲ್ಲಾ ಸಮಸ್ಯೆಗಳಲ್ಲಿ ಪ್ರಸ್ತುತ ವಿವೇಚನಾತ್ಮಕ ಮನೋಭಾವ ಬೆಳೆಯಿತು. ಹಿಂದೆ ಧಾರ್ಮಿಕತೆಯ ಜತೆಗೇ ನಡೆಸುತ್ತಿದ್ದ ಕಾರ್ಯಗಳು ಈಗ ನಡೆಸಲಸಾಧ್ಯವಾಗಿರುವುದೇ ಅಲ್ಲದೆ ಅದರ ಸ್ಮರಣೆಯೇ ಮಾನವನ ಮನಸ್ಸಿನಲ್ಲಿ ಲಜ್ಜಾಸ್ಪದವೆನಿಸತೊಡಗಿದೆ. ಹಿಂದೆ ಜನರಿಗೆ ಯಾವುದಾದರೊಂದು ವಿಷಯದಲ್ಲಿ ಅಲ್ಲಾಹನ ಆದೇಶವೇನೆಂಬುದು ನಗಣ್ಯವಾಗಿದ್ದರೆ ಈಗ ಅದುವೇ ಪ್ರಥಮ ಗಮನಾರ್ಹವಾಯಿತು. ಅಲ್ಲಾಹನಿಗೆ ಉತ್ತರಿಸಬೇಕಾಗಿದೆಯೆಂಬ ಪ್ರಜ್ಞೆಯು ಜನರ ಮನಸ್ಸಿನಲ್ಲಿ ದೃಢವಾಗಲಾರಂಭಿಸಿತು. ಪ್ರಸ್ತುತ ಪ್ರಜ್ಞೆಯಿಂದ ಅನೇಕ ಮಂದಿಯ ಜೀವನದಲ್ಲಿ ಪ್ರತ್ಯಕ್ಷ ಬದಲಾವಣೆ ಗೋಚರಿಸ ತೊಡಗಿತು. ಧ್ಯೇಯವಿಲ್ಲದ ಜೀವನಗಳನ್ನು ಧ್ಯೇಯಬದ್ಧ ಜೀವನ ಗೊಳಿಸಲು ಈ ಸಂದೇಶಕ್ಕೆ ಸಾಧ್ಯವಾಯಿತು. ಅವರು ಜೀವನದ ನೈಜ ಹಾಗೂ ಪ್ರಮುಖ ಸಮಸ್ಯೆಗಳ ಬಗ್ಗೆ ಗಮನಹರಿಸಲಾರಂಭಿಸಿದರು. ವಿಚಾರ ಮತ್ತು ದೃಷ್ಟಿಕೋನಗಳು ಶಿಸ್ತುಬದ್ಧವಾದ ರೂಪು ತಳೆದುವು.

ಜಮಾಅತ್‌ನ ಪ್ರಚಾರ ಸೌಲಭ್ಯಗಳು ಬಹಳ ಸೀಮಿತವಾಗಿದ್ದವು. ಜಮಾಅತ್‌ಗೆ ಆಕರ್ಷಿತರಾದವರಲ್ಲಿ ಹೆಚ್ಚಿನವರು ಬಡವರೇ ಆಗಿದ್ದರು. ಶ್ರೀಮಂತರೆನಿಸಿದವರೂ ಶೇಕಡಾ 1ಕ್ಕಿಂತ ಹೆಚ್ಚಿರಲಿಲ್ಲ. ಆದ್ದರಿಂದ ಜಮಾಅತ್ ಸದಸ್ಯರಿಂದ ಧನಸಹಾಯ ದೊರೆಯುವುದು ಬಹಳ ಕಷ್ಟವಾಗಿತ್ತು.

ಯೋಗ್ಯ ಹಾಗೂ ಅನುಭವಸ್ಥ ಕಾರ್ಯಕರ್ತರ ಕೊರತೆಯೂ ಒಂದು ತೊಡಕಾಗಿತ್ತು. ಆ ತನಕ ಎಲ್ಲಾ ಹೊಣೆಗಾರಿಕೆಗಳನ್ನು ಜಮಾಅತ್‌ನ ಅಧ್ಯಕ್ಷರೇ ವಹಿಸಿಕೊಂಡಿದ್ದರು. ಸಮಾಜ ಸೇವಾ ಚಟುವಟಿಕೆಗಳು ಯಶಸ್ವಿಯಾಗಿ ಪ್ರಗತಿ ಹೊಂದಬೇಕಾದರೆ, ನಾಯಕರು ನೇಮಿಸಿದ ವ್ಯಕ್ತಿಗಳೊಂದಿಗೆ ಸಹಕರಿಸಿ, ಪ್ರತಿಯೊಂದು ಕೆಲಸವನ್ನು ಪೂರ್ಣ ಜವಾಬ್ದಾರಿಕೆಯಿಂದ ನಿರ್ವಹಿಸುವ ಯೋಗ್ಯತೆಯಿರುವ ಕಾರ್ಯಕರ್ತರ ಅಗತ್ಯವಿದೆ. ಆದರೆ ಅಂದು ಅಂತಹ

ಕಾರ್ಯಕರ್ತರು ತುಂಬಾ ವಿರಳವಾಗಿದ್ದರು. ಜಮಾಅತ್‌ನ ಎರಡು ವರ್ಷಗಳ ಪ್ರಚಾರದಿಂದ ಸುಮಾರು 700 ಮಂದಿ ಸದಸ್ಯರಾಗಿ ಸೇರಿದ್ದರೂ ಅವರೆಲ್ಲರೂ ಪ್ರಾಥಮಿಕ ಹಂತದಲ್ಲಿದ್ದರು. ಅವರೊಂದು ಸಮಗ್ರ ಸಂಘಟನೆಯ ರೂಪ ತಾಳಿರಲಿಲ್ಲ. ಅವರಲ್ಲಿ ಪ್ರತಿಯೊಬ್ಬರ ಯೋಗ್ಯತೆಗಳನ್ನು ಪರಿಶೀಲಿಸಿ ಅವುಗಳನ್ನು ಸಂಪೂರ್ಣವಾಗಿ ಬಳಸಿಕೊಳ್ಳುವ ಪ್ರಯತ್ನವೂ ಸಾಕಷ್ಟು ನಡೆದಿರಲಿಲ್ಲ. ಆಗಾಗ ಸದಸ್ಯರ ಸಭೆಗಳನ್ನು ಜರಗಿಸಿ ಅಥವಾ ವಿವಿಧೆಡೆಗಳಿಗೆ ಸಂದರ್ಶನ ನೀಡಿ ಈ ಕೊರತೆಯನ್ನು ಹೋಗಲಾಡಿಸೋಣವೆಂದರೂ ಯುದ್ಧದ ತುರ್ತುಸ್ಥಿತಿ ಅದಕ್ಕೆ ಅಡ್ಡಿಯಾಗಿತ್ತು.

## ದರ್ಭಂಗಾ ಸಮ್ಮೇಳನ

1943 ಅಕ್ಟೋಬರ್ 21 ಮತ್ತು 22ರಂದು ಬಿಹಾರ್ ರಾಜ್ಯದ ದರ್ಭಂಗಾ ಎಂಬಲ್ಲಿ ಜಮಾಅತೆ ಇಸ್ಲಾಮಿ ಸಮ್ಮೇಳನ ಸಮಾವೇಶಗೊಂಡಿತು. ಅದು ಜಮಾಅತೆ ಇಸ್ಲಾಮಿ ಸ್ಥಾಪನೆಗೊಂಡ ಬಳಿಕ ಜರಗಿದ ಪ್ರಥಮ ಸಮ್ಮೇಳನವಾಗಿತ್ತು. ಸಂಘಟನೆಯು ಯಾವ ಹಂತವನ್ನು ತಲಪಿದೆ, ಅದರ ಅಡೆತಡೆಗಳೇನು, ಜಮಾಅತ್‌ನ ಆರ್ಥಿಕ ಸ್ಥಿತಿ ಹೇಗಿದೆ, ಚಟುವಟಿಕೆಗಳನ್ನು ಯಾವ ರೀತಿ ಮುನ್ನಡೆಸಬೇಕು, ಜಮಾಅತ್ ಮತ್ತು ಇತರ ಸಂಘಟನೆಗಳ ಮೂಲಭೂತ ವ್ಯತ್ಯಾಸಗಳೇನು? ಇತ್ಯಾದಿ ಸಮಸ್ಯೆಗಳ ಕುರಿತು ಜಮಾಅತ್ ಅಧ್ಯಕ್ಷ ಮೌಲಾನಾ ಸೈಯದ್ ಅಬುಲ್ ಆಲಾ ಮೌದೂದಿಯವರು ಸಾರವತ್ತಾದ ಭಾಷಣ ಮಾಡಿದರು. ಅದರ ಕೆಲವು ಪ್ರಮುಖ ಭಾಗಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ-

ನಮ್ಮ ಸಂಘಟನೆಯು ಈ ಸಂದರ್ಭದಲ್ಲಿ ಪ್ರಗತಿಯ ಕೆಲವು ಹಂತಗಳನ್ನು ದಾಟಿ ಆಶಾಜನಕವಾದ ಒಂದು ಹಂತವನ್ನು ತಲಪಿದೆ. ಭಾರತೀಯ ಮುಸ್ಲಿಮರ ಅನೇಕ ಸಂಘಟನೆಗಳು ಜಮಾಅತ್‌ನ ಧ್ಯೇಯದೆಡೆಗೆ ಇಂದು ಆಕರ್ಷಿತವಾಗಿದೆ. ನಾಲ್ಕಾರು ವರುಷಗಳ ಹಿಂದೆ ನಮ್ಮ ರಾಜಕೀಯ ಮತ್ತು ಧಾರ್ಮಿಕ ಸಂಘಟನೆಗಳು ನಾಲಗೆಯಿಂದ ಹೇಳಲು ಅಂಜುತ್ತಿದ್ದ ಅದೇ ವಿಷಯವನ್ನು ಅವು ಇಂದು ತಮ್ಮ ಧ್ಯೇಯವಾಗಿ ಘೋಷಿಸತೊಡಗಿವೆ. ಈ ಬದಲಾವಣೆಯು ಆಶಾಜನಕವಾಗಿದ್ದರೂ ನಾವು ಅಷ್ಟರಲ್ಲೇ ಸಂತೃಪ್ತರಾಗಿ ಸುಮ್ಮನಿರುವಂತಿಲ್ಲ. ಏಕೆಂದರೆ ಮುಸ್ಲಿಮ್ ಸಂಘಟನೆಗಳು ಈ ಧ್ಯೇಯವನ್ನು ಅಂಗೀಕರಿಸಿದಷ್ಟೇ ಕ್ಷಿಪ್ರವಾಗಿ ಅದರ ವಿಶಿಷ್ಟ ಕಾರ್ಯ ವಿಧಾನ, ಜವಾಬ್ದಾರಿಕೆ, ನೈತಿಕ ಸಾಧನೆ ಮತ್ತು ಕರ್ತವ್ಯಗಳನ್ನು ಅಂಗೀಕರಿಸಲು ಸಾಧ್ಯವಿಲ್ಲ. ಈ ಧ್ಯೇಯವು ಗದ್ದಲ ಪ್ರಿಯ ಪಕ್ಷಗಳ ಹಸ್ತಗಳಲ್ಲಿ ಕೇವಲ ಒಂದು ಆಟಿಕೆಯಾಗಿ ಉಳಿದೀತೇ ಎಂಬ ಕಳವಳವು ಈ ಸಂದರ್ಭದಲ್ಲಿ ನಮ್ಮನ್ನು ಕಾಡುತ್ತಿದೆ. ಅವರು ಅದನ್ನೊಂದು ಘನ ಜೀವನೋದ್ದೇಶವೆಂದು ಲೋಕಕ್ಕೆ ಸಮರ್ಪಿಸುವ ಬದಲಾಗಿ ಅದನ್ನು ವಿರೂಪಗೊಳಿಸಿದರೆ ಗಂಡಾಂತರವಿದೆ. ಆದ್ದರಿಂದ ಪ್ರಸ್ತುತ ಧ್ಯೇಯಸಾಧನೆಗೆ ಪ್ರಯತ್ನಿಸುವ ಮಾತಂತಿರಲಿ, ಆ ಧ್ಯೇಯವನ್ನು ನಾಲಗೆಯಿಂದ ಉಚ್ಚರಿಸುವುದಕ್ಕೂ ಉನ್ನತ ಚಾರಿತ್ರ್ಯದ ಅಗತ್ಯವಿದೆಯೆಂಬ ಅಂಶಕ್ಕೆ ನಾವೀಗ ಒತ್ತು ಕೊಡಬೇಕಾಗಿದೆ. ಈ ನಿಟ್ಟಿನ ವೈಚಾರಿಕ ಪ್ರಚಾರವು ಈಗ ಪ್ರಬಲವಾಗಿ ನಡೆಯಬೇಕು. ತನ್ಮೂಲಕ ಧರ್ಮಸಂಸ್ಥಾಪನೆಯ ಬಗ್ಗೆ ಘೋಷಣೆ ಮಾಡುವ ಸಂಘಟನೆಗಳು ನಿಸ್ವಾರ್ಥವಾಗಿ ಅದರ ನೈತಿಕ ಹೊಣೆಗಾರಿಕೆಗಳನ್ನು

ಅಂಗೀಕರಿಸಿ ಅದರಂತೆ ಕಾರ್ಯೋನ್ಮುಖರಾಗಬೇಕು. ತದ್ವಿರುದ್ಧವಾಗಿ ಅವರು ಇತರ ವಿಧಾನಗಳಿಂದ ಕಾರ್ಯವೆಸಗ ಬಯಸಿದ್ದರೆ ಪ್ರಸ್ತುತ ಧ್ಯೇಯದ ಹೆಸರಿನಲ್ಲಿ ಜನರನ್ನು ವಂಚಿಸಲು ಅವರಿಗೆ ಸಾಧ್ಯವಾಗಬಾರದು.

ಕಳೆದ 25-30 ವರ್ಷಗಳಿಂದ ಮುಸ್ಲಿಮರ ರಾಜಕೀಯ ತರಬೇತಿ ತಪ್ಪಾದ ರೀತಿಯಲ್ಲಿ ನಡೆಯುತ್ತಿರುವುದೂ ಅಪಾಯಕಾರಿಯಾಗಿದೆ. ನಿರ್ದಿಷ್ಟ ಆದೇಶದಂತೆ ದೃಢವಾಗಿ ಕಾರ್ಯವೆಸಗುವ ಬದಲಾಗಿ ಯಾವ ರೂಪರೇಖೆಗಳನ್ನೂ ಸಿದ್ಧಪಡಿಸದೆ ಕೇವಲ ಗದ್ದಲ ಮಾಡುವುದೇ ಅವರ ವಿಶೇಷ ಸಾಮಾಜಿಕ ಸ್ವಭಾವವಾಗಿ ಮಾರ್ಪಟ್ಟಿದೆ. ನಿಷ್ಕ್ರಿಯತೆಯಷ್ಟೇ ದೋಷಪೂರ್ಣವಾಗಿರುವ ಈ ವಿಧಾನದ ಮನೋವೃತ್ತಿಯು ಜನಸಾಮಾನ್ಯರಲ್ಲಿಯೂ ಮನ್ನಣೆಗಳಿಸುತ್ತದೆ. ಆದರೆ ನಾವು ಅದನ್ನು ಕೊನೆಗೊಳಿಸಬಯಸುತ್ತೇವೆ. ನಮ್ಮ ಸಂಘಟನೆಯ ಯೋಜನೆಯನ್ನು ಸಂಪೂರ್ಣವಾಗಿ ಸಿದ್ಧಪಡಿಸುವುದಕ್ಕಿಂತ ಮುಂಚಿತವಾಗಿ ಗದ್ದಲ ಪ್ರಿಯರಾದ ಜನಸಾಮಾನ್ಯರ ಮುಂದೆ ಪ್ರಚಾರ ಮಾಡಬಾರದು. ನಿಮ್ಮ ಕಾರ್ಯಕ್ಷೇತ್ರಗಳಲ್ಲಿರುವ ವಿರೋಧಗಳನ್ನು ಚೆನ್ನಾಗಿ ತಿಳಿದು, ಅವುಗಳ ನಿವಾರಣೋಪಾಯಗಳ ಬಗ್ಗೆ ನೀವು ಚೆನ್ನಾಗಿ ಆಲೋಚಿಸ ಬೇಕಾಗಿದೆ. ಕೇವಲ ಗದ್ದಲಗಳಿಂದ ಈ ಕಾರ್ಯವನ್ನು ನಿರ್ವಹಿಸಲು ಸಾಧ್ಯವಿಲ್ಲ. ಅದಕ್ಕೆ ವಿವೇಕಿ ಮತ್ತು ಸಮರ್ಥನಾದ ಓರ್ವ ಸೇನಾನಾಯಕನ ದೂರದೃಷ್ಟಿ ಮತ್ತು ಕಾರ್ಯದಕ್ಷತೆಯೊಂದಿಗೆ ಸುದೃಢ ಮತ್ತು ಶಿಸ್ತುಬದ್ಧವಾದ ಒಂದು ಸಂಘಟನೆಯ ಅವಿಶ್ರಾಂತ ಪ್ರಯತ್ನಗಳು ಅತ್ಯಗತ್ಯವಾಗಿದೆ.

ನಮ್ಮ ಇಂದಿನ ಈ ಸಂದಿಗ್ಧಾವಸ್ಥೆಯು ಇನ್ನೊಂದು ರೀತಿಯಲ್ಲಿಯೂ ಬಹಳ ಮಹತ್ವಪೂರ್ಣವಾಗಿದೆ. ಅರ್ಥಾತ್ ನಮ್ಮ ಮೂಲ ತತ್ವಗಳ ಪ್ರಚಾರದಲ್ಲಿ ನಾವು ಸ್ವಲ್ಪಂಶ ಯಶಸ್ವಿಯಾಗಿದ್ದೇವೆ. ಆದರೆ ಪ್ರಸ್ತುತ ತತ್ವಗಳ ಬಗ್ಗೆ ಗಂಭೀರವಾಗಿ ಆಲೋಚಿಸುವ ಜನರು ನಿರೀಕ್ಷಿಸುವ ಕ್ರಿಯಾತ್ಮಕ ವಿವರಗಳನ್ನು ಸಾಕ್ಷಾತ್ಕಾರಗೊಳಿಸುವಂತಹ ಸದಾಚಾರ ನಿಷ್ಠ ಹಾಗೂ ಯೋಗ್ಯತೆಯಿರುವ ಒಂದು ಸುಸಂಘಟಿತ ತಂಡ ನಮ್ಮ ಆಶ್ರಯದಲ್ಲಿ ಇನ್ನೂ ಸಿದ್ಧವಾಗಿಲ್ಲ. ನಮ್ಮ ವೈಚಾರಿಕ ಪದ್ಧತಿಯ ಆಧಾರದಲ್ಲಿ ರೂಪು ತಾಳುವ ಸಾಮಾಜಿಕ ಜೀವನದ ಸಮಗ್ರ ರೂಪವನ್ನು ಜನರು ನಮ್ಮಿಂದ ಬಯಸುವಾಗ ಅದನ್ನು ಅವರಿಗೆ ತೋರಿಸಲು ನಮ್ಮಿಂದ ಸಾಧ್ಯವಾಗುವುದಿಲ್ಲ. ಯಾಕೆಂದರೆ ಅದರ ಸಮಗ್ರ ರೂಪವನ್ನು ಒಬ್ಬ ವ್ಯಕ್ತಿಯಿಂದ ಕ್ರೋಢೀಕರಿಸಲು ಸಾಧ್ಯವಿಲ್ಲ. ಅದಕ್ಕೆ ತತ್ವಶಾಸ್ತ್ರಜ್ಞರು, ಸಂಶೋಧಕರ ಒಂದು ಬಳಗವೇ ಬೇಕು. ಅವರ ನಿರಂತರ ಪ್ರಯತ್ನ, ಅಧ್ಯಯನ ಮತ್ತು ಸಂಶೋಧನೆಗಳಿಂದ ಮಾತ್ರ ಅದು ಸಾಧ್ಯ.

ನಮ್ಮ ಸಂದೇಶವನ್ನು ಸ್ವಾಗತಿಸುವ ಜನರ ಹೆಚ್ಚಳದಲ್ಲಿ ಬೆಳಕು ಮತ್ತು ಕತ್ತಲೆಗಳ 2 ಮುಖಗಳಿವೆ. ನಮ್ಮೆಡೆಗೆ ಮುಸ್ಲಿಮರ ಅತ್ಯುತ್ತಮ ಹಾಗೂ ಉಪಯುಕ್ತ ವಿಭಾಗವು ಬಂದು ಸೇರುತ್ತಿರುವುದೇ ಬೆಳಕಿನ ಅಂಶ. ನಮ್ಮ ಕರೆಯಂತೆ 'ನಹ್ನು ಅನ್ಸಾರುಲ್ಲಾಹ್' (ನಾವು ಅಲ್ಲಾಹನ ಧರ್ಮ ಸೇವೆಗೆ ಸಿದ್ಧರು) ಎಂದು ಹೇಳುತ್ತಾ ಒಂದುಗೂಡಿದ ಜನರಲ್ಲಿ ಆಶಾಜನಕ ನೈತಿಕ ಸುಧಾರಣೆಯಾಗುತ್ತಿದೆ. ಆದರೆ ಅದರೊಂದಿಗೆ ಕತ್ತಲೆಯ ಅಂಶವೂ ಇದೆ. ಅರ್ಥಾತ್ ಸದಸ್ಯರಲ್ಲಿ ಸಹನೆ, ತಾಳ್ಮೆ, ಧ್ಯೇಯದ ಜತೆ ಗಾಢ ಸಂಬಂಧ, ತಮ್ಮ ಘನ ಪ್ರತಿಜ್ಞೆಯ ಕರ್ತವ್ಯ ಪ್ರಜ್ಞೆ ಇತ್ಯಾದಿ ವಿಷಯಗಳಲ್ಲಿ ಇನ್ನೂ ಅನೇಕ ದೌರ್ಬಲ್ಯಗಳು ಉಳಿದು ಕೊಂಡಿವೆ. ಆದ್ದರಿಂದ ಅವರನ್ನು ಪದೇ ಪದೇ ಹುರಿದುಂಬಿಸದಿದ್ದರೆ ಅವರು ಬಹಳ ಬೇಗನೆ

ತಣ್ಣಗಾಗುತ್ತಾರೆ. ತೌಹೀದ್ ಮತ್ತು ರಿಸಾಲತ್‌ಗಳಿಗೆ ಹೃತ್ಪೂರ್ವಕ ಹಾಗೂ ಕರ್ತವ್ಯ ಪ್ರಜ್ಞೆಯಿಂದ ಒಬ್ಬನು ಸಾಕ್ಷ್ಯ ವಹಿಸುವುದೆಂದರೆ ಆತನು ನೇರವಾಗಿ ಅಲ್ಲಾಹನೊಡನೆ ಒಪ್ಪಂದ ಮಾಡಿಕೊಂಡಂತೆ. ಅದು ಓರ್ವ ವ್ಯಕ್ತಿ ಅಥವಾ ಪಕ್ಷಕ್ಕಾಗಿರುವುದಿಲ್ಲ. ಅದರಿಂದ ಮುಸ್ಲಿಮನ ಜೀವನ ಧ್ಯೇಯವಾಗಿ ಪರಿಣಮಿಸುವ ಧ್ಯೇಯ ಸಾಧನೆಗಾಗಿ ಪ್ರಯತ್ನಿಸುವುದು ಪ್ರಸ್ತುತ ಪ್ರತಿಜ್ಞೆಗೆ ಅವರ ಕರ್ತವ್ಯವೆಂಬ ವಾಸ್ತವಿಕಾಂಶವನ್ನು ಜಮಾಅತ್ ಸದಸ್ಯರು ಚೆನ್ನಾಗಿ ತಿಳಿದಿರಬೇಕು. ಆದೇಶ ಪಾಲನೆಯಲ್ಲಿ ತೋರುತ್ತಿರುವ ಅನಾಸ್ಥೆಯೂ ಜಮಾಅತ್‌ನ ಇನ್ನೊಂದು ದೌರ್ಬಲ್ಯವಾಗಿದೆ. ಸದಸ್ಯರ ಪರಸ್ಪರ ಸಂಬಂಧ ಸಹಕಾರಗಳಲ್ಲಿಯೂ ವಿಶೇಷ ಸುಧಾರಣೆಯಾಗಿಲ್ಲ. ಈ ಎಲ್ಲ ಕೊರತೆಗಳನ್ನು ಸರಿಪಡಿಸಿಕೊಳ್ಳುವುದು ಸಮ್ಮೇಳನದ ಮುಖ್ಯ ಉದ್ದೇಶವಾಗಿದೆ.

ನಮ್ಮ ಮೂರು ಕುಂದು ಕೊರತೆಗಳು ಗಮನಾರ್ಹವಾಗಿದೆ. ಮೊದಲನೆಯದಾಗಿ ನಮ್ಮಲ್ಲಿ ಕಾರ್ಯಕರ್ತರು ಕಡಿಮೆ. ಎರಡನೆಯದಾಗಿ ನಮ್ಮ ಸಂಪನ್ಮೂಲಗಳು ತೀರಾ ಸೀಮಿತ. ಯುದ್ಧದಿಂದಾದ ಆರ್ಥಿಕ ಸಂಕಷ್ಟಗಳು ಅದನ್ನು ಸಂಪೂರ್ಣ ಸ್ಥಗಿತಗೊಳಿಸಿದೆಯೆಂದೇ ಹೇಳಬಹುದು. ಮೂರನೆಯದಾಗಿ ಜಮಾಅತ್‌ಗೆ ಕೆಲವು ಸಕ್ರಿಯ ಕಾರ್ಯಕರ್ತರು ಅಲ್ಲಲ್ಲಿ ದೊರೆತಿರುವರಾದರೂ ಅವರನ್ನು ಒಂದುಗೂಡಿಸುವ ಯಾವ ಮಾರ್ಗವೂ ಇಲ್ಲ. ಇದಕ್ಕೂ ಆರ್ಥಿಕ ಕೊರತೆಯೇ ಕಾರಣವೆನ್ನಬಹುದು. ಆದ್ದರಿಂದ ಕೇಂದ್ರದ ವೈಚಾರಿಕ ನೆಲೆಗಟ್ಟು ಪೂರ್ಣಗೊಂಡಿಲ್ಲ. ಚಟುವಟಿಕೆಗಳಿಗೆ ಯೋಗ್ಯರಾದ ವ್ಯಕ್ತಿಗಳನ್ನು ಅಲ್ಲಿ ನೆಲೆಗೊಳಿಸಲಾಗಿಲ್ಲ. ಈ ಪರಿಸ್ಥಿತಿಯು ನಮ್ಮ ನಿಯಂತ್ರಣಕ್ಕೆ ಹೊರತಾಗಿದ್ದರೂ ಜಮಾಅತ್‌ನ ಕರ್ತವ್ಯ ಪೂರ್ಣವಾಗುವುದಿಲ್ಲ. ಅಲ್ಲಾಹನ ಮಾರ್ಗದಲ್ಲಿ ಧನ ವ್ಯಯ ಮಾಡುವ ಮನೋಭಾವವು ನಮ್ಮ ಬಾಂಧವರಲ್ಲಿ ಬಹಳ ಕಡಿಮೆಯಿದೆ. ಜನರು ತಮ್ಮ ಜೀವನೋದ್ದೇಶಕ್ಕಾಗಿ ಹಣ ವ್ಯಯಿಸಲು ಇನ್ನೂ ಕಲಿತಿಲ್ಲ. ಇತರ ಪಾರ್ಟಿಗಳಂತೆ ಪ್ರತಿಯೊಬ್ಬರ ಬಳಿ ಹೋಗಿ ಹಣ ಸಂಗ್ರಹಿಸಿ, ಒತ್ತಾಯದಿಂದ ವಸೂಲು ಮಾಡಿದರೆ ಈ ಕೊರತೆಯನ್ನು ನೀಗಿಸಬಹುದು. ಆದರೆ ಜನರ ತ್ಯಾಗಗಳಿಗೆ ಬಾಹ್ಯ ಒತ್ತಡ ಅಗತ್ಯವಾಗುವುದನ್ನು ನಾವು ಮೆಚ್ಚುವುದಿಲ್ಲ. ಮಾನವನು ತನ್ನ ಆಂತರಿಕ ಪ್ರೇರಣೆಯಿಂದ ಎಲ್ಲಾ ಕೆಲಸವನ್ನೂ ನಿರ್ವಹಿಸಬೇಕೆಂಬುದು ನಮ್ಮ ಸಂಘಟನೆಯ ಬೇಡಿಕೆಯಾಗಿದೆ. ಮಾನವನು ಬಾಹ್ಯ ಪ್ರೇರಣೆಯಿಲ್ಲದೆ ಹೊಟ್ಟೆಗೆ ಆಹಾರ ತೆಗೆದುಕೊಳ್ಳುತ್ತಾನೆ. ಅಂತೆಯೇ ಸಂಘಟನೆಯು ಅದರ ಹೊಟ್ಟೆಯಾಗಿರುವ "ಬೈತುಲ್ ಮಾಲ್"ನ ಹಸಿವೆಯನ್ನೂ ಪೂರೈಸಬೇಕು. ಹಾಗಲ್ಲದಿದ್ದರೆ ಜಮಾಅತ್‌ನ ಪ್ರಾಣವೂ ಹೆಚ್ಚು ಕಾಲ ಉಳಿಯದು.

ನಮ್ಮ ಹೆಚ್ಚಿನ ಸದಸ್ಯರ ಆರ್ಥಿಕ ಸ್ಥಿತಿಯು ಉತ್ತಮವಿಲ್ಲ ನಿಜ. ಆದರೆ ಆಂದೋಲನವು ಯಾವ ಕಾಲದಲ್ಲಿಯೂ ಪ್ರಾರಂಭ ಹಂತದಲ್ಲಿ ಸುಖಸಂಪನ್ನರನ್ನು ಆಕರ್ಷಿಸಿಲ್ಲವೆಂಬುದು ಗಮನಾರ್ಹ. ಹಿಂದೆಯೂ ಆರ್ಥಿಕ ಸ್ಥಿತಿ ಉತ್ತಮವಿಲ್ಲದವರೇ ಇದರತ್ತ ಆಕರ್ಷಿತರಾಗಿದ್ದರು. ವಾಸ್ತವದಲ್ಲಿ ಆರ್ಥಿಕ ತ್ಯಾಗ ಮನೋಭಾವಕ್ಕೆ ಹೃದಯ ಆಧಾರವಾಗಿದೆಯೇ ವಿನಾ ಕಿಸೆಯ ಭಾರವಲ್ಲ. ಈ ಮನೋಭಾವದ ಕೊರತೆ ಇಲ್ಲಿ ಎದ್ದು ತೋರುತ್ತಿದೆ.

ಈ ಸಂಘಟನೆಯ ಹಾಗೂ ಇತರ ಸಂಘಟನೆಗಳ ಪರಸ್ಪರ ವ್ಯತ್ಯಾಸವನ್ನು ನಮ್ಮ ಕಾರ್ಯಕರ್ತರು ಇನ್ನೂ ಚೆನ್ನಾಗಿ ಅರ್ಥ ಮಾಡಿಕೊಂಡಿಲ್ಲ. ವಾಸ್ತವದಲ್ಲಿ ಈ ವ್ಯತ್ಯಾಸಗಳನ್ನು ಪ್ರತಿಯೊಬ್ಬ ಸದಸ್ಯನು ಸರಿಯಾಗಿ ತಿಳಿದಿರಬೇಕು. ಈ ಸಂಘಟನೆಗೂ ಇತರ ಸಂಘಟನೆಗಳಿಗೂ ಮೂಲಭೂತ ಭಿನ್ನತೆಯಿದೆ. ಮೊದಲನೆಯದಾಗಿ ಈ ಸಂಘಟನೆಯಲ್ಲಿ ಸಂಪೂರ್ಣ ಜೀವನದ ಸಮಸ್ಯೆ ಒಳಗೊಂಡಿದೆ. ಅದು ಜೀವನದ ಯಾವುದಾದರೊಂದು ರಂಗದ ಸಮಸ್ಯೆಗೆ ಮಾತ್ರ ಸೀಮಿತವಾಗಿಲ್ಲ. ಎರಡನೆಯದಾಗಿ ಈ ಸಂಘಟನೆಯು ಬಾಹ್ಯಕ್ಕಿಂತ ಅಂತರಂಗವನ್ನು ಹೆಚ್ಚು ಪ್ರತಿಪಾದಿಸುತ್ತದೆ. ಮೊದಲನೆಯ ಅಂಶದ ಮಟ್ಟಿಗೆ ನಾವು ಹಲವು ಪ್ರಮುಖ ಹಾಗೂ ಘನ ಕರ್ತವ್ಯಗಳನ್ನು ನಿರ್ವಹಿಸಬೇಕಾಗಿದೆ. ಲೋಕದಲ್ಲಿ ಇಸ್ಲಾಮಿ ಆಂದೋಲನದ ಹೊರತು ಇತರ ಆಂದೋಲನಗಳಿಗೆ ಇಷ್ಟೊಂದು ಕೆಲಸವಿಲ್ಲ. ಆದ್ದರಿಂದ ಇತರರಂತೆ ಅವಸರದಿಂದ ಕಾರ್ಯವೆಸಗಲು ನಮ್ಮಿಂದ ಸಾಧ್ಯವಿಲ್ಲ. ಅಲ್ಲದೇ ನಾವು ಬಹಿರಂಗಕ್ಕಿಂತ ಅಂತರಂಗಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡುತ್ತೇವೆ. ಕೇವಲ ಸಂಘಟನೆಯಿಂದ ಅಥವಾ ಕೆಲವು ತೋರಿಕೆಯ ಕಾರ್ಯಕ್ರಮಗಳಂತೆ ಜನರನ್ನು ಸೇರಿಸಿ ಮುನ್ನಡೆಯುವುದರಿಂದ ನಮ್ಮ ಕರ್ತವ್ಯವು ಪೂರ್ಣಗೊಳ್ಳುವುದಿಲ್ಲ. ಆದ್ದರಿಂದ ನಾವು ಜನ ಸಾಮಾನ್ಯರ ಮಧ್ಯಕ್ಕಿಳಿದು ಒಂದು ಸಾರ್ವಜನಿಕ ಆಂದೋಲನವನ್ನು ನಡೆಸುವುದಕ್ಕಿಂತ ಮುಂಚಿತವಾಗಿ ಉತ್ತಮ ಇಸ್ಲಾಮಿ ಚರ್ಯೆಯ ವಾಹಕರಾಗಿ, ವಿಚಾರ ನಿರ್ಮಾಣದೊಂದಿಗೆ ಸಾಮಾಜಿಕ ನಾಯಕತ್ವದ ಹೊಣೆಗಾರಿಕೆಯನ್ನು ನಿರ್ವಹಿಸಬಲ್ಲಂತಹ ಜನರನ್ನು ಸಿದ್ಧಪಡಿಸುವ ಬಗ್ಗೆ ಆಲೋಚಿಸಬೇಕಾಗಿದೆ. ಆದ್ದರಿಂದಲೇ ಸಂಘಟನೆಯ ಬಗ್ಗೆ ಜನಸಾಮಾನ್ಯರಲ್ಲಿ ಪ್ರಚಾರಗೊಳಿಸಲು ನಾನು ವಿಶೇಷ ಆಸಕ್ತಿ ತೋರುವುದಿಲ್ಲ. ಈ ಸಂದರ್ಭದಲ್ಲಿ ದೇಶದ ಬುದ್ಧಿ ಜೀವಿಗಳನ್ನೂ ವಿವೇಕಿಗಳನ್ನೂ ಆಕರ್ಷಿಸುವ ಪ್ರಯತ್ನ ನಡೆಯಬೇಕು. ಮುಂದೆ ಜನ ಸಾಮಾನ್ಯರ ನಾಯಕತ್ವ ವಹಿಸಿ ಹೊಸ ಸಾಂಸ್ಕೃತಿಕ ನಾಗರಿಕತೆಯನ್ನು ಬೆಳೆಸುವ ಶಕ್ತಿಯುಳ್ಳ ಉತ್ತಮ ವ್ಯಕ್ತಿಗಳನ್ನು ಅದರಿಂದ ಆರಿಸಿಕೊಳ್ಳಲು ನಾನು ಪ್ರಯತ್ನಿಸುತ್ತಿದ್ದೇನೆ. ಇದು ಶಾಂತ ಚಿತ್ತದಿಂದ ನಿರ್ವಹಿಸಬೇಕಾದ ಕೆಲಸ. ಒಂದು ಸಾರ್ವಜನಿಕ ಆಂದೋಲನದಲ್ಲಿರುವಂತಹ ಗದ್ದಲ ಇದರಲ್ಲಿ ಕಾಣಲಾರದು. ಜನಸಾಮಾನ್ಯರ ನಾಯಕತ್ವ ವಹಿಸುವ ಸಾಮರ್ಥ್ಯವಿರುವ ಒಂದು ಸಣ್ಣ ವಿಭಾಗವು ಮೊದಲು ಸಿದ್ಧವಾಗಬೇಕೆಂದು ನಾನು ಬಯಸುತ್ತೇನೆ. ಅದರ ಪ್ರತಿಯೊಬ್ಬ ವ್ಯಕ್ತಿಗೂ ತನ್ನ ಉತ್ಕೃಷ್ಟ ಗುಣ ನಡತೆಗಳ ಆಕರ್ಷಣೆಯ ಬಲದಿಂದ ಆಯಾ ಪ್ರದೇಶದ ಜನಸಾಮಾನ್ಯರನ್ನು ನಿಯಂತ್ರಿಸಲು ಸಾಧ್ಯವಾಗಬೇಕು. ಪ್ರತಿಯೊಬ್ಬರೂ ಜನಸಾಮಾನ್ಯರ ಕೇಂದ್ರ ಬಿಂದುವಾಗಬೇಕು. ಕೃತಕ ಪ್ರಯತ್ನಗಳಿಲ್ಲದೇ ನೈಸರ್ಗಿಕ ವಿಧಾನದಿಂದಲೇ ಜನಸಾಮಾನ್ಯರ ನಾಯಕತ್ವ ಸ್ಥಾನ ಅವರಿಗೆ ದೊರೆಯಬೇಕು. ಕೇವಲ ಜನಸಾಮಾನ್ಯರ ಕೇಂದ್ರವಾಗಿದ್ದರೆ ಸಾಲದು. ಅವರನ್ನು ಸಂಪೂರ್ಣವಾಗಿ ಬಳಸಿಕೊಳ್ಳುವ ಯೋಗ್ಯತೆ ಬೇಕು. ಹಾಗಾದರೆ ಮಾತ್ರ ಪ್ರಸ್ತುತ ಕೇಂದ್ರೀಯ ವ್ಯಕ್ತಿಗಳ ಮೂಲಕ ಜನಸಾಮಾನ್ಯರ ಶಕ್ತಿಯನ್ನು ಐಕ್ಯ ಮತ್ತು ಒಗ್ಗಟ್ಟಿನಿಂದ ಇಸ್ಲಾಮಿ ಹಾದಿಯಲ್ಲಿ ಬಳಸುವಂತೆ ಮಾಡಲು ಸಾಧ್ಯ. ಇದು ಸುಶಕ್ತ, ಸಕ್ರಿಯ ಹಾಗೂ ಸಾರ್ವತ್ರಿಕ ಆಂದೋಲನದ ಪ್ರಥಮ ಹೆಜ್ಜೆಯಾಗಿದೆ. ಈ ಹಂತವನ್ನು ಅತ್ಯಂತ ಸಹನೆ ಮತ್ತು ತಾಳ್ಮೆಯಿಂದ ದಾಟಬೇಕು. ಅಲ್ಲದಿದ್ದರೆ ಆಂದೋಲನವು ನಾಶ ಹೊಂದುವುದು ಖಚಿತ. ಜನ ಸಾಮಾನ್ಯರನ್ನು ನಿಯಂತ್ರಿಸಬಲ್ಲ

ಸಾಮರ್ಥ್ಯವಿರುವ ಸ್ಥಾನೀಯ ನಾಯಕರಿಲ್ಲದಿರುವಂತಹ ಇಂದಿನ ವಾತಾವರಣದಲ್ಲಿ ಜನ ಸಾಮಾನ್ಯರಲ್ಲಿ ಕೇವಲ ಆವೇಶ ತುಂಬಿದರೆ ಅವರನ್ನು ನಿಯಂತ್ರಿಸಲಾಗದೆ ಅನರ್ಹ ಜನರೊಂದಿಗೆ ಅವರು ಸೇರಿಕೊಳ್ಳುವರು.

ಸಾರ್ವಜನಿಕ ಆಂದೋಲನವನ್ನು ಪ್ರಾರಂಭಿಸುವುದಕ್ಕಿಂತ ಮುಂಚಿತವಾಗಿ ಕೆಲವೊಂದು ರಚನಾತ್ಮಕ ಕಾರ್ಯಗಳನ್ನು ನಿರ್ವಹಿಸಬೇಕಾದ ಅಗತ್ಯವಿದೆ. ಪ್ರಥಮವಾಗಿ ನಾವು ನಮ್ಮ ಶೈಕ್ಷಣಿಕ ಕಾರ್ಯಕ್ರಮಗಳಿಗೆ ಬುನಾದಿ ಹಾಕಬೇಕು. ಯಾಕೆಂದರೆ ನಾವು ನಮ್ಮ ಜೀವನದಲ್ಲಿಯೇ ಈ ಧ್ಯೇಯವನ್ನು ಸಾಧಿಸಬಲ್ಲೆವೆಂದು ಹೇಳುವಂತಿಲ್ಲ. ಆದ್ದರಿಂದ ನಮ್ಮ ಸ್ಥಾನದಲ್ಲಿ ನಮಗಿಂತ ಉತ್ತಮವಾಗಿ ಕೆಲಸ ಮಾಡುವ ನವ ಪೀಳಿಗೆಯನ್ನು ಬೆಳೆಸುವ ಬಗ್ಗೆ ನಾವು ಈಗಲೇ ಆಲೋಚಿಸಬೇಕು.

ಎರಡನೆಯದಾಗಿ ನಾವು ಬರಹಗಾರರ ಒಂದು ಹೊಸ ತಂಡವನ್ನು ಸಿದ್ಧಪಡಿಸಬೇಕು. ಇಂದಿನ ನಿಷಿದ್ಧ ಜೀವನ ವಿಧಾನವನ್ನು ಕಲೆ ಮತ್ತು ಸಾಹಿತ್ಯಗಳ ನಾನಾ ಪ್ರಕಾರಗಳಿಂದ ಎದುರಿಸಲು ಅವರಿಗೆ ಸಾಧ್ಯವಾಗಬೇಕು. ಇಂದಿನ ಇಸ್ಲಾಮೇತರ ರಾಜಕೀಯದ ಭೀಕರ, ವಿಕೃತ ಹಾಗೂ ನೀಚ ಸ್ವರೂಪವನ್ನು ಜನಸಾಮಾನ್ಯರ ಮುಂದೆ ಅನಾವರಣಗೊಳಿಸುವಂತಹ ರಾಜಕೀಯ ಚಿಂತಕರನ್ನು ನಾವು ಸಜ್ಜುಗೊಳಿಸಬೇಕಾಗಿದೆ. ರೂಢಿಯಲ್ಲಿರುವ ಆರ್ಥಿಕ ವ್ಯವಸ್ಥೆಯ ಕುಂದು ಕೊರತೆಗಳನ್ನು ಎತ್ತಿ ತೋರಿಸುವ ಆರ್ಥಿಕ ತಜ್ಞರನ್ನೂ ನಾವು ಸಿದ್ಧಗೊಳಿಸಬೇಕು. ಮಾನವ ನಿರ್ಮಿತ ಕಾನೂನುಗಳ ಅಸಮಾನತೆ ಮತ್ತು ಅವಾಸ್ತವಿಕತೆಯನ್ನು ಎತ್ತಿ ತೋರಿಸಬಲ್ಲ ಕೆಲವು ಕಾನೂನು ಅಗತ್ಯವಿದೆ. ಆಧುನಿಕ ಯುಗದ ಮನಃಶಾಸ್ತ್ರ ಮತ್ತು ನೀತಿ ಶಾಸ್ತ್ರಗಳ ಅಸಮರ್ಪಕತೆಯನ್ನು ಎತ್ತಿ ತೋರಿಸಬಲ್ಲಂತಹ ಕೆಲವು ನೀತಿ ಮತ್ತು ಮನೋಶಾಸ್ತ್ರಜ್ಞರೂ ಬೇಕು. ಈ ವಿನಾಶಾತ್ಮಕ ಚಟುವಟಿಕೆಯೊಂದಿಗೆ ಅವರು ಜ್ಞಾನ ಶಾಖೆಗಳನ್ನು ನವೀನವಾಗಿ ಕ್ರೋಢೀಕರಿಸುವ ರಚನಾತ್ಮಕ ಕೆಲಸವನ್ನೂ ನಿರ್ವಹಿಸಬೇಕಾಗುವುದು. ಈ ಪರಿಣತರ ನೆರವಿಗಾಗಿ ಸಾಹಿತಿಗಳು, ಸಣ್ಣ ಕಥೆ, ನಾಟಕ ಮತ್ತು ಕಾದಂಬರಿಗಾರರ ಒಂದು ತಂಡವೂ ಅತ್ಯಗತ್ಯವಿದೆ. ಅವರು ವೈಚಾರಿಕ ರಣಾಂಗಣದಲ್ಲಿ ಗೆರಿಲ್ಲಾ ಯುದ್ಧ ನಡೆಸುತ್ತಿರಬೇಕು. ಮೂರನೆಯದಾಗಿ ಇಸ್ಲಾಮಿ ದೃಷ್ಟಿಕೋನದಂತೆ ಸಾರ್ವಜನಿಕ ಆಂದೋಲನವನ್ನು ನಡೆಸುವ ಕಾರ್ಯಕರ್ತರಿಗೂ ಸ್ವಯಂ ಸೇವಕರಿಗೂ ತರಬೇತಿ ನೀಡುವ ಅಗತ್ಯವಿದೆ. ಭಾಷಣಕಾರರಿಂದ ಮೌನ ಕಾರ್ಯಕರ್ತರ ವರೆಗಿನ ಎಲ್ಲಾ ಜನರನ್ನೂ ಹೊಸ ರೀತಿಯಿಂದ ಬೆಳೆಸಬೇಕಾಗಿದೆ. ಅವರಲ್ಲಿ ಅಲ್ಲಾಹನ ಭಯಭಕ್ತಿಯು ರಕ್ತದಂತೆ ಸಂಚರಿಸುತ್ತಿರಬೇಕು. ಈ ಮೂರು ವರ್ಗದ ಜನರಲ್ಲಿ ಅತ್ಯಧಿಕ ರಚನಾತ್ಮಕ ಚಟುವಟಿಕೆಗಳು ಸಣ್ಣ ಪ್ರಮಾಣದಲ್ಲಾದರೂ ನಡೆಯದೆ ಸಾರ್ವಜನಿಕರಲ್ಲಿ ಕ್ರಾಂತಿ ಪ್ರಜ್ಞೆಯ ಪ್ರಚಾರಕ್ಕಾಗಿ ಮುಂದಡಿಯಿಡಲು ಸಾಧ್ಯವಿಲ್ಲ.

ನಮ್ಮ ಕೆಲವು ಕಾರ್ಯಕರ್ತರು ಈ ಕಾರ್ಯವಿಧಾನವನ್ನು ಇನ್ನೂ ಸರಿಯಾಗಿ ತಿಳಿದುಕೊಂಡಿಲ್ಲ. ಇಲ್ಲಿ 20-25 ವರುಷಗಳಿಂದ ಕಾರ್ಯವೆಸಗುತ್ತಿರುವ ಸಂಘಟನೆಗಳತ್ತಲೇ ಅವರು ನೋಡುತ್ತಾರೆ. ಆದ್ದರಿಂದ ಪ್ರಸ್ತಾವಿತ ರೀತಿಯಲ್ಲಿ ತಮ್ಮನ್ನೂ ತಮ್ಮ ಸಂಘಟನೆಯನ್ನೂ ಸಿದ್ಧಗೊಳಿಸುವುದಕ್ಕಾಗಿ ತಮ್ಮ ಶಕ್ತಿಯನ್ನು ವಿನಿಯೋಗಿಸುವ ಬದಲಾಗಿ ಏನಾದರೂ ಕೋಲಾಹಲವೆಬ್ಬಿಸುವ ಕಾರ್ಯವು ತಕ್ಷಣವೇ ಪ್ರತ್ಯಕ್ಷವಾಗಬೇಕೆಂದು ಅವರು ಬಯಸುತ್ತಾರೆ.

ಅಂತಹ ಕಾರ್ಯಗಳು ಗೋಚರಿಸದಿರುವಾಗ ಅವರು ನಿರಾಶರಾಗುತ್ತಾರೆ. ಅನೇಕ ಕಾರ್ಯಕರ್ತರು ನಮ್ಮ ಕಾರ್ಯಕ್ರಮವೇನು? ನಾವೇನು ಮಾಡಬೇಕು? ಎಂದು ಮುಂತಾಗಿ ಪ್ರಶ್ನಿಸಿ ಪತ್ರ ಬರೆಯುತ್ತಿದ್ದಾರೆ. ನಮಗೆ ಯಾವ ಕೆಲಸವನ್ನೂ ತಿಳಿಸಿಲ್ಲವೆಂಬ ಭಾವನೆಯು ಮೂಡಿರುವುದಕ್ಕೆ ಅವರು ಸೇವೆಗಾಗಿ ಸಿದ್ಧರಾಗಿರುವ ಸಂಘಟನೆಯ ಸ್ವಭಾವವನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿಲ್ಲದಿರುವುದೇ ಮೂಲ ಕಾರಣವಾಗಿದೆ. ಒಬ್ಬನು ಲೋಕದಲ್ಲಿ ತನ್ನ ನೈಜ ಸ್ಥಾನಮಾನ ಮತ್ತು ಕರ್ತವ್ಯಗಳ ಬಗ್ಗೆ ಪ್ರಜ್ಞಾವಂತನಾದರೆ ಆತನಿಗೆ ತನ್ನ ಜೀವನಕ್ಕೊಂದು ಸಮಗ್ರವಾದ ಕಾರ್ಯಕ್ರಮವಿದೆಯೆಂಬುದು ವ್ಯಕ್ತವಾಗದಿರದು. ಆ ಕಾರ್ಯಕ್ರಮದಂತೆ ಕರ್ತವ್ಯ ಪ್ರಜ್ಞೆಯಿಂದ ಕ್ರಿಯಾಶೀಲನಾದರೆ ಆತನಿಗೆ ವಿಶ್ರಾಂತಿಗೆ ಸಮಯ ದೊರೆಯಲಾರದು.

ಅಲ್ಲಾಹನು ಪ್ರತಿಯೊಬ್ಬ ಮಾನವನಿಗೆ ಅನೇಕ ದೈಹಿಕ ಹಾಗೂ ಮಾನಸಿಕ ಸಾಮರ್ಥ್ಯಗಳನ್ನು ನೀಡಿದ್ದಾನೆ. ಜನರೊಡನೆ ಅನೇಕ ವಿಧದ ಸಂಬಂಧಗಳನ್ನು ಬೆಸೆದಿದ್ದಾನೆ. ಪ್ರಸ್ತುತ ಸಂಬಂಧದಂತೆ ಆತನು ಅನೇಕ ಕರ್ತವ್ಯಗಳನ್ನು ನಿರ್ವಹಿಸಬೇಕಾಗುತ್ತದೆ. ಅಲ್ಲಾಹನು ಕೊಟ್ಟಿರುವ ಪ್ರತಿಭೆಗಳನ್ನೂ ಸಾಮರ್ಥ್ಯಗಳನ್ನೂ ಯಾವ ಮಾರ್ಗದಲ್ಲಿ ವಿನಿಯೋಗಿಸುತ್ತಾನೆಂಬ ದೃಷ್ಟಿಯಿಂದ ಆತನ ಕರ್ತವ್ಯಗಳು ಪರಿಗಣಿಸಲ್ಪಡುತ್ತವೆ. ಈ ಘನಕೊಡುಗೆ (Trust)ಗಳ ನಿರ್ವಾಹಕನ (Trustee) ಕರ್ತವ್ಯಗಳನ್ನು ನಾನು ಎಷ್ಟರ ಮಟ್ಟಿಗೆ ನಿರ್ವಹಿಸುತ್ತಿದ್ದೇನೆ? ಅದರಲ್ಲಿ ಅಲ್ಲಾಹನ ಅಭೀಷ್ಟ ಎಷ್ಟಂಶ ಈಡೇರಿಸಲ್ಪಡುತ್ತಿದೆಯೆಂಬ ಬಗ್ಗೆ ಸದಾ ಗಮನ ಹರಿಸಬೇಕಾದುದು ಮುಸ್ಲಿಮನ ಕಾರ್ಯಕ್ರಮ. ಉದಾ: ಒಬ್ಬನಿಗೆ ವಾಕ್ ಚಾತುರ್ಯವಿದೆ. ಅಲ್ಲಾಹನು ಪ್ರದಾನ ಮಾಡಿರುವ ಈ ಪ್ರತಿಭೆಯನ್ನು ಆತನ ಮಾರ್ಗದಲ್ಲಿ ಎಷ್ಟರ ಮಟ್ಟಿಗೆ ವಿನಿಯೋಗಿಸುತ್ತಿರುವೆನೆಂಬ ಬಗ್ಗೆ ಸದಾ ಆತ್ಮಾವಲೋಕನ ನಡೆಸುತ್ತಲಿದ್ದರೆ ಆತನಿಗೆ ಇತರ ಕೆಲಸಗಳ ಬಗ್ಗೆ ಯೋಚಿಸಲೂ ಸಮಯ ದೊರೆಯಲಾರದು.

ಅಲ್ಲಾಹನು ನೀಡಿರುವ ಎಲ್ಲಾ ಪ್ರತಿಭೆಗಳ ಸ್ಥಿತಿಯೂ ಹೀಗೆಯೇ. ಜಮಾಅತ್‌ನಲ್ಲಿ ಸೇರಿರುವ ಪ್ರತಿಯೊಬ್ಬನೂ ಈ ಘನ ಕರ್ತವ್ಯವನ್ನು ತಿಳಿದು ಅದರ ಈಡೇರಿಕೆಗಾಗಿ ಶತ ಪ್ರಯತ್ನ ನಡೆಸಬೇಕೆಂಬುದೇ ನನ್ನ ಬಯಕೆಯಾಗಿದೆ. ಪ್ರಜ್ಞಾಪೂರ್ವಕವಾಗಿ ಒಬ್ಬನು ಮುಸ್ಲಿಮನಾಗುವುದರೊಂದಿಗೆ ಇದು ಆತನ ಜೀವನ ಕರ್ತವ್ಯವಾಗಿ ಪರಿಣಮಿಸುವುದು. ಕೆಲವು ಕಾರ್ಯಕರ್ತರು ನಾವು ಯಾವ ಕೆಲಸ ಮಾಡಬೇಕೆಂದು ಪ್ರಶ್ನಿಸುವಾಗ ನನಗೆ ಬಹಳ ಆಶ್ಚರ್ಯವಾಗುತ್ತದೆ. ನಿಮಗೆ ನಿಮ್ಮ ಕುಂದು ಕೊರತೆಗಳನ್ನೆಲ್ಲಾ ನಿವಾರಿಸಿ ಆಯಿತೇ? ಎಂಬುದು ನನ್ನ ಪ್ರಶ್ನೆ. ಸ್ವದೇಹವನ್ನು ಅಲ್ಲಾಹನ ದಾಸ್ಯಕ್ಕೆ ಅಧೀನಗೊಳಿಸುವ ಕಾರ್ಯ ಪೂರ್ತಿಯಾಯಿತೇ? ಅಲ್ಲಾಹ್ ಮತ್ತು ಆತನ ಧರ್ಮಕ್ಕಾಗಿ ನಿಮ್ಮ ಮಾನಸಿಕ, ದೈಹಿಕ ಹಾಗೂ ಆರ್ಥಿಕ ಹಕ್ಕುಗಳನ್ನು ಸಂಪೂರ್ಣವಾಗಿ ಪೂರೈಸಿದಿರಾ? ನಿಮ್ಮ ಪರಿಸರಗಳಲ್ಲಿ ಅಲ್ಲಾಹನ ಬಗ್ಗೆ ನಿರ್ಲಕ್ಷ್ಯ ತೋರುವ, ಪಥಭ್ರಷ್ಟರಾದ, ಸತ್ಯ ಧರ್ಮದ ಬಗ್ಗೆ ಅಜ್ಞರಾಗಿರುವ ಹಾಗೂ ನೈತಿಕ ಅಧಃಪತನದಲ್ಲಿ ಸಿಲುಕಿರುವ ಯಾರೂ ಉಳಿದಿಲ್ಲವೇ? ಅವರನ್ನು ಸುಧಾರಿಸುವ ಹೊಣೆ ನಿಮಗಿಲ್ಲವೇ? ಹೀಗಿರುತ್ತಾ ನೀವು ಯಾವ ಕೆಲಸವೂ ಉಳಿದಿಲ್ಲವೆಂಬ ಭಾವನೆಯಿಂದ ಹೊಸ ಕೆಲಸದ ಬಗ್ಗೆ ವಿಚಾರಿಸುತ್ತಿದ್ದೀರಿ. ಕೆಲಸಗಳು ನಿಮ್ಮ ಮುಂದೆ ರಾಶಿ ಬಿದ್ದಿವೆ. ಅವೆಲ್ಲವೂ ನಿಮ್ಮ ಸಂಪೂರ್ಣ ಗಮನವನ್ನು ಬಯಸುತ್ತಿವೆ. ಅವುಗಳನ್ನು ಸೂಕ್ತ ರೀತಿಯಲ್ಲಿ ನಿರ್ವಹಿಸ

ಬಯಸಿದರೆ ನಿಮಗೆ ಸ್ವಲ್ಪವೂ ವಿರಾಮ ದೊರೆಯದು. ಆದರೆ ನಿಮ್ಮಲ್ಲಿ ಇಂದಿಗೂ ಇತರ ಸಂಘಟನೆಗಳ ಕಾರ್ಯಕ್ರಮಗಳ ಬಗೆಗಿನ ಭ್ರಮೆ ಕೊನೆಗೊಂಡಿಲ್ಲ. ಇಸ್ಲಾಮಿ ಸಂಘಟನೆಯ ಪ್ರಜ್ಞೆ ನಿಮ್ಮಲ್ಲಿ ಇನ್ನೂ ಜಾಗೃತಗೊಂಡಿಲ್ಲ. ಆದ್ದರಿಂದ ಚಟುವಟಿಕೆಯಿಲ್ಲ, ಕಾರ್ಯಕ್ರಮವಿಲ್ಲವೆಂದು ನೀವು ಅಪಸ್ವರ ಹೊರಡಿಸುತ್ತಿರುವಿರಿ. ನಿಮ್ಮ ಆಲಾಪಗಳ ನಿವಾರಣೆಗೆ ಕೆಲವು ಚಿಕ್ಕ ಪುಟ್ಟ ಕೆಲಸಗಳನ್ನೂ ಸೀಮಿತ ಕಾರ್ಯಕ್ರಮವನ್ನೂ ನೀಡುವ ಬದಲಾಗಿ ನಿಮ್ಮಲ್ಲಿ ಕರ್ತವ್ಯ ಪ್ರಜ್ಞೆ ಮತ್ತು ಇಸ್ಲಾಮಿ ಸ್ಫೂರ್ತಿಯನ್ನು ಮೂಡಿಸಲು ಪ್ರಯತ್ನಿಸುವುದೇ ಪ್ರಾಮುಖ್ಯವಾಗಿದೆ. ತನ್ಮೂಲಕ ಅವಿಶ್ರಾಂತ ಸೇವಾ ಮಾರ್ಗಗಳು ನಿಮಗೆ ಗೋಚರಿಸುವುದು.

ಕೇಂದ್ರ ಕಚೇರಿಯಿಂದ ಆಗಾಗ ನಿರ್ದೇಶನಗಳನ್ನು ಕಳುಹಿಸಬೇಕೆಂದೂ ಸಾಂಘಿಕ ವಿಷಯಗಳ ಬಗ್ಗೆ ಪದೇ ಪದೇ ಹುರಿದುಂಬಿಸುತ್ತಿರಬೇಕೆಂದೂ ಕೆಲವು ಬಾಂಧವರು ವಿನಂತಿಸುತ್ತಿದ್ದಾರೆ. ಆದರೆ ಅದು ನನ್ನ ಮಟ್ಟಿಗೆ ಸರಿ ಕಾಣುವುದಿಲ್ಲ. ಪ್ರತಿಯೊಂದು ಸ್ಥಳದಲ್ಲಿಯೂ ಸ್ಥಾನೀಯ ಶಾಖೆಗಳನ್ನು ಸರಿಯಾಗಿ ನಿಯಂತ್ರಿಸಿ ಮುನ್ನಡೆಸುವ ಹಾಗೂ ತಮ್ಮ ಕರ್ತವ್ಯಗಳನ್ನು ಸ್ವತಃ ಮನಗಂಡು ನಿರ್ವಹಿಸಬಲ್ಲ ಪ್ರತಿಭಾವಂತರು ಎಲ್ಲಾ ಸ್ಥಾನೀಯ ಶಾಖೆಗಳಲ್ಲಿಯೂ ಇರುವಂತೆ ನಾವು ಪ್ರಯತ್ನಿಸಬೇಕು. ಒಂದು ನಿರ್ದಿಷ್ಟ ಕೆಲಸವನ್ನು ನಿರ್ದಿಷ್ಟ ವಿಧಾನದಲ್ಲಿ ಸದಾ ಮಾಡುತ್ತಲಿರುವ ರೂಢಿ ಜನರಲ್ಲಿ ಬೆಳೆಯಬೇಕೆಂದು ನಾನಿಚ್ಛಿಸುವುದಿಲ್ಲ. ಮೂಲ ಸಿದ್ಧಾಂತವನ್ನೂ ಕಾರ್ಯ ವಿಧಾನವನ್ನೂ ತಿಳಿಯಪಡಿಸಿ ತಾತ್ವಿಕ ನಿರ್ದೇಶನ ನೀಡುವುದಷ್ಟೇ ನನ್ನ ಕೆಲಸ. ತರುವಾಯ ಜಮಾಅತ್ ಸದಸ್ಯರು ಮುಖ್ಯವಾಗಿ ಸ್ಥಾನೀಯ ಶಾಖೆಯ ಅಧ್ಯಕ್ಷರು ತಮ್ಮ ಕೆಲಸವನ್ನು ಸ್ವಯಂ ತಿಳಿದು ಮುನ್ನಡೆಸಬೇಕು. ಏನಾದರೂ ಅಡೆತಡೆಗಳಿದ್ದರೆ ಅಥವಾ ಸ್ಥಾನೀಯವಾಗಿ ಹೊಸ ಕಾರ್ಯಕ್ರಮಗಳನ್ನು ನಡೆಸಬಯಸಿದ್ದರೆ ಅಥವಾ ಕ್ಲಿಷ್ಟ ಸಮಸ್ಯೆಗಳ ಪರಿಹಾರಕ್ಕಾಗಿ, ಕೇಂದ್ರದಿಂದ ಸಲಹೆ ಯಾಚಿಸಬಹುದು. ಆದರೆ ಯಾವಾಗಲೂ ಕೇಂದ್ರದಿಂದಲೇ ನಿರ್ದೇಶನ ಬರಲಿ, ಅಲ್ಲಿಂದಲೇ ಪ್ರೇರೇಪಣೆ ದೊರೆಯಲಿ, ಮಾರ್ಗದರ್ಶನ ನೀಡಲಿ ಎಂಬುದಾಗಿ ಕಾಯುವ ಮನೋಭಾವವು ಈ ಸಂಘಟನೆಯ ಮುನ್ನಡೆಗೆ ಹೇಳಿಸಿದ್ದಲ್ಲ. ಯಾಕೆಂದರೆ ಅದರಿಂದ ಈ ಮಾರ್ಗದಲ್ಲಿ ಜನರಿಗೆ ಮುನ್ನಡೆಯಲು ಸದಾ ಹುರಿದುಂಬಿಸುವ ಓರ್ವ ವ್ಯಕ್ತಿಯ ಅಗತ್ಯವಾಗುವುದು. ಆ ವ್ಯಕ್ತಿಯು ಎಂದಾದರೂ ಹಿಂದೆ ಸರಿದರೆ ಜನರೂ ಹಿಂದೆ ಸರಿಯುತ್ತಾರೆ. ಕನಿಷ್ಠ ಪಕ್ಷ ಈ ಸಂಘಟನೆಯನ್ನು ಆರಂಭದಲ್ಲಿ ಸ್ವಾಗತಿಸಿದ ಜನರಾದರೂ ಈ ಸ್ವಭಾವದಿಂದ ಮುಕ್ತರಾಗಿರಬೇಕು. ಇತರರೆಲ್ಲರೂ ಹಿಂದೆ ಸರಿದರೂ ಒಬ್ಬಂಟಿಗನಾಗಿ ಮುನ್ನಡೆಯುವ ಮನೋಸ್ಥೈರ್ಯ ಪ್ರತಿಯೊಬ್ಬರಲ್ಲಿಯೂ ಬೆಳೆದು ಬರಬೇಕು.

## ಧರ್ಮ ಪ್ರಚಾರದ ಬಗೆ ಹೇಗೆ?

ಭಾಷಣದ ಬಳಿಕ ವಿವಿಧ ಪ್ರದೇಶಗಳ ಜಮಾಅತ್ ಪ್ರತಿನಿಧಿಗಳು ತಂತಮ್ಮ ವರ್ತುಲಗಳ ವರದಿಗಳನ್ನು ಸಲ್ಲಿಸಿದರು. ಆಯಾ ಪ್ರದೇಶಗಳಲ್ಲಿ ಜಮಾಅತ್ ಚಟುವಟಿಕೆಗಳ ಪ್ರಗತಿ, ಜಮಾಅತ್‌ನಲ್ಲಿ ಸೇರುತ್ತಿರುವ ಜನರ ಸ್ವಭಾವ, ಜಮಾಅತ್‌ನ ಪ್ರಚಾರ, ಅಡೆ ತಡೆ, ವಿರೋಧ ಇತ್ಯಾದಿಗಳ ಬಗ್ಗೆ ಸವಿವರವಾಗಿ ಪ್ರಸ್ತಾಪಿಸಿದರು.

ತರುವಾಯ ಜಮಾಅತ್ ಅಧ್ಯಕ್ಷರು ವರದಿಗಳ ವಿಮರ್ಶೆ ನಡೆಸಿ, ಜಮಾಅತ್‌ನ ಸಂಘಟನಾ ವ್ಯವಸ್ಥೆಯಲ್ಲಿ ಕಂಡು ಬರುತ್ತಿರುವ ಲೋಪದೋಷಗಳನ್ನು ವಿವರಿಸಿ, ಅವುಗಳ ಪರಿಹಾರಕ್ಕಾಗಿ ಸೂಕ್ತ ಸಲಹೆಗಳನ್ನು ನೀಡಿದರು. ಕೆಲವೆಡೆ ಅಜಾಗ್ರತೆಯಿಂದ ಕೆಲವು ಅನರ್ಹ ಮತ್ತು ಅಪ್ರಬುದ್ಧ ಜನರನ್ನು ಸಂಘಟನೆಗೆ ಸೇರಿಸಿಕೊಳ್ಳಲಾಗಿತ್ತು. ಅವರ ಬಗ್ಗೆ ಅಧ್ಯಕ್ಷರು ಈ ರೀತಿ ನಿರ್ದೇಶಿಸಿದರು. 'ಆಂದೋಲನವನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳದೆ ಸಂಘಟನೆಯಲ್ಲಿ ಸೇರಿರುವ ಹಾಗೂ ಜೀವನದಲ್ಲಿ ಯಾವುದೇ ನೈತಿಕ ಬದಲಾವಣೆಯಾಗಿಲ್ಲದ ಜನರನ್ನು ತರಬೇತುಗೊಳಿಸಲು ಪ್ರಯತ್ನಿಸಬೇಕು. ಆ ಬಳಿಕವೂ ಲೋಪದೋಷ ನಿವಾರಣೆಗೊಳ್ಳದಿದ್ದರೆ ಅಂತಹ ಜನರಿಗೆ ಜಮಾಅತ್‌ನ ಹೊರಗೆ ನಿಂತು ತಮ್ಮಿಂದ ಸಾಧ್ಯವಿರುವ ಸಹಕಾರ ನೀಡಿದರೆ ಸಾಕೆಂದು ಹೇಳಬೇಕು. ಅಲ್ಲದೇ ಇನ್ನು ಮುಂದೆ, ಜಮಾಅತ್‌ನ ಕಾರ್ಯವಿಧಾನವನ್ನು ಸರಿಯಾಗಿ ತಿಳಿದು, ಅದರ ಸಂವಿಧಾನವನ್ನು ಸಂಪೂರ್ಣ ಮೈಗೂಡಿಸಿ ಗುಣ ನಡತೆಗಳಲ್ಲಿ ಸಂಪೂರ್ಣ ಬದಲಾವಣೆ ಕಂಡು ಬರುತ್ತಿರುವ ಜನರನ್ನು ಮಾತ್ರ ಜಮಾಅತ್‌ಗೆ ಸೇರಿಸಬೇಕು.'

ಅದೇ ರೀತಿ ಪ್ರಚಾರ ಚಟುವಟಿಕೆಗಳಲ್ಲಿರುವ ಕೊರತೆಗಳನ್ನೂ ಅವರು ಎತ್ತಿ ಹೇಳಿದರು. ಪ್ರಚಾರದ ಸರಿಯಾದ ವಿಧಾನ ಮತ್ತು ಆ ಮಾರ್ಗದಲ್ಲಿರುವ ಅಡೆತಡೆಗಳ ನಿವಾರಣೋಪಾಯಗಳ ಬಗ್ಗೆ ವಿವರಿಸುತ್ತಾ ಅವರು ಹೀಗೆಂದರು: ಮೊದ ಮೊದಲು ಜನಸಾಮಾನ್ಯರಲ್ಲಿ ಧರ್ಮದ ವಾಸ್ತವಿಕತೆ ಮತ್ತು ಧರ್ಮ ನಿಷ್ಠೆಯ ನೈಜ ಉದ್ದೇಶಗಳ ಕುರಿತು ಪ್ರಚಾರ ಮಾಡಬೇಕು. ಕೊನೆಯ ಹಾಗೂ ಅಂತಿಮ ಬೇಡಿಕೆಗಳನ್ನು ಅವರ ಮುಂದಿಡುವಾಗ ಬಹಳ ಜಾಗ್ರತೆ ವಹಿಸಬೇಕು. ಈಗ 'ತೌಹೀದ್' ಹಾಗೂ ಅಲ್ಲಾಹ್ ಮತ್ತು ರಸೂಲರ ಅನುಸರಣೆಯ ಪ್ರಚಾರಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಬೇಕು. ಅಲ್ಲಾಹನಿಗೆ ನಾವು ಜವಾಬ್ದಾರರು ಮತ್ತು ಆತನಿಗೆ ನಾವು ಲೆಕ್ಕ ಸಮರ್ಪಿಸಬೇಕಾಗಿದೆಯೆಂಬ ಪ್ರಜ್ಞೆಯನ್ನು ಜನಮನಗಳಲ್ಲಿ ದೃಢಗೊಳಿಸಲು ನಾವು ಪ್ರಥಮವಾಗಿ ಪ್ರಯತ್ನಿಸಬೇಕು. ಧರ್ಮ ಪ್ರಚಾರದ ಬಗ್ಗೆ ನಾವು ಇನ್ನೊಂದು ವಿಷಯವನ್ನು ಗಮನದಲ್ಲಿಡಬೇಕು. ಪ್ರಚಾರಕನು ತಾನೊಂದು ವಿಶಿಷ್ಟ ಸಂಘಟನೆಯ ಪ್ರಚಾರಕನೆಂಬಂತೆ ತೋರ್ಪಡಿಸಬಾರದು. ಭಾಷಣ ಮತ್ತು ಸಂಭಾಷಣೆಗಳಲ್ಲಿ ಜಮಾಅತ್‌ಗೆ ಸೇರುವಂತೆ ಸಾರ್ವಜನಿಕ ಕರೆ ನೀಡಬಾರದು. ವಿದ್ಯಾವಂತರಲ್ಲಿ ಕಾರ್ಯವೆಸಗುವವರು ಅವರೊಂದಿಗೆ ಸಂಭಾಷಣೆ ಮತ್ತು ಸಂವಾದಗಳನ್ನು ನಡೆಸುವ ಬದಲಾಗಿ ಅವರಿಗೆ ಸಾಹಿತ್ಯಗಳನ್ನು ನೀಡಬೇಕು. ಪರಿಚಿತ ವ್ಯಕ್ತಿಗಳ ಮನೋಭಾವಗಳನ್ನು ತಿಳಿದು ಜಮಾಅತ್‌ನ ಸಾಹಿತ್ಯಗಳನ್ನು ಕ್ರಮ ಪ್ರಕಾರವಾಗಿ ನೀಡುತ್ತಿರಬೇಕು. ಆ ಬಳಿಕ ಯಾವುದಾದರೂ ವಿಷಯದ ಬಗ್ಗೆ ವಿವರಣೆ ಬೇಕಿದ್ದರೆ ಆ ಬಗ್ಗೆ ನೇರ ಸಂಭಾಷಣೆ ನಡೆಸಬಹುದು. ಆದರೆ ಸಂಭಾಷಣೆಯು ವಾಗ್ವಾದಕ್ಕೆ ತಿರುಗಿದರೆ ಸಂಭಾಷಣೆ ಮುಂದುವರಿಸಬಾರದು. ವೈಚಾರಿಕ ಕಚ್ಚಾಟಗಳಿಗೆ ಸಿಲುಕಬಾರದು. ಇತರ ಸಂಘಟನೆಗಳಿಗೆ ಸಂಬಂಧಿಸಿದ ಅಥವಾ ತಮ್ಮ ವಿಚಾರಗಳ ಬಗ್ಗೆ ತೀವ್ರವಾದಿಗಳಾಗಿರುವ ಜನರನ್ನು ಹಿಡಿಯುವ ಪ್ರಯತ್ನವನ್ನೂ ಅಂಥವರಿಗೆ ಹಠ ಬರಿಸುವಂತಹ ವಾದಗಳನ್ನೂ ನಡೆಸಬಾರದು. ವಿರೋಧ ಮತ್ತು ಅಡ್ಡಿ ಆತಂಕಗಳಿಗೆ ಅವರ ತಪ್ಪು ತಿಳುವಳಿಕೆ ಕಾರಣವೇ ಅಥವಾ ನಮ್ಮ ವಿಶ್ವಾಸ, ಧ್ಯೇಯ ಮತ್ತು ಕಾರ್ಯ ವಿಧಾನಗಳನ್ನು ಸರಿಯಾಗಿ ತಿಳಿದು ಉದ್ದೇಶ ಪೂರ್ವಕವಾಗಿ ಹಾಗೆ ಮಾಡುತ್ತಿರುವರೇ ಎಂಬುದನ್ನು ನೋಡಬೇಕು. ತಪ್ಪು ತಿಳುವಳಿಕೆಗಳನ್ನು

ನ್ಯಾಯೋಚಿತ ರೀತಿಯಲ್ಲಿ ನಿವಾರಿಸಲು ಪ್ರಯತ್ನಿಸಬೇಕು. ಎರಡನೆಯ ಸಂದರ್ಭದಲ್ಲಿ ಸಭ್ಯರೀತಿಯಿಂದ ತಾಳ್ಮೆ ವಹಿಸಬೇಕು.

ಈ ನಿರ್ದೇಶಗಳನ್ನು ಕೊನೆಗೊಳಿಸುತ್ತಾ ಅವರು ಹೀಗೆಂದರು: ಧರ್ಮ ಪ್ರಚಾರ ಕಾರ್ಯವು ಕೇವಲ ಭಾಷಣ, ಸಂಭಾಷಣೆ ಮತ್ತು ಬರಹಗಳಿಂದ ಈಡೇರುವುದಿಲ್ಲ ಎಂಬುದನ್ನು ನೀವು ತಿಳಿದಿರಬೇಕು. ಓರ್ವ ಆದರ್ಶ ಪ್ರಚಾರಕನ ಜೀವನದ ಪ್ರತಿಯೊಂದು ಕ್ಷಣವೂ ಒಂದು ಪ್ರಚಾರ ಚಟುವಟಿಕೆಯಾಗಿದೆ. ಆತನ ಜೀವನವು ಆತನ ವಿಶ್ವಾಸದ ಪ್ರತೀಕವಾಗಿದ್ದರೆ ಅದುವೇ ಹೆಚ್ಚು ಪ್ರಭಾವಶಾಲಿಯಾಗಿರುವುದು. ನೀವು ಪ್ರಚಾರ ಮಾಡುತ್ತಿರುವ ವಿಶ್ವಾಸವನ್ನು ನೀವು ನಿಮ್ಮ ಜೀವನದಲ್ಲಿ ಅಳವಡಿಸಿಕೊಂಡರೆ, ಆ ವಿಶ್ವಾಸಕ್ಕೆ ವಿರುದ್ಧವಾಗಿ ನಡೆಯುವವರ ಮಟ್ಟಿಗೆ ನೀವೊಂದು ವೃತ್ತಾಕೃತಿಯ ರಂಧ್ರದಲ್ಲಿರುವ ಚೌಕಾಕೃತಿಯ ಮೊಳೆಯಂತಾಗುವಿರಿ. ಆ ಮೊಳೆಯು ರಂಧ್ರದೊಂದಿಗೆ ಸದಾ ಸಂಘರ್ಷಿಸುತ್ತಿರುವುದೆಂದು ಬೇರೆ ಹೇಳಬೇಕಾಗಿಲ್ಲ ಅಥವಾ ನೀವು ಐಸ್ ಫ್ಯಾಕ್ಟರಿಯ ಮಧ್ಯದಲ್ಲಿ ಉರಿಯುತ್ತಿರುವ ಬೆಂಕಿಯಂತಿರುವಿರಿ. ಅದು ಯಾವುದೇ ಸದ್ದು ಗದ್ದಲವನ್ನು ಮಾಡದಿದ್ದರೂ ಬೆಂಕಿ ಉರಿಯುತ್ತಿರುವುದೇ ಮಂಜುಗಡ್ಡೆಗಳಿಗೆ ಒಂದು ಶಾಶ್ವತ ಬೆದರಿಕೆಯಾಗಿರುತ್ತದೆ. ಅದರ ಸನಿಹದಲ್ಲಿ ದಹನಕಾರೀ ವಸ್ತುಗಳಿದ್ದರೆ ಯಾವ ಸೂಚನೆಯೂ ಇಲ್ಲದೆ ಐಸ್ ಫ್ಯಾಕ್ಟರಿಯು ಒಂದು ಅಗ್ನಿಕುಂಡವಾಗಿ ಮಾರ್ಪಾಟು ಹೊಂದಬಹುದು. ಪ್ರಜ್ಞಾಹೀನ ಮತ್ತು ಕಪಟ ಇಸ್ಲಾಮಿನ ಸ್ಥಿತಿ ಹಾಗಿರಲಾರದು. ಆದರೆ ಒಬ್ಬನು ನಿಷ್ಕಳಂಕ, ನಿಸ್ವಾರ್ಥ ಮತ್ತು ಹೃತ್ಪೂರ್ವಕವಾಗಿ ಇಸ್ಲಾಮನ್ನು ಅಂಗೀಕರಿಸಿದರೆ ಆತನ ವಿಚಾರ ಮತ್ತು ಗುಣ ನಡತೆಗಳು ಹಾಗೂ ಆತನ ಜೀವನದ ಎಲ್ಲಾ ರಂಗಗಳೂ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಇತ್ಯಾದಿ ಇಸ್ಲಾಮೇತರ ಪರಿಸರದೊಂದಿಗೆ ಸಂಘರ್ಷಕ್ಕಿಳಿಯುವುದು. ಅಂತಹ ವಾತಾವರಣವು ಆತನ ಸ್ವಾಸ್ಥ್ಯವನ್ನು ಸದಾ ಕೆಡಿಸುವುದು. ಆತನ ಅಸ್ತಿತ್ವವು ಸಂಪೂರ್ಣವಾಗಿ ಇಸ್ಲಾಮೇತರ ವಾತಾವರಣದ ವಿರುದ್ಧ ಪ್ರತಿಭಟನೆಯಾಗಿ ಪರಿಣಮಿಸುವುದು. ಕರಿಗಂಬಳಿಯ ಬಿಳಿ ಕಲೆಯಂತೆ ಇಸ್ಲಾಮೇತರ ವಾತಾವರಣದಲ್ಲಿ ಆತನು ಸಂಪೂರ್ಣ ಅನ್ಯ ಮತ್ತು ಅಪರಿಚಿತನಾಗುತ್ತಾನೆ. ಈ 'ಕುಫ್ರ್' ಮತ್ತು ಇಸ್ಲಾಮೇತರಗಳ ವಿಷಮಯ ವಾತಾವರಣದಲ್ಲಿ ನೀವು ಕೂಡಾ ಅದೇ ರೀತಿಯಾಗಬೇಕೆಂದು ನಾನು ಬಯಸುತ್ತೇನೆ. ತನ್ಮೂಲಕ ನಿಮ್ಮ ಜೀವನದ ಪ್ರತಿಯೊಂದು ಕ್ಷಣವೂ ಈ ನಿಷಿದ್ಧ ಪದ್ಧತಿಯ ಪ್ರತಿಯೊಂದು ಅಂಶದೊಂದಿಗೆ ಪ್ರತಿ ಹೆಜ್ಜೆಗೂ ಸಂಘರ್ಷಿಸುತ್ತಿರಬೇಕು. ನಿಮ್ಮ ಅಸ್ತಿತ್ವವು ಅದಕ್ಕೊಂದು ಶಾಶ್ವತ ಪಂಥಾಹ್ವಾನವಾಗಿರಬೇಕು. ನಾನಾ ಭಾಗಗಳಲ್ಲಿ ಅನುನಿಮಿಷ ನಡೆಯುವ ಈ ಸಂಘರ್ಷ, ಈ ಶೀತಲ ಸಮರವೂ ಸಾವಿರಾರು ವಾಝ್, ಭಾಷಣ ಬರಹಗಳಿಗಿಂತ ಪ್ರಬಲವಾಗಿರುವುದು. ವಾಸ್ತವದಲ್ಲಿ ಅದುವೇ ನೈಜ ವಸ್ತುವಾಗಿದೆ. ಅದರ ಹೊರತು ವಿಚಾರ ಪ್ರಚಾರ ಅಭಿಯಾನವನ್ನು ಯಶಸ್ವಿಯಾಗಿ ನಿರ್ವಹಿಸಲು ಸಾಧ್ಯವಾಗಲಾರದು.

ಈ ಸಾರೋಪದೇಶಗಳ ಬಳಿಕ ಅಧ್ಯಕ್ಷರು ಜಮಾಅತ್ ಬಾಂಧವರಲ್ಲಿ ಸಾಮಾನ್ಯವಾಗಿ ಕಂಡು ಬರುತ್ತಿರುವ ಒಂದು ದೊಡ್ಡ ಕೊರತೆಯನ್ನು ಎತ್ತಿ ಹೇಳುತ್ತಾ ಹೀಗೆಂದರು: "ಇತರ ಪಕ್ಷಗಳಿಂದ ಜಮಾಅತ್‌ಗೆ ಸೇರುತ್ತಿರುವ ಜನರಲ್ಲಿ ಅವರ ಹಿಂದಿನ ಕೋಮು ಹಾಗೂ

ರಾಜಕೀಯ ಜೀವನದ ಕೆಲವು ಅಂಶಗಳು ಇನ್ನೂ ಉಳಿದುಕೊಂಡಿರುವಂತೆ ಭಾಸವಾಗುತ್ತಿದೆ. ಹಿಂದಿನ ಪಕ್ಷೀಯ ಪಕ್ಷಪಾತಗಳ ಹವ್ಯಾಸಗಳಿಂದ ಅವರು ಮುಕ್ತರಾಗಿಲ್ಲ. ಉದಾ: ಕಾಂಗ್ರೆಸ್ಸನ್ನು ತೊರೆದು ಬಂದಿರುವ ಜನರಲ್ಲಿ ಕಾಂಗ್ರೆಸ್‌ನೊಂದಿಗೆ ಪಕ್ಷಪಾತವಿಲ್ಲದಿದ್ದರೂ ಲೀಗ್‌ನ ಕುರಿತಾದ ವಿರೋಧ ಭಾವನೆ ಅವರ ಮನದಲ್ಲಿ ಸ್ಪಷ್ಟವಾಗಿ ಗೋಚರಿಸುತ್ತಿದೆ. ಲೀಗ್‌ನಿಂದ ಬಂದವರ ಸ್ಥಿತಿಯೂ ಹಾಗೆಯೇ. ಇತರ ಧಾರ್ಮಿಕ ಸಂಘಟನೆಗಳಿಂದ ಹೊರಟು ಬಂದವರಲ್ಲಿಯೂ ಅದೇ ರೀತಿಯ ಮನೋಭಾವವಿದೆ. ಅವರು ಈ ತನಕ ಹೋರಾಡುತ್ತಿದ್ದ ಪಕ್ಷಗಳ ವಿರುದ್ಧ ಇಂದಿಗೂ ಅವರ ಮನದಲ್ಲಿ ತೀವ್ರ ವಿರೋಧಾಭಿಪ್ರಾಯವಿದೆ. ಈ ರೀತಿಯಲ್ಲಿ ತೀವ್ರ ಪಕ್ಷಪಾತ ಮನೋಭಾವವನ್ನು ಹೊಂದಿರುವ ಜನರು ಎಂದಾದರೂ ಸಂಭಾಷಣೆಗೆ ಕುಳಿತರೆ ಔಸ್, ಖಝ್ರಜ್ ಗೋತ್ರಗಳ ನಡುವೆ ಮುನಾಫಿಕರು ಕಿಡಿಹಚ್ಚಿ ಹಳೆಯ ಹಗೆತನವನ್ನು ಪುನಃ ಕೆರಳಿಸಿದಂತೆ ಅವರ ಸಂಭಾಷಣೆಯು ಹಳೆಯ ಪಕ್ಷಪಾತಿತ್ವಗಳನ್ನು ಮರುಕಳಿಸಿತೇ ಎಂಬ ಸಂದೇಹ ಕಾಡುತ್ತಿದೆ.

## ಸ್ಥಾನೀಯ ಘಟಕಗಳಿಗೆ ನಿರ್ದೇಶಗಳು

ತರುವಾಯ ಜಮಾಅತ್‌ನ ಸ್ಥಾನೀಯ ಅಧ್ಯಕ್ಷರುಗಳಿಗೆ ಕೆಲವು ನಿರ್ದೇಶನಗಳನ್ನು ನೀಡಿದರು. ಪ್ರತಿಯೊಬ್ಬರೂ ತಂತಮ್ಮ ಪ್ರದೇಶಗಳಲ್ಲಿರುವ ಸದಸ್ಯರ ಪ್ರತಿಭೆಗಳನ್ನು ಸರಿಯಾಗಿ ಗುರುತಿಸಿ ಅವುಗಳನ್ನು ಸಂಪೂರ್ಣವಾಗಿ ಬಳಸಿಕೊಳ್ಳಬೇಕು. ಸಾಪ್ತಾಹಿಕ ಸಭೆಗಳನ್ನು ಕ್ಲಪ್ತವಾಗಿ ಜರಗಿಸಬೇಕು. ಸಾಪ್ತಾಹಿಕ ಸಭೆಗಳಲ್ಲಿ ಸೂಕ್ತ ಕಾರಣಗಳಿಲ್ಲದೇ ಗೈರು ಹಾಜರಾಗುವವರಿಗೆ ಜಮಾಅತ್‌ನಲ್ಲಿ ಆಸಕ್ತಿಯಿಲ್ಲವೆಂದು ಗ್ರಹಿಸಬೇಕು. ಸಾಪ್ತಾಹಿಕ ಸಭೆಗಳನ್ನು ಈ ಕೆಳಗಿನ ವಿಧಾನಗಳಿಂದ ಫಲಪ್ರದಗೊಳಿಸಬೇಕು.

1. ಜಮಾಅತ್‌ನ ಆಶ್ರಯದಲ್ಲಿ ಪ್ರಕಟವಾಗುವ ಸಾಹಿತ್ಯಗಳನ್ನು ಓದಬೇಕು. ಹೊಸ ಸಾಹಿತ್ಯಗಳಲ್ಲದೇ ಹಿಂದೆ ಪ್ರಕಟವಾಗಿರುವ ಸಾಹಿತ್ಯಗಳನ್ನೂ ಅವುಗಳಲ್ಲಿರುವ ವಿಷಯವು ಸದಾ ಜ್ಞಾಪಕದಲ್ಲಿರಲಿಕ್ಕಾಗಿ, ಪದೇ ಪದೇ ಓದುತ್ತಿರಬೇಕು.

2. ಹಿಂದುಳಿದ ಕಾರ್ಯಕರ್ತರಲ್ಲಿ ಸ್ಫೂರ್ತಿ ತುಂಬಿ, ಅವರಲ್ಲಿರುವ ಕುಂದು ಕೊರತೆಗಳನ್ನು ಹೋಗಲಾಡಿಸಲಿಕ್ಕಾಗಿ ನಿಷ್ಕಳಂಕವಾಗಿ ಹಾಗೂ ಸಹಾನುಭೂತಿಯಿಂದ ಪ್ರಯತ್ನಿಸುತ್ತಿರಬೇಕು.

3. ನಮ್ಮ ಸಂದೇಶವನ್ನು ವಿವಿಧ ವಲಯಗಳಲ್ಲಿ ಪ್ರಚಾರ ಪಡಿಸುವ ವಿಧಾನಗಳ ಬಗ್ಗೆ ಸಮಾಲೋಚನೆ ನಡೆಸಬೇಕು.

4. ಪ್ರತಿಯೊಬ್ಬರೂ ಕಳೆದ ವಾರದ ಚಟುವಟಿಕೆಗಳ ಬಗ್ಗೆ ತಿಳಿಸಿ ಅವುಗಳಲ್ಲಿ ಸೂಕ್ತವಾದುದನ್ನು ಇತರ ಸದಸ್ಯರು ಅನುಕರಿಸಬೇಕು. ಹಾಗೆಯೇ ಚಟುವಟಿಕೆಗಳಲ್ಲಿರುವ ಲೋಪ ದೋಷಗಳನ್ನು ಸಹೋದರ ಭಾವದಿಂದ ಎತ್ತಿ ತೋರಿಸಬೇಕು. ಪ್ರಚಾರ ಮಾರ್ಗದಲ್ಲಿರುವ ಅಡಚಣೆಗಳಿಗೆ ಪರಿಹಾರ ಕಂಡು ಹಿಡಿಯಲು ಪ್ರಯತ್ನಿಸಬೇಕು.

5. ಧರ್ಮ ಪ್ರಚಾರದ ಹಾದಿಯಲ್ಲಿರುವ ವಿರೋಧಗಳನ್ನು ತಿಳಿದು ಅವುಗಳ ನಿವಾರಣೋಪಾಯಗಳ ಕುರಿತು ಆಲೋಚಿಸಬೇಕು.

6. ಸ್ಥಾನೀಯ ಶಾಖೆಯಲ್ಲಿ ಕುರ್‌ಆನ್ ದರ್ಸ್ ನಡೆಸುವ ಸಾಮರ್ಥ್ಯವಿರುವವರಿದ್ದರೆ

ಸಾಪ್ತಾಹಿಕ ಸಭೆಗಳಲ್ಲಿ ಕುರ್‌ಆನ್ ದರ್ಸ್ ನಡೆಸಬೇಕು. ಅನ್ಯಥಾ ತಫ್ಹೀಮುಲ್ ಕುರ್‌ಆನಿನ ನೆರವಿನಿಂದ ಪವಿತ್ರ ಕುರ್‌ಆನಿನಲ್ಲಿ ಅಧ್ಯಯನ ನಡೆಸಲು ಪ್ರಯತ್ನಿಸಬೇಕು.

ಈ ಸಾಪ್ತಾಹಿಕ ಸಭೆಗಳು ಅಷ್ಟು ಪ್ರಾಮುಖ್ಯವಲ್ಲವೆಂದು ನೀವು ತಪ್ಪು ತಿಳಿಯಬೇಡಿರಿ. ಇದು ವಾಸ್ತವದಲ್ಲಿ ಸಂಘಟನೆಯೊಂದಿಗೆ ಕಾರ್ಯಕರ್ತರ ಸಂಬಂಧವನ್ನು ದೃಢಗೊಳಿಸಲಿಕ್ಕೂ ಅವರಲ್ಲಿ ಸಂಘಟನೆಯ ಬಗ್ಗೆ ಆಸಕ್ತಿ ಮೂಡಿಸಲಿಕ್ಕೂ ಪರಸ್ಪರ ಸಹಕಾರಕ್ಕೂ ಸೂಕ್ತ ಉಪಾಧಿಯಾಗಿದೆ. ಈ ಬಗ್ಗೆ ಅಲಕ್ಷ್ಯ ತೋರಿದರೆ ಜಮಾಅತ್ ದುರ್ಬಲವಾಗುವುದು ಖಚಿತ. ತರುವಾಯ ನಮ್ಮ ಪೈಕಿ ಸಂಘಟನೆಯ ಬಗ್ಗೆ ಯಾರಿಗೆ ಆಸಕ್ತಿಯಿದೆ. ಯಾರಿಗೆ ಇಲ್ಲವೆಂಬುದನ್ನು ತಿಳಿಯುವ ಯಾವ ಮಾಪಕವೂ ಇರಲಾರದು. ಕಾರ್ಯಕರ್ತರು ಪರಸ್ಪರ ವಿಮುಖರಾಗುವರು. ಅವರ ಸ್ನೇಹ ಸೌಹಾರ್ದ ಸುದೃಢವಾಗದು. ಸಾಮೂಹಿಕ ಚಟುವಟಿಕೆಗಳಲ್ಲಿ ಒಗ್ಗಟ್ಟಿನಿಂದ ಸೇವೆ ಸಲ್ಲಿಸಲು ಅವರಿಗೆ ಸಾಧ್ಯವಾಗದು. ಹಾಗೆಯೇ ಪರಸ್ಪರ ಕುಂದು ಕೊರತೆಗಳನ್ನು ಉತ್ತಮ ರೀತಿಯಲ್ಲಿ ನಿವಾರಿಸಿಕೊಳ್ಳಲೂ ಅವರಿಗೆ ಸಾಧ್ಯವಾಗದು."

ಕೊನೆಯಲ್ಲಿ ಅಧ್ಯಕ್ಷರು ಈ ರೀತಿ ಉಪದೇಶಿಸಿದರು- ನೀವು ಪ್ರತಿಯೊಬ್ಬರೂ ಮಾಡಿರುವ ಪ್ರತಿಜ್ಞೆಯ ಹೊಣೆಗಾರಿಕೆಗಳನ್ನರಿತು ಅವುಗಳ ಈಡೇರಿಕೆಗಾಗಿ ಪ್ರಯತ್ನಿಸುತ್ತಿರಬೇಕು. ಪ್ರತಿಯೊಬ್ಬರೂ ತಂತಮ್ಮ ಸಾಮರ್ಥ್ಯ ಮತ್ತು ಅರ್ಹತೆಗಳನ್ನು ಅರಿತು, ತಮ್ಮಿಂದ ನಿರ್ವಹಿಸಬಹುದಾದ ಚಟುವಟಿಕೆಗಳನ್ನು ಸ್ವಯಂ ನಿರ್ಧರಿಸಬೇಕು. ತರುವಾಯ ನಿರ್ದಿಷ್ಟ ಕೆಲಸವನ್ನು ಯೋಗ್ಯತೆಗೆ ಅನುಸಾರ ನಿರ್ವಹಿಸುವುದರಲ್ಲಿ ತಲ್ಲೀನನಾಗಬೇಕು. ಈ ಸಂದರ್ಭದಲ್ಲಿ ನಮ್ಮ ಗರಿಷ್ಠ ಸಾಮರ್ಥ್ಯದ ಪ್ರಯತ್ನಗಳ ಅಗತ್ಯವಿದೆ. ಪ್ರತಿಯೊಬ್ಬರೂ ಒಂದು ಕ್ಷಣವನ್ನೂ ವ್ಯರ್ಥಗೊಳಿಸದೆ ತಮ್ಮಿಂದ ಸಾಧ್ಯವಿರುವ ಎಲ್ಲಾ ಸೇವೆಗಳನ್ನೂ ನಿರ್ವಹಿಸಬೇಕಾಗಿದೆ. ವಿದ್ವಾಂಸರು ಪ್ರಚಲಿತ ವಿಚಾರಧಾರೆಗಳನ್ನು ದುರ್ಬಲಗೊಳಿಸುವ ಹಾಗೂ ಇಸ್ಲಾಮೀ ವಿಚಾರಧಾರೆಯನ್ನು ಪ್ರಚಾರ ಮಾಡುವ ಕಾರ್ಯದಲ್ಲಿ ನಿರತರಾಗಬೇಕು. ಕಲಿಸುವ ಯೋಗ್ಯತೆಯುಳ್ಳವರು ಹೊಸ ಪೀಳಿಗೆಯನ್ನು ಸಿದ್ಧಗೊಳಿಸಲಿಕ್ಕಾಗಿ ಪ್ರಯತ್ನಿಸಬೇಕು. ಸಾಹಿತಿಗಳು ಸಾಹಿತ್ಯದ ವಿವಿಧ ಪ್ರಕಾರಗಳಿಂದ ನೀಚ ಪದ್ಧತಿಗಳ ವಿರುದ್ಧ ಆಕ್ರಮಣ ನಡೆಸಿ ಇಸ್ಲಾಮೀ ಪದ್ಧತಿಯ ಸಂದೇಶವನ್ನು ಪ್ರಚಾರ ಮಾಡಬೇಕು. ಲೇಖಕರು ಪತ್ರಿಕೆಗಳಲ್ಲಿ ಅಭಿಪ್ರಾಯ ಪ್ರಕಟಣೆಗಳನ್ನು ನೀಡಲಾರಂಭಿಸಬೇಕು. ಸಂಭಾಷಣೆಯಲ್ಲಿ ಆಕರ್ಷಣೆಯಿರುವವರು ವೈಯಕ್ತಿಕ ಪ್ರಚಾರ ಆರಂಭಿಸಬೇಕು. ಹಳ್ಳಿಗಳಲ್ಲಿ ಸೇವೆ ಸಲ್ಲಿಸುವ ಹಾಗೂ ಜನಸಾಮಾನ್ಯರೊಂದಿಗೆ ವ್ಯವಹರಿಸುವ ಸಾಮರ್ಥ್ಯವಿರುವವರು ಹಳ್ಳಿಗಳಲ್ಲಿ ಸಂಚರಿಸಿ ಜನಸಾಮಾನ್ಯರ ಉದ್ಧಾರಕ್ಕೆ ಪ್ರಯತ್ನಿಸಬೇಕು. ಸ್ಥಿತಿವಂತರು ಬೈತುಲ್‌ಮಾಲನ್ನು ಬಲಪಡಿಸಬೇಕು. ಒಟ್ಟಿನಲ್ಲಿ ಪ್ರತಿಯೊಬ್ಬರೂ ತಂತಮ್ಮ ಸಾಮರ್ಥ್ಯಗಳ ಒಂದಂಶವೂ ವ್ಯರ್ಥವಾಗದಂತೆ ಜಾಗ್ರತೆ ವಹಿಸಬೇಕು. ನೀವೆಷ್ಟು ಕೆಲಸ ಮಾಡಬೇಕು? ಯಾವ ಕೆಲಸ ಮಾಡಬೇಕು ಎಂಬ ಬಗ್ಗೆ ಹೇಳುವುದಿದ್ದರೆ ನಿಮ್ಮ ಮನಸ್ಸಾಕ್ಷಿಯೇ ಆ ಬಗ್ಗೆ ನಿರ್ಧಾರ ಕೈಗೊಳ್ಳಬೇಕಾಗಿದೆ. ಅಲ್ಲಾಹನು ನಿಮ್ಮ ಸಮಯ ಮತ್ತು ಸಾಮರ್ಥ್ಯಗಳ ವಿಚಾರಣೆ ನಡೆಸುವಾಗ ಇಸ್ಲಾಮಿಗಾಗಿ ನೀವು ಸಲ್ಲಿಸಿರುವ ಸೇವೆಯನ್ನು ಅಲ್ಲಾಹನ ಮುಂದಿರಿಸಿ ಆತನ ಕೃಪೆಗೆ ಪಾತ್ರರಾಗಬಹುದೆಂದು ನಿಮ್ಮ ಮನಸ್ಸಿಗೆ ಸಂತೃಪ್ತಿಯಾಗುವ ತನಕ ನೀವು ಕಾರ್ಯನಿರತರಾಗಿರಿ."

ತರುವಾಯ ಕೆಲವು ಗೊತ್ತುವಳಿಗಳ ಬಗ್ಗೆ ಚರ್ಚೆ ನಡೆದು ಸಮ್ಮೇಳನ ಸಮಾರೋಪ ಗೊಂಡಿತು. ಸಮ್ಮೇಳನದಲ್ಲಿ ಚರ್ಚಿಸಲ್ಪಟ್ಟ ಒಂದು ಗೊತ್ತುವಳಿಯನ್ನು ಇಲ್ಲಿ ಸಂಕ್ಷಿಪ್ತವಾಗಿ ಪ್ರಸ್ತಾಪಿಸುವುದು ಸೂಕ್ತವೆನಿಸುತ್ತದೆ. ಅದು ಹೀಗಿದೆ: 'ನ್ಯಾಯ ಬಾಹಿರವಾದ ಸಂಪಾದನೆಯನ್ನು ತೊರೆದ ಕಾರಣ ಕೆಲವು ಸದಸ್ಯರು ಅನುಭವಿಸುತ್ತಿರುವ ಆರ್ಥಿಕ ತೊಂದರೆಗಳ ನಿವಾರಣೆಗಾಗಿ ಎಲ್ಲಾ ಕಡೆಗಳಲ್ಲಿಯೂ ಶ್ರೀಮಂತರು ಮತ್ತು ಉದ್ಯೋಗಿಗಳು ಹಣ ಸಂಗ್ರಹಿಸಿ, ಅದರ ಒಂದು ನಿರ್ದಿಷ್ಟ ಮೊತ್ತವನ್ನು ಬಂಡವಾಳ ಹೂಡಿ, ದುಡಿಯುವವರಿಗೆ ಮತ್ತು ಜಮಾಅತ್‌ಗೆ ಪಾಲು ದೊರೆಯುವಂತಹ ಯೋಜನೆಗಳನ್ನು ಆರಂಭಿಸಬೇಕು.

ಈ ಗೊತ್ತುವಳಿಯ ಬಗ್ಗೆ ಸ್ವಲ್ಪ ಸಮಯ ಚರ್ಚೆ ನಡೆಯಿತು. ತರುವಾಯ ಮೌಲಾನಾ ಅಮೀನ್ ಅಹ್ಸನ್ ಇಸ್ಲಾಹಿಯವರು ಈ ಕುರಿತು ಅಭಿಪ್ರಾಯ ವ್ಯಕ್ತಪಡಿಸುತ್ತಾ ಹೀಗೆಂದರು: ಜಮಾಅತ್ ಸದಸ್ಯರು ಸ್ವಯಂ ಆರ್ಥಿಕ ವಿಷಯದಲ್ಲಿ ಪರಸ್ಪರ ಸಹಕಾರ ನೀಡುವುದು ಉತ್ತಮ ಮತ್ತು ಅತ್ಯಗತ್ಯವಾಗಿದೆ. ಅದಲ್ಲವೇ ಆರ್ಥಿಕ ಮುಗ್ಗಟ್ಟಿಗೆ ಸಿಲುಕಿರುವ ಬಾಂಧವರಿಗೆ ತಮ್ಮಿಂದಾದ ನೆರವು ನೀಡಬೇಕಾದುದು ಇತರೆಲ್ಲರ ಕರ್ತವ್ಯವಾಗಿದೆ. ಆದರೆ ಜಮಾಅತ್ ಸಾಮಾಜಿಕ ನೆಲೆಯಲ್ಲಿ ಅಲ್ಲಾಹನ ವಚನವನ್ನು ಎತ್ತಿ ಹಿಡಿಯುವ ಸಂದೇಶ ಪ್ರಚಾರ ಮತ್ತು ಪರಿಶ್ರಮಗಳಲ್ಲದೆ ಬೇರೆ ಯಾವ ವ್ಯಾಪಾರ ಕಾರ್ಯಕ್ರಮಗಳನ್ನು ನಡೆಸಬಾರದು. ಕ್ರಾಂತಿಕಾರೀ ಪಕ್ಷವು ಎಂದಿಗೂ ಒಂದು ವ್ಯಾಪಾರಿ ಸಂಸ್ಥೆಯಾಗಬಾರದು. ಯಾಕೆಂದರೆ ಅದರಿಂದಾಗಿ ಅದರ ಪ್ರಯತ್ನಗಳು ಪ್ರಥಮವಾಗಿ ಹರಿ ಹಂಚಾಗುವುದು. ಎರಡನೆಯದಾಗಿ ಕೆಲ ಜನರು ನಿರ್ವಿಕಾರ ಚಿತ್ತರಾಗಿ ಕೇವಲ ಆರ್ಥಿಕ ಹಿತಾಸಕ್ತಿಗಳಿಗಾಗಿ ಅದರಲ್ಲಿ ನುಸುಳಿಕೊಳ್ಳುವರು. ಅದರಿಂದ ನಮ್ಮ ನೈಜ ಉದ್ದೇಶಕ್ಕೆ ಧಕ್ಕೆಯುಂಟಾಗುವುದು, ಈ ಅಭಿಪ್ರಾಯವನ್ನು ಅಮೀರ್ ಒಪ್ಪಿದರು. ತರುವಾಯ ಯಾವುದೇ ಮತದಾನವಿಲ್ಲದೇ ಗೊತ್ತುವಳಿಯನ್ನು ಮಂಡಿಸಿದ ವ್ಯಕ್ತಿಯೇ ಸಂತೋಷದಿಂದ ಅದನ್ನು ಹಿಂತೆಗೆದುಕೊಂಡರು. ಹೊರಗಿನವರ ಸಂದರ್ಶನಕ್ಕೆ ಮೂರನೇ ದಿನವನ್ನು ನಿಗದಿಗೊಳಿಸಲಾಗಿತ್ತು. ಆದರೆ ಎರಡನೇ ದಿನ ಸಂಜೆಯೇ ವಿವಿಧ ಸಂಘಟನೆಗಳಿಗೆ ಸೇರಿದ ಜನರು ಜಮಾಅತ್ ಅಮೀರ್‌ರವರ ಭೇಟಿಗೆ ಬರಲಾರಂಭಿಸಿದರು. ಆ ಪೈಕಿ ಮುಸ್ಲಿಮ್ ಲೀಗ್, ಇಮಾರತೆ ಶರ್‌ಇಯ್ಯ ಮತ್ತು ಜಮ್‌ಯಿಯ್ಯತುಲ್ ಉಲೆಮಾ ಮುಂತಾದ ಅನೇಕ ಸಂಘಟನೆಗಳ ಪ್ರತಿನಿಧಿಗಳೂ ಇದ್ದರು. ಅವರೊಂದಿಗೆ ಅಮೀರ್ ಮತ್ತು ಇತರ ನಾಯಕರು ಹಲವು ಗಂಟೆಗಳ ಕಾಲ ವಿಚಾರ ವಿನಿಮಯ ನಡೆಸಿದರು. ಜಮಾಅತೆ ಇಸ್ಲಾಮಿಯ ಕುರಿತು ವಿವರವಾಗಿ ತಿಳಿಯಪಡಿಸಿ ಜಮಾಅತ್‌ನ ಬಗ್ಗೆ ಪ್ರಚಾರವಾಗಿರುವ ತಪ್ಪು ತಿಳುವಳಿಕೆಗಳನ್ನು ದೂರೀಕರಿಸಲು ಪ್ರಯತ್ನಿಸಲಾಯಿತು. ಚರ್ಚೆಯ ಒಂದೆರಡು ವಿಷಯಗಳನ್ನು ಇಲ್ಲಿ ಉಲ್ಲೇಖಿಸಿದರೆ ಅಪ್ರಸ್ತುತವೆನಿಸದು- ಜಮಾಅತೆ ಇಸ್ಲಾಮಿಯವರು ಇತರ ಮುಸ್ಲಿಮರನ್ನು ಕಾಫಿರರೆನ್ನುತ್ತಾರೆಂಬ ತಪ್ಪು ಭಾವನೆಯು ಮುಸ್ಲಿಮರಲ್ಲಿ ಪ್ರಚಾರಗೊಂಡಿತ್ತು. ಅದರ ಪ್ರತಿಧ್ವನಿ ದರ್ಭಂಗಕ್ಕೂ ತಲಪಿತ್ತು. ವಾಸ್ತವದಲ್ಲಿ ನಾವು ಇತರ ಮುಸ್ಲಿಮರೊಂದಿಗೆ ಸಾಮೂಹಿಕ ನಮಾಝ್ ನಿರ್ವಹಿಸಿರುವುದೇ ಆ ತಪ್ಪು ತಿಳುವಳಿಕೆಯ ನಿವಾರಣೆಗೆ ಸಾಕಾಗಿತ್ತು. ಆದರೆ ಅವರ ಬಗ್ಗೆ ಆ ಬಳಿಕವೂ ಕೆಲಮಂದಿ ಜಮಾಅತ್ ಅಮೀರೊಂದಿಗೆ ಪ್ರಶ್ನಿಸಿದ್ದರು. ಅದಕ್ಕೆ ಉತ್ತರವಾಗಿ ಅಮೀರ್‌ರು, ಅದು ಕೇವಲ ಕಪೋಲಕಲ್ಪಿತವೆಂದೂ ಮತ್ತು ಈ

ಇಸ್ಲಾಮಿ ಪ್ರಚಾರದ ಹಾದಿಯಲ್ಲಿ ತಡೆಯೊಡ್ಡ ಬಯಸುವ ಕೆಲ ಜನರು ಮನಃಪೂರ್ವಕವಾಗಿ ಕುಪ್ರಚಾರ ನಡೆಸುತ್ತಿರುವರೆಂದೂ ಹೇಳಿದರು. ಜಮಾಅತೆ ಇಸ್ಲಾಮಿಯು ಇತರ ಮುಸ್ಲಿಮ್ ಸಂಘಟನೆಗಳೊಂದಿಗೆ ಒಂದು ಸಂಘರ್ಷಕ್ಕೆ ಸಿದ್ಧವಾಗಿದೆಯೆಂದು ಕೆಲವು ಸಂಘಟನೆಗಳು ಪ್ರಚಾರ ಮಾಡಿದ್ದುವು. ಆ ಬಗ್ಗೆ ಜಮಾಅತ್ ಅಮೀರರು ಸ್ಪಷ್ಟವಾಗಿ ಹೀಗೆಂದರು: ನಾವು ಯಾವ ಸಂಘಟನೆಯೊಂದಿಗೂ ನೇರ ಸಂಘರ್ಷಕ್ಕಿಳಿದಿಲ್ಲ. ವಿವಿಧ ಸಂಘಟನೆಗಳ ಕಾರ್ಯಕ್ರಮಗಳ ಕುರಿತು ನಮ್ಮ ಬಿನ್ನಾಭಿಪ್ರಾಯಗಳನ್ನು ನಮ್ಮ ಸಾಹಿತ್ಯಗಳಲ್ಲಿ ವಿವರಿಸುತ್ತೇವೆ. ಜಮಾಅತೆ ಇಸ್ಲಾಮಿಯು ಇಸ್ಲಾಮೇತರ ಜೀವನ ಪದ್ಧತಿಯೊಂದಿಗೆ ಸಂಘರ್ಷಿಸುತ್ತದೆಯೇ ವಿನಾ ಸೀಮಿತ ಧ್ಯೇಯಗಳೊಂದಿಗೆ ಕಾರ್ಯೋನ್ಮುಖವಾಗಿರುವ ಸಂಘಟನೆಗಳೊಂದಿಗೆ ಸಂಘರ್ಷಿಸುವುದಿಲ್ಲ.

ಈ ಇಸ್ಲಾಮಿ ಆಂದೋಲನವು ಹೇಗೆ ಆರಂಭವಾಯಿತೆಂಬುದನ್ನು ಕೆಲವರು ತಿಳಿಯ ಬಯಸಿದ್ದರು. ಅದಕ್ಕೆ ಜಮಾಅತ್ ಅಮೀರರು ಹೀಗೆಂದರು: ಆರಂಭವು ಯಾವಾಗಲೂ ವಿಚಾರ ಪರಿವರ್ತನೆ, ಮನೋಭಾವದ ನವೀಕರಣದಿಂದುಂಟಾಗಬಹುದು. ಅನಂತರ ತಾತ್ವಿಕವಾಗಿರುವ ಒಂದು ಸಂಘಟನೆಗೆ ತನ್ನ ಧ್ಯೇಯ ಸಾಧನೆ ಮತ್ತು ಪ್ರಗತಿಯಲ್ಲಿ ಇತರ ಸಾಮಾಜಿಕ ಸಂಘಟನೆಗಳು ಎದುರಿಸುವ ಕ್ಲಿಷ್ಟತೆಗಳನ್ನು ಎದುರಿಸಬೇಕಾಗುವುದಿಲ್ಲ. ಒಂದು ಸಮುದಾಯದ ಮಟ್ಟಿಗೆ ಇತರ ಸಮುದಾಯಗಳನ್ನು ಎದುರಿಸಲಿಕ್ಕಾಗಿ ತರಬೇತಿಯಾದ ಜನರನ್ನೂ ಸಂಪನ್ಮೂಲವನ್ನೂ ಗಳಿಸುವುದು ಮಹಾ ಸಮಸ್ಯೆಯೆಂಬುದು ಖಚಿತ. ಆದರೆ ಒಂದು ತಾತ್ವಿಕ ಪಕ್ಷದ ಮಟ್ಟಿಗೆ ಅದು ಗೌಣ. ಪ್ರಸ್ತುತ ಪಕ್ಷದ ಪ್ರಚಾರದಿಂದ ಎದ್ದೇಳುವ ಜನರು ಅದರ ತತ್ವಾದರ್ಶ ಮತ್ತು ಅದರ ಕರ್ಮ ಪದ್ಧತಿಗಳಲ್ಲಿ ನಿಸ್ವಾರ್ಥವಾಗಿ ನಂಬಿಕೆಯುಳ್ಳವರೇ? ಅಥವಾ ಅವರ ಮೂಲಕ ವಿರೋಧಿಗಳ ಹೃದಯ, ಮಸ್ತಿಷ್ಕಗಳನ್ನು ಜಯಿಸಲು ಸಾಧ್ಯವೇ? ಎಂಬುದೇ ಮುಖ್ಯ. ಈ ರೀತಿ, ಪ್ರಚಾರವು ರೂಢಿಯಲ್ಲಿರುವ ಅಕ್ರಮಗಳೊಂದಿಗೆ ಹೋರಾಟ ನಡೆಸುವ ಹಂತವನ್ನು ತಲಪಿದಾಗ ಅದಕ್ಕಾಗಿ, ಸಕಲ ಸಾಧನ ಸವಲತ್ತುಗಳೂ ವ್ಯಕ್ತಿಗಳೂ ಚಾರಿಯಲ್ಲಿರುವ ಪದ್ಧತಿಯಿಂದಲೇ ದೊರಕುವರು. ಅದಕ್ಕಾಗಿ ಮಾನವನನ್ನು ಸಿದ್ಧ ಪಡಿಸಬೇಕಾಗುವುದಿಲ್ಲ. ಸಿದ್ಧರಾದ ಜನರನ್ನು ಆಕರ್ಷಿಸಿದರೆ ಸಾಕಾಗುವುದು.

## ದಾರುಲ್ ಇಸ್ಲಾಮ್ ಸಮ್ಮೇಳನ

1944ರ ಮಾರ್ಚ್ 26 ಮತ್ತು 27 ರಂದು 'ದಾರುಲ್ ಇಸ್ಲಾಮ್'ನಲ್ಲಿ ಪಂಜಾಬ್, ಸಿಂಧ್ ಗಡಿನಾಡು, ಕಾಶ್ಮೀರ ಮತ್ತು ಬಲೂಚಿಸ್ತಾನ್ ಎಂಬೀ ರಾಜ್ಯಗಳ ಜಮಾಅತ್ ಸದಸ್ಯರ ಒಂದು ಸಮ್ಮೇಳನ ಜರಗಿತು. ಜತೆಗೆ ಅನೇಕ ಹಿತೈಷಿಗಳೂ ಭಾಗವಹಿಸಿದ್ದರು. ತಾ- 26 ರಂದು ವಿವಿಧ ಪ್ರದೇಶಗಳಿಂದ ಬಂದ ಪ್ರತಿನಿಧಿ ತಂಡಗಳು ಅಮೀರ್‌ರನ್ನು ಭೇಟಿಯಾಗಿ ತಮ್ಮ ಪ್ರದೇಶಗಳ ಸ್ಥಿತಿಗತಿ, ಚಟುವಟಿಕೆಗಳು ಮತ್ತು ಅಡೆತಡೆಗಳ ಬಗ್ಗೆ ಅವರಿಗೆ ತಿಳಿಸಿ ಸೂಕ್ತ ಸಲಹೆಗಳನ್ನು ಪಡೆದರು. ಅದೇ ಸಂದರ್ಭದಲ್ಲಿ ಕೆಲವರು ಜಮಾಅತ್ ಸದಸ್ಯರಾಗುವ ಬಯಕೆಯನ್ನು ಮುಂದಿಟ್ಟರು. ಆ ಬಗ್ಗೆ ಜಮಾಅತ್ ಅಮೀರರು ನೀಡಿದ ಕೆಲವು ಪ್ರಮುಖ ಆದೇಶಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ:

"ನಮ್ಮ ಈ ಜಮಾಅತ್‌ನಲ್ಲಿ ಸೇರಲಿಕ್ಕೇನೂ ದೊಡ್ಡ ಕಷ್ಟವಿಲ್ಲ. ಆದರೆ ಜಮಾಅತ್‌ನಲ್ಲಿ ಸೇರುವುದರಿಂದ ತಾವು ವಹಿಸಿಕೊಳ್ಳಬೇಕಾದ ಕರ್ತವ್ಯಗಳ ಭಾರವನ್ನು ಮುಂಚಿತವಾಗಿ ತಿಳಿದಿರಬೇಕಾಗಿದೆ. ಜಮಾಅತ್ ಸದಸ್ಯನಾಗುವುದರ ಜವಾಬ್ದಾರಿಕೆಯನ್ನು ಚೆನ್ನಾಗಿ ತಿಳಿಯದೆ ಇದರಲ್ಲಿ ಸೇರುವವರು ಧ್ಯೇಯದಲ್ಲಿ ಸಹಮತವಿದ್ದರೂ ಹೆಚ್ಚು ಕಾಲ ನಮ್ಮೊಂದಿಗೆ ಮುಂದುವರಿಯಲು ಅವರಿಗೆ ಸಾಧ್ಯವಾಗುವುದಿಲ್ಲ. ಯಾಕೆಂದರೆ ಅವರು ಕಾರ್ಯ ವಿಧಾನದ ಭಿನ್ನತೆಯ ಕುರಿತು ಹೆಚ್ಚು ಆಲೋಚಿಸಿರಲಾರರು. ಆದರೆ ದಿನ ಹೋದಂತೆ ಅವರ ಭಿನ್ನತೆಯು ತೀವ್ರವಾಗುತ್ತಾ ತಾವಿಚ್ಛಿಸುವ ಕಾರ್ಯವಿಧಾನದ ವ್ಯಾಮೋಹದಿಂದ ಜಮಾಅತ್‌ನ ಶಿಸ್ತು ಮತ್ತು ವ್ಯವಸ್ಥೆಗೆ ವಿರುದ್ಧವಾಗಿ ವರ್ತಿಸಿ ಕೆಲವೊಮ್ಮೆ ಧ್ಯೇಯದ ಬಗ್ಗೆಯೇ ಅಸಡ್ಡೆ ತೋರುತ್ತಾರೆ. ಆದರೆ ನೀವು ಜಮಾಅತ್‌ನ ಕಾರ್ಯ ವಿಧಾನವನ್ನೂ ಅದಕ್ಕೂ ಇತರ ವಿಧಾನಗಳಿಗೂ ಇರುವ ವ್ಯತ್ಯಾಸವನ್ನೂ ಚೆನ್ನಾಗಿ ತಿಳಿದು ಮನಃಪೂರ್ವಕವಾಗಿ ಸಂತೃಪ್ತಿಯಿಂದ ಜಮಾಅತ್‌ನ ಹಾದಿಯಲ್ಲಿ ಸೇರುವುದಿದ್ದರೆ ಖಂಡಿತವಾಗಿ ಬನ್ನಿ! ನಿಮ್ಮನ್ನು ಸ್ವಾಗತಿಸಲು ನಾವು ಸಂತೋಷ ಪಡುತ್ತೇವೆ. ಹಾಗಲ್ಲದಿದ್ದರೆ ನೀವು ಅವಸರ ಪಡಬೇಕಾಗಿಲ್ಲ. ಜಮಾಅತ್‌ನ ಸಾಹಿತ್ಯಗಳನ್ನು ಶ್ರದ್ಧೆಯಿಂದ ಓದಿ, ನಮ್ಮ ಚಟುವಟಿಕೆಗಳನ್ನು ಇನ್ನೂ ಸ್ವಲ್ಪ ಕಾಲ ನೋಡಿದ ಬಳಿಕ ಅಂತಿಮ ತೀರ್ಮಾನ ಕೈಗೊಳ್ಳಿರಿ. ಅಲ್ಲಾಹನ ಅನುಗ್ರಹದಿಂದ ಮುಸ್ಲಿಮರಲ್ಲಿ ಇಂದಿಗೂ ಉತ್ತಮ ವಿಶ್ವಾಸವಿರುವ ಅನೇಕ ಮಂದಿಯಿದ್ದಾರೆ. ಅವರ ಬಳಿ ಸತ್ಯವೂ ಇದೆ. ಆದರೆ ಅವರಲ್ಲಿರುವ ಮುಖ್ಯ ಭಿನ್ನತೆಯೇನೆಂದರೆ ಅವರ ಪ್ರತಿಯೊಂದು ವಿಭಾಗವೂ ಸತ್ಯದ ಯಾವುದಾದರೊಂದು ಅಂಶವನ್ನು ಮಾತ್ರ ಕೈಗೆತ್ತಿಕೊಂಡು ಮುನ್ನಡೆಯುತ್ತದೆ. ಆದರೆ ನಾವು ಸಂಪೂರ್ಣ ಸತ್ಯವನ್ನು ಎತ್ತಿ ಹಿಡಿದು ಮುನ್ನಡೆಯ ಬಯಸುತ್ತೇವೆ. ನಿಮ್ಮಲ್ಲಿರುವ ಪ್ರತಿಯೊಂದು ಸತ್ಯಾಂಶವು ಹಿಂದಿನಂತೆಯೇ ನಿಮ್ಮಲ್ಲಿರುವುದು. ಆದರೆ ಅಷ್ಟರಿಂದಲೇ ಸಾಕು ಮಾಡಬೇಡಿ. ಇನ್ನು ನೀವು ಸತ್ಯದ ಇತರ ಅಂಶಗಳನ್ನೂ ಅದರೊಂದಿಗೆ ಸೇರಿಸಿಕೊಳ್ಳಬೇಕಾಗುವುದು."

ತರುವಾಯ ಧರ್ಮ ಪ್ರಚಾರದ ವಿಧಾನದ ಬಗ್ಗೆ ಚರ್ಚೆ ನಡೆದಾಗ ಅಮೀರರು, ತನ್ನ ಅಭಿಪ್ರಾಯ ವ್ಯಕ್ತಪಡಿಸುತ್ತಾ ಹೀಗೆಂದರು:

"ಸಂದೇಶ ಪ್ರಚಾರದ ಮಟ್ಟಿಗೆ ಸಾಮಾನ್ಯವಾಗಿ ಮುಸ್ಲಿಮ್ ಸಂಘಟನೆಗಳು ಬಲ ಪ್ರಯೋಗ ನಡೆಸುತ್ತವೆ. ಅವರು ಉದ್ವೇಗದಿಂದ ಒತ್ತಡ ಹೇರಿ ವಾದ ಪ್ರತಿವಾದಗಳ ಮೂಲಕ ವಿರೋಧಿಗಳ ಬಾಯಿ ಮುಚ್ಚಿಸಲು ಪ್ರಯತ್ನಿಸುತ್ತಾರೆ. ವಾಕ್ಚಾತುರ್ಯದಿಂದ ಜನರನ್ನು ಆಕರ್ಷಿಸುತ್ತಾರೆ. ಆದರೆ ನಮ್ಮ ಪ್ರಚಾರಕ್ಕೆ ಈ ಕಾರ್ಯ ವಿಧಾನವು ಸೂಕ್ತವಲ್ಲ. ಈ ನಿಟ್ಟಿನಲ್ಲಿ ತೀವ್ರ ಸಹನೆ ಮತ್ತು ತಾಳ್ಮೆ ವಹಿಸುವುದು ಅತ್ಯಗತ್ಯ. ಇಂದು ಸಾಮಾನ್ಯವಾಗಿ ಚಾರಿಯಲ್ಲಿರುವ ಬರಹ ಮತ್ತು ಮಾತುಗಳ ಮೂಲಕ ವಾಗ್ವಾದ ಮತ್ತು ತರ್ಕಗಳಲ್ಲಿ ಪ್ರಚಾರಕನು ತನಗರಿವಿಲ್ಲದೆಯೇ ಸ್ವಾರ್ಥಕ್ಕಾಗಿ ಅನ್ಯರೊಡನೆ ಕೋಪಿಸುವ ದುರ್ಗುಣಕ್ಕೆ ಸಿಲುಕುತ್ತಾನೆ. ತನ್ಮೂಲಕ ತನ್ನ ಅತೀ ನೆಚ್ಚಿನ ಧ್ಯೇಯದ ಮೂಲಕ್ಕೇ ಕೊಡಲಿಯಿಡುತ್ತಿರುವನೆಂಬ ಪ್ರಜ್ಞೆ ಅವನಲ್ಲಿರುವುದಿಲ್ಲ. ಆದರೆ ನಾವು ಸಹಾನುಭೂತಿಯಿರುವ ಓರ್ವ ಡಾಕ್ಟರನಂತೆ ವರ್ತಿಸಬೇಕು. ಆತ ರೋಗ ಪೀಡಿತ ಅಂಗದ ರೋಗವನ್ನು ಶಮನಗೊಳಿಸಲು ಕೊನೆಯ ವರೆಗೆ ಪ್ರಯತ್ನಿಸುತ್ತಾನೆ. ಇತರೆಲ್ಲಾ ವಿಧಾನಗಳನ್ನು ಬಳಸಿ ನಿರಾಶೆಗೊಂಡ ಬಳಿಕವೇ ಆ ಅವಯವವನ್ನು ಶರೀರದಿಂದ

ಬೇರ್ಪಡಿಸಲು ಆತ ಸಿದ್ಧನಾಗುತ್ತಾನೆ. ಆದರೆ ಇಂದು ನಮ್ಮ ಧರ್ಮ ಪ್ರಚಾರಕರೆಂಬ ಡಾಕ್ಟರ್‌ಗಳು ರೋಗ ಪೀಡಿತ ಅಂಗವನ್ನು ಆರಂಭದಿಂದಲೇ ಕಡಿದು ಹಾಕಲು ಪ್ರಯತ್ನಿಸುತ್ತಾರೆ.

ನೀವು ನಿಮ್ಮ ಪರಿಸರದಲ್ಲಿ ಜನಸಾಮಾನ್ಯರಲ್ಲಿ ವ್ಯಾಪಿಸಿರುವ ಕುಫ್ರ್, ಶಿರ್ಕ್ ಮುಂತಾದ ಭೀಕರ ರೋಗಗಳ ವಿರುದ್ಧ ಕೆರಳುವ ಬದಲಾಗಿ ಅನುಕಂಪ ಮತ್ತು ತಾಳ್ಮೆಯಿಂದ ಅದನ್ನು ಗುಣಪಡಿಸಬೇಕು. ಪ್ರಸ್ತುತ ರೋಗಪೀಡಿತ ಅಂಗವನ್ನು ಒಮ್ಮೆಲೇ ಶಸ್ತ್ರಚಿಕಿತ್ಸೆಗೆ ಒಳಪಡಿಸಬಾರದು. ಅದಕ್ಕಿಂತ ಮುಂಚಿತವಾಗಿ ಇತರೆಲ್ಲಾ ಮಾರ್ಗಗಳನ್ನು ಪ್ರಯೋಗಿಸಿ ನೋಡಬೇಕು.

ಜನ ಸಾಮಾನ್ಯರಲ್ಲಿ 'ಶಿರ್ಕ್'ಪರ ಆಚಾರ ವಿಚಾರಗಳು ಧರ್ಮದ ಪವಿತ್ರ ಬಾಗಿಲುಗಳ ಮೂಲಕವೇ ಪ್ರವೇಶಿಸಿವೆಯೆಂಬ ವಾಸ್ತವಿಕಾಂಶವನ್ನು ನಾವು ಸ್ಮರಿಸಿದರೆ ಅವರು ನಿರಪರಾಧಿಗಳೆಂಬುದು ನಮಗೆ ಸುಲಭದಲ್ಲಿ ವೇದ್ಯವಾಗುತ್ತದೆ. ಎಲ್ಲಾ ವಿಧದ ಶಿರ್ಕ್ ಮತ್ತು ಅನಾಚಾರಗಳು ಧಾರ್ಮಿಕ ವೇಷದಲ್ಲಿಯೇ ಅವರೊಳಗೆ ನುಸುಳಿಕೊಂಡಿರುವುದರಿಂದಲೇ ಅವರ ಸುಧಾರಣೆ ಬಹಳ ಕ್ಲಿಷ್ಟ ಸಮಸ್ಯೆಯಾಗಿದೆ. ಅತ್ಯಂತ ತಾಳ್ಮೆಯಿಂದ ಅದನ್ನು ಎದುರಿಸಬೇಕಾಗಿದೆ. ಹಿಂದೆ ಅರೇಬಿಯಾದ ಸ್ಥಿತಿಯೂ ಹೀಗೆಯೇ ಇತ್ತು. ಶಾಂತಿಯುತ ವಿಧಾನದಿಂದಲೇ ಅಲ್ಲಿ ಧರ್ಮ ಪ್ರಚಾರ ನಡೆಸಲಾಗುತ್ತಿತ್ತು."

ಅಂದಿನ ಕಾರ್ಯಕ್ರಮದಂತೆ ಪ್ರಥಮ ಸಮ್ಮೇಳನವು ಮಗ್ರಿಬ್ ನಮಾಝ್ ಬಳಿಕ ಆರಂಭಗೊಂಡಿತ್ತು. ಅದರ ಪ್ರಾಸ್ತಾವಿಕ ಭಾಷಣದಲ್ಲಿ ಅಮೀರರು ಜಮಾಅತ್‌ನ ಆ ತನಕದ ಚಟುವಟಿಕೆಗಳ ಹಾಗೂ ಅದಕ್ಕೆ ಸಂಬಂಧಿಸಿದ ಸಮಸ್ಯೆಗಳ ಕುರಿತು ಸವಿವರವಾಗಿ ವಿಮರ್ಶೆ ಮಾಡಿದರು. ವಿರೋಧಿಗಳನ್ನು ಭೀತಿಗೊಳಿಸುವುದು ಅಥವಾ ಕಾರ್ಯಕರ್ತರ ಭಾವನೆಗಳನ್ನು ಕೆರಳಿಸುವುದು ಅದರ ಉದ್ದೇಶವಾಗಿರಲಿಲ್ಲ. ಬದಲಾಗಿ ತಮ್ಮ ಸುಧಾರಣೆಯ ಕುರಿತು ಚಿಂತಿಸಲು ಅವರ ದೌರ್ಬಲ್ಯಗಳನ್ನು ಮನವರಿಕೆ ಮಾಡಿಕೊಡುವುದಾಗಿತ್ತು. ಭಾಷಣದ ಸಂಕ್ಷೇಪ ಹೀಗಿದೆ:

ನೀವು ಸ್ವಯಂ ಮನಗಂಡಿರುವಂತೆ ನಮ್ಮ ಸಮ್ಮೇಳನಗಳ ಸ್ವಭಾವವು ಇತರ ಸಾಮಾನ್ಯ ಸಮ್ಮೇಳನಗಳಿಗಿಂತ ಭಿನ್ನವಾಗಿದೆ. ಸಾಮಾನ್ಯ ಸಮ್ಮೇಳನಗಳಲ್ಲಿ ಗಂಭೀರ ಭಾಷಣ, ಮೆರವಣಿಗೆ ಮತ್ತು ಘೋಷಣೆಗಳಷ್ಟೇ ಇರುತ್ತದೆ. ಆದರೆ ಅಂತಹ ಯಾವ ಕಾರ್ಯಕ್ರಮಗಳೂ ಇಲ್ಲಿ ನಡೆದಿಲ್ಲ. ನಡೆಯಲಾರದು. ನಮ್ಮ ಸಮ್ಮೇಳನಗಳು ಗದ್ದಲಗಳ ಪ್ರದರ್ಶನವಲ್ಲ, ಜನ ಸಾಮಾನ್ಯರ ಗಮನವನ್ನು ನಮ್ಮೆಡೆಗೆ ಸೆಳೆಯುವುದೂ ಇದರ ಉದ್ದೇಶವಲ್ಲ. ಬದಲಾಗಿ ನಾವು ಪರಸ್ಪರ ಪರಿಚಯ ಪಟ್ಟುಕೊಳ್ಳುವುದು, ಪರಸ್ಪರರ ಹತ್ತಿರವಾಗುವುದು., ಪರಸ್ಪರ ಸಹಕಾರದ ಮಾರ್ಗಗಳನ್ನು ಕಂಡುಕೊಳ್ಳುವುದು, ಅಮೀರ್ ಮತ್ತು ನೀವು ಪರಸ್ಪರ ಪರಿಚಯ ಮಾಡಿಕೊಳ್ಳುವುದು ಇದರ ಉದ್ದೇಶ. ಅಮೀರರಿಗೆ ನಿಮ್ಮ ಪ್ರತಿಭೆ ಮತ್ತು ಸಾಮರ್ಥ್ಯಗಳ ಬಗ್ಗೆ ಸರಿಯಾದ ತಿಳುವಳಿಕೆ ದೊರೆಯುವಂತಾಗಬೇಕು. ತನ್ಮೂಲಕ ಅವನು ನಿಮ್ಮನ್ನು ಸುಸಂಘಟಿತರಾಗಿ ಕಾರ್ಯೋನ್ಮುಖಗೊಳಿಸಿ ತಮ್ಮ ಚಟುವಟಿಕೆಗಳ ಬಗ್ಗೆ ಅವಲೋಕನ ನಡೆಸುವಂತೆ, ತಮ್ಮ ಕುಂದು ಕೊರತೆಗಳನ್ನು ಗುರುತಿಸಿ ಅವುಗಳ ನಿವಾರಣೆಗಾಗಿ ಆಲೋಚಿಸುವಂತೆ, ವಿಚಾರ ವಿನಿಮಯ ನಡೆಸಿ, ಸಂಘಟನೆಯನ್ನು ಮುನ್ನಡೆಸುವ ಕಾರ್ಯ

ವಿಧಾನಗಳ ಬಗ್ಗೆ ನಿರ್ಧರಿಸುವಂತೆ ಮಾಡುವುದು. ನಮ್ಮೀ ಸಮ್ಮೇಳನಗಳು ಸಾಂಘಿಕ ಕಾರ್ಯಸ್ಫೂರ್ತಿಯನ್ನು ಒಳಗೊಂಡಿವೆ. ಸಾಮಾನ್ಯ ಸಮ್ಮೇಳನಗಳ ಸ್ವಭಾವ ನಿಮಗೆ ಇಲ್ಲಿ ಗೋಚರಿಸದು. ಹಾಗೆ ಗೋಚರವಾಗಬೇಕೆಂದೂ ನೀವು ಆಶಿಸುವಂತಿಲ್ಲ. ಸಮ್ಮೇಳನಗಳನ್ನು ಜರಗಿಸುವ ಹಳೆಯ ಸಂಪ್ರದಾಯಗಳ ಪ್ರಭಾವವು ಇನ್ನೂ ನಿಮ್ಮ ಹೃದಯಗಳಲ್ಲಿ ಬಾಕಿಯುಳಿದಿದ್ದರೆ ಅದನ್ನು ಸಂಪೂರ್ಣವಾಗಿ ತೊಡೆದು ಹಾಕಲು ಪ್ರಯತ್ನಿಸಬೇಕು. ಈ ಆಡಂಬರ ಗದ್ದಲಗಳಿಂದ ಯಾವ ಪುರುಷಾರ್ಥವೂ ಸಾಧಿತವಾಗುವುದಿಲ್ಲ. ನಾವು ನಿರರ್ಥಕ ಕೆಲಸಗಳಿಗಾಗಿ ಒಂದು ಕ್ಷಣವನ್ನೂ ಹಾಳು ಮಾಡಬಾರದು. ಅಗತ್ಯವಿದ್ದಷ್ಟು ಮಾತ್ರ ಮಾತನಾಡಿ ಆ ಬಳಿಕ ನಮ್ಮ ಕರ್ತವ್ಯ ನಿರ್ವಹಣೆಯಲ್ಲಿ ತಲ್ಲೀನರಾಗಬೇಕು. ಇಂದು ಮುಂಜಾನೆಯಿಂದಲೇ ನಾನು ವಿವಿಧ ಸ್ಥಾನೀಯ ಶಾಖೆ ಮತ್ತು ವ್ಯಕ್ತಿಗಳೊಂದಿಗೆ ವಿಚಾರ ವಿನಿಮಯ ನಡೆಸುತ್ತಲಿದ್ದೆ. ಆ ಸಂದರ್ಭದಲ್ಲಿ ಅನಗತ್ಯವಾಗಿ ಮಾತನಾಡುವ ಬಯಕೆ ಕೆಲವರಲ್ಲಿ ಮರುಕಳಿಸುತ್ತಿದೆಯೆಂಬುದು ವ್ಯಕ್ತವಾಯಿತು. ಕೆಲವೊಮ್ಮೆ ಅವರ ಮಾತುಗಳು ವಾಸ್ತವಿಕವಾಗಿರುವುದಿಲ್ಲ. ಈ ದೌರ್ಬಲ್ಯವನ್ನು ಆದಷ್ಟು ಬೇಗನೆ ನೀಗಿಸಬೇಕು. ದೀರ್ಘಕಾಲದಿಂದ ತಳವೂರಿರುವ ಸಂಪ್ರದಾಯಗಳು ನಿಧಾನವಾಗಿ ತೊಲಗುವುದೆಂಬುದರಲ್ಲಿ ಸಂದೇಹವಿಲ್ಲ. ಆದರೆ ಅದನ್ನು ತೊರೆಯುವ ನಿಟ್ಟಿನಲ್ಲಿ ನಿಮ್ಮ ಗಮನ ಮತ್ತು ಪ್ರಯತ್ನ ಅತ್ಯಗತ್ಯವಾಗಿದೆ.

## ಆಸಕ್ತಿಯಿಲ್ಲದವರು

ನಾನು ಈ ತನಕ ಹಲವು ಕಡೆಗಳಿಗೆ ಭೇಟಿ ನೀಡಿ ಹಲವು ವಿಷಯಗಳನ್ನು ಕೇಳಿ ತಿಳಿದುಕೊಂಡಿದ್ದೇನೆ. ಇಂದು ನಿಮ್ಮೊಂದಿಗೆ ವೈಯಕ್ತಿಕ ಹಾಗೂ ಸಾಮೂಹಿಕವಾಗಿ ವಿಚಾರ ವಿನಿಮಯ ನಡೆಸಿದ್ದೇನೆ. ಈ ಎಲ್ಲಾ ಅನುಭವಗಳ ಆಧಾರದಲ್ಲಿ, ನಾವು ಅತ್ಯಂತ ಜಾಗ್ರತೆ ವಹಿಸಿದ್ದರೂ ನಮ್ಮ ಚಟುವಟಿಕೆಯಲ್ಲಿ ಯಾವುದೇ ಆಸಕ್ತಿಯಿಲ್ಲದ ಕೆಲವರೂ ಈ ಸಂಘಟನೆಯಲ್ಲಿ ಸೇರಿಕೊಂಡಿರುವರೆಂಬುದನ್ನು ಮನಗಂಡಿದ್ದೇನೆ. ಈ ಸಮ್ಮೇಳನಕ್ಕೆ ಎಲ್ಲರಿಗೂ ಆಹ್ವಾನ ನೀಡಲಾಗಿತ್ತು. ಸದಸ್ಯರೆಲ್ಲರೂ ಹಾಜರಿರಬೇಕೆಂದೂ ವಿನಂತಿಸಲಾಗಿತ್ತು. ಆದರೂ ಅನೇಕ ಸದಸ್ಯರು ನ್ಯಾಯೋಚಿತ ಕಾರಣವಿಲ್ಲದೆ ಸಮ್ಮೇಳನಕ್ಕೆ ಗೈರುಹಾಜರಾಗಿದ್ದಾರೆ. ಇದು ವಾಸ್ತವದಲ್ಲಿ ಅವರಿಗೆ ಸಂಘಟನೆಯಲ್ಲಿ ಯಾವ ಆಸಕ್ತಿಯೂ ಇಲ್ಲವೆಂಬುದರ ಪ್ರತ್ಯಕ್ಷ ನಿದರ್ಶನವಾಗಿದೆ. ಸಮ್ಮೇಳನಕ್ಕೆ ಗೈರು ಹಾಜರಾಗಿರುವ ಕಾರಣವನ್ನು ತಿಳಿಸುವ ಅಗತ್ಯವನ್ನೂ ಕೆಲವರು ಮನಗಾಣಲಿಲ್ಲ. ಅವರಿಗೆ ತಮ್ಮ ಕೆಲಸಗಳು ದೈನಂದಿನ ವ್ಯವಹಾರ ಮತ್ತು ಗೃಹ ಕೃತ್ಯಗಳು ಜಮಾಅತ್‌ನ ಕರೆಗೆ ಓಗೊಡುವುದಕ್ಕಿಂತ ಹೆಚ್ಚು ಪ್ರಾಮುಖ್ಯವಾಗಿದೆ. ಆದ್ದರಿಂದಲೇ ಅವರು ಇಸ್ಲಾಮಿನ ದೃಷ್ಟಿಯಲ್ಲಿ ಸೂಕ್ತ ಕಾರಣವಿಲ್ಲದೆಯೇ ತಮ್ಮ ಮನೆಗಳಲ್ಲಿಯೇ ಉಳಿದುಕೊಂಡರು. ಅವರು ನಮ್ಮ ಸಮ್ಮೇಳನಗಳ ವಸ್ತುಸ್ಥಿತಿಯನ್ನೂ, ಜಮಾಅತ್‌ನ ಆಮಂತ್ರಣದಿಂದ ಅವರ ಮೇಲೆ ಬರುವ ಕರ್ತವ್ಯವನ್ನೂ, ಸಂರಕ್ಷಕನಾದ ಅಲ್ಲಾಹನೊಂದಿಗೆ ಮಾಡಿಕೊಂಡಿರುವ ಒಪ್ಪಂದದ ನಿಮಿತ್ತ ಅವರ ಮೇಲಿರುವ ಜವಾಬ್ದಾರಿಕೆಗಳನ್ನೂ ತಿಳಿದಿರುತ್ತಿದ್ದರೆ ಅವರು ತಮ್ಮ ಅತೀ ದೊಡ್ಡ ಲೌಕಿಕ ಲಾಭಗಳಿಗೂ ಅಗತ್ಯ ಕೆಲಸಗಳಿಗೂ ಇಲ್ಲಿ ಹಾಜರಾಗುವುದಕ್ಕಿಂತ ಹೆಚ್ಚು ಪ್ರಾಮುಖ್ಯತೆ ನೀಡುತ್ತಿರಲಿಲ್ಲ. ಈಗಲೇ ಅವರು ಈ ರೀತಿ ವರ್ತಿಸುತ್ತಾರೆ. ಹೀಗಿರುತ್ತಾ

ಮುಂದೆ ಇದಕ್ಕಿಂತ ದೊಡ್ಡದಾದ ಯಾವುದಾದರೊಂದು ಕಾರ್ಯಕ್ಕಾಗಿ ಅವರನ್ನು ಕರೆದರೆ, ಅವರು ನಮ್ಮ ಕರೆಗೆ ಉತ್ತರ ನೀಡಿಯಾರೆಂದು ಭರವಸೆಯಿಡಲು ಸಾಧ್ಯವಿದೆಯೇ? ವಾಸ್ತವದಲ್ಲಿ ಒಬ್ಬ ವ್ಯಕ್ತಿಯು ಜಮಾಅತ್‌ನಲ್ಲಿ ಸೇರಿದ ಬಳಿಕ ಜಮಾಅತ್‌ನ ಕರೆ ಯಾವಾಗ ಬಂದರೂ ಎಲ್ಲಾ ಕೆಲಸಗಳನ್ನು ರದ್ದುಗೊಳಿಸಿ ಧಾವಿಸಿ ಬರಬೇಕಾದುದು ಕಡ್ಡಾಯವಾಗುತ್ತದೆ. ಅಲ್ಲಾಹ್ ಮತ್ತು ಆತನ ಪ್ರವಾದಿ(ಸ) ಅನುಮತಿಸಿರುವ ಅಡ್ಡಿಗಳು ಮಾತ್ರ ಅದಕ್ಕೆ ಹೊರತಾಗಿವೆ. ಅಂತಹ ಪರಿಸ್ಥಿತಿಗಳ ಹೊರತು ಇತರ ಸಂದರ್ಭಗಳಲ್ಲಿ ಜಮಾಅತ್‌ನ ಕೆಲಸಗಳಿಗಾಗಿ ಇತರ ಕೆಲಸಗಳನ್ನು ಕಡ್ಡಾಯವಾಗಿ ನಿರ್ಲಕ್ಷಿಸಬೇಕು. ಜಮಾಅತ್ ಸದಸ್ಯರಲ್ಲಿ ಈ ಮನೋವೃತ್ತಿ ಬೆಳೆಯುವ ತನಕ ಜಮಾಅತ್ ವ್ಯವಸ್ಥೆಯು ನಿರ್ಜೀವವಾಗಿರುವುದು. "ಈಗ ವಿಶೇಷ ಕೆಲಸವೇನೂ ಇಲ್ಲ; ಸಮ್ಮೇಳನದಲ್ಲಿಯೂ ವಿಶೇಷ ಅಗತ್ಯವಿಲ್ಲ. ಆದ್ದರಿಂದ ನಾನು ಸಮ್ಮೇಳನಕ್ಕೆ ಹೋಗದಿದ್ದರೆ ಏನೂ ನಷ್ಟವಿಲ್ಲ ಎಂಬ ಭಾವನೆಯಿಂದ ಸಮ್ಮೇಳನದಲ್ಲಿ ಭಾಗವಹಿಸದಿರುವುದು ಮಹಾ ತಪ್ಪು. ಒಂದು ವೇಳೆ ಇಲ್ಲಿ ಏನೂ ಕೆಲಸವಿಲ್ಲ, ನಿಮ್ಮನ್ನು ಕೇವಲ ಸಭೆ ಸೇರಲಿಕ್ಕಾಗಿ ಆಹ್ವಾನಿಸಲಾಗಿದೆಯೆಂದಿದ್ದರೂ ಕೇವಲ ಸೂಚನೆ ಮಾತ್ರದಿಂದ ಎಲ್ಲರೂ ಬಂದು ಸೇರುವಂತಾಗಬೇಕು. ಯಾಕೆಂದರೆ ಕರೆ ಕೇಳಿದ ಮರುಕ್ಷಣವೇ ಒಂದುಗೂಡುವಂತಹ ಸಾಮರ್ಥ್ಯ ನಿಮ್ಮಲ್ಲಿ ಮೈಗೂಡಿದೆಯೆಂಬುದು ಈ ಆರಂಭದಿಸೆಯಲ್ಲಿ ಪ್ರಾಮುಖ್ಯವಾಗಿದೆ. ಈ ರೀತಿಯ ಶಿಸ್ತಿಲ್ಲದೆ ಯಾವ ಕೆಲಸವನ್ನೂ ಸಂಘಟಿತವಾಗಿ ನಿರ್ವಹಿಸಲು ಸಾಧ್ಯವಿಲ್ಲ."

"ಇಂದು ಕಂಡುಬರುತ್ತಿರುವ ಅನಾಸ್ಥೆಯು ಒಮ್ಮೆಲೇ ಉದ್ಭವಿಸಿದ್ದಲ್ಲ. ಕೆಲವು ಕಡೆಗಳಲ್ಲಿ ಜಮಾಅತ್ ಸದಸ್ಯರು ಸಾಪ್ತಾಹಿಕ ಸಭೆಗಳಲ್ಲಿ ಕ್ಲಪ್ತವಾಗಿ ಭಾಗವಹಿಸುವುದಿಲ್ಲವೆಂದು ನನಗೆ ತಿಳಿದು ಬಂದಿದೆ. ಕೆಲವು ಬಾಂಧವರು ಕೆಲಸವಿಲ್ಲದೆ ಬಿಡುವಿರುವಾಗ ಮಾತ್ರ ವಿಹಾರಕ್ಕಾಗಿ ಸಾಪ್ತಾಹಿಕ ಸಭೆಗಳಲ್ಲಿ ಭಾಗವಹಿಸುತ್ತಿದ್ದಾರೆ. ಕೆಲವೆಡೆ ಸಾಪ್ತಾಹಿಕ ಸಭೆಗಳೇ ಅಗತ್ಯವಿಲ್ಲವೆಂದು ನಿರ್ಧರಿಸಿದ್ದಾರೆ. ಜಮಾಅತ್‌ನಲ್ಲಿ ಸೇರಿ ಅಲ್ಲಾಹನ ದಾಸ್ಯದ ಪ್ರತಿಜ್ಞೆಯನ್ನು ನವೀಕರಿಸಿದ ಬಳಿಕವೂ ಹಿಂದಿನಂತೆಯೇ ನಿಶ್ಚಲ ಮತ್ತು ನಿಷ್ಕ್ರಿಯರಾಗಿರುವ ಕೆಲವರನ್ನು ನೋಡಿದೆ. ಅವರ ಜೀವನದಲ್ಲಿ ಯಾವ ಬದಲಾವಣೆಯೂ ಆಗಿಲ್ಲ. ಇಸ್ಲಾಮೇತರ ಪರಿಸರವು ಅವರಿಗೆ ಅರೋಚಕವೆನಿಸುವುದಿಲ್ಲ. ಜನರನ್ನು ಅಲ್ಲಾಹನೆಡೆಗೆ ಆಹ್ವಾನಿಸಬೇಕೆಂಬ ನಿಸ್ವಾರ್ಥ ಕಳಕಳಿಯೂ ಅವರಿಗಿಲ್ಲ. ಇತರ ಕಾರ್ಯಕರ್ತರೊಂದಿಗೆ ಅವರು ಸರಿಯಾಗಿ ಬೆರೆತಿಲ್ಲ. ನಮ್ಮ ಸಂಖ್ಯಾಬಲ ಹೆಚ್ಚಿಸಿ ತೋರಿಸಲಿಕ್ಕಾಗಿ ಹೇಗಾದರೂ ಕೆಲವು ಸದಸ್ಯರನ್ನು ಸೇರಿಸಿಕೊಳ್ಳುವ ಹಾಗೂ ದೇಹವನ್ನು ಬಲಾಢ್ಯಗೊಳಿಸುವ ಬದಲಾಗಿ ಅದಕ್ಕೊಂದು ಹೊರೆಯಾಗಿ ಪರಿಣಮಿಸುವ ಕೊಬ್ಬಿನ ಅಗತ್ಯ ನಮಗಿಲ್ಲವೆಂದು ಜಮಾಅತನ್ನು ಸ್ಥಾಪಿಸಿದ ಆರಂಭದಲ್ಲಿಯೂ ಅನಂತರ ಅನೇಕ ಸಂದರ್ಭಗಳಲ್ಲಿಯೂ ನಾನು ಹೇಳುತ್ತಾ ಬಂದಿದ್ದೇನೆ. ಅದೇ ರೀತಿ ನಿಸ್ವಾರ್ಥವಾಗಿ ಕಾರ್ಯೋನ್ಮುಖರಾಗುವ ಹಾಗೂ ಬಾಹ್ಯ ಪ್ರೇರಣೆಯಿಲ್ಲದೆಯೇ ಕೇವಲ ಸತ್ಯವಿಶ್ವಾಸದ ಸ್ಫೂರ್ತಿಯಿಂದಲೇ ಅಲ್ಲಾಹನ ಧರ್ಮವನ್ನು ಸಂಸ್ಥಾಪಿಸ ಬಯಸುವ ಜನರು ಮಾತ್ರ ನಮಗೆ ಬೇಕಾಗಿದ್ದಾರೆ. ಆದರೆ ಈ ರೀತಿ ಪದೇ ಪದೇ ಸ್ಪಷ್ಟ ಪಡಿಸುತ್ತಲಿದ್ದರೂ ಜಮಾಅತ್‌ನಲ್ಲಿ ಅದರ ಸ್ವಭಾವಕ್ಕೆ ಅನುಗುಣವಲ್ಲದ ಕೆಲವರು ಸೇರಿಕೊಂಡಿರುವುದು ವಿಷಾದನೀಯ. ಅವರು

ಕೇವಲ ಮುಸ್ಲಿಮರೊಂದಿಗೆ ಸಂಬಂಧ ಹೊಂದಿರುವುದರಿಂದಲೇ ಮೋಕ್ಷ ದೊರೆಯುತ್ತದೆಯೆಂದು ಮೊದಲೇ ಭಾವಿಸಿಕೊಂಡಿದ್ದಾರೆ. ಅಂತಹ ವ್ಯಕ್ತಿಗಳೊಡನೆ ನಾನೊಂದು ಪ್ರಶ್ನೆ ಕೇಳಬಯಸುತ್ತೇನೆ. ಅದಷ್ಟೇ ನಿಮ್ಮ ಕೆಲಸವಾಗಿದ್ದರೆ ಅದಕ್ಕಾಗಿ ನಮ್ಮ ಈ ಜಮಾಅತನ್ನು ಹಾಳು ಮಾಡುವ ಅಗತ್ಯವೇನಿತ್ತು? ಈ ಸಂಘಟನೆಯು ಸ್ಥಾಪಿಸಲ್ಪಟ್ಟ ಧ್ಯೇಯೋದ್ದೇಶಗಳ ಬಗ್ಗೆ ನಿಮಗೆ ನೈಜ ಕಳಕಳಿಯಿರುತ್ತಿದ್ದರೆ, ಅದೇ ಕಳಕಳಿಯಿಂದ ನೀವು ನಮ್ಮೊಂದಿಗೆ ಸಂಬಂಧ ಸ್ಥಾಪಿಸಿದ್ದರೆ, ಅದರ ಕನಿಷ್ಠ ಬೇಡಿಕೆ ಜಮಾಅತ್‌ಗೆ ಹಾನಿ ಮಾಡುವುದರಿಂದಲಾದರೂ ನಿಮ್ಮನ್ನು ತಡೆಯಬೇಕಾಗಿತ್ತು. ಹಲವು ಕಾಲಗಳಿಂದ ಮುಸ್ಲಿಮರನ್ನು ನಿಷ್ಕ್ರಿಯಗೊಳಿಸಿದ ಭೀಕರ ರೋಗಗಳನ್ನು ಜಮಾಅತ್‌ನಲ್ಲಿ ನೀವು ಹರಡಬಾರದಿತ್ತು.

ಕೆಲವಾರು ಮಂದಿ ಕಳೆದೆರಡು ವರ್ಷಗಳಲ್ಲಿ ನಮ್ಮ ಸಂಘಟನೆಯನ್ನು ತೊರೆದಿರುವುದು ಬೇಸರದ ವಿಷಯ. ಅವರಲ್ಲಿ ಒಂದಿಬ್ಬರ ಹೊರತು ಇತರೆಲ್ಲರಲ್ಲಿಯೂ ಈ ಅಗಲುವಿಕೆಯು ಹಿನ್ನಡೆಯಾಗಿ ಪರಿಣಮಿಸಿದೆ. ಜಮಾಅತ್‌ನಲ್ಲಿ ಸೇರಿಸಿಕೊಳ್ಳುವುದಕ್ಕಿಂತ ಮುಂಚೆ ಪ್ರತಿಯೊಬ್ಬ ವ್ಯಕ್ತಿಗೂ ಸಂಘಟನೆಯ ಬಗ್ಗೆ ಚೆನ್ನಾಗಿ ಆಲೋಚಿಸಿ ತಿಳಿಯುವ ಸಂಪೂರ್ಣ ಅವಕಾಶ ನೀಡಲಾಗುವುದೆಂಬುದನ್ನು ನಮ್ಮ ಕಾರ್ಯವಿಧಾನವನ್ನು ಅರಿತಿರುವ ಪ್ರತಿಯೊಬ್ಬರೂ ಬಲ್ಲರು. ಧರ್ಮ, ಅದರ ಬೇಡಿಕೆ, ಅದನ್ನು ಸ್ವೀಕರಿಸುವುದರ ಪರಿಣಾಮ, ನಮ್ಮ ಧ್ಯೇಯ, ಅದನ್ನು ಗಳಿಸುವ ಮಾರ್ಗ ಇತ್ಯಾದಿಗಳನ್ನು ನಾವು ಬಹಿರಂಗವಾಗಿ ಘೋಷಿಸಿದ್ದೇವೆ. ತರುವಾಯ ಜಮಾಅತ್‌ನಲ್ಲಿ ಸೇರಿಸಿಕೊಳ್ಳುವ ಸಂದರ್ಭದಲ್ಲಿ ಏಕದೇವತ್ವ ಮತ್ತು ಪ್ರವಾದಿತ್ವಗಳನ್ನು ಪ್ರಜ್ಞಾಪೂರ್ವಕ ಅಂಗೀಕರಿಸುವುದರಿಂದ ನಾವು ವಹಿಸಬೇಕಾದ ಜವಾಬ್ದಾರಿಕೆಗಳನ್ನು ಸ್ಪಷ್ಟವಾಗಿ ಪ್ರತಿಯೊಬ್ಬ ವ್ಯಕ್ತಿಯ ಮುಂದಿರಿಸಿದ್ದೇವೆ. ಈ ರೀತಿ ಸ್ಪಷ್ಟಗೊಳಿಸಿದ ಬಳಿಕ, ಜಮಾಅತ್‌ನ ಸದಸ್ಯರಾಗುವ ಪ್ರತಿಯೊಬ್ಬರೊಂದಿಗೂ, ನೀವು ಈ ಹೊಣೆಗಾರಿಕೆಗಳನ್ನು ಚೆನ್ನಾಗಿ ತಿಳಿದು ಮನಃಪೂರ್ವಕವಾಗಿ ಸ್ವೀಕರಿಸಲು ಸಿದ್ಧರಿದ್ದೀರಾ? ಎಂದೂ ವಿಚಾರಿಸಿದ್ದೇವೆ. ಹೀಗೆ ಯಾವುದೇ ಸಂಶಯ ಮತ್ತು ತಪ್ಪು ತಿಳುವಳಿಕೆಗಳಿಗೆ ಎಡೆಯಿಲ್ಲದಂತೆ ಸಂಪೂರ್ಣ ಸಹಮತ ಹೊಂದಿದ ವ್ಯಕ್ತಿಗಳನ್ನು ಮಾತ್ರ ಜಮಾಅತ್‌ಗೆ ಸೇರಿಸಲಾಗಿತ್ತು. ಈ ಎಲ್ಲಾ ಮುಂಜಾಗ್ರತೆಗಳ ಹೊರತಾಗಿಯೂ ಜಮಾಅತನ್ನು ನ್ಯಾಯೋಚಿತವಾಗಿ ತೊರೆಯುವುದಿದ್ದರೆ, ಅಂಥವರಿಗೆ ನಮ್ಮಲ್ಲಿ ಏನಾದರೂ ಕಪಟತೆ ಇದೆ ಅಥವಾ ನಮ್ಮ ವ್ಯವಸ್ಥೆಯಲ್ಲಿ ಪರಿಹರಿಸಲಸಾಧ್ಯವಾದ ದೋಷವಿದೆಯೆಂದು ಮನವರಿಕೆಯಾಗಿರಬೇಕು. ತರುವಾಯ ಅವರು ನಮಗಿಂತ ಉತ್ತಮವಾದ ರೀತಿಯಲ್ಲಿ ನಾವು ಮನಃಪೂರ್ವಕವಾಗಿ ನಿರ್ಧರಿಸಿರುವ ಜೀವನ ಧ್ಯೇಯದೆಡೆಗೆ ಹೆಚ್ಚು ವೇಗದಿಂದ ಮುನ್ನಡೆಯಬೇಕಾಗಿತ್ತು. ಹಾಗಿರುತ್ತಿದ್ದರೆ, ಅವರು ನಮಗಿಂತ ಮುಂದೆ ಸಾಗುತ್ತಿರುವುದನ್ನು ನೋಡುವಾಗ ನಾವೂ ಅವರೊಂದಿಗೆ ಸೇರಿಕೊಳ್ಳುತ್ತಿದ್ದೆವು. ಆದರೆ ಇಲ್ಲಿ ಅಂತಹ ದೃಶ್ಯಗೋಚರಿಸುತ್ತಿಲ್ಲ. ಸಂಪೂರ್ಣ ತಿಳುವಳಿಕೆಯೊಂದಿಗೆ ಚೆನ್ನಾಗಿ ಆಲೋಚಿಸಿ ತಮ್ಮ ಪ್ರಭುವಾದ ಅಲ್ಲಾಹನೊಂದಿಗೆ ಪ್ರತಿಜ್ಞೆಮಾಡಿ ಜಮಾಅತನ್ನು ಸೇರಿದಂತಹ ಈ ಜನರು ಜಮಾಅತ್‌ನಿಂದ ಹೊರಹೋದ ಬಳಿಕ ಸಂಪೂರ್ಣವಾಗಿ ನಿಶ್ಚಲರಾಗಿ ಬಿಟ್ಟಿದ್ದಾರೆ. ಕೆಲವರು ಹಿಂದೆ ತಪ್ಪು ಹಾದಿಯಲ್ಲಿ ನಡೆಯುತ್ತಿದ್ದಾರೆಂದು ಭಾವಿಸಿ ತೊರೆದು ಬಂದಿದ್ದ ಅದೇ ಗುಂಪಿಗೆ ಮರಳಿದ್ದಾರೆ. ಕೆಲವು ಅನೀತಿವಂತರು ಧರ್ಮನಿಷ್ಠೆ ಮತ್ತು ನೈತಿಕ ಮೌಲ್ಯಗಳನ್ನೂ ತೊರೆದು,

ಹಿಂದಿನಂತೆಯೇ ಎಲ್ಲಾ ದುಷ್ಕೃತ್ಯಗಳನ್ನೂ ಪ್ರಾರಂಭಿಸಿದ್ದಾರೆ. ಕೆಲವರು ನಮಾಝ್ ಮಾಡುವುದನ್ನೂ ಬಿಟ್ಟಿದ್ದಾರೆ. ಜಮಾಅತ್‌ನಲ್ಲಿರುವಾಗ ವರ್ಜಿಸಲಾರಂಭಿಸಿದ್ದ ನಿಷಿದ್ಧ ಕಾರ್ಯಗಳನ್ನು ಬಿರುಸಿನಿಂದ ಪುನರಾರಂಭಿಸಿ ಸರ್ವಾಂಗೀಕೃತ ನೈತಿಕ ಮರ್ಯಾದೆಯನ್ನು ನಿರ್ಲಕ್ಷಿಸಿದ್ದಾರೆ. ಆ ಬಗ್ಗೆ ನನ್ನ ಮನಸ್ಸಿಗೆ ತುಂಬಾ ನೋವುಂಟಾಗಿದೆ.

ಈ ನಿರ್ಲಕ್ಷ್ಯ ಮತ್ತು ನಿರಾಸಕ್ತಿಯಿಂದ ಪ್ರತಿಜ್ಞೆಯನ್ನು ಮರೆತು ನಿರ್ಗಮಿಸುವುದರ ಕಾರಣವೇನೆಂಬುದನ್ನು ನಾವು ಆಲೋಚಿಸಬೇಕಾಗಿದೆ. ನನ್ನ ಅಭಿಪ್ರಾಯದಂತೆ ಈ ಎಲ್ಲಾ ಹೆಜ್ಜೆಗಳ ಮೂಲ ಕಾರಣವು ನಾವು ಸುಧಾರಣಾ ಚಟುವಟಿಕೆಗಳಿಗಾಗಿ ಹೊರಟಿರುವ ಸಮುದಾಯದ ನೈತಿಕ ಬುನಾದಿಗಳನ್ನು ಅವರ ನೂರಾರು ವರ್ಷಗಳ ಅಧಃಪತನವು ದುರ್ಬಲಗೊಳಿಸಿದೆ. ದೃಢನಿರ್ಧಾರ, ಸ್ಥಿರಚಿತ್ತತೆ ಮತ್ತು ಅಚಂಚಲ ವಿಶ್ವಾಸಗಳ ಭದ್ರತೆಗೆ ಅಗತ್ಯವಾದ ನೈತಿಕ ಶಕ್ತಿ ಅವರಲ್ಲಿ ಕಡಿಮೆಯಾಗಿದೆ. ಸತ್ಯವೆಂದು ಮನಃಪೂರ್ವಕವಾಗಿ ನಂಬಿರುವ ಧ್ಯೇಯ ಸಾಧನೆಗಾಗಿ ತ್ಯಾಗ ಸಹಿಸುವ ಮನೋಭಾವ ಅವರಲ್ಲಿ ನಾಸ್ತಿಯಾಗಿದೆ. ತಾವು ಸತ್ಯವೆಂದು ಅಂಗೀಕರಿಸಿರುವ ಧ್ಯೇಯಗಳಿಗಾಗಿ ಸಮಯ, ಹಣ, ದೇಹೇಚ್ಛೆಗಳ ಮೆಚ್ಚಿನ ಸತ್ವ ಸಿದ್ಧಾಂತಗಳು ಇತ್ಯಾದಿ ಲೌಕಿಕ ಹಿತಾಸಕ್ತಿಗಳನ್ನು ತ್ಯಜಿಸಲು ಅವರು ಸಿದ್ಧರಿಲ್ಲ. ಕೇವಲ ನಾಲಗೆಯಿಂದ ಒಪ್ಪಿದರೆ ಸಾಕಾಗುವಂತಹ ಸತ್ಯಸೇವೆಯು ಅವರನ್ನು ಧಾರಾಳವಾಗಿ ಆಕರ್ಷಿಸುತ್ತದೆ. ಆದರೆ ಆ ಒಪ್ಪಿಗೆಯ ಬಳಿಕವೂ ಸತ್ಯಕ್ಕೆದುರಾಗಿ ಅವರ ಎಲ್ಲಾ ವಿಧದ ಚಟುವಟಿಕೆಗಳನ್ನೂ ಸಂಸ್ಥೆಗಳನ್ನೂ ಜೀವನ ವ್ಯವಹಾರಗಳನ್ನೂ ನಡೆಸುವ ಸ್ವಾತಂತ್ರ್ಯವೂ ಅವರಿಗೆ ಬೇಕು. ಆದ್ದರಿಂದಲೇ ಅವರು ಇಸ್ಲಾಮ್ ಮತ್ತು ಇಸ್ಲಾಮೇತರ ವಿಷಯಗಳ ಮೈತ್ರಿಗಳ ಆಧಾರದಲ್ಲಿ ಬೆಳೆದು ಬಂದಿರುವ ನಾಮಮಾತ್ರ ಧರ್ಮನಿಷ್ಠೆಯ ಹಾದಿಯಲ್ಲಿ ನಡೆಯಲು ಸಂತೋಷದಿಂದ ಸಿದ್ಧರಾಗುತ್ತಾರೆ. ತದ್ವಿರುದ್ಧವಾಗಿ 'ಕುಫ್ರ್' ಅಥವಾ ಇಸ್ಲಾಮಿನ ಸತ್ಯ ಅಥವಾ ಅಸತ್ಯ, ಅನುಸರಣೆ ಅಥವಾ ಉಲ್ಲಂಘನೆಗಳಲ್ಲಿ ಯಾವುದಾದರೂ ಒಂದನ್ನು ನಿರ್ಧರಿಸಬೇಕಾದಂತಹ ಧರ್ಮ ಸೇವೆಯು ಅವರಿಗೆ ಅಸಹ್ಯವೆನಿಸುತ್ತದೆ. ಅಂತಹ ಧರ್ಮ ಸೇವೆಯಲ್ಲಿ ಸತ್ಯವನ್ನು ಅಂಗೀಕರಿಸಲೊಪ್ಪುವ ಪ್ರತಿಯೊಬ್ಬನಿಗೂ ಸತ್ಯದಲ್ಲಿಯೇ ಅಚಲನಾಗಿರಬೇಕೆಂಬುದು ಪ್ರಥಮ ಶರ್ತವಾಗಿರುವುದು. ತರುವಾಯ ಆತನು ಸತ್ಯವೆಂದು ಅಂಗೀಕರಿಸುವ ಧ್ಯೇಯಗಳಿಗಾಗಿ ತನ್ನ ಸಂಪೂರ್ಣ ವ್ಯಕ್ತಿತ್ವವನ್ನೂ ಜೀವನವನ್ನೂ ಬಲಿಯರ್ಪಿಸಬೇಕಾಗುವುದು. ಸಮಯ, ಹಣ, ದೇಹೇಚ್ಛೆಗಳು, ಆಸೆ, ಹಿತಾಸಕ್ತಿ, ನಿರೀಕ್ಷೆ, ಸಂಬಂಧ, ಶಕ್ತಿ ಸಾಮರ್ಥ್ಯಗಳೆಲ್ಲವನ್ನೂ ಅದಕ್ಕಾಗಿ ಅರ್ಪಿಸಬೇಕಾಗುವುದು. ಕೇವಲ ಒಂದೆರಡು ಬಾರಿಯಲ್ಲ, ಇಡೀ ಜೀವನದಲ್ಲಿ ಅದನ್ನು ನಿರ್ವಹಿಸಬೇಕು. ಈ ರೀತಿಯ ಸತ್ಯಸೇವೆಯನ್ನು ನಾಮಮಾತ್ರ ಧರ್ಮನಿಷ್ಠೆಯಿಂದ ಸಂತೃಪ್ತನಾದ ಒಬ್ಬ ವ್ಯಕ್ತಿಗೆ ಮಾಡಲು ಸಾಧ್ಯವಾದೀತೇ? ನಿರಾಶಾಜನಕವಾದ ಈ ಕಾಲದಲ್ಲಿಯೂ ಸಂತೋಷದಿಂದ ಜೀವಾರ್ಪಣೆಗೆ ಸಿದ್ಧರಾಗುವ, ಗುಂಡಿಗೆ ಎದೆಯೊಡ್ಡುವ ಹಾಗೂ ಜೈಲು ಶಿಕ್ಷೆ ಅನುಭವಿಸುವ ಮುಸ್ಲಿಮರು ಧಾರಾಳವಾಗಿ ದೊರೆಯಬಹುದು. ಇದೆಲ್ಲವೂ ಅವರಿಗೆ ಬಹಳ ಸುಲಭದ ಕೆಲಸ. ಅವರು ಅನಾಯಾಸವಾಗಿ ಅವುಗಳನ್ನು ನಿರ್ವಹಿಸುತ್ತಾರೆ. ಆದರೆ ತಮ್ಮ ಸಂಪೂರ್ಣ ಜೀವನವನ್ನು ಒಂದು ಪದ್ಧತಿಯೊಂದಿಗೆ ಜೋಡಿಸುವುದು, ಜೀವನದಾದ್ಯಂತ ಒಂದೇ ಧ್ಯೇಯದ ಹಿಂದೆ ತಾಳ್ಮೆಯಿಂದ ಕ್ರಿಯಾಶೀಲರಾಗುವುದು, ದೇಹೇಚ್ಛೆಗಳನ್ನು ನಿರಂತರ

ನಿಯಂತ್ರಿಸುತ್ತಲಿರುವುದು, ತಮ್ಮ ಸಂಪ್ರದಾಯ ಮತ್ತು ಮನೋಭಾವಗಳನ್ನು ಬದಲಾಯಿಸುವುದು, ಬಾಹ್ಯಪ್ರೇರಣೆಯಿಲ್ಲದೇ ನೈತಿಕ ಜವಾಬ್ದಾರಿಗಳನ್ನು ಅಂಗೀಕರಿಸಿ ಪಾಲಿಸುವುದು ಇತ್ಯಾದಿಗಳೆಲ್ಲವೂ ವಾಸ್ತವದಲ್ಲಿ ಅವರ ತಾಳ್ಮೆಯ ಮಿತಿಯನ್ನು ಮೀರಿದ್ದಾಗಿದೆ. ಅದು ಅವರಿಗೆ ಅಸಾಧ್ಯ ಹೊರೆ ಎನಿಸುವುದು. ತಾತ್ಕಾಲಿಕ ಆಡಂಬರ ಚಟುವಟಿಕೆಗಳಿಗಾಗಿ ಅವರು ಎಷ್ಟು ಬೇಕಾದರೂ ಸಮಯ ವ್ಯಯಿಸಬಲ್ಲರು. ಆದರೆ, ತ್ಯಾಗದ ಅಗತ್ಯವಿರುವ ಪ್ರಯತ್ನವನ್ನು ಒಂದೆರಡು ವರ್ಷ ನಡೆಸಲೂ ಅವರಿಂದ ಸಾಧ್ಯವಾಗುವುದಿಲ್ಲ. ಅವರ ಸಂಕಲ್ಪ ಶಕ್ತಿಯು ತೀರಾ ದುರ್ಬಲವಾಗಿದೆ. ಅವರ ನಿರ್ಧಾರ ಶಕ್ತಿ ಶಿಥಿಲವಾಗಿದೆ. ಸಂಪ್ರದಾಯ ಮತ್ತು ಆಸೆ ಆಕಾಂಕ್ಷೆಗಳ ನಿಯಂತ್ರಣ, ವಿಶ್ವಾಸ ಮತ್ತು ಕರ್ಮಗಳ ಹೊಂದಾಣಿಕೆ, ಶಿಸ್ತುಬದ್ಧವಾಗಿ ನಿರಂತರ ಕ್ರಿಯಾಶೀಲರಾಗುವ ಸಾಮರ್ಥ್ಯ ಅವರಲ್ಲಿ ಉಳಿದಿರುವುದಿಲ್ಲ. ಇಂದು ಅವರ ಅವಸ್ಥೆಯು ಹುಟ್ಟಿನಿಂದ ಸ್ವತಂತ್ರವಾಗಿ ನಡೆದು ಅಭ್ಯಾಸವಾಗಿರುವ ಹಾಗೂ ವಾಹನವನ್ನು ವಹಿಸಿ ನಿರ್ದಿಷ್ಟ ಹಾದಿಯಲ್ಲಿ ನಡೆಯಲೊಪ್ಪದಂತಹ ಒಂದು ಕುದುರೆಯಂತಿದೆ. ಅಂತಹ ಕುದುರೆಯನ್ನು ಹೇಗಾದರೂ ಪಳಗಿಸಿ ಕಟ್ಟಿ ಹಾಕಿದರೆ, ಅದು ಆ ಬಂಧನವನ್ನು ಸಹಿಸದೆ ಹಗ್ಗವನ್ನು ತುಂಡರಿಸಿ ಹಿಂದಿಗಿಂತ ಹೆಚ್ಚು ದೂರ ಓಡಿ ಹೋಗುವುದು.

## ನಿರ್ಗಮನದ ಕಾರಣಗಳು

ದಿನೇ ದಿನೇ ಹೆಚ್ಚು ಶಕ್ತಿಯುತವಾಗಿ ಗೋಚರವಾಗುತ್ತಿರುವ ಇನ್ನೊಂದು ಕೊರತೆಯಿದೆ. ಮುಸ್ಲಿಮ್ ಜನ ಸಾಮಾನ್ಯರು ಧರ್ಮದ ಸರಿಯಾದ ಜ್ಞಾನ ಹಾಗೂ ಧರ್ಮದ ತಿರುಳನ್ನು ಸರಿಯಾಗಿ ಗ್ರಹಿಸಿಲ್ಲವೆಂಬ ಮಾತು ಅಂತಿರಲಿ, ನಮ್ಮ ಮಧ್ಯದಲ್ಲಿ ಪಂಡಿತರೆಂದೂ ಧಾರ್ಮಿಕ ವಕ್ತಾರರೆಂದೂ ಪ್ರಸಿದ್ಧರಾಗಿರುವವರೂ ಪ್ರಸ್ತುತ ವಿಷಯದಲ್ಲಿ ತುಂಬಾ ಹಿಂದಿದ್ದಾರೆ. ನಿಷ್ಕಳಂಕ ಮತ್ತು ಶುಭಾಕಾಂಕ್ಷಿ ಪ್ರಾಮಾಣಿಕರಾದ ಜನರಿಗೂ ಸಾಕ್ಷಾತ್ ಧರ್ಮ ನಿಷ್ಠೆ ಮತ್ತು ಪರಂಪರಾಗತ ಹಾಗೂ ವೃತ್ತಿಪರ ಧರ್ಮನಿಷ್ಠೆಗಳೊಳಗಿನ ವ್ಯತ್ಯಾಸಗಳನ್ನು ಗ್ರಹಿಸಲಾಗಿಲ್ಲ. ಅವರು ಧಾರ್ಮಿಕ ಮೌಲ್ಯಗಳನ್ನು ಇತರ ಮೌಲ್ಯಗಳೊಂದಿಗೆ ಸೇರಿಸುತ್ತಾರೆ. ಧರ್ಮದ ಅತಿ ಪ್ರಾಮುಖ್ಯವಾಗಿರುವ ವಿಷಯಗಳಿಗೂ ನಾವು ಅದೆಷ್ಟೇ ಪ್ರಯತ್ನಿಸಿದರೂ ಅವರ ದೃಷ್ಟಿಯಲ್ಲಿ ಒಂದು ಸೇರ್ಪಡೆಯೆಂಬುದಕ್ಕಿಂತ ಹೆಚ್ಚಿನ ಸ್ಥಾನ ದೊರಕಿಸಲು ಸಾಧ್ಯವಾಗಿಲ್ಲ. ಯಾಕೆಂದರೆ ಸುದೀರ್ಘ ಕಾಲದ ಶಿಕ್ಷಣ ತರಬೇತಿಯಿಂದ ಅವರ ವಿಚಾರ ಧಾರೆಯು ಆ ರೀತಿ ಬದಲಾಗಿದೆ. ಅದೇ ರೀತಿ ಧರ್ಮದಲ್ಲಿ ಪ್ರಾಮುಖ್ಯತೆಯಿಲ್ಲದ ಆಂಶಿಕ ವಿಷಯಗಳು ಅವರ ಮಟ್ಟಿಗೆ ಧರ್ಮದ ಮೂಲ ವಿಷಯಗಳಾಗಿವೆ. ಯಾಕೆಂದರೆ ಪರಂಪರಾಗತ ಮತ್ತು ವೃತ್ತಿಪರ ಧರ್ಮ ನಿಷ್ಠೆಗಳು ಅವುಗಳಿಗೆ ಆ ಸ್ಥಾನ ನೀಡಿದೆ. ಅಲ್ಲಾಹನ ಧರ್ಮದಲ್ಲಿ ಪ್ರತಿಯೊಂದರ ಸ್ಥಾನಮಾನವೇನು? ಯಾವುದಕ್ಕೆ ಎಷ್ಟು ಪ್ರಾಮುಖ್ಯತೆ ನೀಡಬೇಕು? ಯಾವುದನ್ನು ಯಾವ ವಸ್ತುವಿಗಾಗಿ ತೊರೆಯಬೇಕು? ಮುಂತಾದ ವಿಷಯಗಳನ್ನು ನೈಜ ಧಾರ್ಮಿಕ ದೃಷ್ಟಿಕೋನದಿಂದ ವಿವೇಚಿಸುವವರು ವಿದ್ವಾಂಸರಲ್ಲಿಯೂ ಜನಸಾಮಾನ್ಯರಲ್ಲಿಯೂ ತೀರಾ ವಿರಳ. ಮೌಲ್ಯಗಳಲ್ಲಿ ನಮಗೂ ಇತರ ಧಾರ್ಮಿಕ ವ್ಯಕ್ತಿಗಳಿಗೂ ಇರುವ ಭಿನ್ನಾಭಿಪ್ರಾಯವೂ ಜಮಾಅತ್‌ನ ಚಟುವಟಿಕೆಗಳಲ್ಲಿ ನಿರಾಸಕ್ತಿ ತೋರುವುದಕ್ಕೆ ಮತ್ತು ಹೊರ ಹೋಗುತ್ತಿರುವುದಕ್ಕೆ ಮುಖ್ಯ ಕಾರಣವೆಂದು ನಾನು ಭಾವಿಸುತ್ತೇನೆ. ಆದರೆ ಧರ್ಮವನ್ನು

ಸರಿಯಾಗಿ ತಿಳಿದು, ನಾವು ನಮ್ಮ ಮುಂದಿರಿಸಿಕೊಂಡಿರುವ ಧರ್ಮ ಸಂಸ್ಥಾಪನೆಯ ಧ್ಯೇಯಕ್ಕೆ ವಂಚನೆ ಮಾಡಲು ನಮ್ಮಿಂದ ಸಾಧ್ಯವಿಲ್ಲ. ಜನರಲ್ಲಿ ಕರ್ತವ್ಯ ಸ್ಫೂರ್ತಿಯನ್ನು ಉತ್ತೇಜಿಸಿ, ಹಿಂತೆರಳುವವರನ್ನು ಮುನ್ನಡೆಸಲಿಕ್ಕಾಗಿ ಧಾರ್ಮಿಕ ಮೌಲ್ಯಗಳ ನೈಜ ವ್ಯತ್ಯಾಸವನ್ನು ಬದಲಾಯಿಸಲು ನಮ್ಮಿಂದ ಸಾಧ್ಯವಿಲ್ಲ. ಹಾಗೆಯೇ ನಿರ್ಗಮನ ಬಯಸುವ ಯಾವನೇ ಕಾರ್ಯಕರ್ತನೂ ನಮಗೆ ಅಗತ್ಯವಿಲ್ಲ.

ಈ ನಿರಾಸಕ್ತಿ ಮತ್ತು ನಿರ್ಗಮನದ ಇನ್ನೊಂದು ಮೂಲ ಕಾರಣವು, ಈ ಜಮಾಅತ್‌ನಲ್ಲಿ ಮತ್ತು ಇತರ ಜಮಾಅತ್‌ಗಳಲ್ಲಿ ಸದಸ್ಯನಾಗುವುದರಲ್ಲಿರುವ ಮೂಲ ವ್ಯತ್ಯಾಸವನ್ನು ಅದೆಷ್ಟೋ ಜನರು ಇನ್ನೂ ಅರಿಯದಿರುವುದಾಗಿದೆ. ಈ ಜಮಾಅತ್‌ನಲ್ಲಿ ಸದಸ್ಯನಾಗುವುದರ ತಾತ್ಪರ್ಯವೇನೆಂದು ಅವರು ಇನ್ನೂ ಅರ್ಥಮಾಡಿಕೊಂಡಿಲ್ಲ. ಜಮಾಅತೆ ಇಸ್ಲಾಮಿಯು ಮುಸ್ಲಿಮರಲ್ಲಿ ಸಾಮಾನ್ಯವಾಗಿ ರಚಿಸಲ್ಪಡುವಂತಹ ಒಂದು ಸಂಘಟನೆಯೆಂದೂ ಅದರಲ್ಲಿ ಸೇರಿದ ಬಳಿಕ ನಿರಾಸಕ್ತಿ ತಾಳುವುದು, ತರುವಾಯ ಚಿಕ್ಕ ಪುಟ್ಟ ಅನಿಷ್ಟ ವಿಷಯಗಳ ಕಾರಣ ಅದರಿಂದ ಹೊರ ಬರುವುದೆಲ್ಲವೂ ಮಾನವನ ವಿಶ್ವಾಸ ಮತ್ತು ಧರ್ಮದೊಂದಿಗೆ ಯಾವುದೇ ಸಂಬಂಧವಿಲ್ಲದ ವಿಷಯವೆಂದೂ ಅವರು ತಪ್ಪು ತಿಳಿದಿದ್ದಾರೆ. ಆದರೆ ಈ ಸಂಘಟನೆಯ ಸ್ಥಿತಿಯು ಇತರೆಲ್ಲಾ ಸಂಘಟನೆಗಳಿಗಿಂತ ಭಿನ್ನವಾಗಿದೆ. ಈ ಸಂಘಟನೆಯು ಕೇವಲ ಸತ್ಯಧರ್ಮದ ಸ್ಥಾಪನೆಗಾಗಿ ರಚಿಸಲ್ಪಟ್ಟಿದೆ. ಪವಿತ್ರ ಕುರ್‌ಆನಿನಲ್ಲಿ ಘೋಷಿಸಲಾಗಿರುವ ಧ್ಯೇಯವೇ ಇದರ ಧ್ಯೇಯ. ಪ್ರವಾದಿಗಳು ಲೋಕದಲ್ಲಿ ನಡೆಸಿದ ಕಾರ್ಯಭಾರವೇ ಜಮಾಅತ್‌ನ ಕಾರ್ಯಭಾರವಾಗಿದೆ. ಜಮಾಅತ್‌ನಲ್ಲಿ ಸೇರಿಸುವಾಗ ಪ್ರತಿಯೊಬ್ಬ ವ್ಯಕ್ತಿಯಿಂದಲೂ ಒಂದು ಪ್ರಾಮುಖ್ಯ ಪ್ರತಿಜ್ಞೆಯನ್ನು ಮಾಡಿಸಲಾಗುತ್ತದೆ. ಅದನ್ನು ಕುರ್‌ಆನಿನಲ್ಲಿ ಅಲ್ಲಾಹನು ಸ್ವರ್ಗದ ವಾಗ್ದಾನದೊಂದಿಗೆ ಮಾಡಿಕೊಂಡಿರುವ ವ್ಯಾಪಾರವೆಂದು ವರ್ಣಿಸಲಾಗಿದೆ: "ಅಲ್ಲಾಹನು ಸತ್ಯವಿಶ್ವಾಸಿಗಳ ದೇಹ ಮತ್ತು ಸಂಪತ್ತನ್ನು ಸ್ವರ್ಗದ ಬದಲಿಗೆ ಖರೀದಿಸಿ ಕೊಂಡಿದ್ದಾನೆ." (ಅತ್ತೌಬಃ :111) ಆದ್ದರಿಂದ ಇಂತಹ ಸಂಘಟನೆಯಲ್ಲಿ ಪ್ರವೇಶಿಸುವ ಪ್ರತಿಯೊಬ್ಬ ವ್ಯಕ್ತಿಯೂ ವಾಸ್ತವದಲ್ಲಿ ಆ ಸಂಘಟನೆಯ ಮುಂದಿರುವ ಕಾರ್ಯಕ್ರಮಗಳು ಆ ತೆರನಾಗಿವೆಯೇ ಎಂಬುದನ್ನು ಮೊತ್ತಮೊದಲಾಗಿ ಪರಿಶೀಲಿಸಬೇಕು. ಆ ಬಗ್ಗೆ ಸಂತೃಪ್ತನಾಗದಿದ್ದರೆ ಆತ ಜಮಾಅತ್‌ನಲ್ಲಿ ಸೇರುವುದೇ ತಪ್ಪು. ಆದರೆ ಇನ್ನು ಆತನು ಸಂಪೂರ್ಣ ತೃಪ್ತನಾಗಿ, ಈ ಸಂಘಟನೆಯ ಸಂವಿಧಾನದಲ್ಲಿ ವಿವರಿಸುವ ವಿಷಯಗಳೇ ಇದರ ಧ್ಯೇಯಾದರ್ಶಗಳೆಂದು ನಂಬಿ ಜಮಾಅತ್‌ನಲ್ಲಿ ಸೇರಿದ್ದರೆ, ಈ ಸೇರ್ಪಡೆಯನ್ನು ಇಷ್ಟವಿದ್ದಾಗ ಧರಿಸುವ ಹಾಗೂ ಇಷ್ಟವಿಲ್ಲದಾಗ ತೆಗೆದಿರಿಸುವ ಮೇಲಂಗಿಯಂತೆ ಮಾಡುವಂತಿಲ್ಲವೆಂದು ನೀವೇ ಅರ್ಥ ಮಾಡಿಕೊಳ್ಳಬಹುದು. ಆದ್ದರಿಂದ ಇದರೊಳಗೆ ಕಾಲಿರಿಸುವುದಕ್ಕಿಂತ ಮುಂಚೆ ಹಿಂತೆರಳುವ ಎಲ್ಲಾ ದೋಣಿಗಳನ್ನು ಭಸ್ಮಗೊಳಿಸಿರಿ. ಹಿಂತೆರಳುವ ಅವಕಾಶವೇ ಇಲ್ಲವೆಂಬ ಭಾವನೆಯಿಂದ ಮುನ್ನಡೆಯಿರಿ. ಅಲ್ಲಾಹನೊಂದಿಗೆ ಪ್ರತಿಜ್ಞಾಬದ್ಧರಾಗಿ ನೀವು ಮಾರಿರುವ ದೇಹ ಮತ್ತು ಧನವನ್ನು ಮರಳಿ ಪಡೆಯಲು ಅವಕಾಶವಿಲ್ಲ. ಆ ಪ್ರತಿಜ್ಞೆಯೊಂದಿಗೆ ನೀವು ಸರ್ವಸ್ವವನ್ನು ಆತನಿಗೆ ಮಾರಿರುತ್ತೀರಿ. ಇನ್ನು ನೀವು ಜೀವನವನ್ನು ಬಲಿಯರ್ಪಿಸಿ ಆ ಕರ್ತವ್ಯವನ್ನು ನಿರ್ವಹಿಸಬೇಕಾಗಿದೆ. ನೀವು ಈ ಮಾರ್ಗದಲ್ಲಿ ನಡೆದು ಇತರರನ್ನು ಅದರಲ್ಲಿ ಮುನ್ನಡೆಸಬೇಕು.

ಏನಾದರೂ ಲೋಪದೋಷವನ್ನು ಕಂಡರೆ ಹಿಂತೆರಳುವ ಬಗ್ಗೆ ಯೋಚಿಸಬಾರದು. ಬದಲಾಗಿ ಕಡಿಮೆ ಪಕ್ಷ ನಿಮ್ಮ ಮನೆಗೆ ಬೆಂಕಿ ಬಿದ್ದಾಗ ಅದನ್ನು ನಂದಿಸುವ ಕುರಿತು ನಿಮ್ಮ ಹೃದಯದಲ್ಲಿ ಮೂಡುವ ಕಳಕಳಿಯಂತೆ ಆ ದೋಷಗಳನ್ನು ನೀಗಿಸಲು ಪ್ರಯತ್ನಿಸಬೇಕು. ಮುಂದಿನಾತನು ನಡೆಯದಿದ್ದರೆ ಹಿಂದಿನವರು ಮರಳಿ ಹೋಗುವುದರ ಬದಲಾಗಿ ಮುಂದಿನವನನ್ನು ಮುನ್ನಡೆಯಲು ಒತ್ತಾಯಿಸಬೇಕು ಅಥವಾ ಆತನನ್ನು ತೊರೆದು ನೀವೇ ಮುನ್ನಡೆಯಬೇಕು. ಜಮಾಅತ್‌ನಲ್ಲಿ ಸೇರಿದ ಬಳಿಕ ಅದರ ಚಟುವಟಿಕೆಗಳಲ್ಲಿ ನಿರ್ಲಕ್ಷ್ಯ ತೋರಿ ತನು-ಮನ-ಧನಗಳ ಸಾಮರ್ಥ್ಯಗಳನ್ನು ಆ ಮಾರ್ಗದಲ್ಲಿ ವ್ಯಯಿಸುವ ಬಗ್ಗೆ ಜಿಪುಣತೆ ತೋರಿದರೆ ಅಥವಾ ಇತರ ಕೆಲಸಗಳಿಗೆ ಇದಕ್ಕಿಂತ ಪ್ರಾಮುಖ್ಯತೆ ನೀಡಿದರೆ ಅಲ್ಲಾಹನ ಒಪ್ಪಂದವನ್ನು ಉಲ್ಲಂಘಿಸಿದಂತಾಗುವುದು. ನೀವು ಒಪ್ಪಂದ ಮಾಡಿಕೊಂಡಿರುವುದು ಅಲ್ಲಾಹನೊಂದಿಗೇ ಹೊರತು ಮನುಷ್ಯರೊಂದಿಗಲ್ಲ. ಅದರೊಂದಿಗೆ ನೀವು ಸರ್ವಸ್ವವನ್ನೂ ಸ್ವಯಂ ನಿಮ್ಮನ್ನೂ ಆತನಿಗೆ ಮಾರಿದ್ದೀರಿ. ಆದ್ದರಿಂದ ಈಗ ನಿಮ್ಮ ಎಲ್ಲಾ ವಸ್ತುಗಳ ಮೇಲೆ ಅಲ್ಲಾಹನಿಗೆ ಹಾಗೂ ಆತನ ಕೆಲಸಗಳಿಗೆ ಪ್ರಥಮ ಹಕ್ಕಿದೆ. ಇತರೆಲ್ಲವೂ ಅದಕ್ಕಿಂತ ಹಿಂದಿನ ಸ್ಥಾನದಲ್ಲಿರುವುದು.

## ಮುಸ್ಲಿಮ್ ಸಮುದಾಯದ ಪರೀಕ್ಷೆ

ನಮ್ಮ ಮುಂದಿರುವ ಪ್ರಾಮುಖ್ಯ ಕರ್ತವ್ಯದ ಮಹತ್ವದ ಕುರಿತು ನಿಮಗೆ ಮನವರಿಕೆಯಾಗಲಿಕ್ಕಾಗಿ ಈ ಎಲ್ಲಾ ವಿಷಯಗಳನ್ನು ಸ್ಪಷ್ಟವಾಗಿ ವಿವರಿಸಿರುತ್ತೇನೆ. ತುರ್ತಾಗಿ ಯಾವುದಾದರೂ ದೊಡ್ಡ ಹೆಜ್ಜೆ ಇರಿಸಬೇಕೆಂದು ಹಲವು ಮಂದಿ ನನ್ನೊಡನೆ ಅನೇಕ ಬಾರಿ ವಿನಂತಿಸಿದ್ದಾರೆ. ಆದರೆ ಈಗ ನಾನು ನಿಮ್ಮ ಮುಂದೆ ವಿವರಿಸುವ ಲೋಪದೋಷಗಳನ್ನು ತಿಳಿದಿರುತ್ತಾ ಒಂದು ದೊಡ್ಡ ಹೆಜ್ಜೆಯಿರಿಸಿದರೆ ನನಗಿಂತ ದೊಡ್ಡ ಮೂರ್ಖ ಯಾರಿರಬಹುದು. ಗುಣ ನಡತೆ, ಆಚಾರ ವಿಚಾರ ಮತ್ತು ದೃಷ್ಟಿಕೋನಗಳಲ್ಲಿ ಇಂತಹ ಲೋಪದೋಷಗಳಿರುತ್ತಾ ಲೋಕದಲ್ಲಿ ಯಾವುದೇ ದೊಡ್ಡ ಕಾರ್ಯವನ್ನು ನಿರ್ವಹಿಸಲು ಸಾಧ್ಯವಿಲ್ಲ. ಲೋಕದಲ್ಲಿ ಈ ಮಹತ್ಕಾರ್ಯವನ್ನು ಮಾಡುವುದು ಆ ಬಳಿಕವಲ್ಲವೇ. ಲೋಕದ ಜೀವನ ಪದ್ಧತಿಯಲ್ಲಿ ನಾವು ಸೃಷ್ಟಿಸಬಯಸುವ ಸಮಗ್ರ ಕ್ರಾಂತಿಗೆ ಬೇರೆಯೇ ರೀತಿಯ ವಿಚಾರಧಾರೆ ಮತ್ತು ನಡತೆಗಳ ಅಗತ್ಯವಿದೆ. ಆದರೆ ಅದನ್ನು ಬೆಳೆಸುವ ಸೂಕ್ತ ವ್ಯವಸ್ಥೆ ಹಲವು ಕಾಲದಿಂದ ನಮ್ಮಲ್ಲಿ ನಡೆಯುತ್ತಿಲ್ಲ. ಇಲ್ಲಿ ಬಹಳ ಕಾಲದಿಂದ ರೂಢಿಯಲ್ಲಿರುವ ಬುನಾದಿಗಳು ನಮ್ಮ ಸೇವೆಗೆ ಸಂಬಂಧವಿಲ್ಲದ ಸದಾಚಾರ ಮತ್ತು ವಿಚಾರಧಾರೆಗಳನ್ನು ಬೆಳೆಸಿದೆ. ನಮ್ಮ ಮುಂದಿರುವ ಘನ ಕರ್ತವ್ಯದೆಡೆಗೆ ದೊಡ್ಡ ಹೆಜ್ಜೆಯಿರಿಸುವುದಕ್ಕಿಂತ ಮುಂಚಿತವಾಗಿ ನಾವು ಆ ಹಳೆಯ ಬುನಾದಿಗಳೆಲ್ಲವನ್ನೂ ತೊಡೆದು ಹಾಕಿ, ಅತ್ಯಂತ ತಾಳ್ಮೆ ಮತ್ತು ನಿರಂತರ ಪ್ರಯತ್ನಗಳಿಂದ ಹೊಸ ನಡತೆ, ಹೊಸ ವಿಚಾರಧಾರೆ, ಹೊಸ ಸಂಪ್ರದಾಯ ಮತ್ತು ಹೊಸ ನೈತಿಕ ಮೌಲ್ಯಗಳನ್ನು ಬೆಳೆಸಬೇಕಾಗಿದೆ. ಇವು ವಾಸ್ತವದಲ್ಲಿ ಹೊಸತಲ್ಲ. ಅತ್ಯಂತ ಹಳೆಯದು. ಆದರೆ ದುರದೃಷ್ಟವಶಾತ್ ನಮ್ಮ ಮಟ್ಟಿಗೆ ಅದು ಹೊಸತಾಗಿ ಪರಿಣಮಿಸಿದೆ. ಅಲ್ಲಾಹನು ಲೋಕದಲ್ಲಿ ಸುಧಾರಿತ ಹಾಗೂ ಸುಧಾರಣಾತ್ಮಕವಾದ ಒಂದು ಸುಸಂಘಟಿತ ಪಕ್ಷದ ಅನುಪಸ್ಥಿತಿಯಲ್ಲಿ ಭೂಮಿಯ ನಿಯಂತ್ರಣ ಮತ್ತು ಸೃಷ್ಟಿಗಳ ನಾಯಕತ್ವ ಪದವಿಯನ್ನು ದುಷ್ಟ

ಹಾಗೂ ವಿನಾಶಕಾರಿ ಪಕ್ಷಗಳಿಗೆ ಬಿಟ್ಟು ಕೊಡುತ್ತಾನೆಂಬುದನ್ನು ನೀವು ಚೆನ್ನಾಗಿ ತಿಳಿದಿರಬೇಕು. ಅದೇ ರೀತಿ ಲೋಕದ ಎಲ್ಲಾ ಜನತೆಗಿಂತಲೂ ಉತ್ಕೃಷ್ಟವಾದ ನೈತಿಕ ಮೌಲ್ಯಗಳನ್ನು ಹೊಂದಿರುವ ಹಾಗೂ ಅಲ್ಲಾಹ್ ಮತ್ತು ಆತನ ಧರ್ಮಕ್ಕಾಗಿ ಜೀವಿಸುವ ಮತ್ತು ಸಾಯುವ ಹಾಗೂ ಜನರ ಮೇಲೆ ಅಲ್ಲಾಹನ ಸಾಕ್ಷಿಗಳಾಗುವ ಒಂದು ಉತ್ತಮ ಸಮುದಾಯವು ಲೋಕದಲ್ಲಿ ಅಸ್ತಿತ್ವಕ್ಕೆ ಬಾರದಿದ್ದಾಗ ಮಾತ್ರ ಅಲ್ಲಾಹನ ನಿಯಮದಂತೆ ನಾಯಕತ್ವ ಪದವಿ ಮತ್ತು ನಿಯಂತ್ರಣ ವ್ಯವಸ್ಥೆಗಳಲ್ಲಿ ಏನಾದರೂ ಮೂಲಭೂತ ಬದಲಾವಣೆಯುಂಟಾಗುತ್ತದೆ.

ಈ ಸಂದರ್ಭದಲ್ಲಿ ಒಂದು ವಿಷಯವನ್ನು ನಿಮಗೆ ಸ್ಪಷ್ಟ ಪಡಿಸಬಯಸುತ್ತೇನೆ. ಮುಸ್ಲಿಮ್ ಜನತೆಯ ಮಧ್ಯದಲ್ಲಿ ನಮ್ಮ ಈ ಸಂಘಟನೆಯಂತಹ ಒಂದು ಆಂದೋಲನದ ಉದಯವು ಜನತೆಯನ್ನು ಕಠಿಣ ಪರೀಕ್ಷೆಗಳಿಗೆ ಗುರಿಪಡಿಸಿದೆ. ಸತ್ಯದ ಕೆಲವಂಶಗಳು ಅಸತ್ಯದ ಕಲಬೆರಕೆಯೊಂದಿಗೆ ರಂಗ ಪ್ರವೇಶಗೈದರೆ ಮುಸ್ಲಿಮ್ ಜನಸಾಮಾನ್ಯರು ಅದನ್ನು ಸ್ವೀಕರಿಸದೆ, ಅಸಹಕಾರ ತೋರುವುದಕ್ಕೆ ನ್ಯಾಯೋಚಿತ ಕಾರಣಗಳಿರಬಹುದು. ಆ ಕಾರಣಗಳು ಅಂಗೀಕಾರಾರ್ಹವೂ ಆಗಿರಬಹುದು. ಆದರೆ ಯಾವುದೇ ಕಲ ಬೆರಕೆ ಇಲ್ಲದ, ಅಪ್ಪಟ ಸತ್ಯವು ಅದರ ನೈಜ ರೂಪದಲ್ಲಿ ರಂಗಕ್ಕಿಳಿದು ಇಸ್ಲಾಮಿಗಾಗಿ ವಾದಿಸುತ್ತಿರುವ ಜನತೆಯನ್ನು ಅದರೆಡೆಗೆ ಆಹ್ವಾನಿಸಿದರೆ ಆ ಜನತೆಯು ಅದಕ್ಕೆ ಸಂಪೂರ್ಣ ಸಹಕಾರ ನೀಡಿ "ಮುಸ್ಲಿಮ್ ಸಮುದಾಯ"ದ ಜನ್ಮೋದ್ದೇಶವಾಗಿರುವ ಆ ಸೇವೆಗಾಗಿ ಎದ್ದೇಳಬೇಕಾಗುವುದು. ಅಥವಾ ಅದನ್ನು ನಿಷೇಧಿಸಿ ಈ ಹಿಂದೆ ಯಹೂದಿ ಸಮುದಾಯವು ಕೈಗೊಂಡಿದ್ದ ನೀತಿಯನ್ನು ಕೈಗೊಳ್ಳಬೇಕಾಗುವುದು. ಅವರಿಗೆ ಈ ಎರಡು ಮಾರ್ಗಗಳ ಹೊರತು ಬೇರೆ ದಾರಿಯಿಲ್ಲ. ಆದರೆ ಈ ಎರಡು ದೃಢ ನಿರ್ಧಾರಗಳಲ್ಲಿ ಅಲ್ಲಾಹನು ಕರುಣೆ ಮತ್ತು ಔದಾರ್ಯ ತೋರಿ ಮುಸ್ಲಿಮರಿಗೆ ಇನ್ನೂ ಕಾಲಾವಕಾಶ ಕೊಟ್ಟು, ಇಂತಹ ಅನೇಕ ಸಂಘಟನೆಗಳು ಸರದಿಯಂತೆ ಹುಟ್ಟಿದ ಬಳಿಕ ಅದರ ವಿರುದ್ಧ ಅವರು ಯಾವ ನೀತಿಯನ್ನು ಅನುಸರಿಸುವರೆಂಬುದನ್ನು ನೋಡುವುದೂ ಅಸಂಭವವಲ್ಲ. ಅದೇನಿದ್ದರೂ ಈ ಸಂಘಟನೆಯಿಂದ ವಿಮುಖವಾಗುವುದರ ಅಂತಿಮ ಪರಿಣಾಮವು ಈಗ ನಾನು ಹೇಳಿದಂತೆಯೇ ಆಗಿರಬಹುದು. ಮುಸ್ಲಿಮೇತರರ ಸ್ಥಿತಿ ಇದಕ್ಕಿಂತ ಭಿನ್ನವಾಗಿದೆ. ಆದರೆ ಮುಸ್ಲಿಮರು ಸತ್ಯದಿಂದ ವಿಮುಖರಾಗಿ ಜೀವನೋದ್ದೇಶದ ಸ್ಪಷ್ಟ ಕರೆಯನ್ನು ಕೇಳಿಯೂ ಅದರಿಂದ ಹಿಂದೆ ಸರಿದರೆ, ವಾಸ್ತವದಲ್ಲಿ ಅದು ಅಲ್ಲಾಹನು ಯಾವನೇ ಪ್ರವಾದಿಯ ಸಮುದಾಯಕ್ಕೂ ಕ್ಷಮೆ ನೀಡದಂತಹ ಅಪರಾಧವಾದೀತು.

"ಈ ಸಂಘಟನೆಯು ಈಗ ಭಾರತದಲ್ಲಿ ಜನ್ಮತಾಳಿದೆ. ಆದ್ದರಿಂದ ಕನಿಷ್ಟ ಭಾರತದ ಮುಸ್ಲಿಮರ ಮಟ್ಟಿಗೆ ಆ ಘನಘೋರ ಪರೀಕ್ಷೆಯ ಘಟ್ಟ ಆರಂಭವಾಗಿದೆ. ಈ ಸಂದೇಶವನ್ನು ಇತರ ರಾಷ್ಟ್ರಗಳ ಮುಸ್ಲಿಮರಿಗೂ ನಾವು ತಲುಪಿಸಲು ಪ್ರಯತ್ನಿಸುತ್ತಿದ್ದೇವೆ. ಇದರಲ್ಲಿ ನಾವು ಯಶಸ್ವಿಯಾದರೆ ಈ ಸಂದೇಶ ತಲಪಿದೆಡೆಯ ಮುಸ್ಲಿಮರೆಲ್ಲರೂ ಆ ಪರೀಕ್ಷಾ ಹಂತವನ್ನು ಪ್ರವೇಶಿಸುವರು. ಆದರೆ ಇದು ಮುಸ್ಲಿಮರ ಕೊನೆಯ ಅವಕಾಶವೆಂದು ಹೇಳಲು ನನಗೆ ಯಾವ ಆಧಾರವೂ ದೊರೆತಿಲ್ಲ. ಅದು ಕೇವಲ ಅಲ್ಲಾಹನಿಗೆ ತಿಳಿದಿದೆ. ಆತನು ಮುಸ್ಲಿಮರಿಗೆ ಇನ್ನೂ ಅನೇಕ ಅವಕಾಶಗಳನ್ನು ನಿರ್ಣಯಿಸಿಟ್ಟಿರಬಹುದು. ಆದರೆ ಕುರ್‌ಆನಿನ ಆಧಾರದಲ್ಲಿ ಹೇಳುವುದಿದ್ದರೆ, ಮುಸ್ಲಿಮರ ಮಟ್ಟಿಗೆ ಇದೊಂದು ಸಂದಿಗ್ಧ ಸಂದರ್ಭವೆನ್ನಲಡ್ಡಿಯಿಲ್ಲ.

ಭಾರತೀಯ ಮುಸ್ಲಿಮರ ಮುಂದೆ ಇಂದು ಎರಡು ರೀತಿಯ ಸಂಘಟನೆಗಳಿವೆ. ಒಂದೆಡೆ ನಮ್ಮ ಈ ಸಂಘಟನೆ. ಮುಸ್ಲಿಮ್ ಸಂಘಟನೆಯ ಏಕೈಕ ಉದ್ದೇಶವೆಂದು ಅಲ್ಲಾಹನು ನಿರ್ಧರಿಸಿರುವ ಸೇವೆಗಾಗಿ ಇದು ಮುಸ್ಲಿಮರನ್ನು ಆಹ್ವಾನಿಸುತ್ತದೆ. ಇನ್ನೊಂದೆಡೆ ಮುಸ್ಲಿಮರ ಲೌಕಿಕ ಹಿತಾಸಕ್ತಿಗಳನ್ನು ಮಾತ್ರ ಧ್ಯೇಯವಾಗಿರಿಸಿಕೊಂಡ ಇತರ ಸಂಘಟನೆಗಳಿವೆ. ಪರಸ್ಪರ ವಿರುದ್ಧವಾದ ಈ ಎರಡು ಸಂಘಟನೆಗಳ ಪೈಕಿ ಎರಡನೆಯದಕ್ಕೆ ಮುಸ್ಲಿಮರು ತಂಡೋಪತಂಡವಾಗಿ ಧಾವಿಸುತ್ತಿದ್ದಾರೆ. ಮೊದಲನೆಯದಕ್ಕೆ ಮುಸ್ಲಿಮ್ ಸಮುದಾಯದ ಬಹುತೇಕ ಜನರು ಕಿವುಡರಂತೆ ವರ್ತಿಸುವುದು ನಾಯಕರು ಮತ್ತು ಪಂಡಿತರೂ ಅದರ ಬಗ್ಗೆ ನಿರ್ಲಕ್ಷ್ಯ ತೋರುವುದು, ಪರೋಕ್ಷವಾಗಿ ಅಥವಾ ಬಹಿರಂಗವಾಗಿ ಅದನ್ನು ವಿರೋಧಿಸುವುದು, ಒಂದು ಸಣ್ಣ ವಿಭಾಗವು ಮಾತ್ರ ತದ್ವಿರುದ್ಧವಾಗಿ ಅಂಜುತ್ತಾ ಅಳುಕುತ್ತಾ ಮುನ್ನಡೆಯುವುದೆಲ್ಲವೂ ಅಶುಭ ಲಕ್ಷಣವಾಗಿದ್ದು- ಆಪತ್ಕಾರಿಯಾಗಿದೆ. ನೀವು ಒಂದು ವಿಷಯವನ್ನು ಚೆನ್ನಾಗಿ ತಿಳಿದಿರಬೇಕು. ಅಲ್ಲಾಹನು ಈ ಲೋಕದಲ್ಲಿ ಒಂದು ಸುಧಾರಣಾತ್ಮಕ ಪಕ್ಷದಿಂದ ಬಯಸಿರುವ ಸೇವಾ ಕಾರ್ಯಗಳಿಗಾಗಿ ಕೆಲಸ ಮಾಡುವ ಹಾಗೂ ಅಲ್ಲಾಹನ ಸಾಕ್ಷಿಗಳಾಗಲು ಯೋಗ್ಯರಾದ ಕೆಲವಾರು ಮಂದಿಯಾದರೂ ಮುಸ್ಲಿಮ್ ಜನತೆಯಲ್ಲಿ ಈ ಸಂದರ್ಭದಲ್ಲಿ ರೂಪುಗೊಳ್ಳದಿದ್ದರೆ ಅನಂತರ-

"ಅಲ್ಲಾಹನು ಬೇರೊಂದು ಜನತೆಯನ್ನು ತರುವನೆಂಬುದು ವಿದೂರವಲ್ಲ. ಅವರು ಅಲ್ಲಾಹನನ್ನೂ ಅಲ್ಲಾಹ್ ಅವರನ್ನೂ ಪ್ರೀತಿಸುವವರಾಗಿರುತ್ತಾರೆ. ಅವರು ಸತ್ಯವಿಶ್ವಾಸಿಗಳ ಮಟ್ಟಿಗೆ ವಿನಯಶೀಲರೂ ಸತ್ಯನಿಷೇಧಿಗಳ ಮಟ್ಟಿಗೆ ಕಠೋರರೂ ಆಗಿರುವರು. ಅವರು ಅಲ್ಲಾಹನ ಮಾರ್ಗದಲ್ಲಿ ಹೋರಾಡುವರು, ಅವರು ಯಾರ ಆಕ್ಷೇಪಗಳಿಗೂ ಭಯಪಡುವುದಿಲ್ಲ. ಇದು ಅಲ್ಲಾಹನ ಔದಾರ್ಯ. ಆತನು ತಾನಿಚ್ಛಿಸಿದವರಿಗೆ ಅದನ್ನು ನೀಡುವನು. ಅಲ್ಲಾಹನು ಅತಿ ವಿಶಾಲನೂ ಸರ್ವಜ್ಞನೂ ಆಗಿದ್ದಾನೆ."

ನಾವು ವಾಸ್ತವದಲ್ಲಿ ಒಂದು ಸುಮಧ್ಯ ಸಮುದಾಯವಾಗ ಬಯಸುವವರು. ಆ ಉನ್ನತ ಪದವಿಯನ್ನು ಗಳಿಸುವುದೇ ನಮ್ಮ ಉದ್ದೇಶ. ಆದರೆ ಒಂದು ಉನ್ನತ ಸ್ಥಾನವನ್ನು ಬಯಸಿ ಅದರ ಅಭ್ಯರ್ಥಿಗಳಾಗಿರುತ್ತಾ ಅದರ ಮಹತ್ವದ ಬಗ್ಗೆ ಅಜ್ಞರಾಗಿ ಅದಕ್ಕೆ ಸಿದ್ಧರಾಗದಿರುವುದು ಹೊಣೆಗೇಡಿತನವಾಗಿದೆ. ಆ ಮಹತ್ಕಾರ್ಯಕ್ಕೆ ಅಗತ್ಯವಿರುವ ಒಂದು ಸಣ್ಣಾಂಶವಾದರೂ ನಮ್ಮಲ್ಲಿ ಬೆಳೆಸಿಕೊಳ್ಳದೆ ಕೂಡಲೇ ದಿಟ್ಟ ಹೆಜ್ಜೆಯನ್ನಿಡಬೇಕೆನ್ನುವುದು ಅದಕ್ಕಿಂತ ದೊಡ್ಡ ಬೇಜವಾಬ್ದಾರಿತನವಾಗಿದೆ. ಒಂದು ಹೆಜ್ಜೆಯನ್ನು ಮುಂದುವರಿಸುವಾಗ ಅದಕ್ಕೆ ಅಗತ್ಯವಿರುವ ಸಿದ್ಧತೆ ಮಾಡಿಕೊಳ್ಳದಿದ್ದರೆ ಸೋಲು ಖಚಿತ ವೆಂಬುದನ್ನು ತಿಳಿಯುವ ಪ್ರಜ್ಞೆ ನಿಮ್ಮಲ್ಲಿಲ್ಲವೇ? ಈ ಮಾರ್ಗದಿಂದ ಹಿಂದೆ ಸರಿಯುವುದೆಂದರೆ ಅಲ್ಲಾಹನ ಶರೀಅತ್‌ನಲ್ಲಿ (ಧರ್ಮಶಾಸ್ತ್ರ) ಮಹಾಪರಾಧವೆಂದು ಪರಿಗಣಿಸಲ್ಪಟ್ಟಿರುವ ಯುದ್ಧ ರಂಗದಿಂದ ಪಲಾಯನ ಮಾಡುವುದಕ್ಕೆ ಸಮಾನವೆಂಬ ಭಯ ನಿಮಗಿಲ್ಲವೇ?

## ಕನಿಷ್ಟ ಗುಣ ನಡತೆಗಳು

ಈ ಸಂದೇಶ ಪ್ರಚಾರಕ್ಕಾಗಿ ಕಾರ್ಯೋನ್ಮುಖರಾಗಿರುವ ಜನರಲ್ಲಿರಬೇಕಾದ ಕನಿಷ್ಟ ಗುಣ ನಡತೆಗಳ ಬಗ್ಗೆ ಸ್ವಲ್ಪ ವಿವರಿಸಬಯಸುತ್ತೇನೆ. ಅವರಲ್ಲಿ ಮೂರು ವಿಧದ ಗುಣಗಳಿರಬೇಕು

1. ವೈಯಕ್ತಿಕವಾಗಿ ಪ್ರತಿಯೊಬ್ಬರಲ್ಲಿಯೂ ಇರಬೇಕಾದವುಗಳು.
2. ಪವಿತ್ರ ಮತ್ತು ಪಾವನವಾದ ಸಂಘಟನೆಯೊಂದರ ರಚನೆಗೆ ಆಗತ್ಯವಿರುವವುಗಳು.
3. ಅಲ್ಲಾಹನ ಮಾರ್ಗದಲ್ಲಿ ಸರ್ವಸ್ವವನ್ನೂ ಅರ್ಪಿಸಿ ಹೋರಾಡುವುದಕ್ಕೆ ಅತ್ಯಗತ್ಯವಿರುವ ಗುಣಗಳು.

ನಮ್ಮ ಪೈಕಿ ಪ್ರತಿಯೊಬ್ಬರೂ ತನ್ನ ಚಿತ್ತದೊಂದಿಗೆ ಹೋರಾಡಿ ಅದನ್ನು ಪ್ರಥಮವಾಗಿ ಮುಸ್ಲಿಮ್ ಮತ್ತು ಅಲ್ಲಾಹನಿಗೆ ವಿಧೇಯಗೊಳಿಸುವುದೇ ವೈಯಕ್ತಿಕ ಗುಣದಲ್ಲಿ ಮುಖ್ಯವಾಗಿದೆ. ಆ ಕುರಿತು ಪ್ರವಾದಿವರ್ಯರು(ಸ) ಹೀಗೆಂದಿದ್ದಾರೆ: "ಅಲ್ಲಾಹನ ಅನುಸರಣೆಗಾಗಿ ತನ್ನ ಚಿತ್ತದೊಂದಿಗೆ ಹೋರಾಡುವಾತನೇ ನಿಜವಾದ ಮುಜಾಹಿದ್" (ದೇವ ಮಾರ್ಗದ ಯೋಧ). ಅರ್ಥಾತ್ ನಾವು ಬಾಹ್ಯಲೋಕದಲ್ಲಿ ಅಲ್ಲಾಹನ ಧಿಕ್ಕಾರಿಗಳನ್ನು ಎದುರಿಸುವುದಕ್ಕಿಂತ ಮುಂಚಿತವಾಗಿ, ಸ್ವಯಂ ನಮ್ಮಲ್ಲಿಯೇ ತಳವೂರಿರುವ ಹಾಗೂ ಅಲ್ಲಾಹನ ನಿಯಮ ಮತ್ತು ಸಂತೃಪ್ತಿಗೆ ವಿರುದ್ಧವಾಗಿ ವರ್ತಿಸಲು ಪ್ರೇರೇಪಿಸುತ್ತಿರುವ ಚಿತ್ತವೆಂಬ ವಿದ್ರೋಹಿಯನ್ನು ಅಲ್ಲಾಹನ ಆಜ್ಞೆಗೆ ವಿಧೇಯಗೊಳಿಸಲು ಪ್ರಯತ್ನಿಸಬೇಕು. ಈ ವಿದ್ರೋಹಿಯು ನಮ್ಮ ಅಂತರ್ಭಾಗದಲ್ಲಿ ಬೆಳೆದು ಅಲ್ಲಾಹನ ಸಂಪ್ರೀತಿಗೆ ವಿರುದ್ಧವಾಗಿ ತನ್ನ ಬೇಡಿಕೆಗಳನ್ನು ಈಡೇರಿಸುವಷ್ಟರ ಮಟ್ಟಿಗೆ ಪ್ರಭಾವ ಶಾಲಿಯಾಗಿದ್ದರೆ, ನಾವು ಬಾಹ್ಯ ವಿದ್ರೋಹಿಗಳೊಂದಿಗೆ ಯುದ್ಧ ಘೋಷಿಸುವುದು ನಿರರ್ಥಕ. ಅದು ಮನೆಯೊಳಗೆ ಶರಾಬಿನ ಶೀಷೆಗಳನ್ನಿರಿಸಿ ಮದ್ಯಪಾನಿಗಳ ವಿರುದ್ಧ ಸಮರ ಹೂಡಿದಂತಾಗಬಹುದು. ಈ ವಿರೋಧಾಭಾಸವು ಸಂಘಟನೆಗೆ ಅತ್ಯಂತ ಗಂಡಾಂತರಕಾರಿಯಾಗಿದೆ. ನಾವು ಪ್ರಥಮವಾಗಿ ಅಲ್ಲಾಹನ ಮುಂದೆ ತಲೆಬಾಗಬೇಕು. ಆ ಬಳಿಕ ಅಲ್ಲಾಹನನ್ನು ಅನುಸರಿಸಲು ಇತರರೊಂದಿಗೆ ಹೇಳಬೇಕು.

'ಜಿಹಾದ್'ನ ಬಳಿಕ 'ಹಿಜ್ರತ್'ಗೆ ಎರಡನೇ ಸ್ಥಾನವಿದೆ. ಕೇವಲ ದೇಶ, ಮನೆಮಾರುಗಳನ್ನು ತೊರೆಯುವುದೇ ಹಿಜ್ರತ್‌ನ ತಾತ್ಪರ್ಯವಲ್ಲ. ಅಲ್ಲಾಹನ ನಿಯಮೋಲ್ಲಂಘನೆಯಿಂದ ದೂರ ನಿಂತು ಆತನ ಸಂಪ್ರೀತಿಯನ್ನು ಗಳಿಸುವತ್ತ ಮುನ್ನಡೆಯುವುದೂ ಅದರಲ್ಲಿ ಸೇರಿದೆ. ನೈಜ ಮುಹಾಜಿರನು ಸ್ವದೇಶದಲ್ಲಿ ದೇವಾಜ್ಞೆಯ ಪಾಲನೆಗೆ ಅವಕಾಶವಿಲ್ಲದಿರುವುದರಿಂದಾಗಿ ದೇಶ ತ್ಯಾಗ ಮಾಡುತ್ತಾನೆ. ಆದರೆ ಓರ್ವ ವ್ಯಕ್ತಿಯು ದೇಶ ಮತ್ತು ಮನೆಮಾರುಗಳನ್ನು ತ್ಯಜಿಸಿದರೂ ಅಲ್ಲಾಹನನ್ನು ಅನುಸರಿಸದಿರುವುದು ಮೂಢತನವಾಗಿದೆ. ಈ ವಾಸ್ತವಿಕಾಂಶವನ್ನು ಪ್ರವಾದಿವಚನದಲ್ಲಿ ಸ್ಪಷ್ಟ ಪಡಿಸಲಾಗಿದೆ. ಉದಾ: ಒಮ್ಮೆ ಪ್ರವಾದಿಯೊಂದಿಗೆ ಹೀಗೆ ಪ್ರಶ್ನಿಸಲಾಯಿತು.- "ಅಲ್ಲಾಹನ ಪ್ರವಾದಿಗಳೇ! ಅತ್ಯುತ್ತಮವಾದ 'ಹಿಜ್ರತ್' ಯಾವುದು?" ಅದಕ್ಕೆ ಪ್ರವಾದಿವರ್ಯರು(ಸ)-

"ಅಲ್ಲಾಹನಿಗೆ ಇಷ್ಟವಿಲ್ಲದಿರುವುದನ್ನು ನೀನು ತೊರೆಯುವುದು" ಎಂದರು!

ಚಿತ್ತದೊಳಗಿರುವ ವಿದ್ರೋಹಿಯನ್ನು ಅಲ್ಲಾಹನ ಆಜ್ಞಾಪಾಲಕನಾಗಿ ಮಾಡದೆ ಮಾನವನು ಸ್ವದೇಶವನ್ನು ತೊರೆಯುವುದಕ್ಕೆ ಅಲ್ಲಾಹನ ಬಳಿ ಯಾವ ಮಹತ್ವವೂ ಇಲ್ಲ. ಆದ್ದರಿಂದ ನೀವು ಬಾಹ್ಯ ವಿರೋಧಿ ಶಕ್ತಿಗಳೊಂದಿಗೆ ಹೋರಾಡುವುದಕ್ಕಿಂತ ಮುಂಚಿತವಾಗಿ ಅಂತರ್ಯದಲ್ಲಿರುವ ದುಷ್ಟ ಶಕ್ತಿಗಳೊಡನೆ ಹೋರಾಡಬೇಕೆಂದು ನಾನಿಚ್ಛಿಸುತ್ತೇನೆ. ಸಾಂಕೇತಿಕ ಸತ್ಯನಿಷೇಧಿಗಳನ್ನು ಸತ್ಯವಿಶ್ವಾಸಿಯನ್ನಾಗಿ ಮಾಡುವುದಕ್ಕಿಂತ ಮುಂಚಿತವಾಗಿ ಚಿತ್ತವನ್ನು

ಸತ್ಯವಿಶ್ವಾಸಿ (ಮುಸ್ಲಿಮ್)ಯನ್ನಾಗಿಸಲು ಪ್ರಯತ್ನಿಸಿರಿ. ಇದನ್ನು ಇನ್ನೂ ಸುಸ್ಪಷ್ಟವಾಗಿ ಹೇಳಬೇಕಿದ್ದರೆ- ಪ್ರವಾದಿ(ಸ) ಹೇಳಿರುವಂತೆ ನೀವು ನಿಮ್ಮನ್ನು ಒಂದು ಗೂಟಕ್ಕೆ ಕಟ್ಟಿ ಹಾಕಿರುವ ಕುದುರೆಯಂತೆ ಮಾಡಿಕೊಳ್ಳಿರಿ. ಆ ರೀತಿ ಬಂಧಿಸಲ್ಪಟ್ಟ ಕುದುರೆ ಅದೆಷ್ಟೇ ಸುತ್ತಾಡಿದರೂ ಹಗ್ಗವು ಹೋಗಲನುಮತಿಸುವ ಮೇರೆಗಿಂತ ಒಂದಿಂಚು ಆಚೆ ಸರಿಯಲು ಅದಕ್ಕೆ ಸಾಧ್ಯವಿಲ್ಲ. ಇಂತಹ ಕುದುರೆಯ ಸ್ಥಿತಿಯು ಸ್ವತಂತ್ರವಾಗಿ ಅಡ್ಡಾಡುವ ಕುದುರೆಯ ಸ್ಥಿತಿಗಿಂತ ಭಿನ್ನವಾಗಿರುವುದು. ಅದು ಯಾವ ಮೈದಾನದಲ್ಲಿಯೂ ಮೇಯಬಹುದು. ಹಸಿರು ಹುಲ್ಲು ಕಾಣುವಲ್ಲೆಲ್ಲಾ ನುಗ್ಗಬಹುದು. ಆದ್ದರಿಂದ ಸ್ವತಂತ್ರ ಕುದುರೆಯ ಸ್ಥಿತಿಯನ್ನು ನಿಮ್ಮಿಂದ ಕಿತ್ತೆಸೆದು, ಗೂಟಕ್ಕೆ ಬಿಗಿದ ಕುದುರೆಯ ಸ್ಥಿತಿಯನ್ನು ನೀವು ಮೈಗೂಡಿಸಿಕೊಳ್ಳಬೇಕು.

ಈ ಮನೋವೃತ್ತಿಯನ್ನು ಬೆಳೆಸಿಕೊಂಡ ಬಳಿಕ ನೀವು ಎರಡನೆಯದಾಗಿ ನಿಮ್ಮ ಹೋರಾಟವನ್ನು ಪರಿಸರದೊಂದಿಗೆ ಆರಂಭಿಸಬೇಕು. ನಾನು ಅದನ್ನು 'ಹೋಮ್ ಫ್ರಂಟ್' ಎನ್ನುತ್ತೇನೆ. ನಿಮ್ಮ ಸ್ವಂತ ಮನೆ- ಮನೆಮಂದಿ, ಕುಟುಂಬ ಸಂಬಂಧಿಕರು, ಬಂಧು-ಮಿತ್ರರು ಮತ್ತು ಸಮಾಜದೊಂದಿಗೆ ಸಂಘರ್ಷ ಆರಂಭಿಸಬೇಕು. ಸಂಘರ್ಷವೆಂದರೆ ನೀವು ನಿಮ್ಮ ಬಂಧು ಮಿತ್ರಾದಿಗಳೊಂದಿಗೆ ಜಗಳ ಅಥವಾ ವಾದ ಪ್ರತಿವಾದ ನಡೆಸಬೇಕೆಂದು ಅರ್ಥವಲ್ಲ. ಬದಲಾಗಿ ಈ ಸಂಘರ್ಷವು ನೀವು ವೈಯಕ್ತಿಕವಾಗಿಯೂ ಸಂಘಟನಾತ್ಮಕವಾಗಿಯೂ ನಿಮ್ಮ ಧ್ಯೇಯಾದರ್ಶ ಸಿದ್ಧಾಂತಗಳಲ್ಲಿ ಸಂಪೂರ್ಣ ತಲ್ಲೀನರಾಗಿ ಅದನ್ನು ಪೂರ್ಣ ನಿಷ್ಠೆಯಿಂದ ಪಾಲಿಸುವುದರ ಕಾರಣದಿಂದಾಗಿರಬೇಕು. ನಿಮ್ಮ ಪರಿಸರದಲ್ಲಿ ಯಾವುದೇ ಧ್ಯೇಯವಿಲ್ಲದೆ ಜೀವಿಸುತ್ತಿರುವ ಜನರಿಗೆ ನಿಮ್ಮ ಶಿಸ್ತು ಮತ್ತು ನಿಯಮಬದ್ಧ ಜೀವನವು ಅಸಹನೀಯವಾಗಬೇಕು. ನಿಮ್ಮ ಪತ್ನಿ ಮಕ್ಕಳು, ಮಾತಾಪಿತರು ಮತ್ತು ಬಂಧು ಮಿತ್ರಾದಿಗಳೆಲ್ಲರೂ ನಿಮ್ಮ ನೀತಿಯನ್ನು ವಿರೋಧಿಸಿ ನೀವು ನಿಮ್ಮ ಸಮಾಜದಲ್ಲೇ ಪರಕೀಯನಾಗಬೇಕು. ನೀವು ಉಪಜೀವನಕ್ಕಾಗಿ ದುಡಿವೆಡೆಗಳಲ್ಲಿ ನಿಮ್ಮ ಅಸ್ತಿತ್ವವು ಇತರರ ಕಣ್ಣಿಗೆ ಚುಚ್ಚಬೇಕು. ನೀವು ಕನಸು ಕಾಣುತ್ತಿದ್ದ ಸರಕಾರಿ ಕಚೇರಿಗಳ ಪದವಿಗಳು ನಿಮ್ಮ ಮಟ್ಟಿಗೆ ಬೆಂಕಿಯ ಕೆಂಡದಂತೆ ಭಾಸವಾಗಬೇಕು.

ಒಟ್ಟಿನಲ್ಲಿ ನಿಮಗೆ ನಿಕಟವಾಗಿರುವ ಎಲ್ಲಾ ವಿಷಯಗಳೊಂದಿಗೂ ನೀವು ಪ್ರಥಮವಾಗಿ ಸಂಘರ್ಷ ಆರಂಭಿಸಬೇಕು. ಹೋರಾಟ ರಂಗವು ಮನೆಯಲ್ಲಿಯೇ ಇರುವಾಗ ಹಲವು ಮೈಲು ದೂರ ಹೋಗಿ ಯಾಕೆ ಹೋರಾಡಬೇಕು? ಪ್ರಥಮ ಹೋರಾಟ ಮನೆಯಿಂದಲೇ ಆರಂಭಿಸಬೇಕು. ಈ ತನಕ ನನಗೆ ದೊರೆತಿರುವ ಈ ಸಂಘರ್ಷದ ವಿವರಗಳಂತೆ ಎಲ್ಲಾ ಕಡೆಗಳ ಕಾರ್ಯಕರ್ತರ ಬಗ್ಗೆ ನನಗೆ ಸಂತೃಪ್ತಿಯಿದೆ. ಆದರೆ ಅಂತಹ ಯಾವುದೇ ಸುದ್ದಿ ದೊರೆಯದ ಕಡೆಗಳಿಂದ ವಿವರವು ಯಾವಾಗ ದೊರೆತೀತೆಂದು ನಾನು ಕಾತರದಿಂದ ನಿರೀಕ್ಷಿಸುತ್ತಿದ್ದೇನೆ.

ಸಾಂದರ್ಭಿಕವಾಗಿ ಒಂದು ವಿಷಯವನ್ನು ಇಲ್ಲಿ ಸ್ಪಷ್ಟ ಪಡಿಸಬಯಸುತ್ತೇನೆ- ಪ್ರಸ್ತುತ ಸಂಘರ್ಷಗಳೆಲ್ಲವೂ ಓರ್ವ ವೈದ್ಯನು ರೋಗಿಯೊಂದಿಗೆ ಸಂಘರ್ಷಿಸುವ ಮನೋಭಾವದಿಂದ ಕೂಡಿರಬೇಕು. ವೈದ್ಯನು ವಾಸ್ತವದಲ್ಲಿ ರೋಗಿಯ ಬದಲಾಗಿ ರೋಗದೊಂದಿಗೆ ಹೋರಾಡುತ್ತಾನೆ. ಆತನ ಎಲ್ಲಾ ಪ್ರಯತ್ನವು ಅನುಕಂಪ ಮತ್ತು ಸಹಾನುಭೂತಿಯ ತಳಹದಿಯಲ್ಲಾಗಿರುವುದು. ಆತನ ವಿದ್ವೇಷವೆಲ್ಲವೂ ರೋಗದ ವಿರುದ್ಧವೇ ಹೊರತು ರೋಗಿಯೊಂದಿಗಿರುವುದಿಲ್ಲ. ಸಾಮಾನ್ಯವಾಗಿ ಇದೇ ರೀತಿಯಲ್ಲಿ ದುರ್ಮಾರ್ಗದಲ್ಲಿ ಸಿಲುಕಿರುವ ಸಹೋದರರನ್ನು ಸನ್ಮಾರ್ಗಕ್ಕೆ

ಕರೆತರಬೇಕು. ತನ್ನನ್ನು ಅವಮಾನಿಸಿದ್ದಾರೆ ಅಥವಾ ತನ್ನನ್ನು ದ್ವೇಷಿಸಿದ್ದರೆಂಬ ಭಾವನೆ ಆತನಿಗುಂಟಾಗಬಾರದು. ಬದಲಾಗಿ ನಿಮ್ಮಲ್ಲಿ ಮಾನವೀಯ ಅನುಕಂಪ, ಪ್ರೀತಿ, ವಾತ್ಸಲ್ಯಗಳು ನೆಲೆಸಿವೆಯೆಂದು ಆತನಿಗೆ ಭಾಸವಾಗಬೇಕು. ವಾಸ್ತವದಲ್ಲಿ ಪ್ರಚಾರ ಕಾರ್ಯವನ್ನು ಭಾಷಣ ಅಥವಾ ಪ್ರಬಂಧಗಳಿಂದ ಪ್ರಾರಂಭಿಸುವುದಲ್ಲ. ಅದು ಚಟುವಟಿಕೆಯ ಅತೀ ಕೆಳಗಿನ ಹಂತ. ನೀವು ನಿಮ್ಮ ಬೋಧನೆಯ ಪ್ರತ್ಯಕ್ಷ ಮಾದರಿಯಾಗುವುದೇ ನಿಜವಾದ ಪ್ರಚಾರ. ಜನರು ಎಂದಾದರೂ ನಿಮ್ಮ ನೀತಿ ನಡವಳಿಕೆಗಳನ್ನು ಕಂಡರೆ ನೀವು ದೇವ ಮಾರ್ಗದ ಯಾತ್ರಿಕರೆಂಬುದು ಅವರಿಗೆ ಮನದಟ್ಟಾಗಬೇಕು. ಓರ್ವ ಕಾಂಗ್ರೆಸಿಗನು ನಿಮ್ಮ ಮುಂದೆ ಬಂದಾಗ, ಇಡೀ ಕಾಂಗ್ರೆಸಿನ ಚಿತ್ರವು ನಿಮ್ಮ ಕಣ್ಣ ಮುಂದೆ ಚಲಿಸುವಂತೆಯೇ ನೀವು ಇಸ್ಲಾಮಿನಲ್ಲಿ ವಿಲೀನವಾದರೆ ಜನರಿಗೆ ಕಾಣುವಾಗಲೆಲ್ಲಾ ಇಸ್ಲಾಮಿ ಸಂಘಟನೆಯ ಸಂಪೂರ್ಣ ಚಿತ್ರವು ಅವರ ಮುಂದೆ ಗೋಚರಿಸಬೇಕು. 'ಅವರನ್ನು (ನೈಜ ವಿಶ್ವಾಸಿಗಳನ್ನು) ಕಾಣುವಾಗ ಅಲ್ಲಾಹನ ಜ್ಞಾಪಕ ವಾಗುವುದು' ಎಂಬ ಪ್ರವಾದಿ ವಚನವು ಇದೇ ವಾಸ್ತವಿಕಾಂಶವನ್ನು ಸೂಚಿಸುತ್ತದೆ.

ಒಂದೇ ಬಾರಿಗೆ ಹಾಗಾಗಬೇಕೆಂದು ನಾನು ಹೇಳುವುದಿಲ್ಲ. ಈ ಉತ್ಕೃಷ್ಟ ಸ್ಥಾನವನ್ನು ಹಂತಹಂತವಾಗಿಯೇ ಸಾಧಿಸಬೇಕು. ಅಲ್ಲಾಹನ ಮಾರ್ಗದಲ್ಲಿ ಪರಿಸರದೊಂದಿಗೆ ನಿರಂತರ ಸಂಘರ್ಷಿಸುತ್ತಾ ಪ್ರತಿ ಕ್ಷಣವೂ ಧ್ಯೇಯ ಸಾಧನೆಗಾಗಿ ನೀವು ಪರಿಶ್ರಮ ಮತ್ತು ತ್ಯಾಗಗಳನ್ನು ಮಾಡುತ್ತಲಿದ್ದರೆ, ನೀವು ಅಲ್ಲಾಹನ ಧರ್ಮದಲ್ಲಿ ವಿಲೀನರಾಗುವ ಸಂದರ್ಭ ಒದಗುವುದು. ನೀವು ನಿಮ್ಮ ಪ್ರಚಾರದ ಪ್ರದರ್ಶನ ರಂಗವಾಗುವಿರಿ. ಈ ಉದ್ದೇಶಾರ್ಥವಾಗಿ, ನೀವು ಪವಿತ್ರ ಕುರ್‌ಆನ್ ಮತ್ತು ಪ್ರವಾದಿವಚನಗಳನ್ನು ಶ್ರದ್ಧಾಪೂರ್ವಕ ಪದೇ ಪದೇ ಓದುತ್ತಿರಬೇಕು. ತನ್ಮೂಲಕ ಇಸ್ಲಾಮ್ ಯಾವ ವಿಧದ ಜನರನ್ನು ಬಯಸುತ್ತದೆ? ಪ್ರವಾದಿವರ್ಯರು(ಸ) ಯಾವ ರೀತಿಯ ಜನರನ್ನು ಬೆಳೆಸಿದರು ಮತ್ತು ಈ ಆಂದೋಲನದ ಕಾರ್ಯಕರ್ತರಲ್ಲಿ ಪ್ರಾಥಮಿಕವಾಗಿ ಯಾವೆಲ್ಲಾ ಗುಣಗಳು ಮೈಗೂಡಿದ ಬಳಿಕ ಪ್ರವಾದಿವರ್ಯರು(ಸ) ಹೋರಾಟದ ಧ್ವಜವನ್ನು ಎತ್ತಿ ಹಿಡಿದರೆಂಬುದು ವ್ಯಕ್ತವಾಗುವುದು. ಲೋಕದ ಅತೀ ಶ್ರೇಷ್ಠ ಸುಧಾರಕರು(ಸ) ಸುಧಾರಣಾ ಕಾರ್ಯಕ್ರಮಗಳಿಂದ ಬೆಳೆಸಿದ ಜನರನ್ನು ಹದಿನೈದು ವರ್ಷಗಳ ನಿರಂತರ ತರಬೇತಿಯ ಬಳಿಕ ಕಾರ್ಯರಂಗಕ್ಕಿಳಿಸಿದರೆಂಬುದನ್ನು ನೀವೆಲ್ಲರೂ ಬಲ್ಲಿರಿ. ಆ ಶಿಕ್ಷಣ ತರಬೇತಿಗಳ ಕಾರ್ಯವಿಧಾನವನ್ನೊಮ್ಮೆ ಅವಲೋಕಿಸಿ ನೋಡಿರಿ. ಅದು ಯಾವ ರೀತಿ ಹಂತ ಹಂತವಾಗಿ ನಿರ್ವಹಿಸಲ್ಪಟ್ಟಿತು. ಅದರಲ್ಲಿ ಯಾವ ಗುಣ ನಡತೆಯ ತರಬೇತಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಲಾಯಿತು? ಯಾವ್ಯಾವ ಗುಣಗಳು ಎಷ್ಟರ ಮಟ್ಟಿಗೆ ಅಗತ್ಯವಿದ್ದುವು. ಅದನ್ನು ಹೇಗೆ ಬೆಳೆಸಲಾಯಿತು? ಅಲ್ಲಾಹನು ಪ್ರಸ್ತುತ ಸಂಘಟನೆ ಯಾವ ಮಟ್ಟಕ್ಕೆ ತಲಪಿದಾಗ, 'ನೀವು ಈಗ ಲೋಕದ ಅತ್ಯುತ್ತಮ ಸಮುದಾಯವಾಗಿದ್ದೀರಿ. ಮಾನವ ಲೋಕದ ಸುಧಾರಣಾ ಕಾರ್ಯಗಳನ್ನಾರಂಭಿಸಲು ನೀವು ಯೋಗ್ಯರಾಗಿದ್ದೀರಿ' ಎಂಬುದಾಗಿ ಹೇಳಿದನು. ನಿಮ್ಮ ಸ್ವಂತ ತರಬೇತಿಗಾಗಿ ಇದೇ ಮಾದರಿ ನಿಮ್ಮ ಮುಂದಿರಬೇಕು.

ಸವಿಸ್ತಾರವಾಗಿ ವಿವರಿಸಲು ಈಗ ಸಮಯವಿಲ್ಲದಿರುವುದರಿಂದ ನಿಮ್ಮ ತಿಳುವಳಿಕೆಗಾಗಿ ಒಂದೆರಡು ಹದೀಸ್‌ಗಳನ್ನು ಮಾತ್ರ ವಿವರಿಸುತ್ತೇನೆ. ಆ ಹದೀಸ್‌ಗಳಲ್ಲಿ, ಈ ಮಹತ್ಕಾರ್ಯಕ್ಕೆ ಯಾವ ಗುಣ ನಡತೆಯ ಜನರ ಅಗತ್ಯವಿದೆಯೆಂಬುದು ನಿಮಗೆ ಮನದಟ್ಟಾದೀತು.

ಪ್ರವಾದಿವರ್ಯರು(ಸ) ಹೀಗೆಂದಿದ್ದಾರೆ:

"ಅಲ್ಲಾಹನಿಗಾಗಿ ಪ್ರೀತಿಸುವ, ಅಲ್ಲಾಹನಿಗಾಗಿ ಕೋಪಿಸುವ, ಅಲ್ಲಾಹನಿಗಾಗಿ ನೀಡುವ ಮತ್ತು ಅಲ್ಲಾಹನಿಗಾಗಿ ತಡೆಹಿಡಿಯುವಾತನು ನಿಸ್ಸಂದೇಹವಾಗಿ ತನ್ನ ವಿಶ್ವಾಸವನ್ನು ಪೂರ್ಣಗೊಳಿಸಿದನು."

ಅರ್ಥಾತ್ ಮಾನವನ ಪ್ರೀತಿ ಮತ್ತು ದ್ವೇಷ, ಕೊಡುವುದು ಮತ್ತು ಕೊಡದಿರುವುದು ಎಲ್ಲವೂ ಕೇವಲ ಅಲ್ಲಾಹನ ಸಂಪ್ರೀತಿಯ ಆಕಾಂಕ್ಷೆಯಿಂದಾದಾಗ ಹಾಗೂ ಎಲ್ಲಾ ಸ್ವಾರ್ಥ ಮತ್ತು ಲೌಕಿಕ ಪ್ರೇರಕಗಳು ಕೊನೆಗೊಂಡಾಗ ಮಾತ್ರ ಓರ್ವ ವ್ಯಕ್ತಿಯ ವಿಶ್ವಾಸ ಪೂರ್ಣವಾಗುತ್ತದೆ, ಇನ್ನೊಂದೆಡೆ ಪ್ರವಾದಿವರ್ಯರು(ಸ) ಹೀಗೆಂದಿದ್ದಾರೆ, "ನನ್ನ ಪ್ರಭುವು ನನಗೆ ಒಂಭತ್ತು ವಿಷಯಗಳನ್ನು ಆಜ್ಞಾಪಿಸಿದ್ದಾನೆ."

1. ಅಂತರಂಗ ಬಹಿರಂಗಗಳಲ್ಲಿ ಅಲ್ಲಾಹನನ್ನು ಭಯಪಡಿರಿ.
2. ಸಿಟ್ಟು ಮತ್ತು ಸಂತೋಷಗಳ ವೇಳೆ ನ್ಯಾಯೋಚಿತವಾಗಿ ಮಾತನಾಡಿರಿ.
3. ಬಡತನ ಮತ್ತು ಸಿರಿವಂತಿಕೆಗಳಲ್ಲಿ ಮಧ್ಯಮ ಮಾರ್ಗವನ್ನು ಅನುಸರಿಸಿರಿ.
4. ನಿಮ್ಮೊಂದಿಗೆ ಸಂಬಂಧ ಕಡಿದುಕೊಳ್ಳುವಾತನೊಂದಿಗೆ ನೀವು ಸಂಬಂಧ ಬೆಳೆಸಿರಿ.
5. ನಿಮಗೆ ಸಹಾಯ ನಿರಾಕರಿಸಿರುವವರಿಗೆ ನೀವು ಸಹಾಯ ಮಾಡಿರಿ.
6. ನಿಮ್ಮ ಮೇಲೆ ಅನ್ಯಾಯವೆಸಗಿದವರಿಗೆ ನೀವು ಕ್ಷಮೆ ನೀಡಿ.
7. ನಿಮ್ಮ ಮೌನವು ಚಿಂತನೆಯ ಮೌನವಾಗಿರಬೇಕು.
8. ನಿಮ್ಮ ಮಾತು ದೇವಸ್ಮರಣೆಯ ಮಾತಾಗಿರಬೇಕು.
9. ನಿಮ್ಮ ನೋಟವು ಪಾಠ ಕಲಿಯುವ ನೋಟವಾಗಿರಬೇಕು.

ಈ ಮುಖ್ಯ ಗುಣಗಳನ್ನು ವಿವರಿಸಿದ ಬಳಿಕ ಪ್ರವಾದಿ(ಸ) ಹೇಳಿದರು: "ಸತ್ಕರ್ಮಗಳನ್ನು ಆಜ್ಞಾಪಿಸಲಿಕ್ಕೂ, ದುಷ್ಕರ್ಮಗಳನ್ನು ವಿರೋಧಿಸಲಿಕ್ಕೂ ನನ್ನೊಡನೆ ಆಜ್ಞಾಪಿಸಲಾಗಿದೆ." ಆದ್ದರಿಂದ ಒಳಿತಿನ ಪ್ರಚಾರ ಮತ್ತು ಕೆಡುಕಿನ ನಿರ್ಮೂಲನಕ್ಕಾಗಿ ಹೊರಡುವ ಉತ್ತಮ ಸಮುದಾಯದ ಪ್ರತಿಯೊಬ್ಬ ವ್ಯಕ್ತಿಯಲ್ಲಿ ಈ ಒಂಭತ್ತು ಗುಣಗಳಿರಬೇಕಾದುದು ಅನಿವಾರ್ಯವಾಗಿದೆ. ಅವುಗಳಿಲ್ಲದೆ ನಮ್ಮ ಪದವಿಯ ಬೇಡಿಕೆಗಳನ್ನು ಈಡೇರಿಸಲು ನಮ್ಮಿಂದ ಸಾಧ್ಯವಾಗಲಾರದು.

## ಸಂಘಟನೆಯ ನೈತಿಕ ಮೌಲ್ಯಗಳು

ಈ ತನಕ ವ್ಯಕ್ತಿ ಸುಧಾರಣೆಯ ಕುರಿತು ಹೇಳಿದೆ. ಅದಲ್ಲದೇ ಸಂಘಟನೆಗೆ ಇನ್ನೂ ಕೆಲವು ನೈತಿಕ ಮೌಲ್ಯ ವ್ಯವಸ್ಥೆಗಳ ಅಗತ್ಯವಿದೆ. ಸಂಘಟನಾ ವ್ಯವಸ್ಥೆ ಭದ್ರ ಹಾಗೂ ಯಶಸ್ವಿಯಾಗಬೇಕಾದರೆ ಜಮಾಅತ್ ಸದಸ್ಯರಲ್ಲಿ ಪರಸ್ಪರ ಪ್ರೀತಿ ಅನುಕಂಪಗಳಿರಲೇ ಬೇಕು. ಪರಸ್ಪರ ನಂಬಿಕೆ, ಸಹಕಾರ ಮನೋಭಾವಗಳಿರಬೇಕು. ಪರಸ್ಪರರಿಗೆ ಸತ್ಯದ ಉಪದೇಶ ಮಾಡುತ್ತಿರಬೇಕು. ಸ್ವಯಂ ಮುನ್ನಡೆಯುವುದರೊಂದಿಗೆ ಇತರರನ್ನೂ ಮುನ್ನಡೆಸಬೇಕು. ಈ ಎಲ್ಲಾ ಗುಣಗಳು ಸಂಘಟನಾ ವ್ಯವಸ್ಥೆಯ ಮುಖ್ಯ ಬೇಡಿಕೆಗಳಾಗಿವೆ. ವೈಯಕ್ತಿಕವಾಗಿ ಎಲ್ಲರೂ ಉತ್ತಮ ಗುಣವಂತರಾಗಿದ್ದರೂ ಅವರು ಪರಸ್ಪರ ಒಗ್ಗಟ್ಟಿನಿಂದ ಸಹಕರಿಸಿ ಮುನ್ನಡೆಯದಿದ್ದರೆ ಈ ಲೋಕದಲ್ಲಿ ಮಿಥ್ಯ ಶಕ್ತಿಗಳ ಒಂದು ಕೂದಲನ್ನು ಕೊಂಕಿಸಲೂ ನಮ್ಮಿಂದ ಸಾಧ್ಯವಿಲ್ಲ.

ವೈಯಕ್ತಿಕವಾಗಿ ಉತ್ತಮ ಗುಣಮಟ್ಟದ ಜನರು ನಮ್ಮಲ್ಲಿ ಹಿಂದೆಯೂ ಇದ್ದರು, ಈಗಲೂ ಇದ್ದಾರೆಂದರೆ ತಪ್ಪಾಗಲಾರದು. ನಮ್ಮಲ್ಲಿರುವಂತಹ ಉತ್ತಮ ವ್ಯಕ್ತಿಗಳು ಬೇರೆ ಜನ ವಿಭಾಗಗಳಲ್ಲಿ ಇಲ್ಲವೆಂಬ ಪಂಥಾಹ್ವಾನವನ್ನು ನಾವಿಂದು ನೀಡಿದರೆ ಅದಕ್ಕೆ ಉತ್ತರ ನೀಡಲು ಯಾವ ಸಮುದಾಯಕ್ಕೂ ಸಾಧ್ಯವಾಗಲಾರದು. ಆದರೆ ಇದೆಲ್ಲವೂ ಕೇವಲ ವೈಯಕ್ತಿಕ ಸುಧಾರಣೆಗೆ ಸೀಮಿತವಾಗಿದೆ. ವೈಯಕ್ತಿಕ ಸುಧಾರಣೆಯಲ್ಲಿ ಉನ್ನತ ಸ್ಥಾನಗಳಿಸಿದ ಜನರು ಹೆಚ್ಚೆಂದರೆ ಕೇವಲ ಕೆಲವು ಶತಕ, ಅಥವಾ ಕೆಲವು ಸಹಸ್ರ ಸಂಖ್ಯೆಯ ಜನರಲ್ಲಿ ತಮ್ಮ ಪ್ರಭಾವ ಮತ್ತು ಪಾವಿತ್ರ್ಯದ ಸ್ಮರಣೆಯನ್ನಷ್ಟೆ ಬಿಟ್ಟು ಹೋಗಿದ್ದಾರೆ. ಬೃಹತ್ ಪ್ರಮಾಣದ ಚಟುವಟಿಕೆಗಳಿಗೆ ಈ ಮಾರ್ಗ ತೀರಾ ಯೋಗ್ಯವಲ್ಲ. ಓರ್ವ ಕುಸ್ತಿಪಟು ಭಾರವಾದ ವಸ್ತುಗಳನ್ನು ಲೀಲಾಜಾಲವಾಗಿ ಎತ್ತುತ್ತಾನೆ. ಮಲ್ಲಯುದ್ಧದಲ್ಲಿ ಅನೇಕ ಮಂದಿಯನ್ನು ನೆಲಕ್ಕಪ್ಪಳಿಸುತ್ತಾನೆ. ಆದರೆ ಒಂದು ಸುಸಜ್ಜಿತ ರೆಜಿಮೆಂಟಿನ ಮುಂದೆ ಆತನ ಬಲವೆಲ್ಲವೂ ನಿಷ್ಪ್ರಯೋಜಕ. ಇದೇ ರೀತಿ ನಮ್ಮಲ್ಲಿ ಕೆಲವರು ವೈಯಕ್ತಿಕವಾಗಿ ಪಾವಿತ್ರ್ಯ ಮತ್ತು ಶ್ರೇಷ್ಠತೆಯ ಉನ್ನತ ಹಂತವನ್ನು ತಲುಪಿದ್ದಾರೆ. ಆದರೆ ಅವರಲ್ಲಿ ಸಾಮೂಹಿಕ ಸಂಬಂಧ ಮತ್ತು ಸಹಕಾರವಿಲ್ಲದಿದ್ದರೆ ಅವರ ಅವಸ್ಥೆಯು ರೆಜಿಮೆಂಟಿನಲ್ಲಿ ಸೇರದೆ ಒಂಟಿಯಾಗಿ ರೆಜಿಮೆಂಟನ್ನು ಯುದ್ಧಕ್ಕೆ ಆಹ್ವಾನಿಸುವ ಕುಸ್ತಿಪಟುವಿನಂತಾದೀತು. ವೈಯಕ್ತಿಕ ಸುಧಾರಣೆ ಮತ್ತು ಸಚ್ಚಾರಿತ್ರ್ಯದ ದೃಷ್ಟಿಯಿಂದ ನೋಡಿದರೆ ನಮ್ಮ ಸಂಘಟನೆಯಲ್ಲಿ ಅಂತಹ ಕಾರ್ಯಕರ್ತರಿಗೇನೂ ಕೊರತೆಯಿಲ್ಲ. ಆ ಪೈಕಿ ಕೆಲವರ ಬಗ್ಗೆ ನನಗೆ ಈರ್ಷ್ಯೆಯಾಗುತ್ತದೆ. ಆದರೆ, ಸಂಘಟಿತ ಸುಧಾರಣೆ ಮತ್ತು ಪಾವಿತ್ರ್ಯದ ಅವಸ್ಥೆಯು ಶೋಚನೀಯವಾಗಿದೆ. ಮುಂದೆ ಈ ಸಮಸ್ಯೆಯ ಬಗ್ಗೆ ವಿವರವಾಗಿ ಬರೆಯಬೇಕೆಂದಿದ್ದೇನೆ. ಒಂದು ಸಂಘಟನೆಯೆಂಬ ನೆಲೆಯಲ್ಲಿ ಏನೆಲ್ಲಾ ತೋರೆಯಬೇಕು? ಆ ಸ್ಥಾನದಲ್ಲಿ ಯಾವೆಲ್ಲಾ ವಿಷಯಗಳ ಅಗತ್ಯವಿದೆಯೆಂಬುದನ್ನು ನಾನು ವಿವರಿಸಬಯಸಿದ್ದೇನೆ.

ಪವಿತ್ರ ಕುರ್‌ಆನಿನಲ್ಲಿ ಈ ಬಗ್ಗೆ ತಾತ್ವಿಕ ರೂಪದಲ್ಲಿ ಸ್ಪಷ್ಟವಾಗಿ ಪ್ರತಿಪಾದಿಸಲಾಗಿದೆ. ಪ್ರವಾದಿ ವಚನಗಳಲ್ಲಿ ಪ್ರಸ್ತುತ ತತ್ವಗಳ ಸಂಪೂರ್ಣ ವಿವರಣೆಯಿದೆ. ಪ್ರವಾದಿ ಮತ್ತು ಸಹಾಬಿವರ್ಯರ ಜೀವನ ಚರ್ಯೆಯ ಅಧ್ಯಯನದಿಂದಲೂ ಸಾಮಾಜಿಕ ಗುಣಗಳ ಸಾಕ್ಷಾತ್ ಮಾದರಿಯನ್ನು ತಿಳಿದುಕೊಳ್ಳಬಹುದಾಗಿದೆ. ಈ ವಿಷಯಗಳನ್ನು ನೋಡಿ ಕಲಿಯಲು ಪ್ರಯತ್ನಿಸಿರಿ. ಅವುಗಳ ಆಧಾರದಲ್ಲಿ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಏನೆಲ್ಲಾ ಕುಂದು ಕೊರತೆಗಳಿವೆಯೆಂಬುದನ್ನು ಕಂಡು ಹಿಡಿದು ಅದರ ಪರಿಹಾರಕ್ಕಾಗಿ ಶ್ರಮಿಸಿರಿ.

ಸಾಮಾಜಿಕ ವ್ಯವಸ್ಥೆಯಲ್ಲಿ ಜನರು ಪರಸ್ಪರ ಸಂಪರ್ಕಿಸಬೇಕಾಗಿದೆಯೆಂಬುದು ಖಚಿತ. ಪರಸ್ಪರ ನಂಬಿಕೆ, ಸಹಾನುಭೂತಿ, ತ್ಯಾಗ ಮನೋಭಾವ, ಸಹಿಷ್ಣುತೆಗಳಿಲ್ಲದಿದ್ದರೆ ನೈಸರ್ಗಿಕ ಭಿನ್ನತೆಯಿಂದಾಗಿ ಪ್ರಸ್ತುತ ಸಹಕಾರವು ಹೆಚ್ಚು ಕಾಲ ಉಳಿಯಲಾರದು. ಸಂಘಟನಾ ವ್ಯವಸ್ಥೆಯ ಬುನಾದಿಯೇ ನೀವು ಇತರರಿಗಾಗಿ ಕೆಲವನ್ನು ತ್ಯಜಿಸಿ, ಇತರರು ನಿಮಗಾಗಿ ಕೆಲವು ಔದಾರ್ಯಗಳನ್ನು ತೋರುವುದನ್ನು ಆಧರಿಸಿದೆ. ಈ ಧೀರ ತ್ಯಾಗಕ್ಕೆ ಸಿದ್ಧವಿಲ್ಲದಿದ್ದರೆ ಕ್ರಾಂತಿಯ ಬಗ್ಗೆ ಮಾತನಾಡುವುದು ನಿಷ್ಪ್ರಯೋಜಕ.

ಇನ್ನು ಮೂರನೇ ವರ್ಗದ ಗುಣಗಳು ಅಲ್ಲಾಹನ ಮಾರ್ಗದ ಹೋರಾಟ ಪ್ರಯತ್ನಗಳಿಗೆ ಅಗತ್ಯವಾಗಿದೆ. ಈ ಕುರಿತು ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ ವಿವರವಾಗಿ ಪ್ರತಿಪಾದಿಸಲಾಗಿದೆ.

ಅಲ್ಲದೆ ಅಗತ್ಯವಿರುವ ಪ್ರತಿಯೊಂದು ಗುಣವನ್ನೂ ಎತ್ತಿ ತೋರಿಸಿ ಅವು ಯಾವ ರೀತಿಯಲ್ಲಿ ಎಷ್ಟರ ಮಟ್ಟಿಗೆ ಅವಶ್ಯವೆಂಬುದು ನಿರ್ದೇಶಿಸಲ್ಪಟ್ಟಿದೆ. ಈ ಕುರಿತಾದ ನಿಯಮ ನಿರ್ದೇಶಗಳನ್ನು ಸಂಗ್ರಹಿಸಿ ಅಲ್ಲಾಹನ ಮಾರ್ಗದ ಹೋರಾಟ ಪ್ರಯತ್ನಗಳಿಗೆ ಅಗತ್ಯವಿರುವ ಸಿದ್ಧತೆಗಳನ್ನು ಚೆನ್ನಾಗಿ ತಿಳಿಯಲು ಪ್ರಯತ್ನಿಸಿರಿ. ಆ ಕುರಿತು ನಿಮ್ಮ ತಿಳುವಳಿಕೆಗಾಗಿ ಕೆಲವು ವಿಷಯಗಳನ್ನು ಇಲ್ಲಿ ಉದ್ಧರಿಸುತ್ತೇನೆ.

ಈ ಬಗ್ಗೆ (ಸಬ್ರ್) ಸಹನೆ ಎಂಬ ಗುಣವನ್ನು ಪ್ರಥಮವಾಗಿ ಒತ್ತಿ ಹೇಳಲಾಗಿದೆ. 'ಸಹನೆ'ಯಿಲ್ಲದೆ ದೇವನ ಮಾರ್ಗದ ಮಾತಂತಿರಲಿ. ಇತರ ಯಾವ ಮಾರ್ಗದಲ್ಲಿಯೂ ಹೋರಾಡಲು ಸಾಧ್ಯವಿಲ್ಲ. ದೇವ ಮಾರ್ಗ ಮತ್ತು ಲೌಕಿಕ ಮಾರ್ಗಗಳಿಗೆ ಅಗತ್ಯವಿರುವ ಸಹನೆಗಳಲ್ಲಿ ವ್ಯತ್ಯಾಸವಿರಬಹುದಾದರೂ ಎಲ್ಲಾ ಹೋರಾಟಗಳಿಗೂ 'ಸಬ್ರ್' ಅನಿವಾರ್ಯವಾಗಿದೆ. 'ಸಬ್ರ್'ನ ಹಲವು ವಿಧಗಳಿವೆ-

1. ದುಡುಕು ಸ್ವಭಾವವನ್ನು ವರ್ಜಿಸುವುದು.
2. ಧ್ಯೇಯ ಸಾಧನೆಗಾಗಿ ಪ್ರಯತ್ನಿಸುತ್ತಾ ಅಡೆತಡೆ, ಸಂಕಷ್ಟ, ವಿರೋಧ, ಹಿಂಸೆಗಳ ವಿರುದ್ಧ ದೃಢಚಿತ್ತರಾಗಿ ಮುಂದಿಟ್ಟ ಹೆಜ್ಜೆಯನ್ನು ಹಿಂತೆಗೆಯದಿರುವುದು.
3. ಪ್ರಯತ್ನಗಳ ಪ್ರತಿಫಲವು ತಕ್ಷಣ ಗೋಚರವಾಗದಿದ್ದರೆ ನಿರಾಶೆ ತಾಳದೆ ನಿರಂತರ ಪ್ರಯತ್ನಗಳನ್ನು ನಡೆಸುವುದು.
4. ಧ್ಯೇಯದ ಹಾದಿಯಲ್ಲಿ ಭೀಕರ ಅಪಾಯ, ನಷ್ಟ, ಭೀತಿ, ಆಮಿಷ ಮುಂತಾದ ಯಾವುದೇ ಸಂದಿಗ್ಧ ಘಟ್ಟಗಳು ಬಂದರೂ ಹೆಜ್ಜೆ ಹಿಂತೆಗೆಯದಿರುವುದು.

5. ಎಂತಹ ಕಠಿಣ ಸಂದರ್ಭಗಳಲ್ಲಿಯೂ ಭಾವೋದ್ರೇಕಕ್ಕೊಳಗಾಗದೆ, ಮಾನಸಿಕ ಸಮತೋಲನವನ್ನು ಕಾಪಾಡಿ ಕೊಳ್ಳುವುದು. ಭಾವಪರವಶವಾಗಿ ಯಾವ ಹೆಜ್ಜೆಯನ್ನೂ ಮುಂದಿರಿಸದೆ ಎಲ್ಲಾ ಸಂದರ್ಭಗಳಲ್ಲಿಯೂ ಶಾಂತ ಚಿತ್ತರಾಗಿದ್ದು ಸಮಾಧಾನ ಮತ್ತು ವಿವೇಕತನದಿಂದ ವರ್ತಿಸುವುದು.

'ಸಬ್ರ್' ನೊಂದಿಗೆ 'ಮುಸಾಬರತ್'ನ ಬಗ್ಗೆಯೂ ಆಜ್ಞಾಪಿಸಲಾಗಿದೆ. ಅರ್ಥಾತ್ ವಿರೋಧಿ ಶಕ್ತಿಗಳು ತಮ್ಮ ಧ್ಯೇಯ ಸಾಧನೆಗಾಗಿ ಎಷ್ಟೊಂದು ಸಹನೆಯಿಂದ ಅಚಲರಾಗಿ ನಿಂತು ಪ್ರಯತ್ನಿಸುತ್ತಿರುವರೋ ಅಷ್ಟೇ ಸಹನೆಯಿಂದ ದೃಢವಾಗಿ ಅವುಗಳ ವಿರುದ್ಧ ಹೋರಾಡಬೇಕು. ಆದ್ದರಿಂದ 'ಇಸ್‌ಬಿರೂ' ಎಂದು ಹೇಳಿದ್ದಕ್ಕೆ 'ಸಾಬಿರೂ' ಎಂಬುದಾಗಿ ಆಜ್ಞಾಪಿಸಲಾಗಿದೆ. ನೀವು ಯಾವ ಜನತೆಯ ಮುಂದೆ ಸತ್ಯದ ಧ್ವಜವಾಹಕರಾಗಿ ಎದ್ದು ನಿಲ್ಲಲು ನಿರ್ಧರಿಸಿರುವಿರೋ ಆ ಜನತೆಯ ಸಹನೆಯನ್ನು ನಿಮ್ಮ ಸಹನೆಯೊಂದಿಗೆ ಹೋಲಿಸಿ ನೋಡಿರಿ. ಆಗ ನಿಮ್ಮ ಸಹನೆಯ ಅವಸ್ಥೆ ತಿಳಿಯಬಹುದು. ಪ್ರಾಯಶಃ ಅವರ ಶೇಕಡಾ ಹತ್ತರಷ್ಟಾದರೂ ಸಹನೆ ನಿಮ್ಮಲ್ಲಿದೆಯೆಂದು ವಾದಿಸಲು ನಾವು ಅರ್ಹರಲ್ಲ. ಕೆಡುಕಿನ ಆಧಿಪತ್ಯಕ್ಕಾಗಿ ತೋರಿಸುವ 'ಸಬ್ರ್'ನ ಬಗ್ಗೆ ಅರಿಯಬೇಕಾದರೆ ಇಂದಿನ ಯುದ್ಧದ ಸ್ಥಿತಿಗತಿಗಳನ್ನೊಮ್ಮೆ ಅವಲೋಕಿಸಿದರೆ ಸಾಕು. ಅನೇಕ ವರ್ಷಗಳ ನಿರಂತರ ಪರಿಶ್ರಮ ಮತ್ತು ಅಪಾರ ವೆಚ್ಚದಿಂದ ನಿರ್ಮಿಸಲಾದ ಕಾರ್ಖಾನೆ, ನಗರ, ರೈಲ್ವೇ ನಿಲ್ದಾಣಗಳನ್ನು ಸಂದರ್ಭ ಬಂದಾಗ ಅದರ ಒಡೆಯರೇ ಅಗ್ನಿಗಾಹುತಿ ಮಾಡುತ್ತಾರೆ. ಸೇನೆಗಳನ್ನು ಅಪ್ಪಚ್ಚಿಗೊಳಿಸುವ ಭೀಕರ ಟ್ಯಾಂಕುಗಳಿಗೆ

ಅವರು ಎದೆಯೊಡ್ಡುತ್ತಾರೆ. ಮರಣವೆಂಬ ರೆಕ್ಕೆ ಹರಡಿ ಹಾರಾಡುತ್ತಿರುವ ಬಾಂಬರ್ ವಿಮಾನಗಳ ಕೆಳಗೆ ಅವರು ದೃಢವಾಗಿ ನಿಲ್ಲುತ್ತಾರೆ. ಅವರಿಗೆ ಪ್ರತಿಯಾಗಿ ನಮ್ಮ 'ಸಬ್ರ್'ನ ಪ್ರಮಾಣ 105 ಶೇಕಡಾವನ್ನು ತಲುಪುವ ತನಕ ಅವರೊಂದಿಗೆ ಹೋರಾಟಕ್ಕಿಳಿಯಲು ನಮ್ಮಿಂದ ಸಾಧ್ಯವಾಗದು. ಲೌಕಿಕ ಸೌಲಭ್ಯಗಳೊಂದಿಗೆ ಹೋಲಿಸಿದಾಗ ನಮಗೆ ಅವರ ಮುಂದೆ ಯಾವ ಸ್ಥಾನವೂ ಇಲ್ಲದಿದ್ದರೆ ಆ ಕೊರತೆಯನ್ನು ನಾವು ಸಬ್ರ್‌ನಿಂದಲೇ ಪೂರ್ತಿಗೊಳಿಸಬೇಕು.

ತ್ಯಾಗ ಮನೋಭಾವವು ಹೋರಾಟಕ್ಕೆ ಅಗತ್ಯವಿರುವ ಎರಡನೆಯ ಗುಣ. ಸಮಯ, ಪರಿಶ್ರಮ ಮತ್ತು ಸಂಪತ್ತಿನ ತ್ಯಾಗ. ಈ ತ್ಯಾಗದೊಂದಿಗೆ ಹೋಲಿಸುವಾಗಲೂ ನಾವು ಕೆಡುಕಿನ ಶಕ್ತಿಗಳಿಗಿಂತ ತುಂಬಾ ಹಿಂದಿದ್ದೇವೆ. ವಾಸ್ತವದಲ್ಲಿ ಭೌತಿಕ ಸಾಮಾಗ್ರಿಗಳ ಕೊರತೆಯ ನಿವಾರಣೆಗಾಗಿ ನಾವು ತ್ಯಾಗದಲ್ಲಿ ಅವರಿಗಿಂತ ಎಷ್ಟೋ ಮುಂದಿರಬೇಕಾಗಿತ್ತು. ಆದರೆ ಇಂದು ನಮ್ಮ ಅವಸ್ಥೆಯು ಎಷ್ಟೊಂದು ಪರಿತಾಪಕರ! ಒಬ್ಬನು ಇಪ್ಪತ್ತು, ಐವತ್ತು, ನೂರು ಅಥವಾ ಸಾವಿರ ರೂ. ಸಂಬಳಕ್ಕಾಗಿ ತನ್ನ ಯೋಗ್ಯತೆಯನ್ನು ಶತ್ರುವಿಗೆ ಮಾರಿ ಬಿಡುತ್ತಾನೆ. ಈ ರೀತಿ ನಮ್ಮ ಸಮಾಜಕ್ಕೆ ಉಪಯುಕ್ತವಾಗಿರುವ ಅನೇಕ ಅಮೂಲ್ಯ ವಸ್ತುಗಳು ಇಸ್ಲಾಮಿಗೆ ಸಂಪೂರ್ಣ ನಷ್ಟವಾಗಿ ಹೋಗುತ್ತಿದೆ. ನಮ್ಮಲ್ಲಿರುವ ಪ್ರತಿಭಾವಂತ ಜನರು ದೊಡ್ಡ ಆದಾಯವನ್ನು ತೊರೆದು ಅತ್ಯಗತ್ಯವಾಗಿರುವ ಕನಿಷ್ಟ ಪ್ರತಿಫಲ ಪಡೆದು ತಮ್ಮ ಸೇವೆಯನ್ನು ಇಸ್ಲಾಮಿಗರ್ಪಿಸುವ ಧೈರ್ಯ ತೋರುವುದಿಲ್ಲ. ಈ ಜನರು ಇಂತಹ ತ್ಯಾಗಗಳಿಗೂ ಸಿದ್ಧರಿಲ್ಲದಿದ್ದರೆ ಈ ಮಾರ್ಗದಲ್ಲಿ ಲೌಕಿಕ ಲಾಭಗಳನ್ನು ಕಡೆಗಣಿಸಿ ಕಾರ್ಯೋನ್ಮುಖರಾಗಲು ತಯಾರಿಲ್ಲದಿದ್ದರೆ ಇಸ್ಲಾಮಿ ಸಂಘಟನೆಯು ಹೇಗೆ ತಾನೇ ಬೆಳೆದೀತು? ಯಾವ ಸಂಘಟನೆಯೂ ಕೇವಲ ಸ್ವಯಂ ಸೇವಕರಿಂದಲೇ ಬೆಳೆಯಲಾರದೆಂಬುದು ಸರ್ವ ವಿದಿತ. ಸಂಘಟನಾ ವ್ಯವಸ್ಥೆಯಲ್ಲಿ ಸ್ವಯಂ ಸೇವಕರ ಸ್ಥಾನವು ಮಾನವ ದೇಹದಲ್ಲಿ ಕೈ ಕಾಲುಗಳಿರುವಷ್ಟೇ ಆಗಿದೆ. ಈ ಕೈ ಕಾಲುಗಳನ್ನೂ ಇತರ ಅಂಗಾಂಗಗಳನ್ನೂ ಸಕ್ರಿಯಗೊಳಿಸುವ ಜೀವಂತ ಹೃದಯ ಮತ್ತು ವಿಚಾರ ಭರಿತ ಮಸ್ತಿಷ್ಕವಿಲ್ಲದಿದ್ದರೆ ಅವುಗಳಿಂದೇನು ಪ್ರಯೋಜನ? ಇದನ್ನೇ ಇನ್ನೊಂದು ಮಾತಿನಲ್ಲಿ ಹೇಳುವುದಾದರೆ ಸ್ವಯಂ ಸೇವಕರನ್ನು ಕಾರ್ಯಮಗ್ನಗೊಳಿಸಲು ನಮಗೆ ಉನ್ನತ ಮಟ್ಟದ ನಾಯಕರ ಅಗತ್ಯವಿದೆ. ಆದರೆ ಹೃದಯ ಮತ್ತು ಮಸ್ತಿಷ್ಕ ಬಲವುಳ್ಳ ಜನರು ಲೌಕಿಕ ಅಭಿವೃದ್ಧಿಗಳಲ್ಲಿ ತನ್ಮಯರಾಗಿ ಮಾರುಕಟ್ಟೆಯಲ್ಲಿ ಹೆಚ್ಚು ಬೆಲೆ ಕೊಡುವವರ ಹಿಂದೆ ಹೋಗುತ್ತಿದ್ದಾರೆ. ನಮ್ಮ ಸಮಾಜದ ಉನ್ನತ ವ್ಯಕ್ತಿಗಳಿಗೆ ಇಸ್ಲಾಮಿ ಧ್ಯೇಯದೊಂದಿಗಿನ ಸಂಬಂಧವು ಇನ್ನೂ ದೃಢವಾಗಿಲ್ಲ. ಆದ್ದರಿಂದ ಪ್ರಸ್ತುತ ಧ್ಯೇಯಕ್ಕಾಗಿ ತಮ್ಮ ಲೌಕಿಕ ಲಾಭಗಳಂತಿರಲಿ, ಲಾಭದ ಅವಕಾಶಗಳನ್ನು ತ್ಯಜಿಸಲೂ ಅವರಿಗೆ ಸಾಧ್ಯವಾಗುವುದಿಲ್ಲ. ದಿನಂಪ್ರತಿ ಕೋಟಿಗಟ್ಟಲೆ ಹಣ ಮತ್ತು ಲಕ್ಷಗಟ್ಟಲೆ ಪ್ರಾಣಗಳನ್ನು ಬಲಿಕೊಡುತ್ತಿರುವ ಲೋಕ ಧ್ವಂಸಕರು ನಮ್ಮ ಈ ಕ್ಷುಲ್ಲಕ ತ್ಯಾಗಗಳಿಂದ ಪರಾಭವ ಹೊಂದುವರೆಂದು ನಿರೀಕ್ಷಿಸುವುದು ಮೂಢತನವಾಗಿದೆ.

ಇಸ್ಲಾಮಿ ಆಂದೋಲನದೊಂದಿಗಿನ ಮಾನಸಿಕ ಒಲವು ಅಲ್ಲಾಹನ ಮಾರ್ಗದಲ್ಲಿ ಹೋರಾಡುವವರಲ್ಲಿರಬೇಕಾದ ಮೂರನೆಯ ಗುಣವಾಗಿದೆ. ಮಾನಸಿಕವಾಗಿ ಈ ಆಂದೋಲನದ

ಬಗ್ಗೆ ಚೆನ್ನಾಗಿ ಅರಿತು ವೈಚಾರಿಕವಾಗಿ ಸಂತೃಪ್ತಿಪಡೆಯುವುದು ಈ ಮಾರ್ಗದ ಪ್ರಗತಿಯ ಪ್ರಥಮ ಹೆಜ್ಜೆಯಾಗಿದೆ. ಆದರೆ ಕೇವಲ ಆ ಆಕರ್ಷಣೆಯಿಂದಲೇ ಕಾರ್ಯಸಾಧನೆಯಾಗಲಾರದು. ಹೃದಯದಲ್ಲಿ ಒಂದು ಕಳಕಳಿಯ ಕಿಡಿ ಪ್ರಜ್ವಲಿಸಲಾರಂಭವಾಗಬೇಕು. ಕನಿಷ್ಟ ಮಕ್ಕಳಿಗೆ ಅಸೌಖ್ಯವಾದಾಗ ವೈದ್ಯರ ಬಳಿಗೆ ಹೋಗುವಷ್ಟಾದರೂ ಕಳಕಳಿ ನಿಮ್ಮ ಹೃದಯದಲ್ಲಿರಬೇಕು. ಅಥವಾ ಮನೆಯಲ್ಲಿ ಆಹಾರ ಪದಾರ್ಥಗಳಿಲ್ಲದಿರುವಾಗ ಅದನ್ನು ಗಳಿಸಲಿಕ್ಕಾಗಿ ತವಕಪಡುವವನಷ್ಟಾದರೂ ಬೇಗುದಿ ನಿಮ್ಮ ಹೃದಯದಲ್ಲಿರಬೇಕು. ಪ್ರತಿಕ್ಷಣವೂ ನಿಮ್ಮನ್ನು ಧ್ಯೇಯದ ಚಿಂತೆಯಲ್ಲಿ ತಲ್ಲೀನಗೊಳಿಸುವ ಒಂದು ಭಾವನೆ ನಿಮ್ಮ ಹೃದಯದಲ್ಲಿ ಯಾವಾಗಲೂ ಇರಬೇಕು. ಮನ-ಮಸ್ತಿಷ್ಕಗಳನ್ನು ಸದಾ ಒಂದೇ ಚಿಂತೆಯಲ್ಲಿ ಸ್ಥಿರಗೊಳಿಸುವಷ್ಟರ ಮಟ್ಟಿಗೆ ಆ ಭಾವನೆ ಶಕ್ತವಾಗಿರಬೇಕು. ಅದು ನಿಮ್ಮ ಗಮನವನ್ನು ಇದೇ ಕೆಲಸದಲ್ಲಿ ಕೇಂದ್ರೀಕರಿಸುವಂತಾಗಬೇಕು. ವೈಯಕ್ತಿಕ, ಕೌಟುಂಬಿಕ ಮತ್ತಿತರ ವ್ಯವಹಾರಗಳು ನಿಮ್ಮ ಗಮನವನ್ನು ಎಂದಾದರೂ ತಮ್ಮತ್ತ ಸೆಳೆದರೆ ಅತ್ಯಂತ ಬೇಸರದೊಂದಿಗೆ ಮಾತ್ರ ಅವುಗಳನ್ನು ಗಮನಿಸಬೇಕು. ನಿಮ್ಮ ಸ್ವಂತ ಅವಶ್ಯಕತೆಗಳಿಗಾಗಿ ನಿಮ್ಮ ಸಮಯ ಮತ್ತು ಸಾಮರ್ಥ್ಯದ ಅತೀ ಕಡಿಮೆ ಅಂಶವನ್ನು ವ್ಯಯಿಸಿ, ಉಳಿದ ಹೆಚ್ಚಿನ ಭಾಗವನ್ನು ಜೀವನಧ್ಯೇಯಕ್ಕಾಗಿ ವಿನಿಯೋಗಿಸಲು ಪ್ರಯತ್ನಿಸಬೇಕು. ನೀವು ಇದರಲ್ಲಿ ನಿಮ್ಮ ಹೃದಯವನ್ನು ಲೀನಗೊಳಿಸಿ ಸರ್ವಸ್ವವನ್ನೂ ಈ ಕಾರ್ಯಕ್ಕಾಗಿ ಅರ್ಪಿಸದೆ ನಾಲಗೆಯಿಂದ ಎಷ್ಟೇ ಹೇಳಿದರೂ ಏನೂ ಸಾಧಿಸಲಾಗದು. ಕೆಲವರು ಮಾನಸಿಕವಾಗಿ ನಮ್ಮೊಂದಿಗೆ ಸಹಕರಿಸಲು ಸಿದ್ಧರಿದ್ದಾರೆ. ಆದರೆ ತನು-ಮನ-ಧನಗಳಿಂದ ಇದರಲ್ಲಿ ಪಾಲ್ಗೊಂಡಿರುವವರು ವಿರಳ. ವೈಯಕ್ತಿಕವಾಗಿಯೂ ಜಮಾಅತ್ ಮೂಲಕವೂ ಸಂಬಂಧ ಹೊಂದಿರುವ ನನ್ನ ನಿಕಟ ಬಾಂಧವರೋರ್ವರು ಎರಡು ವರ್ಷದ ಸಹವಾಸದ ಬಳಿಕ ಇತ್ತೀಚೆಗಷ್ಟೇ ನನ್ನೊಂದಿಗೆ ಹೀಗೆಂದಿದ್ದಾರೆ: "ಈ ತನಕ ನಾನು ಕೇವಲ ಮಾನಸಿಕ ಸಮಾಧಾನದ ಆಧಾರದಲ್ಲಿ ಜಮಾಅತ್‌ನಲ್ಲಿ ಪಾಲ್ಗೊಂಡಿದ್ದೆ. ಆದರೆ ಇದೀಗ ಅದು ಹೃದಯದಾಳಕ್ಕೆ ಇಳಿದಿದೆ. ನನ್ನ ಆತ್ಮದ ಮೇಲೆಯೇ ಅದು ಪ್ರಭಾವ ಬೀರಿದೆ." ಇದೇ ರೀತಿ ಪ್ರತಿಯೊಬ್ಬರೂ ಆತ್ಮಾವಲೋಕನ ನಡೆಸಿ, ನಾನು ಈ ತನಕ ಜಮಾಅತ್‌ನ ಕೇವಲ ಮಾನಸಿಕ ಸದಸ್ಯನೇ? ಅಥವಾ ನನ್ನ ಹೃದಯದಲ್ಲಿ ಧ್ಯೇಯದ ಬಗ್ಗೆ ಅನುರಾಗದ ಜ್ವಾಲೆ ಪ್ರಜ್ವಲಿಸಲಾರಂಭಿಸಿದೆಯೇ? ಎಂಬುದನ್ನು ಪರಿಶೀಲಿಸಬೇಕೆಂದು ನಾನು ಬಯಸುತ್ತೇನೆ. ಹಾರ್ದಿಕ ಸಂಬಂಧವು ಬಹಳ ಕಡಿಮೆಯೆಂದು ತೋರಿದರೆ ಪ್ರಪ್ರಥಮವಾಗಿ ಅದನ್ನು ಬೆಳೆಸಿಕೊಳ್ಳುವತ್ತ ಗಮನ ಹರಿಸಬೇಕು. ಇದರಲ್ಲಿ ಹೃದಯವು ಲೀನವಾದರೆ ಆ ಬಳಿಕ ಚಟುವಟಿಕೆಗಾಗಿ ಒತ್ತಾಯಿಸುವ ಅಥವಾ ಪ್ರೇರೇಪಿಸುವ ಅಗತ್ಯವಿರಲಾರದು. ಈ ಶಕ್ತಿ ಮೈಗೂಡಿದ ಸ್ಥಳಗಳಲ್ಲಿ ಜಮಾಅತ್‌ನ ಓರ್ವ ಕಾರ್ಯಕರ್ತನ ನಿರ್ಗಮನ ಅಥವಾ ಅನಿವಾರ್ಯ ಸ್ಥಳಾಂತರದಿಂದ ಅಲ್ಲಿನ ಎಲ್ಲ ಚಟುವಟಿಕೆಗಳು ಸ್ಥಗಿತವಾಗುವ ಸ್ಥಿತಿ ಬರಲಾರದು. ಬದಲಾಗಿ, ತನ್ನ ಮಕ್ಕಳಿಗೆ ಅಸೌಖ್ಯವಾದಾಗ ವರ್ತಿಸುವಂತೆ ಪ್ರತಿಯೊಬ್ಬರೂ ತಮ್ಮ ಸರ್ವಸ್ವವನ್ನೂ ದೇವನ ಮಾರ್ಗದಲ್ಲಿ ಅರ್ಪಿಸಿ ಕಾರ್ಯೋನ್ಮುಖರಾಗುವರು.

ನಿಮ್ಮ ಒಂದು ಮಗುವು ರೋಗಪೀಡಿತವಾದರೆ ಅದರ ಜೀವನ್ಮರಣ ಸಮಸ್ಯೆಯನ್ನು ಸಂಪೂರ್ಣವಾಗಿ ಇತರರಿಗೆ ಬಿಟ್ಟು ಕೊಡಲು ನಿಮ್ಮಿಂದ ಸಾಧ್ಯವಾಗದು. ಆರೈಕೆ, ಔಷಧೋಪಚಾರ

ಮತ್ತು ಡಾಕ್ಟರ್‌ರ ಬಳಿ ಹೋಗಲು ಜನವಿಲ್ಲವೆಂದು ಅಡ್ಡಿ ಹೇಳಿ ಆ ಮಗುವನ್ನು ಅದರಷ್ಟಕ್ಕೆ ಬಿಡುವುದು ಅಸಂಭವನೀಯ. ಇತರ ಯಾರೂ ಇಲ್ಲದಿದ್ದರೆ ನೀವೇ ಸ್ವತಃ ಎಲ್ಲವನ್ನೂ ನಿರ್ವಹಿಸುವಿರಿ. ಯಾಕೆಂದರೆ ಮಗು ನಿಮ್ಮದೇ ಆಗಿದೆ. ಮಲ ತಂದೆಯು ಒಂದು ವೇಳೆ ಮಗುವನ್ನು ನಿರ್ಲಕ್ಷಿಸಬಹುದಾದರೂ ಸ್ವಂತ ತಂದೆ ಎಂದಿಗೂ ಹಾಗೆ ಬಿಡಲಾರನು. ಆತನ ಹೃದಯ ಬೇಗುದಿಯು ಹೊತ್ತಿ ಉರಿಯುವುದು. ಅದೇ ರೀತಿ ಈ ಕಾರ್ಯದೊಂದಿಗೂ ನಿಮಗೆ ಹಾರ್ದಿಕ ಸಂಬಂಧವಿದ್ದರೆ ನೀವು ಅದನ್ನು ಇತರರಿಗೆ ಬಿಟ್ಟು ಕೊಡಲಾರಿರಿ. ಇತರರ ಅನರ್ಹತೆ, ಅಸಾಮರ್ಥ್ಯ, ಅಸಡ್ಡೆಗಳ ನೆಪ ಹೇಳಿ ಅದನ್ನು ನಾಶಹೊಂದಲಿಕ್ಕೆ ಬಿಟ್ಟು ನೀವು ಇತರ ಕೆಲಸಗಳಲ್ಲಿ ತಲ್ಲೀನರಾಗಲಾರಿರಿ. ಇವೆಲ್ಲವೂ ನಿಮಗೆ ಅಲ್ಲಾಹನ ಧರ್ಮ, ಅದರ ಸ್ಥಾಪನೆ ಮತ್ತು ಯಶಸ್ವಿಗೊಳಿಸುವ ಧ್ಯೇಯದೊಂದಿಗೆ ನಿಮ್ಮ ಸಂಬಂಧವು ಕೇವಲ ಮಲತಂದೆಯ ಸಂಬಂಧದಂತಾಗಿದೆಯೆಂಬುದನ್ನು ಸೂಚಿಸುತ್ತದೆ. ವಾಸ್ತವಿಕ ಸಂಬಂಧವಿರುತ್ತಿದ್ದರೆ ನಿಮ್ಮಲ್ಲಿ ಪ್ರತಿಯೊಬ್ಬರೂ ಈ ಮಾರ್ಗದಲ್ಲಿ ಜೀವಾರ್ಪಣಾಭಾವದಿಂದ ದುಡಿಯುತ್ತಿದ್ದಿರಿ. ನಾನು ಸ್ಪಷ್ಟವಾಗಿ ಹೇಳುತ್ತಿದ್ದೇನೆ- ನೀವು ಈ ಮಾರ್ಗದಲ್ಲಿ ಕಡಿಮೆ ಪಕ್ಷ ನಿಮ್ಮ ಪತ್ನಿ ಮಕ್ಕಳೊಂದಿಗಿರುವಷ್ಟಾದರೂ ಹಾರ್ದಿಕ ಸಂಬಂಧವಿಲ್ಲದೆ ಮುಂದಡಿಯಿಟ್ಟರೆ ಅದರ ಅಂತಿಮ ಪರಿಣಾಮವು ಸೋಲೆಂಬುದು ಖಚಿತ. ಯಾಕೆಂದರೆ ನಮ್ಮ ಭಾವೀ ತಲೆಮಾರುಗಳಿಗೆ ಹಲವು ಕಾಲದ ತನಕ ಈ ಆಂದೋಲನದ ಹೆಸರು ಹೇಳುವ ಧೈರ್ಯವೂ ಇರಲಾರದು. ದೊಡ್ಡ ದೊಡ್ಡ ಯೋಜನೆಗಳ ಬಗ್ಗೆ ಯೋಚಿಸುವುದಕ್ಕಿಂತ ಮುಂಚಿತವಾಗಿ ನೀವು ನಿಮ್ಮ ವಿಶ್ವಾಸದ ದೃಢತೆ ಮತ್ತು ನೈತಿಕ ಶಕ್ತಿಯ ಪರೀಕ್ಷೆ ನಡೆಸಿರಿ. ಅಲ್ಲಾಹನ ಮಾರ್ಗದ ಹೋರಾಟಕ್ಕೆ ಅಗತ್ಯವಿರುವ ಹೃದಯವಂತಿಕೆಯನ್ನು ಮೈಗೂಡಿಸಿರಿ.

ನಿರಂತರ ಪ್ರಯತ್ನ ಮತ್ತು ಸುಸಂಘಟಿತ ಚಟುವಟಿಕೆಯ ರೂಢಿಯು ಈ ಮಾರ್ಗದಲ್ಲಿ ಅತ್ಯಗತ್ಯವಾಗಿರುವ ನಾಲ್ಕನೆಯ ಗುಣ. ನಮ್ಮ ಸಮುದಾಯವು ಹಲವು ಕಾಲದಿಂದೀಚೆಗೆ ಏನಾದರೂ ಕೆಲಸ ಮಾಡುವುದಿದ್ದರೆ ಆದಷ್ಟು ಬೇಗನೇ ಅದು ಆಗಬೇಕು ಮತ್ತು ಏನಾದರೂ ಹೆಜ್ಜೆಯಿರಿಸುವುದಿದ್ದರೆ ಹೆಚ್ಚು ಸದ್ದುಗದ್ದಲವಿರಬೇಕೆಂಬ ಕಾರ್ಯವಿಧಾನವನ್ನು ರೂಢಿಸಿಕೊಂಡಿದೆ. ಒಂದೆರಡು ತಿಂಗಳು ಕೆಲಸ ಮಾಡಿ ಎಲ್ಲವೂ ನಾಶಗೊಂಡರೂ ಚಿಂತಿಲ್ಲ. ಆದರೆ ನಾವು ಈ ರೂಢಿಯನ್ನು ಬದಲಾಯಿಸಬೇಕಾಗಿದೆ. ಅದರ ಬದಲಾಗಿ ಸಮಾಧಾನದಿಂದ ನಿರಂತರವಾಗಿ ಕೆಲಸ ಮಾಡುವ ಹಾಗೂ ಅನಾವಶ್ಯಕ ಸದ್ದುಗದ್ದಲಗಳಿಲ್ಲದೆ ಕೆಲಸ ಸಾಧಿಸುವ ತರಬೇತಿ ನಮಗೆ ಅಗತ್ಯವಿದೆ. ಅಗತ್ಯವಾಗಿರುವ ಒಂದು ಸಣ್ಣ ಕೆಲಸವನ್ನಾದರೂ ನಿಮಗೆ ವಹಿಸಿಕೊಟ್ಟರೆ ತಾತ್ಕಾಲಿಕ ಲಾಭ ಅಥವಾ ಬಾಹ್ಯ ಪ್ರಶಂಸೆಯನ್ನು ನಿರೀಕ್ಷಿಸದೆ ನಿಮ್ಮ ಸಂಪೂರ್ಣ ಆಯುಷ್ಯವನ್ನು ಸಹನೆ ಮತ್ತು ತಾಳ್ಮೆಯಿಂದ ಆ ಕೆಲಸಕ್ಕೆ ವಿನಿಯೋಗಿಸಲು ಸಾಧ್ಯವಾಗಬೇಕು. ಅಲ್ಲಾಹನ ಮಾರ್ಗದ ಹೋರಾಟ ಸದಾ ಉತ್ತೇಜಕ ರಂಗಗಳಿಂದ ಕೂಡಿರಲಾರದು. ಪ್ರತಿಯೊಬ್ಬರೂ ಮುಂಚೂಣಿಯಲ್ಲಿಯೇ ಹೋರಾಡುತ್ತಿರಲೂ ಸಾಧ್ಯವಿಲ್ಲ. ಒಂದು ಸಲದ ರಣಾಂಗಣವನ್ನು ಸಜ್ಜುಗೊಳಿಸಲು ಕೆಲವೊಮ್ಮೆ ಇಪ್ಪತ್ತೈದು ವರ್ಷಗಳ ತನಕ ಮೌನವಾಗಿ ಪ್ರಯತ್ನಿಸಬೇಕಾದೀತು. ಮುಂಚೂಣಿಯಲ್ಲಿ ಸಾವಿರಾರು ಜನರು ಹೋರಾಡುತ್ತಲಿದ್ದರೆ ಅದರ

ಹಿಂದೆ ಲಕ್ಷಾಂತರ ಜನರು ಯುದ್ಧಕ್ಕೆ ಅಗತ್ಯವಿರುವ ಸಣ್ಣ ಸಣ್ಣ ಕೆಲಸಗಳಲ್ಲಿ ನಿರತರಾಗಿರಬೇಕಾಗುತ್ತದೆ. ಬಾಹ್ಯ ನೋಟಕ್ಕೆ ಅವು ಬಹಳ ಕ್ಷುಲ್ಲಕವಾಗಿರಬಹುದು.

## ನಮ್ಮ ಮುಂದಿನ ಕಾರ್ಯಕ್ರಮ

ಈ ಭಾಷಣವನ್ನು ಕೊನೆಗೊಳಿಸುವುದಕ್ಕೆ ಮುಂಚೆ ನಮ್ಮ ಮುಂದಿನ ಕಾರ್ಯಕ್ರಮದ ಕುರಿತು ಸಂಕ್ಷಿಪ್ತವಾಗಿ ವಿವರಿಸುವುದು ಸೂಕ್ತವೆಂದು ಭಾವಿಸುತ್ತೇನೆ. ಯಾವ ಕಾರ್ಯಕ್ರಮದಂತೆ ಈ ಆಂದೋಲನವನ್ನು ನಾನು ನಡೆಸುತ್ತಿರುವೆನೋ ಆ ಬಗ್ಗೆ ನೀವು ಇನ್ನೂ ಚೆನ್ನಾಗಿ ಅರ್ಥ ಮಾಡಿಕೊಂಡಿಲ್ಲವೆಂದೇ ಭಾವಿಸುತ್ತೇನೆ. ನನಗೆ ನಿಮ್ಮೆಲ್ಲರ ವೈಯಕ್ತಿಕ ಪರಿಚಯ ಮಾಡಿಕೊಳ್ಳುವುದೇ ಈ ಸಮ್ಮೇಳನದ ಉದ್ದೇಶವಾಗಿದೆ. ನನ್ನೊಂದಿಗೆ ಯಾವೆಲ್ಲ ಗುಣದ ಜನರಿದ್ದಾರೆ, ಅವರ ಪ್ರತಿಭೆ ಮತ್ತು ಸಾಮರ್ಥ್ಯಗಳೇನು? ಅವೆಲ್ಲವನ್ನೂ ಹೇಗೆ ಉಪಯೋಗಿಸಿಕೊಳ್ಳಬಹುದು ಎಂಬಿತ್ಯಾದಿ ವಿಷಯಗಳನ್ನು ನಾನು ಚೆನ್ನಾಗಿ ತಿಳಿದಿರಬೇಕಾಗಿದೆ. ಎಂತಹ ಸಂದರ್ಭದಲ್ಲಿ ಏನೆಲ್ಲಾ ಸೇವೆ ಸಲ್ಲಿಸಲು ನಿಮಗೆ ಸಾಧ್ಯವಿದೆಯೆಂಬುದನ್ನು ಸ್ಪಷ್ಟವಾಗಿ ತಿಳಿಸಿರಿ. ಆದಷ್ಟು ಬೇಗನೆ ನನಗೆ ಈ ಎಲ್ಲಾ ವಿವರಗಳು ದೊರೆತರೆ ನಮ್ಮ ಕಾರ್ಯಕ್ರಮವನ್ನು ಬೇಗ ಸಿದ್ಧಗೊಳಿಸಲು ಸಾಧ್ಯವಾಗುವುದು. ಬಲವನ್ನು ತಿಳಿಯದೆ ಯಾವುದೇ ಕೆಲಸಕ್ಕೆ ಕೈ ಹಚ್ಚಲು ನನಗೆ ಇಷ್ಟವಿಲ್ಲ. ಈ ನಿಟ್ಟಿನಲ್ಲಿ ನೀವು ಆಗಾಗ ಕೇಂದ್ರ ಕಛೇರಿಗೆ ಬರುತ್ತಿರಬೇಕು. ಪತ್ರದ ಮೂಲಕ ನನಗೆ ಮಾಹಿತಿ ನೀಡುತ್ತಿರಬೇಕು. ನಾನು ಸಾಧ್ಯವಿರುವಷ್ಟು ಮಟ್ಟಿಗೆ ಸಮ್ಮೇಳನಗಳಲ್ಲಿ ಭಾಗವಹಿಸಿ ನಿಮ್ಮೊಂದಿಗೆ ಮುಕ್ತ ಸಂಪರ್ಕ ಬೆಳೆಸಲು ಪ್ರಯತ್ನಿಸುತ್ತೇನೆ. ತರುವಾಯ ಒಂದು ಸಮಗ್ರ ಯೋಜನೆಯನ್ನು ಸಿದ್ಧಗೊಳಿಸಿ ಸಾವಧಾನದಿಂದ ಮುನ್ನಡೆಯುವ ಬಗ್ಗೆ ಆಲೋಚಿಸೋಣ.

ವ್ಯಕ್ತಿಗಳ ಸರಿಯಾದ ತರಬೇತಿಗಾಗಿ ಒಂದು ಶಾಶ್ವತ ವ್ಯವಸ್ಥೆ ಮಾಡುವುದು ನಮ್ಮ ಮುಂದಿರುವ ಎರಡನೆಯ ಮುಖ್ಯ ಕೆಲಸ. ತನ್ಮೂಲಕ ನಮಗೆ ಅಗತ್ಯವಿರುವ ಜನರನ್ನು ಸಿದ್ಧಗೊಳಿಸಬಹುದು. ಕಾರ್ಯಕರ್ತರಲ್ಲಿರಬೇಕಾದ ಗುಣ ವೈಶಿಷ್ಟ್ಯಗಳನ್ನು ಬೆಳೆಸಬಹುದು. ಮುಂದಿನ ಜನಾಂಗವನ್ನು ನಮ್ಮ ದೃಷ್ಟಿಕೋನದಂತೆ ಆಂದೋಲನದ ಸೇವೆಗಾಗಿ ತರಬೇತುಗೊಳಿಸುವುದು ನಮ್ಮ ಮೂರನೆಯ ಕೆಲಸವಾಗಿದೆ. ಈ ಬಗ್ಗೆ ನೇರವಾಗಿಯೂ ಬರಹ ಮೂಲಕವೂ ನನಗೆ ಆಗಾಗ ತಿಳಿಸಲಾಗುತ್ತಿದೆ. ನನಗೂ ಅದರ ಪ್ರಾಮುಖ್ಯತೆಯ ಅರಿವಿದೆ. ಈ ತನಕ ಸಂಪನ್ಮೂಲಗಳು ಮತ್ತು ಯೋಗ್ಯ ಕಾರ್ಯಕರ್ತರ ಕೊರತೆ ಹಾಗೂ ಯುದ್ಧದಿಂದ ಉದ್ಭವಿಸಿರುವ ಆರ್ಥಿಕ ಸಂಕಷ್ಟಗಳು ಅದಕ್ಕೆ ಅಡ್ಡಿಯಾಗಿದ್ದುವು. ಆದರೆ ಈ ವಿಷಯದಲ್ಲಿ ಇನ್ನು ಹೆಚ್ಚು ತಡವಾಗದೆಂದು ಭಾವಿಸುತ್ತೇನೆ. ಈ ಬಗ್ಗೆ ಪ್ರಾಥಮಿಕ ವ್ಯವಸ್ಥೆಗಳನ್ನು ಆರಂಭಿಸಲಾಗಿದೆ.

ನಾವು ಗಂಭೀರವಾಗಿ ಆಲೋಚಿಸಬೇಕಾದ ನಾಲ್ಕನೆಯ ವಿಷಯವು ನಮ್ಮ ಚಟುವಟಿಕೆಗಳಲ್ಲಿ ಸ್ತ್ರೀಯರ ಸಹಭಾಗಿತ್ವದ ಕುರಿತು ಯಾವ ವಿಧಾನವನ್ನು ಅನುಸರಿಸಬೇಕೆಂಬುದಾಗಿದೆ. ಈ ತನಕ ನಮ್ಮ ಒಂದು ಕೈ ಮಾತ್ರ ತಿರುಗುತ್ತಿದೆ. ಈಗ ನಾವು ನಮ್ಮ ಎರಡನೇ ಕೈಯನ್ನೂ, ಗಾಡಿಯ ಎರಡನೇ ಚಕ್ರವನ್ನೂ ತಿರುಗಿಸುವ ಕುರಿತು ಆಲೋಚಿಸಬೇಕಾಗಿದೆ. ಸ್ತ್ರೀ- ಪುರುಷರು ಪರಸ್ಪರ

ಅಭೇದ್ಯ ಸಂಬಂಧ ಹೊಂದಿದ್ದಾರೆ. ನಾವು ಸ್ತ್ರೀಯರನ್ನು ಕಡೆಗಣಿಸಿದರೆ ನಮ್ಮ ಸುಧಾರಣೆಯೇ ಅಪೂರ್ಣವಾದೀತು. ಸ್ವಗೃಹವನ್ನು ಸುಧಾರಿಸದೆ ಲೋಕವನ್ನು ಸುಧಾರಿಸಲು ನಮ್ಮಿಂದ ಸಾಧ್ಯವಿಲ್ಲ. ಈ ನಿಟ್ಟಿನಲ್ಲಿ ಸ್ತ್ರೀಯರೊಂದಿಗೆ ವ್ಯಾಪಕ ಪ್ರಮಾಣದಲ್ಲಿ ನೇರ ಸಂಪರ್ಕ ಸಾಧ್ಯವಿಲ್ಲದಿರುವುದು ದೊಡ್ಡ ತೊಡಕಾಗಿದೆ. ಅದಕ್ಕೆ ನಮಗೆ ಸ್ತ್ರೀಯರಿಂದಲೇ ಸಹಾಯ ದೊರೆಯಬೇಕು. ಧರ್ಮದ ಮೇರೆಗಳ ಪರಿವೆಯಿಲ್ಲದ ಜನರಿಗೆ ಈ ಕೆಲಸ ಸುಲಭ. ಯಾಕೆಂದರೆ ಅವರಿಗೆ ತಮ್ಮ ರಾಜಕೀಯ ಮತ್ತು ಸಾಂಸ್ಕೃತಿಕ ಸಂಘಟನೆಗಳಿಗಾಗಿ ಅವರ ಸ್ತ್ರೀಯರನ್ನು ಬೀದಿಗಳಲ್ಲಿಯೂ ಕಾರ್ಖಾನೆಗಳಲ್ಲಿಯೂ ಸಭಾ ಮಂಟಪಗಳಲ್ಲಿಯೂ ಶಾಲೆಗಳಲ್ಲಿಯೂ ಸುಲಭದಲ್ಲಿ ತರಲು ಸಾಧ್ಯವಿದೆ. ಆದರೆ ನಮ್ಮ ಮಟ್ಟಿಗೆ ಇದು ಅತ್ಯಂತ ಕ್ಲಿಷ್ಟ ಸಮಸ್ಯೆ. ಈ ಬಗ್ಗೆ ನಾವು ಗಂಭೀರವಾಗಿ ಆಲೋಚಿಸಿ ಪರಿಹಾರ ಕಂಡು ಹಿಡಿಯಬೇಕು.

ಜನಾಭಿಪ್ರಾಯವನ್ನು ಆಕರ್ಷಿಸಲಿಕ್ಕಾಗಿ ವ್ಯಾಪಕ ಸಂಘಟಿತ ಪ್ರಯತ್ನವನ್ನು ನಡೆಸುವುದು ನಮ್ಮ ಮುಂದಿರುವ ಐದನೆಯ ಕಾರ್ಯಕ್ರಮ. ನಾವು ಈ ತನಕ ಸಾರ್ವಜನಿಕಾಭಿಪ್ರಾಯವನ್ನು ನೇರವಾಗಿ ಸಂಬೋಧಿಸಿಲ್ಲ. ಆದ್ದರಿಂದಲೇ ನಮಗೆ ಈ ಸಮುದ್ರದ ಒಂದು ಸಣ್ಣ ಮೂಲೆಯಲ್ಲಷ್ಟೇ ಈ ತನಕ ತರಂಗವೆಬ್ಬಿಸಲು ಸಾಧ್ಯವಾಗಿದೆ. ಇನ್ನು ಮುಂದೆ ನಾವು ಮೆಲ್ಲ ಮೆಲ್ಲನೆ ನೈಜ ಸಮುದ್ರದ ಭಾಗದೆಡೆಗೆ ಚಲಿಸಬೇಕಾಗಿದೆ. ಇದಕ್ಕಾಗಿ ಜನಸಾಮಾನ್ಯರೆಲ್ಲರೂ ಸಂಪೂರ್ಣವಾಗಿ ನಮ್ಮ ಸದಸ್ಯರಾಗಬೇಕಾದ ಅಗತ್ಯವಿಲ್ಲ. ನಮ್ಮ ಧ್ಯೇಯಪ್ರಾಪ್ತಿಗಾಗಿ ಈ ದೇಶದ ನಿವಾಸಿಗಳ ಒಂದು ದೊಡ್ಡ ಭಾಗವು ಸತ್ಯವನ್ನು ಸತ್ಯವೆಂದೂ, ನಮ್ಮ ಧ್ಯೇಯವು ಸರಿಯೆಂದೂ ಒಪ್ಪಿ ನಮ್ಮ ನೈತಿಕ ಶಕ್ತಿಯು ಅವರಲ್ಲಿ ಪ್ರಭಾವ ಬೀರಿದರೆ ಸಾಕು. ತನ್ಮೂಲಕ ನಾವು ಭವಿಷ್ಯದಲ್ಲಿ ಯಾವ ಹೆಜ್ಜೆಯಿರಿಸಿದರೂ ಜನರ ಅನುಕಂಪವು ನಮ್ಮೊಂದಿಗಿರುವುದು. ಈ ತನಕ ನಾವು ನಮ್ಮ ಸಾಹಿತ್ಯಗಳಲ್ಲಿ ಜೀವನದ ಸಮಸ್ಯೆಗಳ ಕುರಿತು ಸ್ವಲ್ಪಂಶವೇ ಪ್ರತಿಪಾದಿಸಿರುವೆವು. ಅದು ಕೂಡಾ ಕೇವಲ ಸೂಚನೆಯ ರೂಪದಲ್ಲಿದೆ. ವಾಸ್ತವದಲ್ಲಿ ನಾವು ಈ ಹಂತದಲ್ಲಿ ಜೀವನದ ವಿವಿಧ ರಂಗಗಳ ಕುರಿತು ನಮ್ಮ ದೃಷ್ಟಿಕೋನವನ್ನು ವಿವರವಾಗಿ ಪ್ರತಿಪಾದಿಸುವ ಅಗತ್ಯವಿದೆ. ಜ್ಞಾನ ಪ್ರಕಾಶಗಳನ್ನು ನವೀನ ರೀತಿಯಲ್ಲಿ ಕ್ರೋಢೀಕರಿಸಬೇಕಾಗಿದೆ. ಈ ಕಾರ್ಯವನ್ನು ಒಂದೆರಡು ಭಾಷೆಗಳಲ್ಲಿ ಮಾಡಿದರೆ ಸಾಲದು. ಅತ್ಯಧಿಕ ಜನರು ನಮ್ಮ ಉದ್ದೇಶವನ್ನು ತಿಳಿಯಲಿಕ್ಕಾಗಿ ನಾನಾ ಭಾಷೆಗಳಲ್ಲಿ ಅದನ್ನು ನಿರ್ವಹಿಸಬೇಕಾಗಿದೆ. ಆದ್ದರಿಂದ ನಮ್ಮ ಕಾರ್ಯಕ್ಷೇತ್ರವನ್ನು ಆ ರಂಗಕ್ಕೂ ವಿಸ್ತರಿಸಬೇಕು. ಈ ತನಕ ನಾವು ಪ್ರಚಾರ ಪ್ರಸಾರಗಳಿಗೆ ಬಹುವಂಶ ಲೇಖನಿಯ ಮಾರ್ಗವನ್ನು ಅವಲಂಬಿಸಿದ್ದೇವೆ. ಭಾಷಣಗಳನ್ನು ನಾವು ಈ ತನಕ ಹೆಚ್ಚು ಉಪಯೋಗಿಸಿಕೊಂಡಿಲ್ಲ. ಇನ್ನು ಮುಂದೆ ಅದರಲ್ಲಿಯೂ ನಾವು ಮುಂದುವರಿಯಬೇಕು. ಆದರೆ ಅದಕ್ಕಾಗಿ ನಾವು ಭಾಷಣದ ಒಂದು ಹೊಸ ವಿಧಾನವನ್ನು ಅಳವಡಿಸುವ ಅಗತ್ಯವಿದೆ. ಕೆಲವು ಪ್ರದರ್ಶನ ಮತ್ತು ಅಬ್ಬರಗಳಿಗೆ ಸೀಮಿತವಾದ ವೇದಿಕೆಗಳಿಂದ ನಾವು ಸಂಪೂರ್ಣ ದೂರವಿರಬೇಕು. ಹೊಣೆಗಾರಿಕೆಯ ಪ್ರಜ್ಞೆಯಿಂದ ಮಾತನಾಡುವುದು ನಮ್ಮ ವೈಶಿಷ್ಟ್ಯವಾಗಬೇಕು. ಹಾಗಾದರೆ ಮಾತ್ರ ನಮ್ಮಿಂದ ಹೊರಡುವ ಪ್ರತಿಯೊಂದು ಶಬ್ದವೂ ಹೃದಯಾಕರ್ಷಕವಾಗಿ ಗೌರವದಿಂದ ಆಲಿಸಲ್ಪಡುವುದು ಹಾಗೂ ಅದು ಇತರ ಶಬ್ದಗಳಿಗಿಂತ ಭಿನ್ನವಾಗಿರುವುದು. ಆರ್ಭಟ ಮತ್ತು ಅನಿಯಂತ್ರಿತ ಭಾಷಣಗಾರರೆಂಬ ವೀಣೆಗಳಿಂದ

ಹೊರಡುವ ರಾಗಗಳಲ್ಲಿ ನಮ್ಮ ಭಾಷಣವೂ ಒಂದೆಂದು ಭಾವಿಸಲಾರರು. ನಮ್ಮ ಬಾಂಧವರಲ್ಲಿ ಭಾಷಣದ ಹಳೆಯ ಸಂಪ್ರದಾಯ ಉಳಿದಿರುವುದನ್ನು ಮನಗಂಡಿರುವುದರಿಂದಲೇ ನಾನು ಈ ತನಕ ಅದಕ್ಕೆ ಅವಕಾಶ ಕೊಟ್ಟಿಲ್ಲ. ಇಸ್ಲಾಮಿ ವ್ಯವಸ್ಥೆಯ ಹೆಸರೆತ್ತುವವರ ನಾಲಗೆಗೆ ಸೂಕ್ತವಲ್ಲದ ಹಳೆಯ ಮಾದರಿಯ ಭಾಷಣಗಳು ನಮ್ಮಲ್ಲಿ ಆರಂಭವಾದೀತೆಂದು ಭಯಪಡುತ್ತಿದ್ದೇವೆ. ನಮ್ಮ ತತ್ವಗಳ ಪ್ರಚಾರಕ್ಕೆ ಎಲ್ಲಾ ಮಾರ್ಗಗಳನ್ನೂ ನೀವು ಬಳಸಬೇಕೆಂಬುದೇ ನನ್ನ ಬಯಕೆಯಾಗಿದೆ. ಆದರೆ ಅದಕ್ಕೆ ಪ್ರಪ್ರಥಮವಾಗಿ ಅವುಗಳನ್ನು ಇಸ್ಲಾಮಿ ನೀತಿಗೆ ಬದ್ಧಗೊಳಿಸಬೇಕು. ಕಡಿವಾಣವಿಲ್ಲದ ಜನರು ಸೇರಿಸಿ ಬಿಟ್ಟಿರುವ ದುಷ್ಟ ಅಂಶಗಳಿಂದ ಅವುಗಳನ್ನು ಶುದ್ಧಗೊಳಿಸಬೇಕು.

ನಾನು ನಿಮ್ಮ ಗಮನಕ್ಕೆ ತರಬೇಕೆಂದು ಬಯಸಿದ ಕೆಲವು ಪ್ರಾಮುಖ್ಯ ವಿಷಯಗಳನ್ನು ಇಲ್ಲಿ ಪ್ರಸ್ತಾಪಿಸಿದ್ದೇನೆ. ನೀವು ಆ ಕುರಿತು ಗಂಭೀರವಾಗಿ ಆಲೋಚಿಸಿ ನಿಮ್ಮ ಉತ್ತಮ ಅಭಿಪ್ರಾಯಗಳನ್ನು ನೀಡಿ ಸಹಕರಿಸಿರಿ. ಕೊನೆಯದಾಗಿ ನಾನು ಅಲ್ಲಾಹನೊಂದಿಗೆ ಪ್ರಾರ್ಥಿಸುತ್ತೇನೆ ನಾವು ಆತನೊಂದಿಗೆ ಮಾಡಿಕೊಂಡಿರುವ ಪ್ರತಿಜ್ಞೆಯ ಕರ್ತವ್ಯಗಳನ್ನು ಮನಗಂಡು ಅವುಗಳನ್ನು ಸಂಪೂರ್ಣವಾಗಿ ನಿರ್ವಹಿಸುವ ಶಕ್ತಿಯನ್ನು ಆತನು ನಮಗೆ ನೀಡಲಿ. ನಮ್ಮ ಉದ್ದೇಶಗಳಲ್ಲಿ ನಿಸ್ವಾರ್ಥತೆ ಮತ್ತು ನಿಷ್ಕಳಂಕತೆ ಹಾಗೂ ನಮ್ಮ ವಿಶ್ವಾಸಕ್ಕೆ ಬಲ ಮತ್ತು ಪ್ರಯತ್ನಗಳಿಗೆ ಸಮೃದ್ಧಿಯನ್ನು ದಯಪಾಲಿಸಲಿ. ನಮಗಿಂತ ಉತ್ತಮ ಗುಣಗಳಿರುವ ಹಾಗೂ ನಮಗಿಂತ ಉತ್ತಮ ರೀತಿಯಲ್ಲಿ ಸೇವೆ ಮಾಡುವ ಸಾಮರ್ಥ್ಯವಿರುವ ಅವನ ದಾಸರ ಮೂಲಕ ಅವನು ನಮಗೆ ನೆರವಾಗಲಿ!"

ಇಲ್ಲಿಗೆ ಪ್ರಥಮ ಸಮ್ಮೇಳನ ಕೊನೆಗೊಂಡಿತು.

## ದ್ವಿತೀಯ ಸಮ್ಮೇಳನ

ಕಾರ್ಯಕ್ರಮದಂತೆ ದ್ವಿತೀಯ ಅಧಿವೇಶನದಲ್ಲಿ ವಿವಿಧ ಪ್ರದೇಶಗಳ ಪ್ರತಿನಿಧಿಗಳು ತಮ್ಮ ಚಟುವಟಿಕೆಗಳ ಹಾಗೂ ತಾವು ಅನುಭವಿಸುತ್ತಿರುವ ಅಡ್ಡಿ ಆತಂಕಗಳ ಬಗ್ಗೆ ವರದಿ ಸಲ್ಲಿಸಿದರು. ಈ ವರದಿ ಸಲ್ಲಿಸುವುದರ ಉದ್ದೇಶವು ತಾವು ದೇವಮಾರ್ಗದಲ್ಲಿ ಸಲ್ಲಿಸುತ್ತಿರುವ ಸೇವೆಯನ್ನು ಜನರ ಮುಂದೆ ಕೊಚ್ಚಿಕೊಳ್ಳುವುದಲ್ಲ. ಬದಲಾಗಿ ಎಲ್ಲೆಲ್ಲಿ ಎಂಥೆಂತಹ ಚಟುವಟಿಕೆಗಳು ಎಲ್ಲಿ ಹಿಂದೆ ಬಿದ್ದಿವೆ, ಎಂತಹ ಪ್ರದೇಶಗಳಲ್ಲಿ ಸೇವೆ ಸಲ್ಲಿಸುತ್ತಿರುವವರಿಗೆ ಎಂತಹ ಸಂಕಷ್ಟ ಮತ್ತು ಅಡೆ ತಡೆಗಳು ಎದುರಾಗುತ್ತಿವೆ, ಅದನ್ನು ಹೇಗೆ ಪರಿಹರಿಸಿಕೊಳ್ಳಲಾಗುತ್ತಿದೆ ಇತ್ಯಾದಿಗಳು ಸಭಿಕರಿಗೆ ಮನವರಿಕೆಯಾಗಲಿಕ್ಕಾಗಿ ವರದಿಗಳನ್ನು ಸಲ್ಲಿಸಲಾಗುತ್ತದೆ. ಎಲ್ಲಾ ವರದಿಗಳೂ ಸಲ್ಲಿಸಲ್ಪಟ್ಟ ಬಳಿಕ ಅಮೀರ್‌ರ ಆದೇಶದಂತೆ ಮೌಲಾನಾ ಅಮೀನ್ ಅಹ್ಸನ್ ಇಸ್ಲಾಹಿಯವರು ವರದಿಗಳ ಸಮೀಕ್ಷೆ ನಡೆಸುತ್ತಾ ಉಪಯುಕ್ತ ಮಾರ್ಗದರ್ಶನ ಮತ್ತು ಸಲಹೆಗಳನ್ನು ನೀಡಿದರು. ಅದನ್ನು ಈ ರೀತಿ ಸಂಕ್ಷೇಪಿಸಬಹುದು-

"ಸಭಿಕರೇ! ನಾನು ವರದಿಗಳನ್ನು ಆಲಿಸುವುದರಲ್ಲೇ ಸಂಪೂರ್ಣ ಮಗ್ನನಾಗಿದ್ದೆ. ಆದ್ದರಿಂದ ವರದಿಗಳ ಸಮೀಕ್ಷೆಗೆ ಅಗತ್ಯವಿರುವ ವಿವರಗಳ ಕುರಿತು ನಾನು ಆಲೋಚಿಸಲಿಲ್ಲ. ಆದರೂ ಅಮೀರ್‌ರ ಆದೇಶದಂತೆ ಕೆಲವು ಮುಖ್ಯ ವಿಷಯಗಳನ್ನು ನಿಮ್ಮ ಮುಂದಿಡ

ಬಯಸುತ್ತೇನೆ. ನಿಮ್ಮ ಚಟುವಟಿಕೆಗಳು ಮತ್ತು ನೀವು ವಿವರಿಸಿರುವ ಘಟನೆ ಮತ್ತು ಸ್ಥಿತಿಗತಿಗಳ ಬಗ್ಗೆ ಯಾವ ವಿಶ್ಲೇಷಣೆಯ ಅಗತ್ಯವೂ ನನಗೆ ಕಂಡು ಬರುವುದಿಲ್ಲ. ಆದರೆ ಇತರ ಸಂಘಟನೆಗಳೊಂದಿಗಿನ ಸಂಬಂಧ ಮತ್ತು ಸಂಘರ್ಷದ ಮಟ್ಟಿಗೆ ನಾವು ಇನ್ನೂ ಹೆಚ್ಚು ಬದಲಾಗಬೇಕಾಗಿದೆ. ಈ ಸಂದರ್ಭದಲ್ಲಿ ಆ ಕುರಿತು ಸ್ವಲ್ಪ ಹೇಳಬಯಸುತ್ತೇನೆ-

ನೀವು ವಿವರಿಸುವಂತಹ ಸಂಕಷ್ಟಗಳನ್ನು ಈ ಮಾರ್ಗದಲ್ಲಿ ಅನಿವಾರ್ಯವಾಗಿ ಅನುಭವಿಸಬೇಕಾಗುತ್ತದೆ. ಆದರೆ ಅದರ ಪರಿಹಾರೋಪಾಯಗಳನ್ನು ಕಂಡು ಹಿಡಿಯುವ ನಿಟ್ಟಿನಲ್ಲಿ ನಾವು ಅಸಡ್ಡೆ ತೋರಬಾರದು. ಸೂಕ್ತ ರೀತಿಯಿಂದ ಸತ್ಯದಲ್ಲಿ ಕಾರ್ಯೋನ್ಮುಖರಾಗಿರುವವರಿಗೆ ಸ್ವಾಭಾವಿಕವಾಗಿ ಅಡ್ಡಿ ಆತಂಕಗಳನ್ನು ಎದುರಿಸಬೇಕಾಗುವುದು. ಆದರೆ ಅಂತಹ ಸನ್ನಿವೇಶಗಳಲ್ಲಿ ಇತರರೊಂದಿಗೆ ಸಂಘರ್ಷಿಸುವ ನೀತಿಯು ಶುದ್ಧ ತಪ್ಪು. ಕೆಲವು ಮುಖ್ಯ ವಿಷಯಗಳನ್ನು ಗಮನದಲ್ಲಿಟ್ಟುಕೊಂಡರೆ ನಮ್ಮ ಹಾದಿಯಲ್ಲಿರುವ ಬಹುತೇಕ ಆತಂಕಗಳನ್ನು ದೂರೀಕರಿಸಬಹುದೆಂದು ನಾನು ಭಾವಿಸುತ್ತೇನೆ. ಈ ಬಗ್ಗೆ ಜಮಾಅತ್‌ನ ಹೊರಗಿರುವ ಜನರಿಗೆ ಸತ್ಯವನ್ನು ತಲಪಿಸುವ ಸಮಸ್ಯೆಯು ಪ್ರಥಮವಾಗಿದೆ. ನಾನು ಇಂದು ಮತ್ತು ಈ ಹಿಂದೆಯೂ ಆ ಸಮಸ್ಯೆಯ ಕುರಿತು ತುಂಬಾ ಆಲೋಚಿಸಿದ್ದೇನೆ. ಇದು ನಾವೆಲ್ಲರೂ ಗಂಭೀರವಾಗಿ ಆಲೋಚಿಸಬೇಕಾದ ಕ್ಲಿಷ್ಟ ಸಮಸ್ಯೆ. ಸತ್ಯವನ್ನು ಸ್ಪಷ್ಟವಾಗಿ ಮನಗಾಣಬೇಕೆಂದಲ್ಲದೆ ಇತರ ಪಕ್ಷಗಳಿಂದ ನಾವೇನನ್ನೂ ನಿರೀಕ್ಷಿಸುವುದಿಲ್ಲ. ಆದರೆ ಈ ಕೆಲಸವು ಕೇವಲ ಮಾತಿನಿಂದ ಪೂರ್ಣವಾಗದೆಂಬುದನ್ನು ನೀವು ಚೆನ್ನಾಗಿ ತಿಳಿದಿರಬೇಕು. ಅದಕ್ಕಾಗಿ ನಾವು ನಮ್ಮ ವೈಯಕ್ತಿಕ ಕರ್ಮಗಳನ್ನೂ ಸಾಮಾಜಿಕ ಗುಣವನ್ನೂ ಉಪಾಧಿಯನ್ನಾಗಿ ಮಾಡಿಕೊಳ್ಳಬೇಕು. ಉಜ್ವಲ ಭಾಷಣಗಳ ಪ್ರವಾಹ ಹರಿಸಿ ತತ್ವ ಸಿದ್ಧಾಂತಗಳನ್ನು ಪ್ರಚಾರಗೊಳಿಸಿ ಸುಮ್ಮನಿದ್ದರೆ ಸಾಲದು. ಅದರೊಂದಿಗೆ ನಾವು ನಮ್ಮ ಧ್ಯೇಯ ಧೋರಣೆಗಳಲ್ಲಿ ನಿಷ್ಕಳಂಕರಾಗಿರುವೆವೆಂದೂ, ವಿಶೇಷವಾಗಿ ಮುಸ್ಲಿಮರಿಗೂ, ಸಮಗ್ರ ಮಾನವಕುಲಕ್ಕೂ ಕಲ್ಯಾಣದಾಯಕವಾಗಿರುವ ಸೇವೆ ಸಲ್ಲಿಸಬಯಸುವವರೆಂದೂ ನಮಗೆ ಯಾರೊಂದಿಗೂ ದ್ವೇಷವಿಲ್ಲವೆಂದೂ, ಮಾನವಕುಲದ ಬಗೆಗಿನ ನೈಜ ಕಳಕಳಿಯೇ ಇದರ ನೈಜ ಪ್ರೇರಣೆಯೆಂದೂ ನಮ್ಮ ಚಟುವಟಿಕೆಗಳಿಂದಲೇ ಅವರಿಗೆ ಮನದಟ್ಟಾಗಬೇಕು. ನಮ್ಮ ಜೀವನವು ಯಾವುದಾದರೊಂದು ವಿಶಿಷ್ಟ ವಿಭಾಗದ, ಪಕ್ಷದ ಅಥವಾ ಸಮಾಜದ ಒಳಿತಿಗಾಗಿರದೆ ಸತ್ಯದ ಧ್ಯೇಯ ಸಾಧನೆಗಾಗಿರುವುದೆಂಬುದನ್ನು ಸತ್ವ ಪರೀಕ್ಷೆಗಳ ವಿವಿಧ ಹಂತಗಳಲ್ಲಿ ಕಾರ್ಯರೂಪದಲ್ಲಿ ನಾವು ತೋರಿಸಿಕೊಟ್ಟರೆ ಮಾನವರ ಮನವನ್ನಾಕರ್ಷಿಸಲು ಹೆಚ್ಚು ಕಷ್ಟವಿಲ್ಲ. ಇಂದು ವಾಸ್ತವದಲ್ಲಿ ಅನೇಕ ಸಂಕಷ್ಟಗಳು ನಮ್ಮನ್ನು ಅಂಟಿಕೊಂಡಿವೆ. ಅವುಗಳ ಪ್ರಬಲ ವಿಷ ವರ್ತುಲವು ನಮ್ಮನ್ನು ಆವರಿಸಿದೆ. ಆದ್ದರಿಂದ ನಮ್ಮ ಪ್ರಚಾರ ಮಾರ್ಗದಲ್ಲಿ ನಾವೇ ಪ್ರಮುಖ ತಡೆಯಾಗಿದ್ದೇವೆ. ಈ ವರ್ತುಲವನ್ನು ಆದಷ್ಟು ಬೇಗನೆ ಭೇದಿಸಿ ಸತ್ಯವನ್ನು ಸ್ಪಷ್ಟವಾದ ರೂಪದಲ್ಲಿ ಜನರ ಮುಂದಿರಿಸಬೇಕು. ಆಗ ಮಾತ್ರ ಜನರಿಗೆ ಸತ್ಯ ಮತ್ತು ವಾಸ್ತವಿಕತೆಯೇನೆಂಬುದು ಸ್ಪಷ್ಟವಾಗಿ ಮನವರಿಕೆಯಾಗಬಹುದು. ನಾವು ನಮ್ಮ ಪತ್ನಿ ಮತ್ತು ಮಕ್ಕಳ, ಬಂಧು ಬಳಗದ, ನಮ್ಮ ಸಮಾಜ ಮತ್ತು ನಮ್ಮ ಪಕ್ಷದ ಪಕ್ಷಪಾತವೆಂಬ ಕೆಡುಕಿನಿಂದ ಮುಕ್ತರಾದರೆ ಲೋಕದ ನಿಂದಕ ನಾಲಗೆಯನ್ನು ಮೌನಗೊಳಿಸಲಾಗದಿದ್ದರೂ

ನಮ್ಮ ವಿರುದ್ಧವಿರುವ ಪುರಾವೆ ಮತ್ತು ಸಮರ್ಥನೆಗಳ ನಾಲಗೆಯು ಖಂಡಿತವಾಗಿಯೂ ಮೌನವಾಗುವುದು. ಸತ್ಯವನ್ನು ವಿರೋಧಿಸುವುದರಿಂದ ಲೋಕವನ್ನು ತಡೆಯಲು ಇದೊಂದೇ ಮಾರ್ಗವಿರುವುದು. ಪಕ್ಷಪಾತದ ಒಂದು ಸಣ್ಣ ಅಂಶವಾದರೂ ನಮ್ಮಲ್ಲಿ ಉಳಿದುಕೊಂಡರೆ ಪ್ರಥಮವಾಗಿ ನಾವೇ ನಮಗೆ ಅಡ್ಡಿಯಾಗುತ್ತೇವೆ. ನಮ್ಮ ಪ್ರಚಾರ ಮಾರ್ಗದಲ್ಲಿ ಅತೀ ದೊಡ್ಡ ಬಂಡೆಯಾಗಿ ಪರಿಣಮಿಸುತ್ತೇವೆ. ಮನೆ, ಅಂಗಡಿ, ಆಶ್ರಮ, ಮಸೀದಿ ಮುಂತಾದ ಎಲ್ಲೆಡೆಗಳಲ್ಲಿ ನಾವು ನಮ್ಮ ಕ್ಷುಲ್ಲಕ ಹಿತಾಸಕ್ತಿಗಳಿಗಿಂತ ಉನ್ನತರಾಗಿ ತೋರ್ಪಡಿಸಬೇಕು.

ಸೂರಃ ಅಂಬಿಯಾವನ್ನು ನೀವು ಓದಿ ನೋಡಿದರೆ ಇದರ ಪ್ರಾಮುಖ್ಯತೆಯು ನಿಮಗೆ ಅರ್ಥವಾಗಬಹುದು. ಅಲ್ಲಾಹನ ವಚನವನ್ನು ಎತ್ತಿ ಹಿಡಿಯಲಿಕ್ಕಾಗಿ ಆತನಿಂದ ನಿಯೋಜಿತರಾದ ಎಲ್ಲಾ ಪ್ರವಾದಿಗಳೂ ಸತ್ಯದ ಹೊರತು ಇತರೆಲ್ಲಾ ಸಂಬಂಧಗಳನ್ನು ಕಡಿದುಕೊಂಡಿದ್ದರು. ಪಕ್ಷಪಾತೀ ಸಂಬಂಧಗಳೆಲ್ಲವನ್ನೂ ಕಡಿದು, ಅವುಗಳ ಘೋರ ಸಂಕೋಲೆಗಳಿಂದ ಮುಕ್ತರಾದರು. ಆದ್ದರಿಂದ ಅವರ ಬೋಧನೆಗಳು ಯಾವ ಭೇದಭಾವವೂ ಇಲ್ಲದೆ ಸತ್ಯ ಸಂಧರಾದ ಎಲ್ಲಾ ಜನಮನಗಳನ್ನೂ ಆಕರ್ಷಿಸಿದುವು. ಅವರ ಬೋಧನೆಗಳನ್ನು ಸ್ವೀಕರಿಸಿದವರ ಹೃದಯಗಳಲ್ಲಿ ತಮ್ಮ ಪಕ್ಷದ ಉನ್ನತಿಗಿಂತ ಹೆಚ್ಚಾಗಿ ಮಾನವೀಯ ಸೇವೆಯ ಭಾವನೆಗಳು ಉದ್ದೀಪನಗೊಂಡವು. ಆ ಸತ್ಯ ಪ್ರಚಾರಕರ ಮಾದರಿಯನ್ನು ನಾವು ಅನುಸರಿಸಿದರೆ ನಮ್ಮ ಪ್ರಚಾರದ ಅಡ್ಡಿ ಆತಂಕಗಳು ತಕ್ಷಣವೇ ಪರಿಹಾರವಾಗುವುವು. ಈ ಬಗ್ಗೆ ಅಗತ್ಯವಿರುವ ಮಾಹಿತಿಗಳನ್ನು ಜಮಾಅತ್‌ನ ಸಾಹಿತ್ಯಗಳಲ್ಲಿ ಪ್ರತಿಪಾದಿಸಲಾಗಿದೆಯಾದರೂ ಆ ಬಗ್ಗೆ ಸವಿಸ್ತಾರವಾದ ಕಾರ್ಯಕ್ರಮವನ್ನು ಸಾದರ ಪಡಿಸಲು ನಮ್ಮಿಂದ ಇನ್ನೂ ಸಾಧ್ಯವಾಗಿಲ್ಲ. ಈ ಸಂದರ್ಭದಲ್ಲಿ ನಾನು ಇಷ್ಟು ಮಾತ್ರ ಹೇಳಬಯಸುತ್ತೇನೆ. ನಮ್ಮ ಪ್ರಯತ್ನಗಳೆಲ್ಲವೂ ಸಂಪೂರ್ಣವಾಗಿ ಕೇವಲ ಅಲ್ಲಾಹನ ಸಂದೇಶವನ್ನು ಎತ್ತಿಹಿಡಿಯಲಿಕ್ಕಾಗಿದೆಯೆಂಬುದನ್ನು ನಾವು ನಮ್ಮ ವೈಯಕ್ತಿಕ ಹಾಗೂ ಸಾಮಾಜಿಕ ಜೀವನದಲ್ಲಿ ಸಾಬೀತುಪಡಿಸಬೇಕು. ಹನಫೀ-ವಹ್ಹಾಬಿ ವಾದಗಳನ್ನೂ ಪಕ್ಷದ್ವೇಷ ಮತ್ತು ತಪ್ಪು ತಿಳುವಳಿಕೆಗಳನ್ನೂ ಕೊನೆಗೊಳಿಸಲು ಇದೊಂದೇ ಮಾರ್ಗವಿರುವುದು. ನಮ್ಮ ಉದ್ದೇಶವು ಒಂದು ನೂತನ ಪಕ್ಷವನ್ನು ಸೃಷ್ಟಿಸುವುದಾಗಿರದೆ ಕೇವಲ ಸತ್ಯವನ್ನು ಸ್ಪಷ್ಟವಾಗಿ ಬಹಿರಂಗ ಪಡಿಸುವುದಾಗಿದೆ.

ನಾನು ಈ ಸಂದರ್ಭದಲ್ಲಿ ಇನ್ನೊಂದು ವಿಷಯವನ್ನು ನಿಮ್ಮಗಮನಕ್ಕೆ ತರ ಬಯಸುತ್ತೇನೆ. ಒಂದು ಸತ್ಯದೊರೆಯುವುದರಿಂದ ಅಥವಾ ಒಂದು ಜ್ಞಾನ ಪಡೆಯುವುದರಿಂದ ಮಾನವನಲ್ಲಿ ಮೂಡುವ ಅಹಂಭಾವ, ಅಹಂಕಾರ ಅಥವಾ ಮೇಲ್ಮೆಯು ಸತ್ಯ ಪ್ರಚಾರಕರಲ್ಲಿ ಎಂದಿಗೂ ಪ್ರತ್ಯಕ್ಷವಾಗಬಾರದು. ಸತ್ಯವನ್ನು ಮನಗಂಡ ಯಾವನಾದರೂ ತಾನು ಎಲ್ಲರಿಗಿಂತ ಉನ್ನತನೆಂದು ಭಾವಿಸತೊಡಗಿದರೆ ಆತನ ಪ್ರಚಾರಮಾರ್ಗಕ್ಕೆ ಆತನೇ ದೊಡ್ಡ ತಡೆಯಾಗುತ್ತಾನೆ. ಕೆಲವರು ಈ ಅಹಂಕಾರವನ್ನು ಬಹಿರಂಗವಾಗಿ ತೋರಿಸುವುದಿಲ್ಲವಾದರೂ ಈ ವಿನಾಶವು ಅವರ ಹೃದಯದಲ್ಲಿ ನೆಲೆಗೊಂಡಿರುವುದರಿಂದ ಅವರ ಮಾತು ಮತ್ತು ಬರಹಗಳೆಲ್ಲವೂ ಕೃತಕ ರೂಪತಾಳುತ್ತವೆ. ಕೃತಕವಾದುದಕ್ಕೆ ಸತ್ಯಪ್ರಚಾರದೊಂದಿಗೆ ದೂರದ ಸಂಬಂಧವೂ ಇಲ್ಲ. ಮೇಲ್ಮೆ ಮತ್ತು ಅಹಂಕಾರವನ್ನು ಪ್ರದರ್ಶಿಸುವುದರಿಂದಾಗಿ ಜನರು ಅವರಿಂದ ದೂರ ಸರಿಯುತ್ತಾರೆ. ಅವರ ಬೋಧನೆಗಳನ್ನು ಕಿವಿಗೆ ಹಾಕಿಗೊಳ್ಳುವುದಿಲ್ಲ. ಈ ರೋಗದ

ನಿವಾರಣೆಗೆ, ನಿಮಗೆ ದೊರೆತಿರುವ ಈ ಸತ್ಯಜ್ಞಾನವು ಅಲ್ಲಾಹನ ಒಂದು ಅನುಗ್ರಹವೆಂದು ಭಾವಿಸಿ ಅದಕ್ಕಾಗಿ ನೀವು ಅಲ್ಲಾಹನೊಂದಿಗೆ ಹೆಚ್ಚು ಕೃತಜ್ಞರಾಗಿರಬೇಕು. ಈ ಪ್ರಜ್ಞೆಯು ಅಹಂಕಾರಕ್ಕೆ ಬದಲಾಗಿ ನಮ್ಮಲ್ಲಿ ವಿನೀತ ಭಾವನೆಯನ್ನು ಬೆಳೆಸಿ ಅಲ್ಲಾಹನ ಇತರ ದಾಸರೊಂದಿಗಿರುವ ನಮ್ಮ ಸಂಬಂಧವನ್ನು ಸುದೃಢಗೊಳಿಸುತ್ತದೆ. ಅಲ್ಲಾಹನ ಅನುಗ್ರಹಗಳ ಪ್ರಜ್ಞೆಯು ಮಾನವನಲ್ಲಿ ಜಾಗೃತವಾದರೆ ಅಹಂಕಾರದ ಬದಲಾಗಿ ವಿನೀತಭಾವನೆ, ಕೋಪದ ಬದಲು ಸಹಾನುಭೂತಿ, ದ್ವೇಷದ ಬದಲು ಪ್ರೀತಿಯ ಭಾವನೆಗಳು ಬೆಳೆದು ಬರುತ್ತವೆ. ಮಕ್ಕಳ ಬಗ್ಗೆ ಮಾತಾಪಿತರಲ್ಲಿ ಗೋಚರಿಸುವಂತಹ ಗಾಢ ಹಾಗೂ ನಿಸ್ವಾರ್ಥ ಪ್ರೀತಿ-ವಾತ್ಸಲ್ಯಗಳು ಜನಸಾಮಾನ್ಯರ ಬಗ್ಗೆ ಸತ್ಯ ಪ್ರಚಾರಕನಲ್ಲಿ ಮೂಡಬೇಕು, ಆತನು ಜನರ ತಪ್ಪುಗಳಿಗಾಗಿ ಸಂತೋಷಪಡುವ ಬದಲಾಗಿ ಕಳವಳಗೊಳ್ಳುವನು. ಟೀಕಿಸುವ ಬದಲಾಗಿ ಸಹಾನುಭೂತಿಯಿಂದ ಉಪದೇಶಿಸುವನು. ಅಹಂಕಾರದ ಬದಲಾಗಿ ಅನುಕಂಪವೇ ಆತನಲ್ಲಿ ಮೈತಾಳುವುದು. ಈ ಸ್ಥಿತಿಗೆ ತಲುಪಿದಾಗ ಆತನ ಸಂಭಾಷಣಾ ಶೈಲಿಯೂ ಬದಲಾಗುವುದು. ಕಗ್ಗಲ್ಲಿನಂತೆ ಕಠೋರವಾದ ಹೃದಯಗಳನ್ನು ಬೆಣ್ಣೆಯಂತೆ ಕರಗಿಸಲು ಆತನ ಮಾತುಗಳಿಗೆ ಸಾಧ್ಯವಾಗುವುದು.

ಹಲವು ಕಾಲದಿಂದ ನಮ್ಮ ನಾಲಗೆಗೆ ಅಭ್ಯಾಸವಾಗಿ ಬಿಟ್ಟಿರುವಂತಹ ಮಾತುಗಳಿಂದಲೇ ನಮ್ಮ ಕಾರ್ಯಕರ್ತರು ವಿರೋಧಿ ಸಂಘಟನೆಗಳನ್ನು ಟೀಕಿಸುತ್ತಿದ್ದಾರೆ. ಇತರ ಪಕ್ಷಗಳು ನಮ್ಮನ್ನು ನಿಂದಿಸಿ ಸಂತೋಷ ಪಡುವಂತೆ ನಮ್ಮ ಕೆಲವು ಬಾಂಧವರು ಎದುರಾಳಿಗಳನ್ನು ಹಂಗಿಸಿ ಸಂತೋಷ ಪಡುತ್ತಿರುವರೆಂಬುದನ್ನು ವರದಿಗಳಿಂದ ನಾನು ಊಹಿಸಿದ್ದೇನೆ. ಈ ಬಗ್ಗೆ ನಮ್ಮಲ್ಲಿ ಕೆಲವರು ಬಹಿರಂಗವಾಗಿ ಜಾಗರೂಕತೆ ಪಾಲಿಸುತ್ತಿರುವರಾದರೂ ಒಂಟಿಯಾಗಿರುವಾಗ ಅವರೂ ಇತರರನ್ನು ಟೀಕಿಸಿ, ಗೇಲಿ ಮಾಡಿ ಸಂತೋಷಪಡುತ್ತಾರೆ. ಈ ರೀತಿಯ ಕಪಟತೆಯಲ್ಲಿ ನಿಸ್ವಾರ್ಥತೆ ಮತ್ತು ನಿಷ್ಕಳಂಕತೆಯ ಉಸಿರು ಬೆಳೆಯುವುದು ಅಸಾಧ್ಯ. ನಿಸ್ವಾರ್ಥತೆ ಮತ್ತು ನಿಷ್ಕಳಂಕತೆಗಳಿಲ್ಲದೆ ಸತ್ಯಬೋಧನೆಯನ್ನು ಇತರರ ಮನ-ಮಸ್ತಿಷ್ಕಗಳಲ್ಲಿ ರೂಢ ಮೂಲಗೊಳಿಸಲೂ ಸಾಧ್ಯವಿಲ್ಲ.

## ಪ್ರವಾದಿ(ಸ) ಅವರ ಕಾರ್ಯ ವಿಧಾನದ ವೈಶಿಷ್ಟ್ಯಗಳು

ನಮಗೆ ತಿಳಿದಿರುವ ವಿಷಯಗಳು ಇತರರಿಗೆ ತಿಳಿದಿಲ್ಲವೆಂಬ ಹಾಗೂ ಇಷ್ಟೊಂದು ಸ್ಪಷ್ಟ ಮತ್ತು ಸರಳವಾದ ವಿಷಯವು ಅವರಿಗೇಕೆ ಅರ್ಥವಾಗುವುದಿಲ್ಲವೆಂಬ ಭಾವನೆಯು ನಮ್ಮಲ್ಲಿ ಮೂಡಿದಾಗ ನಮ್ಮ ಅಂತರಂಗದಲ್ಲಿ ನಾಯಕತ್ವ ಮತ್ತು ಮೇಲ್ಮೆಯ ಅಹಂಕಾರವು ಸ್ವಾಭಾವಿಕವಾಗಿ ಹುಟ್ಟಿಕೊಳ್ಳುತ್ತದೆ. ಪ್ರತಿಯೊಂದು ತಪ್ಪಿಗಾಗಿ ಶಿಷ್ಯನು ಬೈಗುಳ ಮತ್ತು ದಂಡನೆಗೆ ಅರ್ಹನೆಂದು ಅಧ್ಯಾಪಕನು ಭಾವಿಸುವಂತೆ, ನಾವು ಇತರರನ್ನು ಆರೋಪಿಸಲು ಮತ್ತು ದಂಡಿಸಲು ಅರ್ಹರೆಂದು ಭಾವಿಸುತ್ತೇವೆ. ಆದರೆ ಶಿಕ್ಷಣದ ಬಗ್ಗೆ ತಿಳಿದಿರುವವರೆಲ್ಲರೂ ಈ ಶಿಕ್ಷಣ ಪದ್ಧತಿಯು ತಪ್ಪೆಂದು ಮನಗಂಡಿದ್ದಾರೆ. ಜ್ಞಾನವನ್ನು ಹೃದಯದಲ್ಲಿ ಬೇರೂರುವಂತೆ ಮಾಡಬೇಕಾದರೆ ಕೋಪ, ಅಪಹಾಸ್ಯ, ತೆಗಳಿಕೆ, ಅಶ್ಲೀಲ ಮಾತುಗಳನ್ನು ತ್ಯಜಿಸಬೇಕು. ಯಾರೊಂದಿಗೂ ತಂಟೆ ತಕರಾರಿಗೆ ಹೋಗಬಾರದು. ಶಿಕ್ಷಣ, ಸಂರಕ್ಷಣೆ ಮತ್ತು ಪ್ರಚಾರದ ಮಹಾ ಸೇವೆಯನ್ನು ನೀವು ಮಾಡಬೇಕಾಗಿದೆ. ಈ ಕಾರ್ಯಕ್ಕೆ ಸಹಾನುಭೂತಿ, ಅನುಕಂಪ,

ಭ್ರಾತೃತ್ವ ಪ್ರಜ್ಞೆ ಮುಂತಾದ ಆಯುಧಗಳೇ ಸೂಕ್ತವಾಗಿರುವುದು. ಒಮ್ಮೆ ಪ್ರವಾದಿವರ್ಯರೊಂದಿಗೆ(ಸ) "ನೀವು ಕಳೆದ ಅತೀ ಕಠಿಣ ದಿನ ಯಾವುದು?" ಎಂದು ಪ್ರಶ್ನಿಸಲಾಯಿತು, ಅದಕ್ಕೆ ಪ್ರವಾದಿವರ್ಯರು(ಸ), "ತಾಯಿಫ್‌ನ ದಿನ" ವೆಂದು ಉತ್ತರಿಸಿದರು. ಆ ದಿನ ಲೋಕದ ಅತ್ಯಂತ ಮಹಾನ್ ವ್ಯಕ್ತಿ ಒಂದು ತೋಟದ ಗೋಡೆಯ ಹಿಂದೆ ಕಲ್ಲೆಸೆತ ಸಹಿಸಲಾಗದೆ ಆಶ್ರಯ ಪಡೆಯುತ್ತಾರೆ. ಆ ಅಕ್ರಮಿಗಳ ಮೇಲೆ ಅಲ್ಲಾಹನ ಶಾಪಕ್ಕಾಗಿ ಪ್ರಾರ್ಥಿಸಿರೆಂದು ಅವರೊಂದಿಗೆ ಕೇಳಿಕೊಂಡಾಗ ಅವರು 'ತಾಯಿಫ್'ನವರ ಸನ್ಮಾರ್ಗದರ್ಶನಕ್ಕಾಗಿ ಪ್ರಾರ್ಥಿಸಿದರು. ಈ ಮನೋಭಾವವನ್ನು ಬೆಳೆಸಿಕೊಳ್ಳದಿದ್ದರೆ, ಪ್ರಾಯಶಃ ಇತರ ಕೆಲಸಗಳು ಸಾಧಿಸಲ್ಪಡಬಹುದಾದರೂ ಸತ್ಯಪ್ರಚಾರ ಕಾರ್ಯವನ್ನು ಯಾವ ರೀತಿಯಿಂದಲೂ ನಿರ್ವಹಿಸಲಸಾಧ್ಯ. ಜನರು ಸತ್ಯದ ಸವಿ ಮತ್ತು ವಾಸ್ತವಿಕತೆಯ ಸುಗಂಧವನ್ನು ಗ್ರಹಿಸಲು ಅಸಕ್ತರಾಗಿದ್ದರೆ ಅವರ ಬಗ್ಗೆ ಅನುಕಂಪ ತೋರಬೇಕೇ ವಿನಾ ಟೀಕಿಸುವುದಲ್ಲ. ನಾವು ಸತ್ಯದಲ್ಲಿಯೇ ದೃಢವಾಗಿರುವೆವೆಂಬ ವಿಷಯದಲ್ಲಿ ಸಂದೇಹವಿಲ್ಲ. ಅದೆಷ್ಟೋ ಮಂದಿಗೆ ಸತ್ಯವನ್ನು ತಿಳಿದುಕೊಳ್ಳುವ ಸೌಭಾಗ್ಯ ದೊರೆತಿಲ್ಲವೆಂಬುದನ್ನೂ ನಾವು ಅರಿತಿದ್ದೇವೆ. ಆದರೆ ಅವರೊಂದಿಗೆ ನಿರ್ದಯ ಮತ್ತು ಅಹಂಕಾರದಿಂದ ವರ್ತಿಸಬೇಕೆಂಬುದು ಅದರಿಂದ ಹೇಗೆ ತಾನೇ ಸಿದ್ಧವಾಗುತ್ತದೆ. ಸತ್ಯ ಪ್ರಚಾರದ ವೇಳೆ ನಾವು ಜನರನ್ನು ಒಂದೆಡೆಗೆ ಸೆಳೆಯುತ್ತಿರುವೆವೆಂಬ ಭಾವನೆ ಅವರಲ್ಲಿ ಮೂಡದಂತೆ ಜಾಗ್ರತೆ ವಹಿಸಬೇಕು. ಬದಲಾಗಿ ಅವರಿಗೇ ಸ್ವಯಂ ಒಂದು ವಾಸ್ತವಿಕತೆಗೆ ತಲಪಿದ ಅನುಭವವಾಗಬೇಕು. ಮೂಲಭೂತ ಮತ್ತು ತಾತ್ವಿಕವಾದ ಸರ್ವಾಂಗೀಕೃತ ವಿಷಯಗಳನ್ನು ಎಲ್ಲಾ ಮುಸ್ಲಿಮ್ ಪಕ್ಷಗಳೂ ಒಪ್ಪುತ್ತವೆ. ಪ್ರೀತಿ, ಸೌಹಾರ್ದ, ಸಂಯಮಗಳಿಂದ ವರ್ತಿಸಿದರೆ ಆ ಪಕ್ಷಗಳನ್ನು ಒಂದುಗೂಡಿಸಲು ಸಾಧ್ಯವಿದೆ. ಆದರೆ ಈ ಕಾರ್ಯವು, ವಾದ ವಿವಾದ ಅಥವಾ ಬೌದ್ಧಿಕ ವಿಜಯದ ಆಶೆಯಿಂದ ಸಾಧಿಸಲಾಗದೆಂಬುದನ್ನು ನಾವು ಪ್ರತ್ಯೇಕವಾಗಿ ಜ್ಞಾಪಿಸಬೇಕು. ಈ ದುರಾಶೆಯೇ ಮಾನವನನ್ನು ಪಕ್ಷಪಾತ ಮತ್ತು ಹಿಂಸೆಯ ಕಪಿಮುಷ್ಟಿಯಲ್ಲಿ ಸಿಲುಕಲು ಪ್ರೇರೇಪಿಸುತ್ತದೆ.

ನಿಮ್ಮ ಭಾಷಣ ಅಥವಾ ಸಂಭಾಷಣೆಗಳಲ್ಲಿ ಪ್ರಸ್ತುತ ಆಶೆಯ ಕುರುಹುಗಳೇನಾದರೂ ಕಂಡುಬಂದರೆ ತಕ್ಷಣವೇ ನೀವು ನಿಮ್ಮ ಮನಸ್ಸಿನ ಕಡಿವಾಣವನ್ನು ಎಳೆದು ಹಿಡಿಯಬೇಕು. ಅದು ವಿರೋಧಿ ವಿಭಾಗಗಳಲ್ಲಿ ಗೋಚರವಾದರೆ "ಖಾಲೂಸಲಾಮ" ಎಂಬ ಕ್ರಮ ಕೈಗೊಳ್ಳಬೇಕು. ಅಭಿಪ್ರಾಯ ವಿನಿಮಯದ ವೇಳೆಯಲ್ಲಿ ಜಯಾಪಜಯದ ಪ್ರಶ್ನೆಯೇ ಏಳಬಾರದು. ಓರ್ವ ಧರ್ಮ ಪ್ರಚಾರಕನ ಸ್ಥಾನವು ಇವೆಲ್ಲವುಗಳಿಗಿಂತ ಉನ್ನತವಾಗಿದೆ. ಸತ್ಯವಚನದ ಕಿರುಬೀಜವನ್ನು ಹೃದಯದಲ್ಲಿ ಬಿತ್ತುವುದೇ ಆತನ ಕೆಲಸ, ತರುವಾಯ ಮಸ್ತಿಷ್ಕವೆಂಬ ಬಯಲನ್ನು ಸಂರಕ್ಷಿಸುವುದು. ವಾದ ಪ್ರತಿವಾದಗಳಲ್ಲಿ ಸೋತರೆ, ನನ್ನ ಮಾತು ಅಡಿಗೆ ಬಿತ್ತೆಂಬ ಭಾವನೆ ನಿಮ್ಮ ಹೃದಯದಲ್ಲಿ ಮೂಡಲು ಅವಕಾಶ ಕೊಡಬೇಡಿರಿ. ಈ ಭಾವನೆಯೇ ಇಂದಿನ ವಾದಪ್ರತಿವಾದಗಳ ಜೀವಾಳವಾಗಿದೆಯಲ್ಲವೇ? ಇದರ ತರಬೇತಿಯೇ ಅನೇಕ ವರ್ಷಗಳಿಂದ ನಡೆಯುತ್ತಿದೆ. ಈಗ ಸರ್ವಶಕ್ತಿಯನ್ನು ಬಳಸಿ ಈ ರೂಢಿಯ ಮೂಲವನ್ನೇ ಕತ್ತರಿಸಬೇಕಾಗಿದೆ. ಈಗ ನಾವು ವಾದ ಪ್ರತಿವಾದಗಳಲ್ಲಿ ಗೆಲ್ಲುವ ಬದಲಾಗಿ ಪದೇ ಪದೇ ಸೋಲುವ ತರಬೇತಿಯನ್ನೇ ಗಳಿಸಬೇಕು. ಸಂಭಾಷಣೆಗಳಲ್ಲಿ ನಿಷ್ಕಳಂಕತೆ ಮತ್ತು ನಿಸ್ವಾರ್ಥತೆಯ

ಚೇತನವು ಬತ್ತಿಹೋಗಿದೆಯೆಂದು ತೋರಿದರೆ ನಾಲಗೆಯನ್ನು ತಕ್ಷಣವೇ ಬಂಧನದಲ್ಲಿಡಬೇಕು. ಚಪ್ಪಾಳೆ ತಟ್ಟಿ ಹೀಯಾಳಿಸುವರೆಂಬುದನ್ನು ಸಂಪೂರ್ಣವಾಗಿ ನಿರ್ಲಕ್ಷಿಸಬೇಕು. ಮಾತಿನಲ್ಲಿ ಏನೇ ತಪ್ಪಾದರೂ ಸಂಬೋಧಿತರೊಡನೆ ನಿಸ್ಸಂಕೋಚವಾಗಿ ಕ್ಷಮೆ ಕೇಳಬೇಕು. ಜನರು ನಿಮ್ಮನ್ನು ಹೀಯಾಳಿಸಿಯಾರೆಂಬ ಚಿಂತೆಯೇ ಇರಬಾರದು. ಈ ಅಪಜಯಗಳನ್ನು ಸಹಿಸುವ ಮನೋಸ್ಥೈರ್ಯವಿದ್ದರೆ ಮಾತ್ರ ಮುಂದೆ ಬನ್ನಿರಿ- ಈ ಕಾರ್ಯದಲ್ಲಿ ಉದ್ಯುಕ್ತರಾಗಿರಿ. ವಾದ ಪ್ರತಿವಾದವೆಂಬ ಸಂಚಿನ ಸಂಕೋಲೆಯಲ್ಲಿ ಸಿಲುಕಿಸಿ ಯಾರನ್ನಾದರೂ ನೀವು ಇತ್ತ ಎಳೆತಂದರೆ ಅವರು ಅದೊಂದು ದಿನ ಬಂದ ಹಾದಿಯಿಂದಲೇ ಮರಳಿ ಹೋಗಬಹುದು.

ಈ ಬಗ್ಗೆ ಪ್ರವಾದಿಗಳ ಕಾರ್ಯವಿಧಾನವನ್ನು ಅವಲೋಕಿಸಿದರೆ, ಅದರ ಕೆಲವು ವೈಶಿಷ್ಟ್ಯಗಳು ನಿಮಗೆ ಮನವರಿಕೆಯಾದೀತು. ಆ ವೈಶಿಷ್ಟ್ಯಗಳನ್ನು ನಾವು ಚೆನ್ನಾಗಿ ತಿಳಿದಿರುವುದು ಅತ್ಯಗತ್ಯ. ಯಾಕೆಂದರೆ ನಮ್ಮ ಪಕ್ಷವು ಲೋಕದಲ್ಲಿರುವ ಇತರ ಪಕ್ಷಗಳಿಗಿಂತ ಭಿನ್ನವಾಗಿ ಪ್ರವಾದಿಗಳ ಕಾರ್ಯವಿಧಾನವನ್ನು ಅನುಸರಿಸುವ ದೃಢ ನಿರ್ಧಾರದಿಂದ ರಂಗಕ್ಕಿಳಿದಿದೆ. ಆದ್ದರಿಂದ ನಾವು ನೇರವಾಗಿ ಅಲ್ಲಿಂದಲೇ ಬೆಳಕು ದೊರಕಿಸಿಕೊಳ್ಳಬೇಕು. ಎಲ್ಲಾ ಕಾಲಗಳಲ್ಲಿಯೂ ಬಂದ ಪ್ರವಾದಿಗಳು ತಮ್ಮ ಸಮುದಾಯಕ್ಕೆ, "ಅವಿಶ್ವಾಸಿಗಳೇ! ನೀವು ವಿಶ್ವಾಸ ಹೊಂದಿರಿ- "ದುರ್ಮಾರ್ಗಿಗಳೇ! ನೀವು ಸನ್ಮಾರ್ಗಕ್ಕೆ ಬನ್ನಿ" ಎಂಬುದಾಗಿ ಕರೆ ನೀಡಲಿಲ್ಲ. ತದ್ವಿರುದ್ಧವಾಗಿ ಪ್ರೀತಿ ಪೂರ್ವಕವಾಗಿ "ನನ್ನ ಸಮುದಾಯವೇ", "ಮನುಷ್ಯರೇ"! "ದೇವ ಗ್ರಂಥ ನೀಡಲ್ಪಟ್ಟವರೇ" ಎಂಬುದಾಗಿ ಸಂಬೋಧಿಸಿದ್ದರು. ಅದಲ್ಲದೇ ಪ್ರವಾದಿಗಳನ್ನು ಅನುಸರಿಸಿದ ಜನರಲ್ಲಿ ವಿಶ್ವಾಸಕ್ಕೆ ವಿರುದ್ಧವಾದ ಚಟುವಟಿಕೆಗಳು ಗೋಚರಿಸಿದಾಗ, ಆ ತಪ್ಪನ್ನು ಅವರಿಗೆ ಮನವರಿಕೆ ಮಾಡಿಕೊಡುವ ಸಂದರ್ಭದಲ್ಲಿಯೂ, "ಎಲ್ಲೈ ಕಪಟಿಗಳೇ", 'ವಚನ ಉಲ್ಲಂಘಿಸಿದವರೇ" ಎಂದು ಸಂಬೋಧಿಸುವ ಬದಲಾಗಿ "ಎಲ್ಲೈ! ವಿಶ್ವಾಸವಿಟ್ಟ ಜನರೇ" ಎಂಬುದಾಗಿ ಸಂಬೋಧಿಸಲಾಗಿತ್ತು. ತರುವಾಯ ಆ ಬೋಧಕರ ಅನುಯಾಯಿಗಳೂ ತಮ್ಮ ಮಾತಿನಲ್ಲಿ ಸಹನೆ, ವಿನಯ, ಪ್ರೀತಿಗಳ ಶೈಲಿಯನ್ನು ಬಳಸುತ್ತಿದ್ದರು.

ಅನೇಕ ಹಂತಗಳನ್ನು ದಾಟಿದ ಸುಧಾರಿತ ಮತ್ತು ಸುಧಾರಕ ಸಂಘಟನೆಯು, ತನ್ನ ಮಾತು ಮತ್ತು ಕೃತಿಗಳಲ್ಲಿ ಸತ್ಯವನ್ನು ಸಂಪೂರ್ಣವಾಗಿ ಅಭಿವ್ಯಕ್ತಗೊಳಿಸಿ ಸತ್ಯದ ಮುಖದಲ್ಲಿರುವ ಧೂಳನ್ನು ಅಳಿಸಿ ಹಾಕಿದರೆ ಜನರು ಅದನ್ನು ಸಾಕ್ಷಾತ್ ರೂಪದಲ್ಲಿ ದರ್ಶಿಸುವ ಒಂದು ಕೊನೆಯ ಹಂತವನ್ನು ಪ್ರವೇಶಿಸುವರು. ಈ ಸಂದರ್ಭದಲ್ಲಿ ಸತ್ಯವು ನಿಚ್ಚಳವಾದ ಬಳಿಕವೂ ಅಹಂಕಾರ, ಕುತರ್ಕ ಮತ್ತು ಪಕ್ಷಪಾತವನ್ನೇ ತೋರುವವರನ್ನೂ, ಪುರಾವೆಗಳೆಲ್ಲ ಕೊನೆಗೊಂಡ ಬಳಿಕವೂ ನಿಷೇಧಾತ್ಮಕ ನೀತಿ ಕೈಗೊಳ್ಳುವವರನ್ನೂ ಪ್ರವಾದಿಗಳು ಸಂಬೋಧಿಸಿದ ಶೈಲಿಯೇ ಬೇರೆಯಾಗಿತ್ತು. ಅವರು ವಿದ್ರೋಹಿಗಳನ್ನು ಸ್ಪಷ್ಟವಾದ ಮಾತುಗಳಿಂದ, "ಎಲ್ಲೈ! ಸತ್ಯನಿಷೇಧಿಗಳೇ (ಯಾ ಅಯ್ಯುಹಲ್ ಕಾಫಿರೂನ್) ಎಂಬುದಾಗಿ ಕರೆದು ಅವರಿಂದ ಸಂಪೂರ್ಣ ದೂರವಾದರು. ಆದರೆ ಇದಕ್ಕಿಂತ ಮುಂಚೆಯೂ ಅವರು ತುಂಬಾ ಕಾಲದವರೆಗೆ ವಿನಯವಾಗಿ ಪ್ರಚಾರ ನಡೆಸಿದ್ದರು. ಪ್ರವಾದಿವರ್ಯರು(ಸ) ಸತ್ಯಪ್ರಚಾರವನ್ನು ಸಂಪೂರ್ಣವಾಗಿ ಸ್ಪಷ್ಟಗೊಳಿಸಿ, ಶತ್ರುಗಳು ತಮ್ಮ ನಿಷೇಧವನ್ನು ತಾವೇ ಘೋಷಿಸಿದ ಬಳಿಕವೇ ತನ್ನ ಜನಾಂಗದ ವಿರುದ್ಧ ಆ ಶೈಲಿ ಬಳಸಿದ್ದರು. ಮುಹಮ್ಮದ್(ಸ) ಮತ್ತು ಅವರ ಪಕ್ಷವು ದುರ್ಬಲವಾಗಿದ್ದಾಗ

ಸಂಯಮ, ತಾಳ್ಮೆ ಮತ್ತು ವಿನಯವನ್ನು ಅವಲಂಬಿಸಿದರು. ಆದರೆ ಪ್ರಬಲರಾದೊಡನೆಯೇ ಕ್ರೌರ್ಯ ತೋರಲಾರಂಭಿಸಿದರೆಂದು ಕೆಲವರು ಆರೋಪಿಸುತ್ತಾರೆ. ಆದರೆ ಈ ಆರೋಪ ಸತ್ಯಕ್ಕೆ ದೂರವಾಗಿದೆ. ವಾಸ್ತವದಲ್ಲಿ ಓರ್ವ ಪ್ರವಾದಿ ಮಾನವೀಯ ದೌರ್ಬಲ್ಯಗಳನ್ನು ಗಮನಿಸಿ ಜನರೊಂದಿಗೆ ವಾತ್ಸಲ್ಯದಿಂದ ವ್ಯವಹರಿಸುತ್ತಾರೆ. ಅವರ ಈ ವಾತ್ಸಲ್ಯವು ಅತ್ಯಂತ ಔದಾರ್ಯ ಪೂರ್ಣವಾಗಿರುವುದು. ಕಿಡಿಗೇಡಿಗಳು ಅದರ ದುರ್ಲಾಭ ಪಡೆಯುತ್ತಿರುತ್ತಾರೆ. ಪ್ರವಾದಿಯು ಅವೆಲ್ಲವನ್ನೂ ಕಾಣುತ್ತಿರುವರಾದರೂ ಯಾರನ್ನೂ ಹೊರ ಹಾಕುವುದಿಲ್ಲ. ಸಾಮಾನ್ಯವಾಗಿ ಸಂಘಟನೆಯ ಒಳ ಹೊರಗುಗಳಲ್ಲಿರುವವರ ವಿಮರ್ಶೆ ನಡೆಸುತ್ತಾರೆ. ಆದ್ದರಿಂದ ಅಜ್ಞಾನದಿಂದಾಗಿ ತಪ್ಪು ಮಾಡಿದವರೆಲ್ಲರೂ ಕ್ರಮೇಣ ದುಷ್ಕಾರ್ಯಗಳಿಂದ ದೂರವಾಗುತ್ತಾರೆ. ತರುವಾಯ ಶೇಕಡಾ ನೂರಂಶ ತಮ್ಮ ಕಪಿ ಮುಷ್ಠಿಯಿಂದ ಸಂಘಟನೆಯನ್ನು ಬುಡಮೇಲುಗೊಳಿಸಬಯಸುವವರು ಮಾತ್ರ ಉಳಿಯುತ್ತಾರೆ. ಅವರ ಸುಧಾರಣೆಯ ನಿರೀಕ್ಷೆಗಳೆಲ್ಲವೂ ಭಗ್ನವಾದ ಬಳಿಕ ಪ್ರವಾದಿಗಳು ತಮ್ಮ ಅಮೂಲ್ಯ ಸೇವೆಯ ಫಲವಾಗಿರುವ ಸಂಘಟನೆಯನ್ನು ಆಪತ್ತಿನಿಂದ ಪಾರುಮಾಡಲಿಕ್ಕಾಗಿ ಶತ್ರುಗಳ ವಿರುದ್ಧ ಬಲಪ್ರಯೋಗಿಸಲು ಆಜ್ಞಾಪಿಸುತ್ತಾರೆ.

ಇಂದು ನಾವು ಸಾಗುತ್ತಿರುವ ಹಂತವು ಭೀಕರವಿನಾಶದ ಹಂತವಾಗಿದೆ. ಈ ಯುಗವು ಹೆಮ್ಮೆಪಡುತ್ತಿರುವ ವೈಜ್ಞಾನಿಕ ಪ್ರಗತಿಯೆಲ್ಲವೂ ಲೋಕವನ್ನು ಅಂಧಕಾರ ಮಯಗೊಳಿಸಲು ನೆರವಾಗುತ್ತಿದೆ. ಅಲ್ಲದೆ ನಿಷ್ಪಕ್ಷವಾಗಿ ಆಲೋಚಿಸಿದರೆ ಸತ್ಯವನ್ನು ಅಸತ್ಯ ಮತ್ತು ಅಸತ್ಯವನ್ನು ಸತ್ಯಗೊಳಿಸುವ ಪರಿಶ್ರಮಗಳ ವಿಷಯದಲ್ಲಿ ಇತಿಹಾಸದ ಯಾವ ಕಾಲವೂ ಈ ಕಾಲವನ್ನು ಮೀರಿಸಲಾರದು. ಹೀಗಿರುತ್ತಾ ಸತ್ಯವು ಬಹಿರಂಗವಾದ ಹಿನ್ನೆಲೆಯಲ್ಲಿ ಇತರರೊಂದಿಗೆ ಈಗ ಕಟುವಾಗಿ ವರ್ತಿಸಬೇಕಾದ ಅಗತ್ಯವೇನು? ಅಂತಹ ಒಂದು ಸಂದರ್ಭವನ್ನು ನಾವು ಶೀಘ್ರ ಭವಿಷ್ಯದಲ್ಲಿ ನಿರೀಕ್ಷಿಸುವಂತಿಲ್ಲ. ಈಗ ನಾವು ಸುದೀರ್ಘಕಾಲ ಪ್ರೀತಿ ವಾತ್ಸಲ್ಯಗಳ ಹಂತದಲ್ಲಿ ಯಾರನ್ನೂ ಹಿಂದಕ್ಕೆಸೆಯಬಾರದು. ಆಗ ಅಲ್ಲಾಹನು ನಮ್ಮ ಪರಿಮಿತ ಪ್ರಯತ್ನಗಳನ್ನು ಮನ್ನಿಸಿ, ಸತ್ಯವನ್ನು ಸ್ಥಾಪಿಸುವ ಮತ್ತು ಕೆಡುಕನ್ನು ನಿರ್ಮೂಲಗೊಳಿಸುವ ಒಂದು ವ್ಯವಸ್ಥೆಯನ್ನು ಸಂಸ್ಥಾಪಿಸುವ ಅವಕಾಶವನ್ನು ನಮಗೆ ಕರುಣಿಸುವನು, ಅದರೊಂದಿಗೆ ಸನ್ಮಾರ್ಗವು ದುರ್ಮಾರ್ಗದಿಂದ ಬೇರ್ಪಟ್ಟಿತು, (ಅಲ್‌ಬಕರ) ಎಂಬ ಸೌಭಾಗ್ಯಪೂರ್ಣ ಪ್ರಭಾತೋದಯವಾದರೆ, ತರುವಾಯ ಆ ಪ್ರಕಾಶವು ಖೋಟಾ ನಾಣ್ಯವನ್ನೂ ನಿಜ ನಾಣ್ಯವನ್ನೂ, ಕುರುಡನನ್ನೂ ಕಣ್ಣುಳ್ಳವನನ್ನೂ, ಸತ್ಯವಿಶ್ವಾಸಿಯನ್ನೂ ಕಪಟ ವಿಶ್ವಾಸಿಯನ್ನೂ ಪರಸ್ಪರ ಬೇರ್ಪಡಿಸುವುದು.

## ತಪ್ಪು ತಿಳುವಳಿಕೆ

ಇದಕ್ಕಿಂತ ಮುಂಚೆ ನಮ್ಮ ಬಾಂಧವರು ಪ್ರವಾದಿಗಳ ಪ್ರಚಾರಶೈಲಿಯನ್ನು ತೊರೆದು, ಅವಸರದಿಂದ ಕಾರ್ಯೋನ್ಮುಖರಾಗಿರುವೆಡೆಗಳಲ್ಲಿ, ನಾವು ಮುಸ್ಲಿಮರನ್ನು ಮುಸ್ಲಿಮರೆಂದು ಪರಿಗಣಿಸುವುದಿಲ್ಲವೆಂಬ ತಪ್ಪು ತಿಳುವಳಿಕೆ ವ್ಯಾಪಕವಾಗಿ ಹರಡಿದೆ. ಈ ತಪ್ಪು ತಿಳುವಳಿಕೆಯು ಕ್ಷುಲ್ಲಕ ಅಥವಾ ಕಡೆಗಣಿಸುವಂತದ್ದಲ್ಲ. ತತ್ಪರಿಣಾಮವಾಗಿ ಜನರು ನಮ್ಮ ಕರೆಗೆ

ಕಿವಿಗೊಡಲಾರರು. ನಾವು ವಾಸ್ತವದಲ್ಲಿ ಹೇಳುವುದಿಷ್ಟೆ- ಇಂದು ಮುಸ್ಲಿಮರ ಒಂದು ದೊಡ್ಡ ವಿಭಾಗವು ನೈಜ ಧರ್ಮ ಪ್ರಜ್ಞೆಯನ್ನು ಕಳೆದುಕೊಂಡಿದೆ. ಅವರ ಅಜ್ಞಾನವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಇಂದಿನ ಇಸ್ಲಾಮೇತರ ವ್ಯವಸ್ಥೆಯು ಪ್ರಧಾನ ಪಾತ್ರವಹಿಸಿದೆ. ಸಜ್ಜನರು ಮತ್ತು ಇತರರು ಒಂದಾಗಿ ಅವರಿಗೆ ನೀಡುತ್ತಿದ್ದ ಚುಚ್ಚು ಚಿಕಿತ್ಸೆಯ ನಿಮಿತ್ತ ಅವರ ಗ್ರಹಣ ಶಕ್ತಿಯು ಬತ್ತಿಹೋಗಿದೆ. ಆ ಗ್ರಹಣಶಕ್ತಿಯನ್ನು ಪುನಃಶ್ಚೇತನಗೊಳಿಸುವುದೇ ನಮ್ಮ ಕೆಲಸ. ಹೀಗೆ ಅದು ಯಶಸ್ವಿಯಾದರೆ ಇಂದಿನ ಪರಿಸ್ಥಿತಿಯ ಬಗ್ಗೆ ಅವರೇ ಜಿಗುಪ್ಸೆ ತಾಳಬಹುದು. ಕುಫ್ರ್, ಶಿರ್ಕ್ ಮತ್ತು ನಿಫಾಕ್‌ಗಳ ಬಗ್ಗೆ ಅವರಲ್ಲಿ ದ್ವೇಷ ಹುಟ್ಟುವುದು, ಈ ನಿಟ್ಟಿನಲ್ಲಿ ಕುಫ್ರ್ ಮತ್ತು ಶಿರ್ಕ್‌ಗಳನ್ನು ಸ್ಪಷ್ಟಗೊಳಿಸುವುದಷ್ಟೇ ನಮ್ಮ ಕೆಲಸವಾಗಿದೆ. ಕೇವಲ ಇದನ್ನೇ ನಾವು ನಿರ್ವಹಿಸಬೇಕಾಗಿರುವುದು. ಯಾವನೇ ಮುಸ್ಲಿಮನು ಒಂದು ವಿಷಯವು 'ಶಿರ್ಕ್' ಎಂದು ತಿಳಿದ ಬಳಿಕ ಮನಃಪೂರ್ವಕವಾಗಿ ಅದರೊಂದಿಗೆ ಸಂಬಂಧ ಬೆಳೆಸಲಾರನು. ಓರ್ವನಲ್ಲಿ ನೈರ್ಮಲ್ಯದ ಗುಣವು ಜಾಗೃತವಾದರೆ ಆತನು ತನ್ನ ದೇಹವನ್ನು ತಾನೇ ಮಾಲಿನ್ಯಗಳಿಂದ ಶುದ್ಧಗೊಳಿಸಲಾರಂಭಿಸುತ್ತಾನೆ. ಅದೇ ರೀತಿ ನಾವು ಮುಸ್ಲಿಮರಲ್ಲಿ ನೈಜ ಧರ್ಮ ಪ್ರಜ್ಞೆಯನ್ನು ಬೆಳೆಸಿದರೆ ಅವರು ಎಲ್ಲಾ ಕೆಡುಕುಗಳಿಂದಲೂ ಮುಕ್ತರಾಗಲು ಪ್ರಯತ್ನಿಸಲಾರಂಭಿಸುವರು.

ಧಾರ್ಮಿಕ ಪ್ರಜ್ಞೆಯನ್ನು ಪ್ರಚಾರ ಮಾಡುವ ಈ ಪ್ರಯತ್ನದಲ್ಲಿ ನಮ್ಮ ಗಮನವು ಧರ್ಮದ ಮೂಲಭೂತ ತತ್ವಗಳಲ್ಲಿಯೇ ಕೇಂದ್ರೀಕೃತವಾಗಿರಬೇಕು. ಆಂಶಿಕ ಸಮಸ್ಯೆಗಳಲ್ಲಿ ಸಿಲುಕಿ ತೊಳಲಾಡಬಾರದು. ಧರ್ಮದ ಮೂಲಾಧಾರವು 'ತೌಹೀದ್' (ಅಲ್ಲಾಹನಲ್ಲಿ ವಿಶ್ವಾಸ), 'ರಿಸಾಲತ್' (ಪ್ರವಾದಿತ್ವದಲ್ಲಿ ವಿಶ್ವಾಸ) ಮತ್ತು 'ಆಖಿರತ್' (ಪರಲೋಕದ ವಿಶ್ವಾಸ) ಎಂಬ ವಿಷಯಗಳ ನೈಜ ಕಲ್ಪನೆ ಮತ್ತು ವಿಶ್ವಾಸಗಳಲ್ಲಿ ಅಧಿಷ್ಠಿತವಾಗಿದೆ. ಈ ಕಲ್ಪನೆಗಳು ಅವುಗಳ ನೈಜ ವಿವರಣೆಯೊಂದಿಗೆ ಹೃದಯದಲ್ಲಿ ಬೇರೂರಿದರೆ ಅದರಿಂದ ಧರ್ಮದ ಸರಿಯಾದ ಪ್ರಜ್ಞೆಯು ಜನ್ಮ ತಾಳುತ್ತದೆ. ತನ್ಮೂಲಕ ಆಂಶಿಕ ವಿಷಯಗಳಲ್ಲಿ ಸುಧಾರಣೆಯುಂಟಾಗುತ್ತದೆ. ಅದಕ್ಕಾಗಿ ವಿಶೇಷವಾಗಿ ಪ್ರಯತ್ನಿಸಬೇಕಾದ ಅಗತ್ಯವಿರುವುದಿಲ್ಲ. ಒಬ್ಬನಲ್ಲಿ ನೈರ್ಮಲ್ಯದ ಸ್ವಭಾವ ಮತ್ತು ಶುಭ್ರತೆಯ ಪ್ರಜ್ಞೆಯು ಬೆಳೆದರೆ ಆತನ ಮನೆ, ವಸ್ತ್ರ ಮತ್ತು ದೇಹದ ಪ್ರತಿಯೊಂದು ಮಾಲಿನ್ಯಗಳ ಬಗ್ಗೆ ಪ್ರತ್ಯೇಕವಾಗಿ ಆತನ ಗಮನಸೆಳೆಯುವ ಅಗತ್ಯವಿರುವುದಿಲ್ಲ. ಆತನ ಜೀವನದ ಎಲ್ಲಾ ರಂಗಗಳಲ್ಲಿಯೂ ನೈರ್ಮಲ್ಯ ಮತ್ತು ಶುಭ್ರತೆಯು ತನ್ನಿಂತಾನೆ ಗೋಚರಿಸಲಾರಂಭಿಸುವುದು.

ನಾನು ಹೇಳುತ್ತಿರುವಂತೆ, ಆಂಶಿಕ ವಿಷಯಗಳೆಂದರೆ ನಮಾಝ್‌ನಲ್ಲಿ ಆಮೀನ್ ಗಟ್ಟಿಯಾಗಿ ಹೇಳುವುದು, ಅಥವಾ ಕೈ ಎತ್ತುವ ವಿಷಯದಲ್ಲಿ, ಅಂತಹ ಫಿಕ್ಹ್ ಸಂಬಂಧಿ ವಿಷಯಗಳ ಬಗ್ಗೆ ಸದಾ ಸಂಯಮದ ಮಾರ್ಗವನ್ನು ನಾವು ಅವಲಂಬಿಸಬೇಕಾಗುತ್ತದೆ. ಯಾಕೆಂದರೆ ಅಂತಹ ವಿಷಯಗಳಲ್ಲಿ ಉಭಯ ರೀತಿಗಳಿಗೂ ಧರ್ಮದಲ್ಲಿ ಬಹುವಂಶ ಅವಕಾಶವಿರುತ್ತದೆ. ಆದರೆ ಧರ್ಮದಲ್ಲಿ ಯಾವ ಅವಕಾಶವೂ ಇಲ್ಲದ ಆಂಶಿಕ ವಿಷಯಗಳ ಬಗ್ಗೆಯೂ ಈ ಸಂದರ್ಭದಲ್ಲಿ ನಾವು ಸುಮ್ಮನಿರಬೇಕೆಂದು ನಾನು ವಿನಂತಿಸುತ್ತೇನೆ. ಧರ್ಮ ಸೇವೆಯ ಹಿತವೂ ಅದನ್ನೇ ಬಯಸುತ್ತದೆ. ನಮ್ಮ ಪ್ರಚಾರದ ಪ್ರಸಕ್ತ ಹಂತದಲ್ಲಿ ಅವುಗಳನ್ನು ತಾತ್ಕಾಲಿಕವಾಗಿ ನಿರ್ಲಕ್ಷಿಸಬೇಕು. ನಾವು ಹಾಗೆ ಮಾಡದಿದ್ದರೆ, ನಮ್ಮ ಸಂಪೂರ್ಣ ವೇಳೆಯು

ಗೆಲ್ಲುಗಳನ್ನು ಕಡಿಯುವುದರಲ್ಲೇ ವ್ಯಯವಾಗಿ ವಿನಾಶದ ಮೂಲ ಬೇರಿನ ಬಗ್ಗೆ ಆಲೋಚಿಸಲು ನಮಗೆ ಅವಕಾಶ ದೊರೆಯಲಾರದು. ತೌಹೀದ್, ರಿಸಾಲತ್ ಮತ್ತು ಆಖಿರತ್‌ಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನೂ ಜನರಿಗೆ ತಿಳಿಯಪಡಿಸಿದರೆ ಮಾತ್ರ ನಮ್ಮ ಈ ಕರ್ತವ್ಯವನ್ನು ನಿರ್ವಹಿಸಲಾದೀತು. ಈ ಸುದೀರ್ಘ ಮಾರ್ಗವನ್ನು ದಾಟಿದ ಬಳಿಕ ಜನರು ಆಂಶಿಕ ವಿಷಯಗಳಲ್ಲಿ ಸರಿಯಾದ ಮಾರ್ಗವನ್ನು ಸ್ವಯಂ ಕಂಡುಕೊಳ್ಳುವರು. ಕ್ರಮೇಣ ಅವರು ತೌಹೀದ್, ರಿಸಾಲತ್ ಮತ್ತು ಪರಲೋಕ ಪ್ರಜ್ಞೆಗಳಿಗೆ ವಿರುದ್ಧವಾಗಿರುವ ಆಚಾರ, ವಿಚಾರ, ವಿಶ್ವಾಸಗಳನ್ನು ತಾವೇ ವಿಶ್ಲೇಷಿಸಿ ತಿಳಿದುಕೊಳ್ಳುವರು. ಒಟ್ಟಿನಲ್ಲಿ ಇಂತಹ ಆಂಶಿಕ ವಿಷಯಗಳ ಕುರಿತು ಯಾವುದಾದರೊಂದು ವಿಭಾಗವನ್ನು ದೂಷಿಸುವುದು ಅಥವಾ ಬೊಟ್ಟು ಮಾಡುವುದು ನಮ್ಮ ಚಟುವಟಿಕೆಗಳಿಗೆ ಹಾನಿಕರವಾಗುವುದು. ಇಂತಹ ಸಮಸ್ಯೆಗಳನ್ನು ಸಾಧ್ಯವಿದ್ದಷ್ಟು ನಿರ್ಲಕ್ಷಿಸಿರಿ. ನಿಷ್ಕಳಂಕ ಸ್ವಭಾವದ ಯಾವನಾದರೂ ಆ ಬಗ್ಗೆ ವಿಚಾರಿಸಿದರೆ ನಯವಾಗಿ ಉಪದೇಶಿಸಿ ಅವನಿಗೆ ವಿಷಯವನ್ನು ಮನವರಿಕೆ ಮಾಡಿಕೊಡಲು ಪ್ರಯತ್ನಿಸಿರಿ, ತರುವಾಯ ಆತನು ಅದನ್ನು ಸ್ವೀಕರಿಸಿದರೆ ತುಂಬಾ ಉತ್ತಮ. ಒಂದು ವೇಳೆ ತಿರಸ್ಕರಿಸಿದರೆ ನೀವು ಮೌನ ವಹಿಸಿರಿ. ಧರ್ಮದ ಬುನಾದಿಗೆ ಧಕ್ಕೆಯಾಗುವ ವಿಷಯಗಳ ಸುಧಾರಣೆಗಾಗಿ ಮಾತ್ರ ನಾವು ನಮ್ಮ ಸಂಪೂರ್ಣ ಸಾಮರ್ಥ್ಯವನ್ನು ಉಪಯೋಗಿಸಬೇಕು.

ಸುಧಾರಣಾ ಕಾರ್ಯದಲ್ಲಿ ನಾವು ಪ್ರಥಮವಾಗಿ ಬುನಾದಿಗೆ ನಿಕಟವಾಗಿರುವ, ನಂತರ ಅದಕ್ಕಿಂತ ಸ್ವಲ್ಪ ದೂರದ, ಆ ಬಳಿಕ ಅದಕ್ಕಿಂತ ದೂರದ ಕರ್ತವ್ಯಗಳನ್ನು ಜನರ ಮುಂದಿಡುವ ಕ್ರಮವನ್ನು ಅನುಸರಿಸಬೇಕು. ಉದಾಹರಣೆಗಾಗಿ ತೌಹೀದ್‌ಗೆ ಸಂಬಂಧಿಸಿದ ವಿಷಯಗಳಲ್ಲಿ ಸಾಮಾನ್ಯವಾಗಿ ಎಲ್ಲಾ ಮುಸ್ಲಿಮರೂ ಒಪ್ಪುವಂಥ ಹಕ್ಕುಗಳನ್ನು ಪ್ರಥಮವಾಗಿ ತೆಗೆದುಕೊಳ್ಳಬೇಕು. ಅನಂತರ ತೌಹೀದ್‌ನ ಪ್ರಾಥಮಿಕ ಹಂತದಿಂದಲೇ ಗ್ರಹಿಸಬಹುದಾದ ಹಾಗೂ ಸಾಮಾನ್ಯ ಜನರಿಗೆ ಅಸ್ಪಷ್ಟವಾಗಿರುವ ವಿಷಯಗಳನ್ನು ವಿವರಿಸಬೇಕು. ಆ ಬಳಿಕವಷ್ಟೆ ಸ್ವಲ್ಪ ಮುಂದುವರಿದು, ಜನಸಾಮಾನ್ಯರು ಸಂಪೂರ್ಣವಾಗಿ ಗಮನ ಕಳೆದುಕೊಂಡಿರುವ ಹಾಗೂ ಬಹುತೇಕ ಪಂಡಿತರೂ ನಿರ್ಲಕ್ಷಿಸಿರುವ 'ತೌಹೀದ್'ನ ಅಂತಿಮ ಪರಿಣಾಮ ಮತ್ತು ಕರ್ತವ್ಯಗಳತ್ತ ಜನರಿಗೆ ಮಾರ್ಗದರ್ಶನ ನೀಡಬೇಕು. ನಮ್ಮ ಕಾರ್ಯಕರ್ತರು ಈ ಕ್ರಮದಂತೆ, ಜಾಣ್ಮೆಯಿಂದ ಕಾರ್ಯೋನ್ಮುಖರಾಗುವರೆಂದು ನಾನು ಹಾರೈಸುತ್ತೇನೆ."

ಇಲ್ಲಿಗೆ ದ್ವಿತೀಯ ಅಧಿವೇಶನ ಕೊನೆಗೊಂಡಿತು. ತರುವಾಯ 'ಝುಹ್ರ್' ನಮಾಝ್‌ನ ಬಳಿಕ ತೃತೀಯ ಅಧಿವೇಶನ ಆರಂಭಗೊಂಡಿತು. ಇದು ಗೊತ್ತುವಳಿಗಾಗಿ ನಿರ್ಣಯಿಸಲ್ಪಟ್ಟ ಅಧಿವೇಶನವಾಗಿತ್ತು. ಆ ಸಂದರ್ಭದಲ್ಲಿ ಚಟುವಟಿಕೆಗಳ ಯಶಸ್ವೀ ಮುನ್ನಡೆಗೆ ಅಗತ್ಯವಿರುವ ಅನೇಕ ಸಲಹೆಗಳು ಮಂಡಿಸಲ್ಪಟ್ಟವು. ಪ್ರತಿಯೊಂದು ಸಲಹೆಯ ಬಗ್ಗೆಯೂ ಪರ ಮತ್ತು ವಿರೋಧವಾಗಿ ವಿಶ್ಲೇಷಿಸಲು ಪ್ರತಿಯೊಬ್ಬ ಸದಸ್ಯನಿಗೂ ಅವಕಾಶ ನೀಡಲಾಗಿತ್ತು. ಕೊನೆಯದಾಗಿ ಅಮೀರರು ಪ್ರತಿಯೊಂದು ಸಲಹೆಯ ಬಗ್ಗೆ ತನ್ನ ನಿರ್ಧಾರವನ್ನು ಆಧಾರ ಸಹಿತ ಸದಸ್ಯರ ಮುಂದಿಟ್ಟರು. ಸದಸ್ಯರು ಸರ್ವಾನುಮತದಿಂದ ಅದನ್ನು ಅಂಗೀಕರಿಸಿದರು. ಸಲಹೆಗಳು ತಿರಸ್ಕೃತವಾಗುವುದರ ಕಾರಣಗಳನ್ನು ತಿಳಿದೊಡನೆಯೇ ಪ್ರಸ್ತುತ ಸಲಹೆಗಳನ್ನು ಮಂಡಿಸಿದ

ಸದಸ್ಯರೇ ಅವುಗಳನ್ನು ಹಿಂತೆಗೆದುಕೊಳ್ಳುತ್ತಿದ್ದರು. ಈ ಸಲಹೆಗಳೊಂದಿಗೆ ತೃತೀಯ ಅಧಿವೇಶನವು ಕೊನೆಗೊಂಡಿತು.

## ನಮ್ಮ ಪ್ರಚಾರ ನೀತಿ

ಮಗ್ರಿಬ್ ನಮಾಝ್‌ನ ಬಳಿಕ ನಾಲ್ಕನೇ ಅಧಿವೇಶನ ಆರಂಭಗೊಂಡಿತು. ಕಾರ್ಯಕ್ರಮದಂತೆ ಜಮಾಅತ್ ಅಮೀರ್‌ರು ಸಮಾರೋಪ ಭಾಷಣ ಮಾಡಿದರು. ಕಾರ್ಯಕರ್ತರಿಗೂ, ಹಿತೈಷಿಗಳಿಗೂ ಸೂಕ್ತ ನಿರ್ದೇಶನಗಳನ್ನೊಳಗೊಂಡ ಆ ಭಾಷಣವನ್ನು ಈ ರೀತಿ ಸಂಕ್ಷೇಪಿಸಬಹುದು-

ಸ್ಥಾನೀಯ ಜಮಾಅತ್‌ಗಳು ಬೆಳಿಗ್ಗೆ ಇಲ್ಲಿ ಸಮರ್ಪಿಸಿದ ವರದಿಗಳ ಬಗ್ಗೆ ಮೌಲಾನಾ ಅಮೀನ್ ಅಹ್ಸನ್ ಸಾಹೆಬ್‌ರು ನಡೆಸಿದ ಸಮೀಕ್ಷೆಯ ಬಳಿಕ ಆ ಬಗ್ಗೆ ಹೇಳುವ ಅಗತ್ಯ ಉಳಿದಿಲ್ಲ. ಕೆಲವು ವಿಷಯಗಳ ಬಗ್ಗೆ ಸಂಕ್ಷಿಪ್ತವಾಗಿ ಸಲಹೆಗಳನ್ನು ನೀಡಲು ಬಯಸಿದ್ದೇನೆ-

ಪ್ರಥಮವಾಗಿ ನೀವು ನಮ್ಮ ಪ್ರಚಾರದ ನೀತಿಯನ್ನು ಚೆನ್ನಾಗಿ ತಿಳಿದಿರಬೇಕು. ನಮ್ಮ ಪ್ರಚಾರ ಸಿದ್ಧಾಂತವು, "ಅಲ್ ಅಕ್ದಮು ಫಲ್ ಅಕ್ದಮು" ಎಂಬುದಾಗಿದೆ. ಅರ್ಥಾತ್ ಪ್ರಾಮುಖ್ಯವಾದುದನ್ನು ನಾವು ಪ್ರಥಮವಾಗಿ ಕೈಗೆತ್ತಿಕೊಳ್ಳಬೇಕು. ಆ ಬಗ್ಗೆ ನಾವು ಹೆಚ್ಚು ಗಮನಹರಿಸಬೇಕು. ಅಂತೆಯೇ ಧರ್ಮದಲ್ಲಿ ಅಷ್ಟೊಂದು ಪ್ರಾಮುಖ್ಯತೆಯಿಲ್ಲದ ವಿಷಯಗಳನ್ನು ನಾವು ಅನಂತರ ಗಮನಿಸಬೇಕು. ಅದರ ಸ್ಥಾನಮಾನವನ್ನು ಅತಿಶಯೋಕ್ತವಾಗಿ ನಾವು ಹೆಚ್ಚಿಸಬಾರದು.

ಎರಡನೆಯದಾಗಿ ಆಂಶಿಕ ವಿಷಯಗಳಿಗೆ ಪ್ರತ್ಯ ಪ್ರತ್ಯೇಕವಾಗಿ ಶಕ್ತಿವ್ಯಯ ಮಾಡುವ ಬದಲಾಗಿ, ಆಂಶಿಕವೂ ಉಪವಿಷಯಗಳೆಲ್ಲವೂ ಸುಧಾರಣೆ ಹೊಂದ ಬಲ್ಲಂತಹ ಮೂಲಭೂತ ಸಿದ್ಧಾಂತಗಳ ಸುಧಾರಣೆಯತ್ತ ಗಮನಹರಿಸಬೇಕು. ಉದಾಹರಣೆಗೆ ಒಂದು ಮನೆಗೆ ಬೆಂಕಿ ಬಿದ್ದು ಅದರ ಪಕ್ಕಾಸು ಕಿಟಕಿ ಬಾಗಿಲುಗಳೆಲ್ಲವೂ ಹೊತ್ತಿ ಉರಿಯುತ್ತಿದೆಯೆಂದು ಭಾವಿಸೋಣ. ಆಗ ನೀವೇನು ಮಾಡುತ್ತೀರಿ? ಒಂದೊಂದೇ ವಸ್ತುವನ್ನು ಉಳಿಸಲು ಪ್ರಯತ್ನಿಸುವ ಬದಲಾಗಿ ನೇರವಾಗಿ ಬೆಂಕಿಯನ್ನು ನಂದಿಸಲು ಪ್ರಯತ್ನಿಸುತ್ತೀರಿ. ಹಾಗೆಯೇ ಒಬ್ಬನ ರಕ್ತವು ಕೆಟ್ಟು ದೇಹದಲ್ಲೆಲ್ಲಾ ಬೊಕ್ಕೆ ಮತ್ತು ಹುಣ್ಣುಗಳಾದವೆಂದು ಭಾವಿಸೋಣ ಈ ಸಂದರ್ಭದಲ್ಲಿ ಪ್ರತಿಯೊಂದು ಬೊಕ್ಕೆಯನ್ನು ಅಪರೇಶನ್ ಮಾಡಿ ಹುಣ್ಣುಗಳಿಗೆ ಮದ್ದಿಟ್ಟು ಬ್ಯಾಂಡೇಜ್ ಮಾಡುವ ಬದಲಾಗಿ ರಕ್ತದ ಕೆಡುಕುಗಳನ್ನು ನಿವಾರಿಸಲು ಪ್ರಯತ್ನಿಸಬೇಕಾಗುವುದು. ಈ ಸಿದ್ಧಾಂತದಂತೆ ನಮ್ಮ ಕಾರ್ಯಕರ್ತರು ಸ್ಥಾನೀಯ ಸ್ಥಿತಿಗತಿಗಳನ್ನು ಸೂಕ್ಷ್ಮವಾಗಿ ಗಮನಿಸಿ ಜನರ ಆಂಶಿಕ ದುರ್ಮಾರ್ಗಗಳ ನೈಜ ಕಾರಣಗಳನ್ನು ಕಂಡುಹಿಡಿಯಬೇಕು. ತರುವಾಯ ಪ್ರಸ್ತುತ ಮೂಲಕಾರಣದ ನಿವಾರಣೆಗಾಗಿ ಶತಪ್ರಯತ್ನ ನಡೆಸಬೇಕು. ಈ ಕರ್ತವ್ಯ ನಿರ್ವಹಣೆಯ ಹಂತದಲ್ಲಿ ಕೊಂಬೆಗಳ ಗಾತ್ರವನ್ನು ನೋಡಿ ಕಂಗಾಲಾಗಬಾರದು. ಅದೇ ರೀತಿ ನೀವು ಪ್ರಚಾರಪಡಿಸಬಯಸುತ್ತಿರುವ ಒಳಿತಿನ ಮೂಲ ಬೇರನ್ನು ಕಂಡುಹಿಡಿಯಬೇಕು. ತರುವಾಯ ಅದೇ ಮೂಲವನ್ನು ನೀರೆರೆದು ಪೋಷಿಸಲಿಕ್ಕಾಗಿ ನೀವು ಗಮನಹರಿಸಬೇಕು. ಆ ಮೂಲವು ಹಚ್ಚಹಸಿರಾಗಿದ್ದರೆ ಕೊಂಬೆ, ರೆಂಬೆ, ಎಲೆ, ಕಾಯಿ, ಹಣ್ಣುಗಳು ಸ್ವಯಂ ಅದರಲ್ಲಿ ಬೆಳೆಯುತ್ತಲಿರುವುದು.

ಜಮಾಅತ್‌ನ ಎಲ್ಲಾ ಸಾಹಿತ್ಯಗಳೂ ಇದೇ ಸಿದ್ಧಾಂತದಂತೆ ಬರೆಯಲ್ಪಟ್ಟಿವೆ. ಅದರಲ್ಲಿ ಮೂಲಭೂತ ವಿಷಯಗಳನ್ನು ಸುದೃಢಗೊಳಿಸಲಿಕ್ಕಾಗಿ ಎಲ್ಲಾ ಶಕ್ತಿಯನ್ನು ಬಳಸಲಾಗಿದೆ. ಆದರೆ ಆಂಶಿಕ ವಿಷಯಗಳನ್ನು ಬಹುವಂಶ ನಿರ್ಲಕ್ಷಿಸಲಾಗಿದೆ. ಕೊಂಬೆಗಳನ್ನು ಸುಧಾರಣೆಗೊಳಿಸುವ ಬದಲಾಗಿ ಅನೇಕ ಮೂಲ ಬೇರುಗಳ ಹಾಗೂ ಕಾಂಡದ ಬಗ್ಗೆ ಹೆಚ್ಚು ಗಮನಹರಿಸಲಾಗಿದೆ. ಮುಸ್ಲಿಮರ ಜೀವನ ಸೌಧದಲ್ಲಿ ಮಸುಕಾಗುತ್ತಿರುವ ಕಸೂತಿ ಕೆಲಸಗಳ ಬಗ್ಗೆ ಚಿಂತಿಸುವ ಬದಲಾಗಿ ಅದರ ಪಂಚಾಂಗದ ಬಗ್ಗೆ ನೀವು ಯೋಚಿಸಬೇಕು. ಇಲ್ಲದಿದ್ದರೆ ಕಸೂತಿ ಕೆಲಸದಿಂದ ಗೋಡೆಗಳ ಸೌಂದರ್ಯವು ಹೆಚ್ಚಬಹುದಾದರೂ ಅದು ಪೂರ್ಣಗೊಳ್ಳುವುದಕ್ಕಿಂತ ಮುಂಚಿತವಾಗಿ ಇಡೀ ಕಟ್ಟಡವು ಮಣ್ಣಿನ ರಾಶಿಯಾಗಿ ಪರಿಣಮಿಸುವುದನ್ನು ನೀವು ಕಾಣಬೇಕಾದೀತು.

ನಮ್ಮ ನಾಲಗೆಯಲ್ಲಿ ಸುಧಾರಣೆಯ ಮಾತು ಬಂದಾಗಲೆಲ್ಲಾ ತಕ್ಷಣವೇ ಸಣ್ಣ ಕೆಡುಕುಗಳತ್ತ ನಮ್ಮ ಗಮನ ಹರಿಯುತ್ತದೆ. ತರುವಾಯ ಸುಧಾರಣೆಯ ಎಲ್ಲಾ ಚಟುವಟಿಕೆಗಳನ್ನು ಹಳೆಯ ರೀತಿಯಲ್ಲಿಯೇ ನಿರ್ವಹಿಸುತ್ತಲಿರುತ್ತೇವೆ. ಈಗ ನೀವು ಆ ಹಳೆಯ ವಿಧಾನವನ್ನು ಸಂಪೂರ್ಣವಾಗಿ ಕೈ ಬಿಡಬೇಕಾಗಿದೆ. ಆಂಶಿಕ ವಿಷಯಗಳ ವಿರುದ್ಧ ಸಮರ ಸಾರುವುದರಿಂದ ಧ್ಯೇಯ ಸಾಧನೆಯಲ್ಲಿ ಜಯಗಳಿಸುವುದು ಅಸಾಧ್ಯವೆಂಬುದು ಅನುಭವಗಳಿಂದ ಸ್ಪಷ್ಟಗೊಂಡಿದೆ. ಈ ಆಂಶಿಕ ಸುಧಾರಣಾ ಕಾರ್ಯವು ವಾದ ಪ್ರತಿವಾದ, ತರ್ಕವಿತರ್ಕಗಳ ಕಣಿವೆಯಿಂದ ಸಾಗುತ್ತದೆ. ಈ ರೀತಿ ಕಾರ್ಯೋನ್ಮುಖರಾಗುವುದರಿಂದ ಅನಾವಶ್ಯಕವಾಗಿ ಭಾವನೆಗಳು ಕೆರಳುತ್ತವೆ. ಅನೇಕಾರು ಕೆಟ್ಟ ಪದಗಳು ನಾಲಗೆಯಿಂದ ಹೊರ ಬರುತ್ತವೆ. ಮಾತ್ರವಲ್ಲ ಹೊಡೆದಾಟಗಳೂ ನಡೆಯುತ್ತವೆ. ಈ ಪ್ರಚಾರ ಶೈಲಿಯ ಪುನರಾವರ್ತನೆಯನ್ನು ನೀವು ಸಂಪೂರ್ಣವಾಗಿ ತೊರೆಯಬೇಕು.

ಅಮೀನ್ ಅಹ್ಸನ್ ಸಾಹೆಬ್‌ರು ತಮ್ಮ ಭಾಷಣದಲ್ಲಿ ಸ್ಪಷ್ಟಪಡಿಸಿರುವಂತೆ ಎಲ್ಲಾ ಕೆಡುಕುಗಳಿಗೂ ತೌಹೀದನ್ನು ಸರಿಯಾಗಿ ಗ್ರಹಿಸದಿರುವುದು ಪ್ರವಾದಿತ್ವದ ವಾಸ್ತವಿಕಾಂಶವನ್ನು ಅರ್ಥಮಾಡಿಕೊಳ್ಳದಿರುವುದು ಅಥವಾ ಪರಲೋಕ ಜೀವನದ ಬಗೆಗಿನ ಅಜ್ಞಾನವೇ ಮೂಲ ಕಾರಣವಾಗಿದೆ. ಈ ಬಗ್ಗೆ ನೀವು ಸ್ವಲ್ಪ ಆಲೋಚಿಸಿದರೆ ಅದರ ವಾಸ್ತವಿಕತೆ ಅರ್ಥವಾಗಬಹುದು. ಅದಲ್ಲದೆ ಧರ್ಮದಮೂಲ ಹಾಗೂ ಉಪವಿಷಯಗಳ ಸರಿಯಾದ ಕ್ರಮವನ್ನು ಬದಲಾಯಿಸುವುದರಿಂದಲೂ ಕೆಲವು ವಿನಾಶಗಳು ಭುಗಿಲೆದ್ದಿವೆ. ವಿನಾಶಗಳ ಈ ಕಾರಣಗಳಿಗೆ ಬೇರೊಂದು ಪ್ರಮುಖ ಕಾರಣವೂ ಇದೆ. ಅದು ಕುರ್‌ಆನ್ ಮತ್ತು ಹದೀಸ್‌ಗಳೊಂದಿಗಿನ ಸರಿಯಾದ ಸಂಬಂಧವಿಲ್ಲದಿರುವುದಾಗಿದೆ. ಇದು ಕೇವಲ ಅವಿದ್ಯಾವಂತರಲ್ಲಿಯೇ ಇರುವುದಲ್ಲ. ಎಷ್ಟೋ ವಿದ್ವಾಂಸರು ಕೂಡಾ ಕುರ್‌ಆನ್ ಮತ್ತು ಸುನ್ನತ್‌ಗಳ ಗಾಢವಾದ ನೇರ ಜ್ಞಾನವನ್ನು ಹೊಂದಿಲ್ಲ. ಈ ಪರಿಸ್ಥಿತಿಯನ್ನು ಬದಲಾಯಿಸಬೇಕಾದರೆ ನಾವು ಸುಧಾರಣಾ ಕಾರ್ಯವನ್ನು ಮೊದಲಿಂದಲೇ ಪ್ರಾರಂಭಿಸಬೇಕಾಗಿದೆ. ಮೂಲಭೂತ ವಿಶ್ವಾಸಗಳನ್ನು ಸುಧಾರಿಸುವ ತನಕ ಜನರ ಆಂಶಿಕ ದುಷ್ಕಾರ್ಯಗಳನ್ನು ತಾಳ್ಮೆಯಿಂದ ಸಹಿಸಬೇಕಾಗಿದೆ. ಆಂಶಿಕ ವಿಷಯಗಳಲ್ಲಿ ಜನರನ್ನು ಸ್ವತಂತ್ರವಾಗಿ ಬಿಡಬೇಕೆಂದು ಇದರರ್ಥವಲ್ಲ. ಪ್ರಥಮ ಹೆಜ್ಜೆಯಲ್ಲಿಯೇ ಆಂಶಿಕ ವಿಷಯಗಳಿಗಾಗಿಯೇ ಹೆಚ್ಚು ಶಕ್ತಿಯನ್ನು ವಿನಿಯೋಗಿಸಬಾರದೆಂಬುದೇ ಇದರ ಉದ್ದೇಶ.

## ಸಂಘರ್ಷದ ಹಾದಿ ನಮ್ಮದಲ್ಲ!

ಕಿಡಿಗೇಡಿತನ ಮತ್ತು ಕುತ್ಸಿತ ಮನೋಭಾವದಿಂದ ಕೆಡುಕು ಮತ್ತು ದುರಾಚಾರಗಳನ್ನು ಬೆಂಬಲಿಸುವವರ ಸಂಖ್ಯೆ ತೀರಾ ಅಲ್ಪವೆಂಬುದು ಒಂದು ವಾಸ್ತವಿಕತೆಯಾಗಿದೆ. ಮುಗ್ಧ ಜನಸಾಮಾನ್ಯರು ಕೇವಲ ಅಜ್ಞಾನದಿಂದಾಗಿ ದಾರಿ ತಪ್ಪಿದ್ದಾರೆ. ಹಲವು ಕಾಲದಿಂದ ಅವರಿಗೆ ದೊರೆಯುತ್ತಿರುವ ತಪ್ಪು ಶಿಕ್ಷಣದಿಂದಾಗಿ ಅವರು ನಿರ್ವಹಿಸುವ ಆಚಾರ ವಿಚಾರಗಳೇ ಧರ್ಮವೆಂಬ ಭಾವನೆ ಅವರಲ್ಲಿ ಬೇರೂರಿದೆ. ಸಹನೆ ಮತ್ತು ತಾಳ್ಮೆಯಿಂದ ಆ ಮುಗ್ಧ ಜನರ ಹೃದಯದಲ್ಲಿ ತೌಹೀದ್, ರಿಸಾಲತ್ ಮತ್ತು ಆಖಿರತ್ (ಏಕದೇವತ್ವ, ಪ್ರವಾದಿತ್ವ, ಮತ್ತು ಪರಲೋಕ ಜೀವನ) ಗಳ ಇಸ್ಲಾಮಿ ಕಲ್ಪನೆಯನ್ನು ಮೂಡಿಸುವುದೇ ಅವರ ಸುಧಾರಣೆಗಿರುವ ಏಕೈಕ ದಾರಿ. ಅವರ ವಿಶ್ವಾಸದ ಸುಧಾರಣೆಯಲ್ಲಿ ನಾವು ಜಯಗಳಿಸಿದರೆ ಆ ಬಳಿಕ ಕೆಟ್ಟ ಹೆಸರಿನಿಂದ ಜನ ಸೇರಿಸಲು ನಮ್ಮ ವಿರೋಧಿಗಳಿಗೆ ಸಾಧ್ಯವಾಗದು. ಬದಲಾಗಿ ಅವರು ರಂಗದಿಂದ ಹಿಂದೆ ಸರಿಯುವುದು ಅನಿವಾರ್ಯವಾಗುವುದು.

ಅರೇಬಿಯಾದ ಕ್ರಾಂತಿಯ ಕುರಿತು ಆಲೋಚಿಸಿದರೆ ಅದರ ಸತ್ಯಾವಸ್ಥೆ ಸ್ಪಷ್ಟವಾಗಿ ಮನದಟ್ಟಾಗಬಹುದು. ಪ್ರವಾದಿವರ್ಯರ(ಸ) ಧರ್ಮ ಬೋಧನೆಗಳನ್ನು ಸ್ವಾರ್ಥ ಹಾಗೂ ನೀಚ ಮನೋಭಾವದಿಂದ ಒಂದು ಸಣ್ಣ ವಿಭಾಗ ಮಾತ್ರ ವಿರೋಧಿಸುತ್ತಿತ್ತು. ಇತರೆಲ್ಲರೂ ಆ ವಿಭಾಗದ ಕುಪ್ರಚಾರದಿಂದ ವಂಚನೆಗೊಳಗಾಗಿದ್ದರು. ತರುವಾಯ ಆಂದೋಲನವು ಬೆಳೆದು, ಸತ್ಯವು ಮನವರಿಕೆಯಾಗುವುದರೊಂದಿಗೆ ನಿಸ್ವಾರ್ಥ ಮತ್ತು ಸತ್ಯನಿಷ್ಠರಾದ ಜನರಿಗೆ ಅದನ್ನು ನಿರಾಕರಿಸುವ ಎಲ್ಲಾ ಮಾರ್ಗಗಳೂ ಮುಚ್ಚಿ ಹೋದುವು. ಸಾರ್ವಜನಿಕರು ಸತ್ಯದ ಮುಂದೆ ಶರಣಾದರು. ಸ್ವಾರ್ಥಕ್ಕಾಗಿ ಸತ್ಯವನ್ನು ವಿರೋಧಿಸುತ್ತಿದ್ದ ಜನರು ಹೋರಾಟ ರಂಗದಲ್ಲಿ ತಾವು ಒಂಟಿಯಾಗುತ್ತಿರುವುದನ್ನು ಮನಗಂಡು ಕಟ್ಟಕಡೆಗೆ ಸತ್ಯಕ್ಕೆ ತಲೆಬಾಗಬೇಕಾಯಿತು. ಸತ್ಯಪ್ರಚಾರದ ಯಶಸ್ಸಿಗೆ ಇಂದಿಗೂ ಆ ಮಾರ್ಗವೇ ಸೂಕ್ತವಾಗಿದೆ. ನೀವು ಸತ್ಯವನ್ನು ಜನರ ಮುಂದೆ ಸ್ಪಷ್ಟವಾಗಿ ಬಹಿರಂಗಪಡಿಸಿದರೆ, ಅವರಲ್ಲಿರುವ ಸಜ್ಜನರ ತಪ್ಪಭಿಪ್ರಾಯಗಳು ದೂರವಾದೊಡನೆಯೇ ಅವರು ನಿಮ್ಮೊಡನೆ ಬಂದು ಸೇರುವರು. ತರುವಾಯ ಕೇವಲ ಸ್ವಾರ್ಥದಿಂದ ನಮ್ಮ ಹಾದಿಗೆ ಅಡ್ಡಿಪಡಿಸುತ್ತಿದ್ದವರು ಸಂಪೂರ್ಣ ದುರ್ಬಲರಾಗುವರು. ಮುನ್ನಡೆಯುತ್ತಿರುವ ನಮ್ಮ ವಾಹನವನ್ನು ತಡೆಯಲು ಅವರಿಂದ ಸಾಧ್ಯವಾಗದು.

ಈ ಕಾರ್ಯಕ್ರಮವನ್ನು ಅಂಗೀಕರಿಸಿದರೆ, 'ಆಮೀನ್' ಹಾಗೂ 'ಕೈ ಕಟ್ಟುವ' ಕುರಿತಾದ ವಿವಾದಗಳನ್ನು ಕೊನೆಗೊಳಿಸಬೇಕಾಗುವುದು. ಪ್ರವಾದಿವರ್ಯರು(ಸ) ಇಂತಹ ಕುಂದುಕೊರತೆಗಳ ನಿವಾರಣೆಗಾಗಿ ಆಗಮಿಸಿದರೇ ಎಂಬ ಬಗ್ಗೆ ಪ್ರಾಮಾಣಿಕವಾಗಿ ಒಮ್ಮೆ ಆಲೋಚಿಸಿ ನೋಡಿರಿ. ಕೇವಲ ಅದಷ್ಟೇ ಇಸ್ಲಾಮಿನ ಧ್ಯೇಯವಾಗಿತ್ತೇ? ಕುರ್‌ಆನ್ ಮಾನವನಿಂದ ಕೇವಲ ಅಷ್ಟನ್ನೇ ಬಯಸುತ್ತಿದೆಯೇ? ಹಾಗಲ್ಲದಿದ್ದರೆ ಎಲ್ಲಾ ಕಾಲಗಳ ಪ್ರವಾದಿಗಳು ವಿರೋಧಿಗಳ ಆಕ್ರಮಗಳಿಗೆ ಪ್ರೇರಕವಾಗಿದ್ದ ಆ ಮೂಲ ವಿಷಯಗಳ ಬಗ್ಗೆ ನೀವೇಕೆ ಗಮನಹರಿಸುವುದಿಲ್ಲ? ಈ ರೀತಿ ಎಬ್ಬಿಸಲಾಗುತ್ತಿರುವ ಆಂಶಿಕ ವಿಷಯಗಳಿಗೆ ಧರ್ಮ ಸಂಸ್ಥಾಪನೆಯ ಕಾರ್ಯದಲ್ಲಿ ಯಾವ ಮಹತ್ವವೂ ಇಲ್ಲ. ಜನರು ಅಲ್ಲಾಹನ ಧರ್ಮವನ್ನು ಸಂತೃಪ್ತಿಯಿಂದ ಸ್ವೀಕರಿಸಿ, ಪ್ರವಾದಿ

ನಡವಳಿಕೆಯನ್ನು ಹೃತ್ಪೂರ್ವಕವಾಗಿ ಅನುಸರಿಸುವವರಾಗುವಂತೆ ನೀವು ಪ್ರಯತ್ನಿಸಬೇಕು. ಜನರು ಈ ಸ್ವಭಾವವನ್ನು ಮೈಗೂಡಿಸಿದರೆ ಅವರು ಆ ಬಳಿಕ ಕುರ್‌ಆನ್ ಮತ್ತು ಸುನ್ನತ್‌ನಿಂದ ವ್ಯಕ್ತವಾಗದುದನ್ನು ತಾವೇ ತೊರೆಯುತ್ತಾರೆ. ಪ್ರಸಕ್ತ ಆ ಮೂಲಭೂತ ಸುಧಾರಣೆಗೆ ನಾವು ಹೆಚ್ಚು ಮಹತ್ವ ನೀಡಬೇಕು.

ಇಂದು ನಮ್ಮ ಈ ಕಾಲದಲ್ಲಿ ಗೋಚರವಾಗುತ್ತಿರುವ ಕೆಡುಕುಗಳು, ಇಸ್ಲಾಮಿನ ಆರಂಭಕಾಲದಲ್ಲಿ ಅರೇಬಿಯಾದಲ್ಲಿದ್ದಕ್ಕಿಂತ ಭಿನ್ನವಾಗಿಲ್ಲ. ಆದರೆ ಆಗ ಪ್ರವಾದಿವರ್ಯರು(ಸ) ಏನು ಮಾಡಿದರು? ಅವೆಲ್ಲಕ್ಕೂ ಒಮ್ಮೆಲ್ಲೇ ಪ್ರಹಾರ ಮೂಡಿದರೇ? ಸುಧಾರಣೆಯ ಪ್ರಕಾರಗಳನ್ನು ಒಂದೇ ನೆಗೆತದಲ್ಲಿ ದಾಟಿದರೇ? ಇಲ್ಲ. ಅವರು ಸಾವಧಾನದಿಂದ ಸುಧಾರಣೆಯ ಬುನಾದಿಯನ್ನು ಭದ್ರಗೊಳಿಸಿದರು. ಅನಂತರ ಮೂಲಭೂತವಾದ ನೈತಿಕ ಶಿಕ್ಷಣವನ್ನು ನೀಡಿದರು. ತರುವಾಯ ಜೀವನದಿಂದ ಪ್ರತಿಯೊಂದು ಕೆಡುಕನ್ನು ನೀಗಿಸಲು ಹಲವು ವರ್ಷಗಳನ್ನು ವಿನಿಯೋಗಿಸಿದರು. ನೀವು ಪ್ರವಾದಿವರ್ಯರನ್ನು(ಸ) ಅನುಸರಿಸಬಯಸುವಿರಾದರೆ ಮೊತ್ತಮೊದಲಾಗಿ ಅವರ ಕಾರ್ಯವಿಧಾನವನ್ನು ಚೆನ್ನಾಗಿ ಅರಿತುಕೊಳ್ಳಿರಿ. ಆ ಬಳಿಕವೇ ನೀವು ಮುಂದಡಿಯಿಡಬೇಕು.

ಕೆಲವೊಂದು ಸಂದರ್ಭಗಳಲ್ಲಿ ಚಟುವಟಿಕೆಗಳನ್ನು ಸ್ವಲ್ಪ ಅತಿಶಯೋಕ್ತಗೊಳಿಸಿ ಹೇಳುವ ಸ್ವಭಾವ ನಮ್ಮ ಕೆಲವು ಕಾರ್ಯಕರ್ತರಲ್ಲಿರುವಂತೆ ನನಗೆ ಭಾಸವಾಗುತ್ತಿದೆ. ಈ ಸ್ವಭಾವವನ್ನು ತೊರೆಯಬೇಕು. ನಮ್ಮ ಚಟುವಟಿಕೆಗಳನ್ನು ಸ್ವಲ್ಪವೂ ಅತಿಶಯೋಕ್ತಗೊಳಿಸುವುದಂತಿರಲಿ, ನಮ್ಮ ಚಟುವಟಿಕೆಗಳು ಸಂಪೂರ್ಣ ತೃಪ್ತಿಕರವೆಂದು ಕೂಡಾ ನಾವು ಭಾವಿಸಕೂಡದು. ಅತ್ಯುತ್ತಮ ರೀತಿಯಲ್ಲಿ ಕಾರ್ಯ ನಿರ್ವಹಿಸಿದ ಬಳಿಕವೂ ನೀವು ಸಂತೃಪ್ತಿತಾಳಬಾರದು. ಉತ್ತಮ ಅಂಶಗಳಿಂದ ಸಂತೃಪ್ತರಾಗುವ ಬದಲಾಗಿ ಅದರಲ್ಲಿರುವ ಕೊರತೆಗಳ ಬಗ್ಗೆ ನೀವು ಕಳವಳಗೊಳ್ಳಬೇಕು. ಉತ್ತಮ ರೀತಿಯಲ್ಲಿ ನಿರ್ವಹಿಸಿದ ಕಾರ್ಯಗಳಿಗಾಗಿ ಅಲ್ಲಾಹನನ್ನು ಸ್ತುತಿಸುವುದರೊಂದಿಗೆ ಅದರಲ್ಲಿರುವ ಕೊರತೆಗಳನ್ನು ದೂರೀಕರಿಸುವ ಸಾಮರ್ಥ್ಯವನ್ನು ನೀಡುವಂತೆ ಆತನೊಂದಿಗೆ ಪ್ರಾರ್ಥಿಸಬೇಕು. ಅದಲ್ಲದೇ ಇತರ ಪಕ್ಷಗಳ ಜನರೊಂದಿಗೆ ವ್ಯವಹರಿಸುವಾಗ ನೀವು ವಾದ ಪ್ರತಿವಾದದ ಹಂಬಲಕ್ಕೆ ಸಿಲುಕಿ, ನಿಮ್ಮಲ್ಲಿ ದರ್ಪ ಮತ್ತು ಅಹಂಕಾರ ತಲೆಯೆತ್ತುತ್ತಿದೆಯೆಂಬ ಸಂದೇಹ - ನನಗಿದೆ. ಹಾಗಿಲ್ಲದಿದ್ದರೆ ತುಂಬಾ ಒಳ್ಳೆಯದಾಯಿತು. ಆದರೆ ನನ್ನ ಸಂದೇಹವೇ ನಿಜವಾಗಿದ್ದರೆ, ಆ ಸ್ವಭಾವದಿಂದ ಮುಕ್ತರಾಗಲು ನೀವು ತೀವ್ರವಾಗಿ ಪ್ರಯತ್ನಿಸಬೇಕು.

ಈ ಬಗ್ಗೆ ನೀವು ನಿಮ್ಮ ಮಾತು ಮತ್ತು ವ್ಯವಹಾರ ರೀತಿಗಳಿಂದ ನಾವು ಯಾರೊಂದಿಗೂ ಪಕ್ಷ ಸಂಘರ್ಷ ನಡೆಸುವವರಲ್ಲವೆಂಬುದನ್ನು ಇತರರಿಗೆ ಸ್ಪಷ್ಟಪಡಿಸಬೇಕು. ವಿನಾಶದ ಬುನಾದಿಗಳನ್ನು ನಾಶಗೊಳಿಸುವುದೇ ನಮ್ಮ ಉದ್ದೇಶ. ನಮ್ಮ ಸಂಬೋಧನೆಯು ಸಂಪೂರ್ಣ ಮಾನವಕುಲಕ್ಕೆ ಅನ್ವಯವಾಗಿರುವುದು. ಸತ್ಯಮಾರ್ಗದಿಂದ ವಿಮುಖರಾಗಿರುವ ಪ್ರತಿಯೊಬ್ಬನಿಗೂ ನಾವು ಅವನ ತಪ್ಪನ್ನು ಸ್ಪಷ್ಟವಾಗಿ ತೋರಿಸಿಕೊಡುತ್ತೇವೆ. ತರುವಾಯ ಆತನ ಮುಂದೆ ನಾವು ಯಾವ ಹೋರಾಟರಂಗವನ್ನೂ ಸಿದ್ಧಪಡಿಸುವುದಿಲ್ಲ. ಒಟ್ಟಿನಲ್ಲಿ, ನಿಮ್ಮ ಕಾರ್ಯವಿಧಾನದ ನಿಮಿತ್ತ, ಯಾವ ಪಕ್ಷಕ್ಕೂ ನಾವು ಅದರ ವಿರುದ್ಧ ಹೊರಟಿರುವೆವೆಂಬ ತಪ್ಪುಭಾವನೆ ಬೆಳೆಯಲು ಅವಕಾಶ ಕೊಡಬೇಡಿರಿ. ನಮಗಾದರೋ ಕೇವಲ 'ಕುಫ್ರ್' ಮತ್ತು 'ಜಾಹಿಲಿಯ್ಯ'ದ ವ್ಯವಸ್ಥೆಗಳನ್ನು

ಎದುರಿಸಬೇಕಾಗಿದೆ. ಅವುಗಳೊಂದಿಗೆ ಓರ್ವ ವ್ಯಕ್ತಿ ಅಥವಾ ಪಕ್ಷವು ಹೊಂದಿರುವ ಸಂಬಂಧದ ಪ್ರಮಾಣದಲ್ಲಿ ನಾವು ಅವರನ್ನು ವಿರೋಧಿಸಬೇಕಾಗುವುದು.

ಸಾಮಾನ್ಯವಾಗಿ ಇತರ ಪಕ್ಷಗಳು ಮತ್ತು ಸಂಸ್ಥೆಗಳು ಏರ್ಪಡಿಸುವ ಸಭೆ ಸಮಾರಂಭಗಳಲ್ಲಿ ಭಾಗವಹಿಸಿ, ನಾವು ಭಾಷಣ ಮಾಡಬಹುದೇ ಎಂಬುದಾಗಿ ಕೆಲವು ಬಾಂಧವರು ಪ್ರಶ್ನಿಸಿದ್ದಾರೆ. ಈ ವಿಧಾನದಿಂದ ನಮ್ಮ ವಿಶ್ವಾಸಗಳನ್ನು ಪ್ರಚಾರಗೊಳಿಸಲು ನಮಗೆ ಅವಕಾಶ ದೊರೆಯುವುದೆಂಬುದರಲ್ಲಿ ಸಂದೇಹವಿಲ್ಲ. ಆದರೆ ನನ್ನ ಅನುಭವದಂತೆ, ಈ ಕಾರ್ಯವಿಧಾನವು ಉಪಯುಕ್ತವಲ್ಲ. ಒಂದು ವೇದಿಕೆಯಲ್ಲಿ ವಿವಿಧ ರೀತಿಯ ಭಾಷಣಗಳು ಕೇಳುತ್ತಿರುವುದರ ಮಧ್ಯೆ ನಾವು ನಮ್ಮ ಸಂದೇಶವನ್ನು ಜನರ ಮುಂದಿಟ್ಟರೆ, ಅವರು ತಮ್ಮನ್ನು ಸಂತೋಷಗೊಳಿಸಲು ಹೇಳಲ್ಪಡುತ್ತಿರುವ ಮಾತುಗಳಲ್ಲಿ ಇದೂ ಒಂದೆಂದು ಭಾವಿಸುತ್ತಾರೆ. ಆ ಸಭೆಯಲ್ಲಿ ನೀವು ನಿಮ್ಮ ಸಂದೇಶವನ್ನು ಅತ್ಯುತ್ತಮ ರೀತಿಯಲ್ಲಿ ಮಂಡಿಸಿದಿರೆಂದು ಭಾವಿಸಿದರೂ ಆ ಬಗ್ಗೆ ಜನರ ಪ್ರತಿಕ್ರಿಯೆಯು ಕೇವಲ, ಆ ಮಹನೀಯರ ಭಾಷಣವು ಬಹಳ ಉತ್ತಮವಾಗಿತ್ತೆಂಬ ಅಭಿನಂದನೆಯ ಹೊರತು ಬೇರೇನೂ ಇರಲಾರದು. ನಮ್ಮ ಸಮಾಜದ ಇಂದಿನ ಸ್ಥಿತಿಯು ಓರ್ವ ದುಷ್ಟ ಶ್ರೀಮಂತನಂತಿದೆ. ಅವನನ್ನು ಹೊಗಳಿ ಸಂತುಷ್ಟಗೊಳಿಸುವ ಅದೆಷ್ಟೋ ಭಟ್ಟಂಗಿಗಳು ಅವನ ಸುತ್ತಲೂ ಇದ್ದಾರೆ. ಈ ಹೊಗಳು ಭಟ್ಟಂಗಿಗಳೊಡನೆ ಸೇರಿ ಇಸ್ಲಾಮಿನ ತತ್ವ ಸಿದ್ಧಾಂತ ಮತ್ತು ಜೀವನದ ವಾಸ್ತವಿಕಾಂಶಗಳನ್ನು ಅದೆಷ್ಟೋ ಗಂಭೀರವಾಗಿ ಹೇಳಿದರೂ ಶ್ರೀಮಂತ ಸ್ವಭಾವದ ಈ ಸಮುದಾಯವು ಹೊಗಳು ಭಟ್ಟಂಗಿಗಳ ಮಾತುಗಳಂತೆಯೇ ಅದನ್ನು ಆಲಿಸುವುದು. ಈ ಹಿನ್ನೆಲೆಯಲ್ಲಿ ಜಮಾಅತ್‌ನ ಭಾಷಣಗಾರರಿಗೆ ನಾನು ಉಪದೇಶಿಸುವುದೇನೆಂದರೆ, ಅವರು ಪ್ರಪ್ರಥಮವಾಗಿ ತಮ್ಮ ತನವನ್ನು, ಇನ್ನೊಂದು ಭಾಷೆಯಲ್ಲಿ ತಮ್ಮ ವಿಶಿಷ್ಟ ಸ್ಥಾನವನ್ನು ಸರಿಯಾಗಿ ಸುಭದ್ರಗೊಳಿಸಿ ವಿಶಿಷ್ಟ ರೀತಿಯಲ್ಲಿ ತಮ್ಮ ತತ್ವಗಳನ್ನು ಪ್ರಚಾರಗೊಳಿಸಬೇಕು. ಮಾರುಕಟ್ಟೆಯಲ್ಲಿ ಧಾರಾಳ ಬೇಡಿಕೆಯಿರುವ ಪ್ರಸಿದ್ಧ "ಭಾಷಣ ರೆಕಾರ್ಡು"ಗಳಲ್ಲಿ ನಿಮ್ಮ ತತ್ವವನ್ನು ತುಂಬಲು ಸಾಧ್ಯವಿದ್ದರೆ ಖಂಡಿತವಾಗಿಯೂ ಅದು ಹೆಚ್ಚು ಫಲಕಾರಿಯಾಗಿರುವುದು. ವಿವಿಧ ನಾಯಕರ ಹಾಗೂ ಭಾಷಣಗಾರರ ಭಾಷಣಗಳಲ್ಲಿ ನಿಮ್ಮ ವಿಚಾರಗಳು ಪ್ರವಹಿಸುವಂತೆ ನಿಮ್ಮ ವಿಚಾರವನ್ನು ಅವರಲ್ಲಿ ಪ್ರತಿಬಿಂಬಿಸಿರಿ. ಅವರು ಕೆಲವು ಕಾಲ ಕೇವಲ ನಾಲಗೆಯಿಂದ ನಮ್ಮ ವಿಚಾರವನ್ನು ವಿವರಿಸುತ್ತಲಿದ್ದರೆ, ತಮ್ಮ ಆತ್ಮಸಾಕ್ಷಿಯ ಮತ್ತು ಸಾರ್ವಜನಿಕ ಒತ್ತಡದಿಂದ ಒಂದಿಲ್ಲೊಂದು ದಿನ ಅವರು ತಮ್ಮ ಕಾರ್ಯ ವಿಧಾನವನ್ನು ಅನಿವಾರ್ಯವಾಗಿ ಬದಲಿಸಬೇಕಾಗುತ್ತದೆ. ಈ ಯೋಜನೆಯು ವ್ಯಾಪಕವಾಗಿ ಕಾರ್ಯಗತಗೊಂಡರೆ, ಸಮುದಾಯದ ಸ್ವರೂಪವನ್ನೇ ಸಂಪೂರ್ಣವಾಗಿ ಕೆಡಿಸಿರುವ ಕೂಲಿ ಮತಪ್ರವಚನಗಳು ಮತ್ತು ಭಾಷಣಗಾರರು ವೇದಿಕೆಯಿಂದ ತೊಲಗಿಸಲ್ಪಟ್ಟು ಉಪಯುಕ್ತ ಜನರನ್ನೇ ಸಾರ್ವಜನಿಕರು ಮುಂದೆ ತಂದು ನಿಲ್ಲಿಸುವರು.

ನಮ್ಮ ವಿಚಾರಗಳ ಪ್ರಚಾರಕ್ಕಾಗಿ ಎಲ್ಲಾ ಕಡೆಯೂ ಮದ್ರಸಾಗಳನ್ನು ಆರಂಭಿಸುವ ಬಗ್ಗೆ ನೀವು ಆಲೋಚಿಸುತ್ತಿರುವುದನ್ನು ತಿಳಿದು ತುಂಬಾ ಸಂತೋಷವಾಯಿತು. ಕೆಲವೆಡೆಗಳಲ್ಲಿ ಅದು ಕಾರ್ಯಾರಂಭಗೊಂಡಿದೆಯೆಂದೂ ತಿಳಿಯಿತು. ಆದರೆ ಈ ಬಗ್ಗೆ ಒಂದು ವಿಷಯವನ್ನು ಜ್ಞಾಪಕದಲ್ಲಿಡಬೇಕು. ಮದ್ರಸಾ ನಡೆಸುವುದನ್ನೇ ಒಂದು ಉದ್ದೇಶವಾಗಿರಿಸಬಾರದು. ಉದ್ದೇಶವನ್ನು

ಸಾಧಿಸುವ ಒಂದು ಉಪಕರಣವೆಂಬ ನೆಲೆಯಲ್ಲಷ್ಟೇ ವಿದ್ಯಾಭ್ಯಾಸವನ್ನು ಬಳಸಿಕೊಳ್ಳಬೇಕು. ಉದ್ದೇಶದ ಹಾದಿಗೆ ಮದ್ರಸದ ಸ್ವಾಧೀನವು ತೊಡಕಾಗುವುದಿದ್ದರೆ, ಅಂಥವುಗಳನ್ನು ತಕ್ಷಣವೇ ಮುಚ್ಚಿ ಬಿಡುವುದು ಉತ್ತಮ. ಅವುಗಳ ಅವಶೇಷಗಳ ಮೇಲೆ ನಿಂತು ಧ್ಯೇಯದೆಡೆಗೆ ನಾವು ಮುನ್ನಡೆಯಬಹುದು. ಆದಕ್ಕಾಗಿ ಧ್ಯೇಯವು ಸದಾ ನಮ್ಮ ಕಣ್ಣ ಮುಂದಿರಬೇಕಾದುದು ಅತ್ಯಗತ್ಯ.

## ಸಂಘಟನೆಯನ್ನು ಬಲಪಡಿಸುವ ಬಗೆ

ಸ್ಥಾನೀಯ ಚಟುವಟಿಕೆಗಳ ಹಾಗೂ ಸಂಘಟನೆಯನ್ನು ಬಲಪಡಿಸುವ ಕುರಿತು ಕೆಲವೊಂದು ಮುಖ್ಯ ವಿಷಯಗಳನ್ನು ನಿಮ್ಮ ಮುಂದಿಡಬಯಸುತ್ತೇನೆ-

ಮೊದಲನೆಯದಾಗಿ ನೀವು ಸ್ಥಾನೀಯ ಸದಸ್ಯರಲ್ಲಿ ಆರ್ಥಿಕ ತ್ಯಾಗ ಮತ್ತು ಅಲ್ಲಾಹನ ಮಾರ್ಗದಲ್ಲಿ ವ್ಯಯಿಸುವ ಮನೋಭಾವವನ್ನು ಬೆಳೆಸಲು ಪ್ರಯತ್ನಿಸಬೇಕು. ಈ ತನಕ ಇತರ ಮನೋಭಾವಗಳು ಬೇಕಾದಷ್ಟು ಪ್ರಮಾಣದಲ್ಲಿಯೂ ಅದಕ್ಕಿಂತ ಹೆಚ್ಚಾಗಿಯೂ ಬೆಳೆದು ಬಂದಿವೆ. ಆದರೆ ಹಣ ವ್ಯಯಿಸುವ ಮನೋಭಾವವು ಸೂಕ್ತ ಪ್ರಮಾಣಕ್ಕಿಂತ ಕಡಿಮೆಯಾಗಿದೆ. ಈ ಬಗ್ಗೆ ಒಂದು ವಿಷಯವನ್ನು ಮುಖ್ಯವಾಗಿ ಗಮನಿಸಬೇಕು. ಈ ಮನೋಭಾವವು ನೈತಿಕ ಕರ್ತವ್ಯ ಪ್ರಜ್ಞೆಯ ಆಧಾರದಲ್ಲಿ ಬೆಳೆಯುತ್ತದೆ. ಕೇವಲ ನಿಯಮ ನಿಬಂಧನೆಗಳಿಂದ ಈ ಮನೋಭಾವವನ್ನು ಜಾಗೃತಗೊಳಿಸಲು ಪ್ರಯತ್ನಿಸಬೇಡಿರಿ. ತಾನು ಮುಸ್ಲಿಮನಾಗಿದ್ದರೆ ತನ್ನ ಹಣವೂ ಮುಸ್ಲಿಮಾಗಿರಬೇಕೆಂದು ಪ್ರತಿಯೊಬ್ಬ ವ್ಯಕ್ತಿಯೂ ಬಯಸಬೇಕು. ದೇಹ ಮತ್ತು ಆತ್ಮ ಮುಸ್ಲಿಮಾಗಿದ್ದು ಹಣವು ಮುಸ್ಲಿಮಾಗದಿದ್ದರೆ ಇಸ್ಲಾಮಿನ ಅಗತ್ಯವು ಈಡೇರಲಾರದು. ನಿಮ್ಮೊಂದಿಗೆ ನಿಮ್ಮ ಹಣವನ್ನೂ ಇಸ್ಲಾಮಿನೊಳಗೆ ತನ್ನಿರಿ. ಅದರಿಂದ ನಿಮ್ಮ ಸಹೋದರರಿಗೆ ನೆರವಾಗಿ ನಿಮ್ಮ 'ಬೈತುಲ್ ಮಾಲ'ನ್ನು ಬಲಪಡಿಸುವುದೇ ಅದಕ್ಕಿರುವ ವಿಧಾನ. ಆದರೆ ಆರ್ಥಿಕ ತ್ಯಾಗ ಮನೋಭಾವದ ಮಾಪಕವು ಅಲ್ಲಾಹನ ಮಾರ್ಗದಲ್ಲಿ ವ್ಯಯಿಸುವ ಹಣದ ಪ್ರಮಾಣವನ್ನು ಹೊಂದಿಕೊಂಡಿಲ್ಲ. ಬದಲಾಗಿ ಒಬ್ಬ ವ್ಯಕ್ತಿಯು ಎಷ್ಟೆಲ್ಲಾ ಕಷ್ಟಗಳನ್ನು ಸಹಿಸಿ ಅದನ್ನು ವ್ಯಯಿಸುತ್ತಾನೆ ಎಂಬುದನ್ನು ಅವಲಂಬಿಸಿದೆ. ಅದರಂತೆ ಕೆಲವೊಂದು ಸಂದರ್ಭದಲ್ಲಿ ಒಂದು ಪೈಸೆಯು ಅಲ್ಲಾಹನ ಮಾಪಕದಲ್ಲಿ ಸಾವಿರ ರೂಪಾಯಿಗಿಂತಲೂ ಹೆಚ್ಚು ಭಾರವಾಗಿರುವುದು. ಅಲ್ಲಾಹನ ದೃಷ್ಟಿಯಲ್ಲಿ ಎಷ್ಟು ನೀಡಲಾಗಿದೆಯೆಂಬುದರ ಬದಲಾಗಿ ಎಷ್ಟು ಕಷ್ಟಪಟ್ಟು ನೀಡಲಾಗಿದೆಯೆಂಬುದಕ್ಕೆ ಮಹತ್ವವಿರುವುದು.

ಎರಡನೆಯದಾಗಿ ಸಾಪ್ತಾಹಿಕ ಸಭೆಗಳನ್ನು ಕ್ಲಪ್ತವಾಗಿ ನಡೆಸುತ್ತಿರಬೇಕು. ಕೆಲವೆಡೆಗಳಲ್ಲಿ ಸಂಘಟನೆಯ ಅವ್ಯವಸ್ಥೆಯ ಮುಖ್ಯ ಕಾರಣವು ಜನರನ್ನು ಸಂಘಟಿತಗೊಳಿಸಿ ಜಮಾಅತ್‌ನ ಬಗೆಗಿನ ಅವರ ಸಕ್ರಿಯ ಆಸಕ್ತಿಯನ್ನು ಉಳಿಸಿಕೊಳ್ಳುವ ಈ ಸಂಪರ್ಕದ ಮಹತ್ವವನ್ನು ನಿರ್ಲಕ್ಷಿಸಿರುವುದಾಗಿದೆ. ಇನ್ನು ಮುಂದೆ ಈ ಬಗ್ಗೆ ಯಾವ ರೀತಿಯ ಅಸಡ್ಡೆ ಮತ್ತು ನಿರ್ಲಕ್ಷ್ಯವನ್ನೂ ತೋರಬಾರದು.ಆಯಾ ಪ್ರದೇಶದ ಸ್ಥಾನೀಯ ಶಾಖೆಯ ಸದಸ್ಯರು ಸಾಪ್ತಾಹಿಕ ಸಭೆಗಳಲ್ಲಿ ತಪ್ಪದೇ ಹಾಜರಾಗಬೇಕು. ಏನಾದರೂ ಕಾರಣದಿಂದ ಬರಲಾಗದಿದ್ದರೆ ಅಂಥವರು ನ್ಯಾಯೋಚಿತ ಕಾರಣವನ್ನು ಅಮೀರ್‌ರಿಗೆ ತಿಳಿಸಬೇಕು. ಸುಳ್ಳು ನೆಪವನ್ನು ಹೇಳಿದರೆ ಸತ್ಯಾಂಶವು ಕೊನೆಗೆ ಬಹಿರಂಗವಾದೀತು. ಸೂಕ್ತ ಕಾರಣಗಳಿಲ್ಲದೇ ಅಥವಾ ಕುಂಟು ನೆಪ

ಹೇಳಿ ನಿರಂತರ ನಾಲ್ಕು ವಾರ ಯಾರಾದರೂ ಸಭೆಗೆ ಹಾಜರಾಗದಿದ್ದರೆ ಅಥವಾ ಬಹಳ ಸಮಯದಿಂದ ಅಪರೂಪಕ್ಕೊಮ್ಮೆ ಬರುವವರಿಗೆ ಸಂಘಟನೆಯ ಶಿಸ್ತನ್ನು ಪಾಲಿಸುವ ಆಸಕ್ತಿಯಿಲ್ಲವೆಂದು ಭಾವಿಸಬಹುದು.

ಸ್ಥಾನೀಯ ಶಾಖೆಗಳ ಸಾಪ್ತಾಹಿಕ ಸಭೆಗಳಲ್ಲದೇ ಒಂದೇ ಜಿಲ್ಲೆಯ ಅಥವಾ ಪರಿಸರದ ಜಿಲ್ಲೆಗಳ ಸದಸ್ಯರು ಪರಸ್ಪರ ಸಮಾಲೋಚನೆ ನಡೆಸಿ, ಎರಡು ಅಥವಾ ಮೂರು ತಿಂಗಳಿಗೊಮ್ಮೆ ಸಮ್ಮೇಳನಗಳನ್ನು ಜರಗಿಸಬೇಕು. ವಿವಿಧ ಹಳ್ಳಿ ಮತ್ತು ಪಟ್ಟಣಗಳಲ್ಲಿ ಒಂಟಿ ಸದಸ್ಯರಿರುವೆಡೆಗಳಲ್ಲಿ ಇಂತಹ ತ್ರೈಮಾಸಿಕ ಸಭೆಗಳು ಅತ್ಯಗತ್ಯವಾಗಿದೆ. ಹಾಗಿಲ್ಲದಿದ್ದರೆ ಈ ರೀತಿ ಚದುರಿಕೊಂಡಿರುವ ವ್ಯಕ್ತಿಗಳು ನಿಷ್ಪ್ರಯೋಜಕರಾಗುತ್ತಾರೆ.

ಹಾಗೆಯೇ ಜಮಾಅತ್ ಕೇಂದ್ರದೊಂದಿಗೂ ನಿರಂತರ ಸಂಪರ್ಕವಿರಿಸಿಕೊಳ್ಳಬೇಕು. ಇದನ್ನು ಹಲವು ರೀತಿಯಲ್ಲಿ ನಿರ್ವಹಿಸಬಹುದು. ಉದಾ: ಪತ್ರ ಮೂಲಕ ಅಮೀರ್‌ರಿಗೆ ಸ್ಥಾನೀಯ ಸ್ಥಿತಿಗತಿ ಮತ್ತು ಚಟುವಟಿಕೆಗಳ ವಿವರಗಳನ್ನು ಸಂಗ್ರಹಿಸಿ ತಿಳಿಸುವುದು. ನಿಮ್ಮ ಪ್ರತಿಯೊಂದು ಪತ್ರಕ್ಕೂ ಕೇಂದ್ರದಿಂದ ಉತ್ತರ ದೊರೆಯಬೇಕೆಂದು ನಿರೀಕ್ಷಿಸುವ ಅಗತ್ಯವಿಲ್ಲ. ನೀವು ಪ್ರತಿ ತಿಂಗಳು ಚಟುವಟಿಕೆಯ ವರದಿಯನ್ನು ಕೇಂದ್ರಕ್ಕೆ ಕಳುಹಿಸಬೇಕು. ಜಮಾಅತ್‌ನ ಸ್ಥಿತಿ ಹೇಗಿದೆ? ಎಲ್ಲಾದರೂ ಆಲಸ್ಯ ಮತ್ತು ಉದಾಸೀನತೆ ತಲೆ ಹಾಕಿದೆಯೇ? ಕಾರ್ಯ ವಿಧಾನದಲ್ಲಿ ಏನಾದರೂ ತಪ್ಪಾಗಿದೆಯೇ? ಒಳಗೆ ಅಥವಾ ಹೊರಗೆ ಏನಾದರೂ ಒಡಕು, ಕಲಹ, ಆರಂಭವಾಗಿದೆಯೇ? ಇತ್ಯಾದಿ ಆಗು ಹೋಗುಗಳನ್ನು ಆಗಾಗ ಕೇಂದ್ರಕ್ಕೆ ತಿಳಿಸುತ್ತಿರಬೇಕು. ಅಗತ್ಯ ಕಂಡು ಬಂದಲ್ಲಿ ಕೇಂದ್ರವು ಪರಿಸ್ಥಿತಿಯ ಸುಧಾರಣೆಗೆ ಸೂಕ್ತ ಕ್ರಮಗಳನ್ನು ಕೈಗೊಳ್ಳುವುದು . "ಕಯ್ಯಿಮೆ ಜಮಾಅತ್" (ಪ್ರಧಾನ ಕಾರ್ಯದರ್ಶಿ)ನ ಕರ್ತವ್ಯವನ್ನು ನಿರ್ವಹಿಸಬಲ್ಲ ಓರ್ವ ಯೋಗ್ಯ ವ್ಯಕ್ತಿ ದೊರೆತರೆ ಅವರು ವಿವಿಧ ಪ್ರದೇಶಗಳಿಗೆ ಭೇಟಿ ನೀಡಿ ಅಲ್ಲಿಯ ಚಟುವಟಿಕೆಗಳ ಮೇಲ್ನೋಟ ವಹಿಸುವರು. ಅಲ್ಲಿಯ ತನಕ ನೀವೇ ಪರಸ್ಪರ ಸಂಘಟಿತರಾಗಿ ಕಾರ್ಯ ನಿರ್ವಹಿಸುತ್ತಾ ಆಗಾಗ ಕೇಂದ್ರಕ್ಕೆ ಬಂದು ಕೆಲವು ದಿನ ತಂಗಿರಿ. ಮುಂದೆ ತರಬೇತಿ ಕೇಂದ್ರ ಸ್ಥಾಪನೆಗೊಂಡ ಬಳಿಕ ಸ್ಥಾನೀಯ ಶಾಖೆಯ ಅಮೀರ್ ಹಾಗೂ ಇತರ ಯೋಗ್ಯ ಸದಸ್ಯರಿಗೆ ಇಲ್ಲಿಂದ ಉತ್ತಮ ತರಬೇತಿ ಪಡೆಯಲು ಸಾಧ್ಯವಾಗಬಹುದು.

ಕಪೂರ್ತಲಾದ ಜಮಾಅತ್ ಕಾರ್ಯಕ್ರಮಗಳಲ್ಲಿ ಅಂಗೀಕರಿಸಲಾಗಿರುವ ವಯಸ್ಕ ಶಿಕ್ಷಣ ಪದ್ಧತಿಯು ನನಗೆ ತುಂಬಾ ಮೆಚ್ಚುಗೆಯಾಗಿದೆ. ಈ ಕಾರ್ಯಕ್ರಮವನ್ನು ಇತರೆಡೆಗಳಲ್ಲಿಯೂ ಆರಂಭಿಸಬೇಕು. ತನ್ಮೂಲಕ ಅಲ್ಲಾಹನ ಹಾದಿಯಲ್ಲಿ ಸಮಯವನ್ನು ಸದುಪಯೋಗ ಪಡಿಸುವ ಸ್ವಭಾವ ನಮ್ಮಲ್ಲಿ ಬೆಳೆದು ಬರುವುದು. ಹಾಗೆಯೇ ಜನಸಾಮಾನ್ಯರೊಂದಿಗೆ ನೇರ ಸಂಪರ್ಕ ಹೊಂದುವ ಹಾಗೂ ಅವರನ್ನು ಸಂಬೋಧಿಸುವ ಅವಕಾಶವೂ ನಿಮಗೆ ದೊರೆಯುವುದು. ಅದಲ್ಲದೇ ವಿದ್ಯಾಭ್ಯಾಸವನ್ನು ವ್ಯಾಪಕಗೊಳಿಸುವ ಮೂಲಕ ನಮ್ಮ ಸಾಹಿತ್ಯಗಳ ಪ್ರಚಾರಕ್ಕೆ ಮತ್ತು ನಮ್ಮ ಸಂದೇಶವನ್ನು ಜನರಿಗೆ ತಲಪಿಸುವುದಕ್ಕೆ ಒಂದು ವಿಶಾಲ ರಂಗವು ಲಭ್ಯವಾಗುವುದು. ಪ್ರತಿಫಲಾಪೇಕ್ಷೆಯಿಲ್ಲದೇ ನೀವು ನಿರ್ವಹಿಸುತ್ತಿರುವ ಈ ಸೇವೆಯಿಂದ ಹಾಗೂ ನಿಮ್ಮ ನೈತಿಕ ನಿಲುಮೆಯಿಂದ ಜನರು ಆಕರ್ಷಿತರಾಗುವರು. ನಿಮ್ಮ ಮಾತುಗಳು ಅವರ ಮನ ಮಸ್ತಿಷ್ಕಗಳಲ್ಲಿ ಪ್ರಭಾವ ಬೀರುವುವು. ಈ ಕಾರ್ಯಕ್ರಮದ

ಪ್ರಾಮುಖ್ಯತೆಯನ್ನು ತಿಳಿಯಲಿಕ್ಕೆ ಕೇವಲ ಒಂದೇ ವಿಷಯವನ್ನು ಅರ್ಥ ಮಾಡಿಕೊಂಡರೆ ಸಾಕು. ಅಂದರೆ ನಮ್ಮ ಸಂದೇಶಗಳ ಪ್ರಚಾರಕ್ಕೆ ಜನ ಸಾಮಾನ್ಯರ ವಿದ್ಯಾ ಹೀನತೆಯೇ ದೊಡ್ಡ ತಡೆಯಾಗಿದೆ. ಇತರ ದೇಶಗಳಲ್ಲಿ ವಿದ್ಯಾಭ್ಯಾಸವು ಸಾರ್ವತ್ರಿಕವಾಗಿರುವುದರಿಂದ ಒಂದು ಪುಸ್ತಕವು ಅಚ್ಚಾಗಿ ಪ್ರೆಸ್‌ನಿಂದ ಹೊರಬಂದು ಒಂದು ವಾರದೊಳಗೆ 50 ಲಕ್ಷಕ್ಕೂ ಮಿಕ್ಕಿ ಜನರ ಕೈಗಳಿಗೆ ತಲಪಿರುತ್ತದೆ. ಓದು ಬರಹಗಳ ನಿಮಿತ್ತ ವಿಚಾರಗಳ ಪ್ರಚಾರವು ಎಷ್ಟೊಂದು ತೀವ್ರಗತಿಯಿಂದ ಮುನ್ನಡೆಯುವುದೆಂದು ಇದರಿಂದ ಊಹಿಸಬಹುದು. ತದ್ವಿರುದ್ಧವಾಗಿ ನಮ್ಮ ವಿಚಾರಗಳನ್ನು ಜನರಿಗೆ ತಲಪಿಸಲು ಹಲವು ಕಾಲ ಹಿಡಿಯುತ್ತಿದೆ. ಹಲವುವರ್ಷಗಳಿಂದ ಪ್ರಯತ್ನಿಸುತ್ತಲಿದ್ದರೂ ಜನಸಂಖ್ಯೆಯ ಒಂದು ಸಣ್ಣ ಭಾಗವನ್ನಷ್ಟೇ ಆಕರ್ಷಿಸಲು ನಮ್ಮಿಂದ ಸಾಧ್ಯವಾಗಿದೆ. ಈ ಅಡ್ಡಿಯನ್ನು ನಿವಾರಿಸಲು ನಮ್ಮಿಂದ ಸಾಧ್ಯವಿರುವ ಎಲ್ಲಾ ಪ್ರಯತ್ನಗಳನ್ನು ನಡೆಸಬೇಕು. ವಯಸ್ಕ ಶಿಕ್ಷಣ ಕಾರ್ಯಕ್ರಮದ ಘನ ಜವಾಬ್ದಾರಿಕೆಯನ್ನು ನಿರ್ವಹಿಸುವ ಸಾಮರ್ಥ್ಯವಿರುವ ಕಾರ್ಯಕರ್ತರೇ ಅದನ್ನು ವಹಿಸಿಕೊಳ್ಳಬೇಕು.

ಈ ಭಾಷಣದೊಂದಿಗೆ ಕೊನೆಯ ಅಧಿವೇಶನವು ಸಮಾಪ್ತಗೊಂಡಿತ್ತು.

## ಪ್ರಥಮ ಅಖಿಲ ಭಾರತ ಸಮ್ಮೇಳನ

1945ರ ಎಪ್ರಿಲ್ 19,20,21 ರಂದು ಜಮಾಅತೆ ಇಸ್ಲಾಮಿಯ ಪ್ರಥಮ ಅಖಿಲ ಭಾರತ ಸಮ್ಮೇಳನವು ಜರಗಿತು. ಎಪ್ರಿಲ್ 19 ರಂದು ಝುಹರ್ ನಮಾಝ್‌ನ ಬಳಿಕ ಸಮ್ಮೇಳನದ ಕಾರ್ಯಕಲಾಪಗಳು ಆರಂಭಗೊಂಡುವು. ಪ್ರಥಮವಾಗಿ ಅಧ್ಯಕ್ಷರು ಉದ್ಘಾಟನಾ ಭಾಷಣ ಮಾಡುತ್ತಾ ಹೀಗೆಂದರು:

'ಬಾಂಧವರೇ, ಸ್ನೇಹಿತರೇ' ಜಮಾಅತನ್ನು ರೂಪಿಸುವ ಸಮ್ಮೇಳನದಲ್ಲಿಯೇ ವರ್ಷಂಪ್ರತಿ ಸಾರ್ವಜನಿಕ ಸಮ್ಮೇಳನಗಳನ್ನು ಜರಗಿಸಬೇಕೆಂದು ತೀರ್ಮಾನಿಸಿರುವುದು ನಿಮಗೆಲ್ಲರಿಗೂ ನೆನಪಿರಬಹುದು. ಆದರೆ ದೇಶದಲ್ಲಿರುವ ಯುದ್ಧ ಪರಿಸ್ಥಿತಿಯಿಂದಾಗಿ ಕಳೆದ ಮೂರ್‍ನಾಲ್ಕು ವರುಷಗಳಲ್ಲಿ ನಮಗೆ ಅಖಿಲ ಭಾರತ ಸಮ್ಮೇಳನವನ್ನು ಜರಗಿಸಲು ಸಾಧ್ಯವಾಗಿಲ್ಲ. ಈ ಮಧ್ಯೆ ಹಲವು ವಲಯ ಸಮ್ಮೇಳನಗಳು ಜರಗಿವೆ. ಅವುಗಳ ವರದಿಗಳನ್ನೂ ಪ್ರಕಟಿಸಿದ್ದೇವೆ. ತನ್ಮೂಲಕ ಜಮಾಅತ್‌ನ ಚಟುವಟಿಕೆಗಳನ್ನು ಉಳಿಸಿ ಬೆಳೆಸಲು ನಮ್ಮಿಂದ ಸ್ವಲ್ಪಂಶ ಸಾಧ್ಯವಾಗಿದೆ. ಆದರೂ ಸಾರ್ವಜನಿಕ ಸಮ್ಮೇಳನಗಳ ಅಗತ್ಯವಿತ್ತು. ವಲಯ ಸಮ್ಮೇಳನಗಳಿಂದ ಆ ಆವಶ್ಯಕತೆ ಈಡೇರುವುದಿಲ್ಲ. ಆದ್ದರಿಂದಲೇ ಅಖಿಲ ಭಾರತ ಸಮ್ಮೇಳನವನ್ನು ಜರಗಿಸುವ ನಿರ್ಧಾರವನ್ನು ಕೈಗೊಳ್ಳಬೇಕಾಯಿತು. ಯುದ್ಧ ನಿಮಿತ್ತ ಅದೆಷ್ಟೇ ತೊಡಕುಗಳಿದ್ದರೂ ದೂರ ಪ್ರದೇಶಗಳಿಂದ ಇಲ್ಲಿಗಾಗಮಿಸಲು ಅನೇಕ ಅಡ್ಡಿ ಆತಂಕಗಳಿದ್ದರೂ ಸಾರ್ವಜನಿಕ ಸಮ್ಮೇಳನವೊಂದನ್ನು ಜರಗಿಸದೆ ನಿರ್ವಾಹವಿಲ್ಲವೆಂದು ನಾನು ನಿರ್ಧರಿಸಿದೆ. ನನ್ನ ಆಹ್ವಾನಕ್ಕೆ ಓಗೊಟ್ಟು ಪ್ರಯಾಣದ ಕಷ್ಟಗಳನ್ನು ಸಹಿಸಿ ಇಲ್ಲಿಗಾಗಮಿಸಿರುವ ತಮ್ಮೆಲ್ಲರನ್ನೂ ನಾನು ಅಭಿನಂದಿಸುತ್ತೇನೆ. ಈ ರೀತಿ ನನ್ನ ಕರೆಗೆ ಓಗೊಟ್ಟು ನನ್ನ ಹಾಗೂ ನಿಮ್ಮ ಶಕ್ತಿಯನ್ನು ನೀವು ಹೆಚ್ಚಿಸಿ ಕೊಂಡಿದ್ದೀರಿ. ನೀವು ಹೀಗೆ ಮಾಡದಿರುತ್ತಿದ್ದರೆ ನನ್ನ ಮಟ್ಟಿಗೆ ನಾನೂ ನಿಮ್ಮ ಮಟ್ಟಿಗೆ ನೀವೂ ದುರ್ಬಲರಾಗುತ್ತಿದ್ದೆವು. ತನ್ಮೂಲಕ ಅತ್ಯಂತ ದೃಢ ನಿರ್ಧಾರದ ಪ್ರತೀಕವಾಗಿರುವ

ನಮ್ಮೊ ಆಂದೋಲನವು ಸ್ವಯಂ ನಿಶ್ಚಲವಾಗುತ್ತಿತ್ತು. ಅತ್ಯುನ್ನತವಾದ ಧ್ಯೇಯಕ್ಕಾಗಿ ನೀವು ಒಬ್ಬರನ್ನು ಅಮೀರ್ ಆಗಿ ಆರಿಸಿ ಅವರನ್ನು ಸಂಪೂರ್ಣವಾಗಿ ಅನುಸರಿಸುವ ಮೂಲಕ ನಿಮ್ಮ ಶಕ್ತಿಯನ್ನು ಸುದೃಢಗೊಳಿಸುತ್ತೀರಿ. ನಿಮ್ಮಲ್ಲಿ ಅಹಂಭಾವ ಮತ್ತು ಆತ್ಮ ಪ್ರಶಂಸೆಯು ತಲೆ ಹಾಕಿ ಅಮೀರ್‌ರೊಂದಿಗೆ ನಿಮ್ಮ ವಿಧೇಯತೆಯು ದುರ್ಬಲವಾಗತೊಡಗಿದರೆ ಅದೇ ಪ್ರಮಾಣದಲ್ಲಿ ನಿಮ್ಮ ಅಮೀರನು ದುರ್ಬಲನಾಗಿ ನಿಮ್ಮ ಸಂಘಟನಾ ಶಕ್ತಿಯೂ ಶಿಥಿಲವಾಗುವುದು. ಬದಲಾಗಿ, ನಿಮ್ಮ ಮನ-ಮಸ್ತಿಷ್ಕಗಳಲ್ಲಿ ಧ್ಯೇಯದ ಬಗೆಗಿನ ಅನುರಾಗವನ್ನು ನೀವು ಮೈಗೂಡಿಸಿ, ಶಿಸ್ತು ಮತ್ತು ಅನುಸರಣೆಗಳನ್ನು ಹೆಚ್ಚಿಸಿಕೊಂಡರೆ, ನಿಮ್ಮ ಕೇಂದ್ರವು ಸುಶಕ್ತವಾಗಿ ಸಂಘಟನಾ ಶಕ್ತಿಯು ಸುದೃಢವಾಗುವುದು. ನಮ್ಮ ಈ ಜಮಾಅತ್‌ನಲ್ಲಿ ವ್ಯಕ್ತಿ ಪೂಜೆ ಮತ್ತು ವೈಚಾರಿಕ ದಾಸ್ಯವಿಲ್ಲದಿರುವುದನ್ನು ನೋಡಿ ನನಗೆ ತುಂಬಾ ಸಂತೋಷವಾಗುತ್ತಿದೆ. ಪ್ರತಿಯೊಬ್ಬರಲ್ಲಿಯೂ ವಿಮರ್ಶಾ ಮನೋಭಾವ ಬೆಳೆದಿದೆ. ಹೆಚ್ಚಾಗಿ ನನ್ನ ಮೇಲೆಯೇ ವಿಮರ್ಶೆಯ ದೃಷ್ಟಿ ಹರಿಯುತ್ತಿದೆ. ಆದರೆ ನನ್ನನ್ನು ಎಷ್ಟು ತೀಕ್ಷ್ಣವಾಗಿ ವಿಮರ್ಶಿಸಲು ಹಕ್ಕಿದೆಯೋ ಅಷ್ಟೇ ಹಕ್ಕು ನಿಮ್ಮ ಮೇಲೆ ವಿಮರ್ಶೆಯ ದೃಷ್ಟಿಬೀರುವ ಹಕ್ಕು ನನಗೂ ಇದೆ. ಆಜ್ಞಾನುಸರಣೆ ಮತ್ತು ಶಿಸ್ತು ಪಾಲನೆಯಲ್ಲಿ ನಿಮ್ಮಲ್ಲಿರುವ ಕುಂದು ಕೊರತೆಗಳು ನನ್ನನ್ನು ಅಸಹಾಯಕನನ್ನಾಗಿ ಮಾಡುತ್ತದೆ. ಗುಂಡಿಲ್ಲದ ಬಂದೂಕುಧಾರಿಯಂತೆ ನನಗೆ ಭಾಸವಾಗುತ್ತದೆ. ಅಂತಹ ಆಯುಧ ಧರಿಸಿ ಮುನ್ನಡೆಯುವವನು ಮೂರ್ಖನೆಂದು ಪ್ರತ್ಯೇಕ ಹೇಳಬೇಕಾಗಿಲ್ಲವಷ್ಟೆ. ತದ್ವಿರುದ್ಧವಾಗಿ ನಿಮ್ಮಲ್ಲಿ ಆಜ್ಞಾಪಾಲನೆ ಮತ್ತು ಶಿಸ್ತು ಗೋಚರಿಸಿದಾಗ ನಿಮ್ಮನ್ನು ಒಂದೇ ಕರೆಯಲ್ಲಿ ಒಗ್ಗೂಡಿಸಬಹುದೆಂದು ನನಗೆ ಮನವರಿಕೆಯಾದರೆ ಸನ್ನೆಯಂತೆ ನೀವು ಚಲಿಸುವಿರೆಂಬ ಹಾಗೂ ಸ್ವ ಪ್ರೇರಣೆಯಿಂದ ನಿಮ್ಮ ಕೆಲಸಗಳನ್ನು ನಿರ್ವಿಘ್ನವಾಗಿ ನಿರ್ವಹಿಸುವಿರೆಂಬ ವಿಶ್ವಾಸವು ನನ್ನಲ್ಲಿ ಮೂಡಿದರೆ ನನ್ನ ಆತ್ಮವಿಶ್ವಾಸ ಮತ್ತು ಮನೋಧೈರ್ಯ ಹೆಚ್ಚುವುದು. ಈ ಉನ್ನತ ಧ್ಯೇಯ ಸಾಧನೆಗೆ ಅಗತ್ಯವಿರುವ ಶಕ್ತಿಯು ನನ್ನಲ್ಲಿ ಉಂಟಾದಂತೆ ಭಾಸವಾಗುತ್ತದೆ.

ನೀವು ತಿಳಿದಿರಬೇಕಾದ ಕೆಲವೊಂದು ಮುಖ್ಯ ವಿಷಯಗಳನ್ನು ಈ ಭಾಷಣದಲ್ಲಿ ಸಂಕ್ಷಿಪ್ತವಾಗಿ ವಿವರಿಸಬಯಸುತ್ತೇನೆ-

1. ನಿಮ್ಮ ಸಮ್ಮೇಳನದಲ್ಲಿ ಜನರು ಅದೆಷ್ಟೇ ಅಧಿಕ ಸಂಖ್ಯೆಯಲ್ಲಿ ಭಾಗವಹಿಸಿದರೂ ಯಾವುದೇ ರೀತಿಯ ಗದ್ದಲ ಕೋಲಾಹಲಗಳಿರಬಾರದು. ಇಲ್ಲಿ ಅಂತಹ ಯಾವುದೇ ವರ್ತನೆ ಈ ತನಕ ಕಂಡು ಬಂದಿಲ್ಲವಾದರೂ ಆ ಬಗ್ಗೆ ನಿಮ್ಮ ಗಮನ ಸೆಳೆಯುವುದು ಅತ್ಯಗತ್ಯವೆಂದು ಭಾವಿಸುತ್ತೇನೆ. ನಾವು ನೈತಿಕ ಬುನಾದಿಯಲ್ಲಿ ಲೋಕವನ್ನು ಸುಧಾರಿಸುವ ಹಾಗೂ ಲೋಕ ವ್ಯವಸ್ಥೆಯನ್ನು ಸರಿಪಡಿಸುವ ಘನ ಕರ್ತವ್ಯವನ್ನು ವಹಿಸಿಕೊಂಡಿದ್ದೇವೆ. ಈ ನಿಟ್ಟಿನಲ್ಲಿ ಮೊತ್ತ ಮೊದಲಾಗಿ ನಾವು ನಮ್ಮನ್ನು ಲೋಕದ ಮುಂದೆ ಉತ್ತಮ ನೈತಿಕ ಮಟ್ಟವನ್ನು ಹೊಂದಿರುವ ವರ್ಗವೆಂದು ಸಾಬೀತು ಪಡಿಸಬೇಕಾಗಿದೆ. ಲೋಕದ ಇಂದಿನ ಕೆಡುಕುಗಳ ಕುರಿತು ವಿಮರ್ಶಿಸಲು ನಮಗೆ ಹಕ್ಕಿರುವಂತೆಯೇ ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ನಮ್ಮ ವ್ಯವಹಾರ, ವರ್ತನೆಗಳು ಹೇಗಿವೆ? ನಾವು ನಮ್ಮ ಸಮ್ಮೇಳನಗಳನ್ನು ಯಾವ ರೀತಿ ಜರಗಿಸುತ್ತಿದ್ದೇವೆಂಬುದನ್ನು ವೀಕ್ಷಿಸಲು ಲೋಕಕ್ಕೂ ಹಕ್ಕಿದೆ. ನಮ್ಮ ಸಮ್ಮೇಳನಗಳಲ್ಲಿ ಗದ್ದಲ, ಕೋಲಾಹಲ, ಅಶಿಸ್ತು ತಾಂಡವವಾಡುವುದನ್ನು ಅವರು ನೋಡಿದರೆ ನಾವು ತಂಗುವ, ಕುಳಿತುಕೊಳ್ಳುವ, ಸಭೆ ಸೇರುವ

ಸ್ಥಳಗಳು ಪ್ರಶಾಂತವಾಗಿರದೆ, ನಾವು ಆಹಾರ ಸೇವನೆಗಾಗಿ ಉಪಯೋಗಿಸುವ ಸ್ಥಳವು ಕೊಳಕಾಗಿದ್ದರೆ, ಸಮಾಲೋಚನೆಯ ವೇಳೆ ವಾಗ್ವಾದ, ಹರಟೆ, ತಮಾಷೆ, ಕೇಕೆ, ಅಟ್ಟಹಾಸ, ಅಶಿಸ್ತುಗಳನ್ನು ಲೋಕವು ದರ್ಶಿಸುವಂತಾದರೆ, ನಮ್ಮಿಂದಾಗಬಹುದಾದ ಸುಧಾರಣೆಯ ಬಗ್ಗೆ ಜನರು ಅಲ್ಲಾಹನೊಂದಿಗೆ ಅಭಯ ಯಾಚಿಸಿಯಾರು. ಈ ಮಂದಿಯ ಕೈಯಲ್ಲಿ ಜಾಗತಿಕ ವ್ಯವಸ್ಥೆಯು ಬಂದರೆ ಸಂಪೂರ್ಣ ಲೋಕವನ್ನೇ ಇವರು ವಿನಾಶಕೂಪಕ್ಕೆ ತಳ್ಳಬಹುದೆಂದು ಲೋಕವು ಭಾವಿಸೀತು. ಆದ್ದರಿಂದ ನೀವು ನಿಮ್ಮ ಸಮ್ಮೇಳನದ ವೇಳೆಯಲ್ಲಿ ಶಿಸ್ತು, ಅಚ್ಚುಕಟ್ಟು, ಗಾಂಭೀರ್ಯ, ಶಾಂತತೆ, ಶುಚಿತ್ವ, ಪಾವಿತ್ರ್ಯ, ಸದ್ಗುಣ ಮತ್ತು ಸದ್ವರ್ತನೆ ಇತ್ಯಾದಿಗಳನ್ನು ಲೋಕಕ್ಕೆ ಆದರ್ಶ ಪ್ರಾಯವಾಗಬಲ್ಲ ರೀತಿಯಲ್ಲಿ ಅಳವಡಿಸಿಕೊಳ್ಳಬೇಕು. ನೀವು ಸಾವಿರ ಸಂಖ್ಯೆಯಲ್ಲಿ ಸೇರಿದರೂ ಯಾವ ಸದ್ದು ಗದ್ದಲವೂ ಇರಬಾರದು. ಒಂದು ಸುಸಂಘಟಿತ ಹಾಗೂ ಸುವ್ಯವಸ್ಥಿತ ವರ್ಗವೆಂಬ ನೆಲೆಯಲ್ಲಿ ಕುಳಿತುಕೊಳ್ಳಿರಿ, ಎದ್ದೇಳಿರಿ, ತಿನ್ನಿರಿ, ಕುಡಿಯಿರಿ, ಸಭೆ ಸೇರಿರಿ, ಬೀಳ್ಕೊಡಿರಿ. ಈ ಬಗ್ಗೆ ಪ್ರವಾದಿವರ್ಯರು(ಸ) ಎಷ್ಟೊಂದು ಗಮನವಹಿಸುತ್ತಿದ್ದರೆಂದು ಹದೀಸ್‌ಗಳನ್ನು ಅವಲೋಕಿಸಿದರೆ ತಿಳಿಯಬಹುದು. ಅಂದಿನ ಇಸ್ಲಾಮಿ ಸಂಘಟನೆಯನ್ನು ಪ್ರವಾದಿಯವರು(ಸ) ಅತ್ಯಂತ ಸುಧಾರಿತ, ಸುಸಂಘಟಿತ ಮತ್ತು ಉನ್ನತಗೊಳಿಸಿದರು. ಆ ಸಂಘಟನೆಯು ಅರೇಬಿಯಾದಲ್ಲಿ ತೀವ್ರವಾಗಿ ವ್ಯಾಪಿಸಿರುವುದಕ್ಕೆ ಅದೇ ಗುಣಗಳು ಪ್ರೇರಕವಾಗಿದ್ದುವು. ಒಂದೆಡೆ, ಮುಷ್ರಿಕರ ಒಂದು ಸಣ್ಣ ಸೇನೆ ಯಾವ ಪ್ರದೇಶದಿಂದಲಾದರೂ ಹಾದು ಹೋಗುವಾಗ ವಿಪರೀತ ಗಲಾಟೆ, ಗದ್ದಲಗಳು ಕೇಳಿ ಬರುತ್ತಿದ್ದುವು. ಆದರೆ ಇನ್ನೊಂದೆಡೆ ಪ್ರವಾದಿವರ್ಯರ(ಸ) ನೇತೃತ್ವದ ಮುಸ್ಲಿಮರ ದೊಡ್ಡದೊಡ್ಡ ಸೇನೆಯೂ ಅದೆಷ್ಟೇ ಪ್ರದೇಶಗಳನ್ನು ಹಾದು ಹೋದರೂ ಸದ್ದುಗದ್ದಲ ಕೋಲಾಹಲಗಳು ಕೇಳಿ ಬರುತ್ತಿರಲಿಲ್ಲ.

ಒಮ್ಮೆ ಅನುಯಾಯಿಗಳು ಯುದ್ಧ ಪರಿಸ್ಥಿತಿಯಿಂದ ಹುರುಪುಗೊಂಡು, ಗಟ್ಟಿಯಾಗಿ 'ಅಲ್ಲಾಹು ಅಕ್ಬರ್' ಎಂಬ ಧ್ವನಿ ಮೊಳಗಿಸಿದಾಗ ಪ್ರವಾದಿವರ್ಯರು(ಸ) ಅವರೊಂದಿಗೆ "ನೀವು ಕರೆಯುವಾತನು ಕಿವುಡನಲ್ಲ" ಎಂದು ಹೇಳಿದರು. ಈ ಗಾಂಭೀರ್ಯ ಮತ್ತು ಶಿಸ್ತಿನ ನಿಮಿತ್ತ ಪ್ರವಾದಿಯವರು(ಸ) ಪವಿತ್ರ ಮಕ್ಕಾವನ್ನು ಜಯಿಸಲಿಕ್ಕಾಗಿ ಸುಮಾರು 10,000 ಸೈನಿಕರೊಂದಿಗೆ ಹೊರಟಾಗ ಮಕ್ಕಾ ನಿವಾಸಿಗಳಿಗೆ ಆ ಕುರಿತು ಸುಳಿವೂ ದೊರೆಯಲಿಲ್ಲ. ಮಕ್ಕಾದ ಸಮೀಪ ತಲಪಿದಾಗ ಪ್ರವಾದಿವರ್ಯರು(ಸ) ದೀಪ ಹಚ್ಚಲು ಹೇಳಿದಾಗಲಷ್ಟೇ ಮಕ್ಕಾ ನಿವಾಸಿಗಳಿಗೆ ಶತ್ರುಗಳು ತಮ್ಮ ಕಾಲ ಬುಡಕ್ಕೆ ತಲಪಿರುವುದು ತಿಳಿಯಿತು. ನಾವು ಅದೇ ನೀತಿಯನ್ನು ಅನುಸರಿಸಬೇಕು. ನಮ್ಮ ಸಮ್ಮೇಳನಗಳಲ್ಲಿ ಹೆಚ್ಚಿನಂಶ ಅದೇ ಸ್ಥಿತಿ ಇರಬೇಕು.

2. ನಮ್ಮ ಸಮ್ಮೇಳನ ಸ್ಥಳಗಳಲ್ಲಿ ಪ್ರಾಮಾಣಿಕತೆ ಮತ್ತು ಸತ್ಯಸಂಧತೆಗಳು ಎದ್ದು ತೋರಬೇಕು. ಇಲ್ಲಿ ಯಾರಿಗೂ ಯಾವ ವಸ್ತುವನ್ನೂ ವಿಶೇಷವಾಗಿ ಸಂರಕ್ಷಿಸುವ ಅವಶ್ಯಕತೆಯಿರಬಾರದು. ಜನರ ಹಣ ಮತ್ತು ಸಾಮಾಗ್ರಿಗಳು ಇರಿಸಲ್ಪಟ್ಟಿರುವೆಡೆಗಳಲ್ಲಿಯೇ ಕಾವಲುಗಾರ, ಬೀಗ ಮತ್ತು ಕೀಲಿ ಕೈಗಳಿಲ್ಲದೆಯೇ ಸುರಕ್ಷಿತವಾಗಿರಬೇಕು. ಯಾರದೇ ವಸ್ತು ಒಡವೆಗಳು ಕಳೆದು ಹೋದ ಸ್ಥಳದಲ್ಲಿಯೇ ಅದರ ಮಾಲಿಕರಿಗೆ ದೊರೆಯುವಂತಾಗಬೇಕು. ಇಲ್ಲಿ ಯಾವುದಾದರೂ ಅಂಗಡಿ ತೆರೆಯಲ್ಪಟ್ಟಿದ್ದರೆ ಮಾರಾಟಗಾರನಿಲ್ಲದಿದ್ದರೂ ಆತನ

ವಸ್ತುಗಳು ಸರಿಯಾಗಿ ಮಾರಲ್ಪಡುತ್ತಿರಬೇಕು. ಯಾವುದಾದರೊಂದು ವಸ್ತುವನ್ನು ಕೊಳ್ಳುವುದಿದ್ದರೆ ಅದರ ಮಾಲಿಕನು ಇದ್ದರೂ ಇಲ್ಲದಿದ್ದರೂ ಅದರ ಸರಿಯಾದ ಬೆಲೆಯನ್ನು ಅಲ್ಲಿ ಇಟ್ಟು ಬಿಡಬೇಕು.

3. ಇದು ಜಮಾಅತ್‌ನ ನಾಯಕತ್ವಕ್ಕೆ ಸಂಬಂಧಿಸಿದ ವಿಷಯ. ಜಮಾಅತ್ ಆರಂಭದಲ್ಲಿ ನೀವು ನನ್ನನ್ನು ಅಮೀರ್ ಆಗಿ ಆರಿಸಿದ್ದಾಗ ನಿಮ್ಮ ಯಾವುದೇ ಬೇಡಿಕೆ ಇಲ್ಲದೆಯೇ ನಾನೊಂದು ವಾಗ್ದಾನ ನೀಡಿದ್ದೆ. ನನಗಿಂತ ಯೋಗ್ಯ ವ್ಯಕ್ತಿ ಯಾರಾದರೂ ದೊರೆತರೆ ಈ ಸ್ಥಾನವನ್ನು ಅವರಿಗಾಗಿ ತೆರವು ಗೊಳಿಸಲು ಸಿದ್ಧನೆಂದು ಎಲ್ಲಾ ಸಾರ್ವಜನಿಕ ಸಮ್ಮೇಳನಗಳಲ್ಲಿಯೂ ಘೋಷಿಸುವುದಾಗಿ ಮಾತು ಕೊಟ್ಟಿದ್ದೆ. ಆದರೆ ಆ ಬಳಿಕ ಈ ವರೆಗೆ ಯಾವುದೇ ಸಾರ್ವಜನಿಕ ಸಭೆ ಜರಗಲಿಲ್ಲ. ಆದ್ದರಿಂದ ನನ್ನ ವಾಗ್ದಾನವನ್ನು ಈಡೇರಿಸುವ ಅವಕಾಶ ದೊರೆಯಲಿಲ್ಲ. ಈ ಪ್ರಥಮ ಸಮ್ಮೇಳನದಲ್ಲಿ ನಾನು ಆ ವಾಗ್ದಾನವನ್ನು ಪುನಃ ಘೋಷಿಸುತ್ತೇನೆ. ಈ ಸ್ಥಾನವನ್ನು ಇನ್ನಾದರೂ ವಹಿಸಿಕೊಂಡು ನಾನು ಅವರಿಗೆ ವಿಧೇಯನಾಗಿರುತ್ತಾ ಅಮೀರ್‌ರನ್ನು ಅನುಸರಿಸುವುದು ಹೇಗೆಂಬುದನ್ನು ಕಾರ್ಯ ರೂಪದಲ್ಲಿ ತೋರಿಸಿಕೊಡಬೇಕೆಂದು ನಾನು ಬಯಸುತ್ತೇನೆ. ಆದರೆ ನಾನು ಹಿಂದೆ ಸರಿಯುತ್ತಿದ್ದೇನೆ ಅಥವಾ ಈ ಹೊಣೆಯಿಂದ ಜಾರಿಕೊಳ್ಳಲು ಪ್ರಯತ್ನಿಸುತ್ತಿದ್ದೇನೆಂದು ನನ್ನ ಈ ಘೋಷಣೆಗೆ ಯಾರೂ ಅರ್ಥ ಕಲ್ಪಿಸಬಾರದು. ನನ್ನ ಉದ್ದೇಶವಿಷ್ಟೇ. ನಾನು ಈ ಸ್ಥಾನವನ್ನು ಬಯಸುವವನಲ್ಲ. ಯಾವನಾದರೂ ಯೋಗ್ಯ ವ್ಯಕ್ತಿಯ ಆಗಮನಕ್ಕೆ ತಡೆಯಾಗುವುದೂ ಇಲ್ಲ. ಈ ಆಂದೋಲನದ ಅಭಿವೃದ್ಧಿ ಮತ್ತು ಈ ಸಂಘಟನೆಯ ಒಳಿತಿನ ಹಾದಿಗೆ ನಾನು ತಡೆಯಾಗ ಬಯಸುವುದಿಲ್ಲ. ನಾನು ಹಿಂದೆಯೂ ಹೇಳಿದ್ದೆ, ಈಗಲೂ ಹೇಳುತ್ತೇನೆ. ಈ ಕಾರ್ಯ ನಿರ್ವಹಣೆಗಾಗಿ ಯಾರೂ ಮುಂದೆ ಬಾರದಿದ್ದರೆ ಖಂಡಿತವಾಗಿಯೂ ನಾನೇ ಮುನ್ನಡೆಯುತ್ತೇನೆ. ನನ್ನ ಅಸಾಮರ್ಥ್ಯಗಳನ್ನು ನಾನು ಚೆನ್ನಾಗಿ ತಿಳಿದಿರುತ್ತಾ ಇತರರು ಕಾರ್ಯವೆಸಗುವುದಿದ್ದರೆ ನಾನು ಕಾರ್ಯವೆಸಗಲಾರನೆನ್ನಲು ಎಂದಿಗೂ ಸಿದ್ಧನಿಲ್ಲ. ಆದ್ದರಿಂದ ನನಗೆ ಅಥವಾ ನಿಮಗೆ ಹೆಚ್ಚು ಯೋಗ್ಯನಾದ ಇನ್ನೋರ್ವ ವ್ಯಕ್ತಿಯು ದೊರೆಯುವ ತನಕ ಅದೆಷ್ಟೇ ಕಷ್ಟ ನಷ್ಟಗಳನ್ನು ಸಹಿಸಬೇಕಾಗಿ ಬಂದರೂ ನಾನು ಈ ಕಾರ್ಯವನ್ನು ನಿರ್ವಹಿಸುತ್ತಲಿರುತ್ತೇನೆ. ಯಾವುದೇ ಸ್ಥಿತಿಯಲ್ಲಿ ಈ ಧ್ವಜವನ್ನು ಕೈ ಬಿಡಲು ನಾನೆಂದೂ ಸಿದ್ಧನಿಲ್ಲ.

ಈ ಪ್ರಾರಂಭ ಭಾಷಣದಲ್ಲಿ ನಾನು ಇನ್ನೊಂದು ವಿಷಯವನ್ನು ಘೋಷಿಸ ಬಯಸುತ್ತೇನೆ. ಅಂದರೆ ಕಳೆದ ಮೂರು ವರ್ಷಗಳಲ್ಲಿ ಯಾರಿಗಾದರೂ ನನ್ನ ಬಗ್ಗೆ ಏನಾದರೂ ಆಕ್ಷೇಪವಿದ್ದರೆ, ಯಾರದಾದರೂ ಹಕ್ಕು ನಿರ್ವಹಣೆಯಲ್ಲಿ ಅಥವಾ ನ್ಯಾಯ ಪಾಲನೆಯಲ್ಲಿ ನನ್ನಿಂದ ಏನಾದರೂ ತಪ್ಪಾಗಿದ್ದರೆ, ನನ್ನ ಕೆಲಸ ಕಾರ್ಯಗಳಲ್ಲಿ ಏನಾದರೂ ಕುಂದುಕೊರತೆಗಳು ಕಂಡು ಬಂದಿದ್ದರೆ ನಿಸ್ಸಂಕೋಚವಾಗಿ ಅದನ್ನು ಬಹಿರಂಗ ಪಡಿಸಿರಿ. ಅದು ನನ್ನ ಮುಂದೆ ಅಥವಾ ಜಮಾಅತ್‌ನ ಮುಂದೆಯೂ ಆಗಬಹುದು. ಆಕ್ಷೇಪ ಮತ್ತು ಆರೋಪಗಳನ್ನು ಬಹಿರಂಗ ಪಡಿಸುವುದಕ್ಕೆ ನಾನು ಯಾವ ರೀತಿಯಲ್ಲಿಯೂ ಅಡ್ಡಿಪಡಿಸಲಾರೆ. ನನ್ನ ತಪ್ಪು ಮತ್ತು ಕುಂದು ಕೊರತೆಗಳನ್ನು ಒಪ್ಪಿಕೊಳ್ಳಲೂ ನಾನು ಹಿಂಜರಿಯಲಾರೆ. ನನ್ನನ್ನು ತಿದ್ದಿಕೊಳ್ಳುವ ಹಾಗೂ ನ್ಯಾಯೋಚಿತ ಆರೋಪ ನಿವಾರಿಸುವ ವಿಷಯದಲ್ಲಿ ನಾನು ಯಾವ ಜಿಪುಣತೆಯನ್ನೂ ತೋರಲಾರೆ. ಆದರೆ

ಆರೋಪಗಳು ಕೇವಲ ತಪ್ಪು ತಿಳುವಳಿಕೆಯ ಆಧಾರದಲ್ಲಿದ್ದರೆ ಈ ಕಾರ್ಯದಲ್ಲಿ ನನ್ನ ಮತ್ತು ಜಮಾಅತ್ ಬಾಂಧವರ ಮಧ್ಯೆ ಯಾವುದೇ ತಪ್ಪು ತಿಳುವಳಿಕೆಗಳು ಉಳಿಯದಿರಲಿಕ್ಕಾಗಿ ನಾನು ಅವುಗಳನ್ನು ಸ್ಪಷ್ಟಗೊಳಿಸಲು ಪ್ರಯತ್ನಿಸುತ್ತೇನೆ.

## ಪ್ರಧಾನ ಕಾರ್ಯದರ್ಶಿಯ ವರದಿ

(ಜಮಾಅತೆ ಇಸ್ಲಾಮಿ ಸ್ಥಾಪನೆಗೊಂಡ ಬಳಿಕ ಜರಗಿದ ಪ್ರಥಮ ಅಖಿಲ ಭಾರತ ಸಮ್ಮೇಳನದಲ್ಲಿ ಪ್ರಧಾನ ಕಾರ್ಯದರ್ಶಿಯವರು ಸಮರ್ಪಿಸಿದ ವರದಿಯ ಆಯ್ದ ಭಾಗಗಳನ್ನು ಇಲ್ಲಿ ಕೊಡಲಾಗಿದೆ. 1945ರಲ್ಲಿ ಜಮಾಅತೆ ಇಸ್ಲಾಮಿ ಸ್ಥಿತಿಗತಿಗಳನ್ನು ಅದರಿಂದ ಗ್ರಹಿಸಬಹುದು.)

ಮಾನ್ಯ ಸದಸ್ಯರೇ, ಬಾಂಧವರೇ! ನಮ್ಮ ಜೀವನದ ಏಕೈಕ ಧ್ಯೇಯೋದ್ದೇಶವು ಇಹದಲ್ಲಿ ಅಲ್ಲಾಹನ ಧರ್ಮದ ಸ್ಥಾಪನೆಗಾಗಿ ಸೇವೆ ಸಲ್ಲಿಸಿ, ಪರಲೋಕದಲ್ಲಿ ಆತನ ಸಂಪ್ರೀತಿಗೆ ಪಾತ್ರರಾಗುವುದೆಂಬುದು ನಿಮಗೆಲ್ಲರಿಗೂ ಚೆನ್ನಾಗಿ ತಿಳಿದು ಬಂದಿದೆ. ಆದರೆ ಮಾನವನು ತನ್ನ ವೈಯಕ್ತಿಕ, ಸಾಮೂಹಿಕ, ನಾಗರಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯವೇ ಮುಂತಾದ ಜೀವನದ ಸಕಲ ವ್ಯವಹಾರಗಳನ್ನೂ ಆತನಿಗೆ ವಿಧೇಯಗೊಳಿಸಬೇಕು. ಇತರ ಮಾನವರು ಈ ಮಾರ್ಗವನ್ನು ಅನುಸರಿಸುವಂತೆ ಪ್ರೇರೇಪಿಸಬೇಕು. ಯಾಕೆಂದರೆ ಅದು ಅಲ್ಲಾಹನ ದಾಸ್ಯದ ಬೇಡಿಕೆಯಾಗಿದೆ. ಅದು ಇಹದಲ್ಲಿ ಶಾಂತಿ ಸಮಾಧಾನಗಳ ಸಂಸ್ಥಾಪನೆ ಮತ್ತು ಪರಲೋಕದಲ್ಲಿ ವಿಜಯ ಸೌಭಾಗ್ಯಗಳನ್ನು ಗಳಿಸುವ ಏಕೈಕ ಮಾರ್ಗವಾಗಿದೆ. ಇದನ್ನು ಇನ್ನೊಂದರ್ಥದಲ್ಲಿ ಹೇಳುವುದಿದ್ದರೆ ಆದಮ್‌ರಿಂದ(ಅ) ಆರಂಭಗೊಂಡು ಅಂತ್ಯ ಪ್ರವಾದಿ ಮುಹಮ್ಮದ್‌ರ(ಸ) ತನಕ ಬಂದ ಎಲ್ಲಾ ಪ್ರವಾದಿಗಳು ಬೋಧಿಸಿದ ಧ್ಯೇಯದ ಪ್ರಚಾರಕ್ಕಾಗಿ ನಾವು ರಂಗಕ್ಕಿಳಿದಿದ್ದೇವೆ. ಹೊಸತಿನ ಭ್ರಮೆ ಅಥವಾ ಹೊಸ ಸಂಘಟನೆಯನ್ನು ನಡೆಸಬೇಕೆಂಬ ಭಾವನೆಯಿಂದ ನಾವು ಈ ಮಾರ್ಗವನ್ನು ಅವಲಂಬಿಸಿಲ್ಲ. ಅಲ್ಲಾಹನ ದಿವ್ಯತ್ವ (ಉಲೂಹಿಯ್ಯತ್), ಮುಹಮ್ಮದ್‌ರ(ಸ) ಪ್ರವಾದಿತ್ವವನ್ನು (ರಿಸಾಲತ್) ಒಪ್ಪಿಕೊಳ್ಳುವುದರ ತಾತ್ಪರ್ಯವೇ ಅದನ್ನು ಕಾರ್ಯರೂಪದಲ್ಲಿ ಸಾಕ್ಷಾತ್ಕರಿಸಲು ಅದರಂತೆ ನಡೆಯುವುದಾಗಿದೆ. ಪವಿತ್ರ ವಾಕ್ಯವನ್ನು ಅಂಗೀಕರಿಸಿಯೂ 'ಇಕಾಮತುದ್ದೀನ್'ನ ಪ್ರಯತ್ನಗಳಿಂದ ಜಾರಿಕೊಳ್ಳುವುದೆಂಬುದು ಪರಸ್ಪರ ವಿರೋಧಾಭಾಸವಾಗುವುದು.

ಈ ಸಂದೇಶವನ್ನು ಸಾಕ್ಷಾತ್ಕರಿಸಿ, ಅದನ್ನು ಇತರ ಸಹೋದರರಿಗೆ ತಿಳಿಸಿ, ಅದರತ್ತ ಆಕರ್ಷಿತರಾದವರನ್ನು ಸಂಘಟಿಸುವುದಕ್ಕೆ ಈ ಸಂದೇಶದ ನೈಜ ವಾಹಕರಾಗಿದ್ದ ಪ್ರವಾದಿಗಳು ಅಲ್ಲಾಹನ ನಿರ್ದೇಶದಂತೆ ಅಂಗೀಕರಿಸಿದ ಮಾರ್ಗವನ್ನೇ ಅನುಸರಿಸಬೇಕಾಗುವುದು. ಅದೇ ಸೂಕ್ತವಾದ ಮಾರ್ಗವಾಗಿದೆ. ಆ ಮಾರ್ಗವು ಸದಾಕಾಲವೂ ಒಂದೇ ರೂಪದಲ್ಲಿತ್ತೆಂದು ಕುರ್‌ಆನ್ ಸ್ಪಷ್ಟ ಪಡಿಸುತ್ತದೆ. ಆದ್ದರಿಂದಲೇ ಪ್ರಸ್ತುತ ಕಾರ್ಯ ವಿಧಾನವನ್ನೇ ನಾವು ಅಂಗೀಕರಿಸಿದ್ದೇವೆ. ಈ ಸಂದೇಶ ಪ್ರಚಾರ ಮತ್ತು ಕಾರ್ಯ ವಿಧಾನದ ಹೊರತು ಇತರ ಪ್ರಚಾರ ಮತ್ತು ಕಾರ್ಯ ವಿಧಾನಗಳೆಲ್ಲವೂ ಸಂಪೂರ್ಣ ತಪ್ಪೆಂದು ನಾವು ನಂಬುತ್ತೇವೆ. ನಾವು ನಮ್ಮ ಕರ್ಮಗಳ ಹಿನ್ನೆಲೆಯಲ್ಲಿ ಉತ್ಕೃಷ್ಟ ಮತ್ತು ಉನ್ನತ ಮಟ್ಟವನ್ನು ತಲಪಿದ್ದೇವೆಂದು

ವಾದಿಸುವುದಿಲ್ಲ. ಆದರೂ ನಮ್ಮ ಪ್ರಚಾರ ಮತ್ತು ಅದರ ಧ್ಯೇಯ ಧೋರಣೆ ಹಾಗೂ ಕಾರ್ಯ ವಿಧಾನಗಳಲ್ಲಿ ಪ್ರವಾದಿಗಳನ್ನು ಅನುಸರಿಸಿ ಅವರನ್ನು ಪ್ರತಿನಿಧಿಸುತ್ತೇವೆಂಬ ನಮ್ಮ ವಾದವು ಒಂದು ವಾಸ್ತವಿಕತೆಯಾಗಿದೆ. ನಮ್ಮ ವಿವೇಕ ಜ್ಞಾನದಂತೆ ಎಲ್ಲಾ ಸಂದರ್ಭ ಮತ್ತು ಸಮಸ್ಯೆಗಳಲ್ಲಿಯೂ ಕುರ್‌ಆನ್ ಮತ್ತು ಸುನ್ನತ್‌ಗಳತ್ತ ಮರಳುವ ನೀತಿಯನ್ನೇ ನಾವು ಅಂಗೀಕರಿಸಿದ್ದೇವೆ. ನಾವು ಅವುಗಳೊಂದಿಗೆ ಹೊಂದಿಕೊಳ್ಳುವುದಕ್ಕೆ ಮಾನವ ಸಹಜವಾದ ದೌರ್ಬಲ್ಯ, ಅಜ್ಞಾನ, ಅನುಭವದ ಕೊರತೆ ಇತ್ಯಾದಿಗಳು ಒಂದು ವೇಳೆ ಕಾರಣವಾಗಬಹುದಾದರೂ ಹಠ, ಮೊಂಡುತನ, ಪಕ್ಷಪಾತ, ಅಲ್ಲಾಹ್ ಮತ್ತು ರಸೂಲರ ಹೊರತಾದವರೊಂದಿಗಿನ ಭಯಭಕ್ತಿಗಳು ಎಂದಿಗೂ ಕಾರಣವಾಗಲಾರವು. ಆದ್ದರಿಂದ ನಮ್ಮಲ್ಲೇನಾದರೂ ತಪ್ಪು ಅಥವಾ ಆಕ್ಷೇಪಾರ್ಹ ವಿಷಯಗಳು ಕಂಡು ಬಂದರೆ, ಅದನ್ನು ಎತ್ತಿ ಹಿಡಿದು ಅತಿಶಯೋಕ್ತಗೊಳಿಸಿ ಪ್ರಚಾರ ಮಾಡಿ ನಿಂದಿಸುವ ಬದಲಾಗಿ ಸಮಾಧಾನದಿಂದ ನಿಮ್ಮ ಈ ಸಹೋದರರಿಗೆ ತಿಳಿಯ ಪಡಿಸಿ ಅದನ್ನು ದೂರೀಕರಿಸಲು ಪ್ರಯತ್ನಿಸಬೇಕಾದುದು ಜಮಾಅತ್‌ನ ಒಳಹೊರಗುಗಳಲ್ಲಿರುವ ಎಲ್ಲರ ಕರ್ತವ್ಯವಾಗಿದೆ. 'ಮುಸ್ಲಿಮರು ಪರಸ್ಪರ ಕನ್ನಡಿಯಂತೆ' ಎಂಬ ಮಾತಿನ ತಾತ್ಪರ್ಯವೂ ಅದೇ ಅಲ್ಲವೇ?

ನಮ್ಮ ಈ ಸಂದೇಶ ಪ್ರಚಾರ ಮತ್ತು ಕಾರ್ಯ ವಿಧಾನದಲ್ಲಿ ಪ್ರದರ್ಶನ ಮತ್ತು ಆಡಂಬರಗಳಿಗೆ ಯಾವ ಸ್ಥಾನವೂ ಇಲ್ಲ. ಅದು ಸಹಜವೂ ಹೌದು. ಯಾಕೆಂದರೆ ಹುಳಿಯು ಹಾಲನ್ನು ಕೆಡಿಸುವಂತೆ ಅದು ಸತ್ಕರ್ಮಗಳನ್ನು ನಿಷ್ಫಲಗೊಳಿಸುತ್ತದೆ. ಇತರರಿಗೆ ತೋರಿಸಲಿಕ್ಕೆಂಬ ನೆಲೆಯಲ್ಲಿ ಸೇವಾ ನಿರತರಾಗುವ ಭಾವನೆಗಳಿಂದ ಅಲ್ಲಾಹನು ನಮ್ಮನ್ನು ರಕ್ಷಿಸಲೆಂದು ನಾವು ಪ್ರಾರ್ಥಿಸುತ್ತೇವೆ. ಇಂದು ಯಾವುದೇ ಸಂಘಟನೆಗೆ- ಆಂದೋಲನಗಳ ಸ್ಥಾಪನೆಗೆ- ಪ್ರದರ್ಶನ, ಆಡಂಬರ, ಹೊಗಳಿಕೆ ಇತ್ಯಾದಿಗಳು ಅನಿವಾರ್ಯ ಉಪಾಧಿಗಳಾಗಿ ಪರಿಣಮಿಸಿವೆ. ಪರಿಸರದ ಸರ್ವ ವ್ಯಾಪಕ ಒತ್ತಡವು ನಮ್ಮ ಬಾಂಧವರ ಮೇಲೆಯೂ ಪರಿಣಾಮ ಬೀರಬಹುದು. ಆದ್ದರಿಂದ ಈ ಬಗ್ಗೆ ನಾವು ತುಂಬಾ ಜಾಗರೂಕರಾಗಿರಬೇಕು. ನಮ್ಮ ಸಭೆಯ ವರದಿಗಳನ್ನು ಅತ್ಯಗತ್ಯವಿದ್ದರೆ ಮಾತ್ರ ಪ್ರಕಟಿಸಲಾಗುತ್ತದೆ.

ಆದರೆ, ಜಮಾಅತ್‌ನ ಸದಸ್ಯರು ಮತ್ತು ಹಿತೈಷಿಗಳು, ಆಂದೋಲನದ ಪ್ರಗತಿಯ ಕುರಿತು ಆಗಾಗ ತಿಳಿದು ಕೊಳ್ಳದಿದ್ದರೆ ಸಾಮಾನ್ಯವಾಗಿ ಒಂದು ಜಡತೆ ಮತ್ತು ನಿರಾಶಾಭಾವನೆ ಮೂಡುವ ಸಾಧ್ಯತೆಯಿದೆ. ಜಮಾಅತ್ ಮತ್ತು ಅದರ ಸದಸ್ಯರು ಪ್ರಾಥಮಿಕ ಹಂತದಲ್ಲಿರುವ ಇಂದಿನ ವಾತಾವರಣದಲ್ಲಿ ದುಷ್ಟ ಪದ್ಧತಿಯು ತನ್ನೆಲ್ಲಾ ಸ್ವೇಚ್ಛಾಧಿಕಾರಗಳೊಂದಿಗೆ ಲೋಕವನ್ನು ಆವರಿಸಿಕೊಂಡಿವೆ. ಲೋಕ ವ್ಯಾಪಿಯಾಗಿರುವ ಈ ಅಂಧಕಾರದಲ್ಲಿ ಉತ್ತಮ ಸಮುದಾಯದ ಹಾಗೂ ಅಲ್ಲಾಹನ ಸಾಕ್ಷಿಗಳ ಕರ್ತವ್ಯವನ್ನು ನಿರ್ವಹಿಸಬೇಕಾಗಿದ್ದ ನಮ್ಮ ಬೆರಳೆಣಿಕೆಯಷ್ಟಿರುವ ಹಾಗೂ ವಿಚ್ಛಿದ್ರವಾಗಿರುವ ವಿದ್ವಾಂಸ ವರ್ಗವು ನಿಷ್ಕ್ರಿಯವಾಗಿದೆ. ಅವರು ಸತ್ಯ ಪ್ರಚಾರದ ಕರ್ತವ್ಯವನ್ನು ನಿರ್ವಹಿಸುತ್ತಿಲ್ಲ. ಮಾತ್ರವಲ್ಲ ನೀಚ ಹಾಗೂ ದುರಾಚಾರಿಗಳ ಮುಂದಾಳ್ತನದಲ್ಲಿ ತಮ್ಮ ಜೀವನ, ಧನ ಮತ್ತು ವಿಚಾರಗಳನ್ನು ವ್ಯರ್ಥಗೊಳಿಸುತ್ತಿದ್ದಾರೆ. ಮುಸ್ಲಿಮ್ ಜನ ಸಾಮಾನ್ಯರ ಪಥಭ್ರಷ್ಟತೆ ಮತ್ತು ದುರಾಚಾರಗಳ ಭಾರವನ್ನು ತಮ್ಮ ತಲೆಯ ಮೇಲೆ ಹೊತ್ತು ಕೊಂಡಿದ್ದಾರೆ.

ಸಮ್ಮೇಳನ ವೇಳೆಯಲ್ಲಿ ಸದಸ್ಯರ ಹಾಗೂ ಹಿತೈಷಿಗಳ ಚಟುವಟಿಕೆಗಳ ವಿವರವು ಕೇಂದ್ರದಿಂದ ದೂರವಿರುವವರಿಗೆ ತಿಳಿಯುವುದರೊಂದಿಗೆ, ಸದಸ್ಯರ ಹಾಗೂ ಹಿತೈಷಿಗಳ ಚಟುವಟಿಕೆಗಳ ಬಗ್ಗೆ ಸಮೀಕ್ಷೆ ನಡೆಸಿ ಅವರ ಉತ್ತಮ ಸಲಹೆಗಳನ್ನು ಸ್ವೀಕರಿಸುವ ಅವಕಾಶವೂ ದೊರೆಯುತ್ತದೆ.

## ಇಸ್ಲಾಮೀ ಪ್ರಚಾರ ಮತ್ತು ಅದರ ಕಾರ್ಯವಿಧಾನ

ಕಾರ್ಯದರ್ಶಿಯವರು ವರದಿ ಸಲ್ಲಿಸಿದ ಬಳಿಕ ಜಮಾಅತ್ ಅಧ್ಯಕ್ಷರು "ಇಸ್ಲಾಮೀ ಪ್ರಚಾರ ಮತ್ತು ಅದರ ಕಾರ್ಯ ವಿಧಾನ" ಎಂಬ ಕುರಿತು ಭಾಷಣ ಮಾಡಿದರು:

ಬಾಂಧವರೇ! ಇಂದಿನ ವಾತಾವರಣದಲ್ಲಿ ಅತ್ಯಂತ ಒಣ ಪ್ರಚಾರ ಮತ್ತು ನೀರಸ ಕಾರ್ಯ ವಿಧಾನದಿಂದ ಜನರಲ್ಲಿ ಅಭಿರುಚಿ ಮತ್ತು ಆಸಕ್ತಿ ಹುಟ್ಟಿಸುವ ನಿಟ್ಟಿನಲ್ಲಿ ನಮ್ಮ ನಿರೀಕ್ಷೆಗೂ ಮೀರಿ ಯಶಸ್ಸು ದೊರಕಿಸಿ ಕೊಟ್ಟ ಅಲ್ಲಾಹನನ್ನು ಪ್ರಥಮವಾಗಿ ಸ್ತುತಿಸುತ್ತೇನೆ. ಇಂದಿನ ಪ್ರಚಾರ ಮಾರುಕಟ್ಟೆಯಲ್ಲಿ ನಾವು ವಹಿಸಿಕೊಂಡಿರುವುದಕ್ಕಿಂತ ನಿಕೃಷ್ಟ ಪ್ರಚಾರ ಸರಕು ಇರಲಿಲ್ಲ. ಅದೇ ರೀತಿ ನಾವು ಅಂಗೀಕರಿಸಿರುವ ಕಾರ್ಯ ವಿಧಾನದಲ್ಲಿಯೂ ಇಂದು ಇತರ ಸಂದೇಶಗಳ ಪ್ರಚಾರಕ್ಕಾಗಿ ಬಳಸಲಾಗುತ್ತಿರುವ ಯಾವ ಜನಾಕರ್ಷಕ ವಸ್ತುವೂ ಇಲ್ಲ. ಬೃಹತ್ ಸಭೆಗಳು, ಮೆರವಣಿಗೆಗಳು, ಘೋಷಣೆಗಳು, ಧ್ವಜಗಳ ಹಾರಾಟ, ಪ್ರದರ್ಶನ, ಕಿಡಿಕಾರುವ ಭಾಷಣ ಇತ್ಯಾದಿ ಕಾರ್ಯಕ್ರಮಗಳಾವುವೂ ಇರಲಿಲ್ಲ. ಆದರೂ ಅಲ್ಲಾಹನ ದಾಸರು ನಮ್ಮ ಸಂದೇಶ ಪ್ರಚಾರದತ್ತ ಹೆಚ್ಚು ಆಕರ್ಷಿತರಾಗುತ್ತಿದ್ದಾರೆ. ಮನೋರಂಜನೆಗಳಿಲ್ಲದಿದ್ದರೂ ಆಮಂತ್ರಣವಿಲ್ಲದೆಯೇ ದೂರದ ಪ್ರದೇಶಗಳಿಂದ ಬಂದು ನಮ್ಮ ಸಮ್ಮೇಳನಗಳಲ್ಲಿ ಭಾಗವಹಿಸುತ್ತಿದ್ದಾರೆ. ಇದನ್ನು ನೋಡಿ ನಮ್ಮ ಹೃದಯವು ಅಲ್ಲಾಹನ ಕೃತಜ್ಞತಾ ಭಾವದಿಂದ ತುಂಬಿದೆ.

ನಮ್ಮ ಈ ಸಮ್ಮೇಳನದ ಕುರಿತು 'ಕೌಸರ್' ಪತ್ರಿಕೆಯಲ್ಲಿ ಒಮ್ಮೆ ಮಾತ್ರ ಜಾಹಿರಾತು ನೀಡಿದ್ದೆವು. ಆ ಬಳಿಕ ಯಾವ ವಿಶೇಷ ಪ್ರಚಾರವನ್ನೂ ಮಾಡಿರಲಿಲ್ಲ. ಆದರೂ ದೇಶದ ನಾನಾ ಭಾಗಗಳ ಸಾವಿರ ಮಂದಿ ಇಲ್ಲಿ ಬಂದು ಸೇರಿದ್ದಾರೆ. ಇದು ಕೇವಲ ಸತ್ಯದ ಆಕರ್ಷಣೆಯಾಗಿದೆ. ಸತ್ಯದ ಹೊರತು ಜನರನ್ನು ಆಕರ್ಷಿಸುವ ಇನ್ನಾವುದೂ ನಮ್ಮಲ್ಲಿಲ್ಲ.

**ಸಮ್ಮೇಳನಗಳ ಉದ್ದೇಶ:**

ನಮ್ಮ ಸಮ್ಮೇಳನಗಳ ಉದ್ದೇಶವು ಪ್ರದರ್ಶನ, ಗದ್ದಲಗಳಿಂದ ಜನರನ್ನು ನಮ್ಮತ್ತ ಆಕರ್ಷಿಸುವುದಲ್ಲ, ಬದಲಾಗಿ ಸದಸ್ಯರು ಪರಸ್ಪರ ಪರಿಚಿತಗೊಂಡು ಸಂಪರ್ಕ ಬೆಳೆಸುವುದು, ಪರಸ್ಪರ ಸಮಾಲೋಚಿಸಿ ಒಗ್ಗಟ್ಟಿನಿಂದ ಕೆಲಸ ಮಾಡುವ ಉತ್ತಮ ವಿಧಾನಗಳನ್ನು ಕಂಡು ಹಿಡಿಯುವುದು ನಮ್ಮ ಚಟುವಟಿಕೆಗಳ ಮುನ್ನಡೆ ಹಾಗೂ ಅಡ್ಡಿ ಆತಂಕಗಳ ನಿವಾರಣೋಪಾಯಗಳ ಬಗ್ಗೆ ಆಲೋಚಿಸುವುದು. ಅದಲ್ಲದೆ, ನಮ್ಮ ಚಟುವಟಿಕೆಗಳ ಸಮೀಕ್ಷೆ ನಡೆಸಿ ಕುಂದು ಕೊರತೆಗಳನ್ನು ನೀಗಿಸುವುದು ಇತ್ಯಾದಿಗಳಿಗಾಗಿ ಈ ಸಮ್ಮೇಳನಗಳಲ್ಲಿ ನಮಗೆ ಅವಕಾಶ ದೊರೆಯುತ್ತದೆ. ನಮ್ಮೊಂದಿಗೆ ಸಹಮತವಿರುವವರಿಗೂ ನಮ್ಮ ಸಂದೇಶಗಳಿಂದ ಆಕರ್ಷಿತರಾಗಿರುವವರಿಗೂ ನಮ್ಮ ಚಟುವಟಿಕೆಗಳ ಬಗ್ಗೆ ಸಂದೇಹ ಮತ್ತು ತಪ್ಪು

ತಿಳುವಳಿಕೆಗಳಿರುವವರಿಗೂ ನಮ್ಮ ಚಟುವಟಿಕೆಯನ್ನು ನೇರವಾಗಿ ತಿಳಿಯಲು ಇದರಿಂದ ಸಾಧ್ಯವಾಗುವುದು. ನಮ್ಮ ಮಾರ್ಗವು ವಾಸ್ತವದಲ್ಲಿ ಸತ್ಯವಾಗಿದೆಯೆಂದು ಈ ಮೂಲಕ ಅವರಿಗೆ ವ್ಯಕ್ತವಾದರೆ ಅವರ ಸಹಕಾರವೂ ನಮಗೆ ದೊರೆಯಬಹುದು. ಅನೇಕ ತಪ್ಪು ತಿಳುವಳಿಕೆಗಳು ಸಂಪರ್ಕವಿಲ್ಲದ್ದರಿಂದಲೇ ಜನ್ಮ ತಾಳುತ್ತವೆ. ಪರಸ್ಪರ ಸಂಬಂಧ, ಭಾಷಣಗಳಿಂದಲೇ ಅಂತಹ ತಪ್ಪು ತಿಳುವಳಿಕೆಗಳನ್ನು ನೀಗಿಸಬಹುದು. ತಮ್ಮ ಅಮೂಲ್ಯ ಸಮಯ ಮತ್ತು ಹಣವನ್ನು ವ್ಯಯಿಸಿ ಆ ಉದ್ದೇಶದಿಂದ ಇಲ್ಲಿಗಾಗಮಿಸಿರುವ ಮಹನೀಯರೆಲ್ಲರಿಗೂ ನಾವು ಕೃತಜ್ಞತೆ ಸಲ್ಲಿಸುತ್ತೇವೆ. ಅವರ ಸತ್ಯಾನ್ವೇಷ ಪ್ರತಿಜ್ಞೆಯನ್ನು ನಾವು ಗೌರವಿಸುತ್ತೇವೆ. ಅವರನ್ನು ಇಲ್ಲಿಗೆ ಲೌಕಿಕ ಸುಖೋಪಭೋಗ ವಸ್ತುಗಳು ಆಕರ್ಷಿಸಿಲ್ಲ. ಅಲ್ಲಾಹನ ಕೆಲವು ದಾಸರು ಆತನ ಹೆಸರಿನಲ್ಲಿ ಒಂದು ಕಾರ್ಯಕ್ರಮವನ್ನು ಆರಂಭಿಸಿದ್ದಾರೆ. ಅದನ್ನು ತಿಳಿದುಕೊಳ್ಳೋಣವೆಂಬ ಅವರ ಈ ಹಂಬಲವು ಒಂದು ಪುಣ್ಯ ಕರ್ಮವೆಂಬುದರಲ್ಲಿ ಸಂದೇಹವಿಲ್ಲ. ಅವರ ಈ ಸತ್ಯಾನ್ವೇಷಣಾ ಮನೋಭಾವವು ನಿಷ್ಕಳಂಕವಾಗಿದ್ದರೆ ಅಲ್ಲಾಹನು ಅದನ್ನೆಂದೂ ನಿಷ್ಫಲಗೊಳಿಸಲಾರನು. ಸನ್ಮಾರ್ಗದ ದೃಷ್ಟಾಂತಗಳನ್ನು ಅಲ್ಲಾಹನು ಅವರಿಗೆ ಖಂಡಿತವಾಗಿಯೂ ತೋರಿಸುವನು.

"ನಮ್ಮ ಸಂದೇಶ ಮತ್ತು ಧ್ಯೇಯಗಳೇನು? ಯಾವ ವಿಧಾನದಿಂದ ನಾವು ಅದನ್ನು ಸಾಧಿಸ ಬಯಸುತ್ತೇವೆ" ಎಂಬಿತ್ಯಾದಿಗಳನ್ನು ತಿಳಿಯಬಯಸುವ ಅನೇಕ ಮಂದಿ ಇಲ್ಲಿಗೆ ಆಗಮಿಸಿದ್ದಾರೆ. ಆದ್ದರಿಂದ ಪ್ರಥಮವಾಗಿ ಆ ವಿಷಯಗಳನ್ನು ನಾನು ಇಲ್ಲಿ ವಿವರಿಸಬಯಸುತ್ತೇನೆ.

## ನಮ್ಮ ಸಂದೇಶವೇನು?

ಜಮಾಅತೆ ಇಸ್ಲಾಮಿಯ ಸಂದೇಶವನ್ನು ಸಾಮಾನ್ಯವಾಗಿ "ಹುಕೂಮತೆ ಇಲಾಹಿ" (ದೇವಾಡಳಿತ) ಸ್ಥಾಪನೆಯ ಸಂದೇಶವೆಂದು ಹೇಳಲಾಗುತ್ತಿದೆ. ಒಂದೆಡೆ "ಹುಕೂಮತೆ ಇಲಾಹಿ" ಎಂಬ ಪದ ಪ್ರಯೋಗವೇ ಕೆಲವು ತಪ್ಪು ತಿಳುವಳಿಕೆಗಳಿಗೆ ಕಾರಣವಾಗಿದೆ. ಇನ್ನೊಂದೆಡೆ ತಪ್ಪು ತಿಳುವಳಿಕೆಗಳ ಪ್ರಚಾರೋಪಾಧಿಯಾಗಿ ಅದನ್ನು ಬಳಸಲಾಗುತ್ತಿದೆ. "ಹುಕೂಮತೆ ಇಲಾಹಿ" ಎಂದರೆ ಕೇವಲ ಒಂದು ರಾಜಕೀಯ ವ್ಯವಸ್ಥೆ- ಇಂದಿನ ರಾಜಕೀಯ ವ್ಯವಸ್ಥೆ-ಯ ಬದಲಿಗೆ ಈ ವಿಶಿಷ್ಟ ರಾಜಕೀಯ ವ್ಯವಸ್ಥೆಯನ್ನು ಸ್ಥಾಪಿಸುವ ಹೊರತು ಬೇರೆ ಉದ್ದೇಶ ನಮಗಿಲ್ಲ ಎಂಬುದಾಗಿ ಕೆಲವರು ತಪ್ಪು ತಿಳಿದಿದ್ದಾರೆ ಮತ್ತು ಹಾಗೆಯೇ ಪ್ರಚಾರ ಮಾಡುತ್ತಿದ್ದಾರೆ. ತರುವಾಯ ಈ ರಾಜಕೀಯ ವ್ಯವಸ್ಥೆಯ ಸ್ಥಾಪನೆಗಾಗಿ ಪ್ರಯತ್ನಿಸಿದ ಸಂಘಟನೆಯಲ್ಲಿರುವ ಮುಸ್ಲಿಮರೇ ಆ ರಾಜಕೀಯ ವ್ಯವಸ್ಥೆಯನ್ನು ನಡೆಸುವರಲ್ಲವೇ? ಹೀಗೆ, "ಹುಕೂಮತೆ ಇಲಾಹಿ" ಎಂಬ ಪದಕ್ಕೆ ಆ ಅರ್ಥ ಕಲ್ಪಿಸುವುದರಿಂದ ನಾವು ಕೇವಲ ಆಡಳಿತಾಕಾಂಕ್ಷಿಗಳೆಂಬ ಭಾವನೆ ಅದರಿಂದ ಮೂಡುತ್ತದೆ ಅಥವಾ ಅದನ್ನು ಹೊರಹೊಮ್ಮಿಸಲಾಗುತ್ತದೆ. ತರುವಾಯ ಆ ಬಗ್ಗೆ ಸುದೀರ್ಘ ತಾತ್ವಿಕ ಭಾಷಣದ ಆರಂಭ. ನಮ್ಮೊಡನೆ ಈ ರೀತಿ ಉಪದೇಶಿಸುತ್ತಾರೆ: "ಅಯ್ಯೋ ನಿಮ್ಮ ಅವಸ್ಥೆಯೇ ? ನಿಮ್ಮ ಧ್ಯೇಯವು ಸಂಪೂರ್ಣ ಲೌಕಿಕವಾಗಿ ಬಿಟ್ಟಿತಲ್ಲ. ವಾಸ್ತವದಲ್ಲಿ ಮುಸ್ಲಿಮರ ಧ್ಯೇಯವು ಕೇವಲ ಧರ್ಮ ಮತ್ತು ಪರಲೋಕವಾಗಿರಬೇಕಿತ್ತು. ಆಡಳಿತವು ಮುಸ್ಲಿಮರಿಗೆ ಅಪೇಕ್ಷಣೀಯವಲ್ಲ. ಅದು

ಧರ್ಮ ನಿಷ್ಠೆಯಿಂದೊಡಗೂಡಿದ ಪಾವನ ಜೀವನದಿಂದ ಸಂತುಷ್ಟನಾಗಿ ದೇವನೇ ದಯ ಪಾಲಿಸುವ ಒಂದು ಕೊಡುಗೆಯಾಗಿದೆ.' ಕೆಲವೆಡೆಗಳಲ್ಲಿ ಈ ತಪ್ಪು ತಿಳುವಳಿಕೆಯು ಕೇವಲ ಅಜ್ಞಾನದಿಂದಾಗಿ ಹುಟ್ಟಿದೆ. ಇನ್ನು ಕೆಲವೆಡೆ ಅಲ್ಲಾಹನ ದಾಸರ ಒಂದು ದೊಡ್ಡ ವಿಭಾಗದಲ್ಲಿ ಈ ತಪ್ಪು ತಿಳುವಳಿಕೆಯನ್ನು ಹರಡಿಸಿ ಸ್ವಾರ್ಥ ಸಾಧಿಸಲಿಕ್ಕಾಗಿ ಉದ್ದೇಶಪೂರ್ವಕವಾಗಿ ಈ ಕುತಂತ್ರವನ್ನೆಸಗಲಾಗುತ್ತದೆ. ಆದರೆ ಒಟ್ಟು ಮನಸ್ಸಿನಿಂದ ನಮ್ಮ ಸಾಹಿತ್ಯಗಳನ್ನು ಓದುವವರಿಗೆ ಸತ್ಯ ಸಂಗತಿಯು ವ್ಯಕ್ತವಾಗದಿರದು. ನಮ್ಮ ಧ್ಯೇಯವು ಕೇವಲ ಒಂದು ರಾಜಕೀಯ ವ್ಯವಸ್ಥೆಯನ್ನು ಸ್ಥಾಪಿಸುವುದಲ್ಲ, ಬದಲಾಗಿ ಮಾನವನ ವೈಯಕ್ತಿಕ ಮತ್ತು ಸಾಮೂಹಿಕ ಜೀವನದಲ್ಲಿ ಯಾವ ಸಾರ್ವತ್ರಿಕ ಬದಲಾವಣೆಯನ್ನು ಬಯಸುತ್ತಿದೆಯೋ, ಯಾವ ಉದ್ದೇಶ ಸಾಧನೆಗಾಗಿ ಅಲ್ಲಾಹನ ಪ್ರವಾದಿಗಳು ನೇಮಕಗೊಂಡರೋ ಯಾವ ಸಂದೇಶ ಪ್ರಚಾರ ಮತ್ತು ಪರಿಶ್ರಮಗಳಿಗಾಗಿ ಪ್ರವಾದಿಗಳ ನಾಯಕತ್ವ ಮತ್ತು ಮಾರ್ಗದರ್ಶನದಲ್ಲಿ ಸ್ಥಿರವಾಗಿದ್ದ ಮುಸ್ಲಿಮರೆಂಬ ಜನ ವಿಭಾಗವು ಎಲ್ಲಾ ಕಾಲದಲ್ಲಿಯೂ ಜನ್ಮ ತಾಳಿದ್ದಿತೋ, ಆ ಶಾಶ್ವತ, ಸಂಪೂರ್ಣ ಮತ್ತು ಸಮಗ್ರ ಬದಲಾವಣೆಯೇ ನಮ್ಮ ಧ್ಯೇಯ.

## ಇಸ್ಲಾಮಿ ಸಂದೇಶದ ಮೂರಂಶಗಳು

ನಾವು ನಮ್ಮ ಸಂದೇಶವನ್ನು ಸ್ಪಷ್ಟ ಮತ್ತು ಸಂಕ್ಷಿಪ್ತವಾಗಿ ವಿವರಿಸುವುದಿದ್ದರೆ ಅದನ್ನು ಮೂರು ಅಂಶಗಳಲ್ಲಿ ವಿವರಿಸಬಹುದು.

1. ಸಾರ್ವತ್ರಿಕವಾಗಿ ಇಡೀ ಮಾನವಕುಲವನ್ನೂ ಮುಖ್ಯವಾಗಿ ಮೊದಲೇ ಮುಸ್ಲಿಮರಾಗಿರುವವರನ್ನೂ ನಾವು ಅಲ್ಲಾಹನ ದಾಸ್ಯದೆಡೆಗೆ ಆಹ್ವಾನಿಸುತ್ತೇವೆ.

2. ಇಸ್ಲಾಮನ್ನು ಒಪ್ಪುವ ಮತ್ತು ಅದನ್ನು ಅಂಗೀಕರಿಸಿದವರೆಂದು ವಾದಿಸುವ ಜನರೊಂದಿಗೆ ನಮ್ಮ ವಿನಂತಿಯೇನೆಂದರೆ ಅವರು ತಮ್ಮ ಜೀವನವನ್ನು ನಿಫಾಕ್ (ಕಪಟತೆ) ಮತ್ತು ತವಾಫ್ (ವೈರುಧ್ಯ) ಗಳಿಂದ ಪವಿತ್ರಗೊಳಿಸಬೇಕು. ನಿಷ್ಕಳಂಕ ಮತ್ತು ನಿಸ್ವಾರ್ಥ ಮುಸ್ಲಿಮರಾಗಬೇಕು. ಇಸ್ಲಾಮಿನ ನೈಜ ವರ್ಣವನ್ನು ಸ್ವೀಕರಿಸಿ ಏಕವರ್ಣವಾಗಿ ಮಾರ್ಪಡಬೇಕು.

3. ಮಿಥ್ಯ ಸಿದ್ಧಾಂತ, ದುರಾಚಾರ ಮತ್ತು ಅಕ್ರಮಗಳ ನಾಯಕತ್ವ, ಮಾರ್ಗದರ್ಶನ ಮತ್ತು ಅಧಿಕಾರಾಡಳಿತಗಳಿಂದ ಇಂದು ನಡೆಯುತ್ತಿರುವ ಜೀವನ ವ್ಯವಸ್ಥೆಯನ್ನೂ, ಅಲ್ಲಾಹನನ್ನೂ ಮರೆತು, ಆತನನ್ನು ಧಿಕ್ಕರಿಸಿದವರ ಸ್ವಾಧೀನದಲ್ಲಿರುವ ನಿಯಂತ್ರಣ ಶಕ್ತಿಗಳನ್ನೂ ಆಮೂಲಾಗ್ರವಾಗಿ ಬದಲಾಯಿಸಬೇಕೆಂದು ನಾವು ಪ್ರಬಲವಾಗಿ ಪ್ರತಿಪಾದಿಸುತ್ತೇವೆ. ನಾಯಕತ್ವ ಮತ್ತು ಮಾರ್ಗದರ್ಶನಗಳು, ಅಲ್ಲಾಹನಲ್ಲಿ ವಿಶ್ವಾಸವಿರಿಸುವ ತತ್ವಾದರ್ಶ ಮತ್ತು ಕರ್ಮ ನಿಷ್ಠರಾಗಿರುವ ಆತನ ದಾಸ್ಯವನ್ನು ಅಂಗೀಕರಿಸಿರುವ ಸಜ್ಜನರಿಗೆ ವರ್ಗಾಯಿಸಲ್ಪಡಬೇಕೆಂದು ನಾವು ಬಯಸುತ್ತೇವೆ.

"ಈ ಮೂರು ಅಂಶಗಳೂ ಸ್ಪಷ್ಟವಾಗಿವೆ. ಆದರೂ ಹಲವು ಸಮಯದಿಂದೀಚೆಗೆ ಅದರ ಮೇಲೆ ತಪ್ಪು ತಿಳುವಳಿಕೆ ಮತ್ತು ಅಶ್ರದ್ಧೆಗಳ ಜಾಲವು ಕವಿದಿದೆ. ಆದ್ದರಿಂದ ಅದೃಷ್ಟವಶಾತ್ ಇಂದು ಮುಸ್ಲಿಮೇತರರಂತೆಯೇ ಮುಸ್ಲಿಮರಿಗೂ ಆ ಬಗ್ಗೆ ವಿವರವಾಗಿ ಮನವರಿಕೆ ಮಾಡಿಕೊಡುವ ಅಗತ್ಯ ಕಂಡು ಬರುತ್ತಿದೆ."

## ಅಲ್ಲಾಹನ ದಾಸ್ಯದ ನೈಜ ಉದ್ದೇಶ

ಅಲ್ಲಾಹನನ್ನು ಕೇವಲ ಅಲ್ಲಾಹನೆಂದೂ ನಾವು ಆತನ ದಾಸರೆಂದೂ ಒಪ್ಪಿ ಬಿಟ್ಟರಾಯಿತು. ಆ ಬಳಿಕ ಜೀವನದ ನೈತಿಕ, ಸಾಮಾಜಿಕ ವ್ಯಾವಹಾರಿಕ ಇತ್ಯಾದಿ ಎಲ್ಲಾ ರಂಗಗಳಲ್ಲಿಯೂ ನಾವು ಆತನ ದಾಸರೆಂಬುದನ್ನು ಒಪ್ಪದ ರೀತಿಯಲ್ಲಿ ವರ್ತಿಸಬಹುದೆಂಬುದು ಅಲ್ಲಾಹನ ದಾಸ್ಯದೆಡೆಗೆ ಅಹ್ವಾನಿಸುವುದರ ಉದ್ದೇಶವಲ್ಲ. ಅದೇ ರೀತಿ ತಾತ್ವಿಕವಾಗಿ ಅಲ್ಲಾಹನು ಸೃಷ್ಟಿಕರ್ತ, ಅನ್ನದಾತ ಮತ್ತು ಆರಾಧ್ಯನೆಂದು ಒಪ್ಪಿಕೊಂಡರೂ ನಿಜ ಜೀವನದಲ್ಲಿ ಆತನ ಆಜ್ಞಾಧಿಕಾರವನ್ನು ನಿರಾಕರಿಸುವುದೂ ಅದರ ಉದ್ದೇಶವಲ್ಲ. ಅದೇ ರೀತಿ ಜೀವನವನ್ನು ಧಾರ್ಮಿಕ ಮತ್ತು ಲೌಕಿಕಗಳೆಂದು ವಿಭಜಿಸಿ, ಕೇವಲ ಕೆಲವು ವಿಶ್ವಾಸ, ಆರಾಧನೆ, ಆಚಾರಗಳಲ್ಲಿ ಮಾತ್ರ ವಿಧೇಯರಾಗಿದ್ದುಕೊಂಡು ನಾಗರಿಕ, ಸಾಂಸ್ಕೃತಿಕ, ರಾಜಕೀಯ, ಆರ್ಥಿಕ, ವೈಜ್ಞಾನಿಕ ಮತ್ತು ಕಲಾ ಸಾಹಿತ್ಯಗಳ ಸಮಾಹಾರವಾಗಿರುವ ಲೌಕಿಕ ವ್ಯವಹಾರಗಳಲ್ಲಿ ತಮಗಿಷ್ಟವಿರುವ ರೀತಿ ನೀತಿಗಳನ್ನು ಸ್ವೀಕರಿಸುವ ಮೂಲಕ ಮಾನವನಿಗೆ ಸಂಪೂರ್ಣ ಅಧಿಕಾರವಿದೆಯೆಂಬ ನೆಲೆಯಲ್ಲಿ ಅಲ್ಲಾಹನ ದಾಸ್ಯದಿಂದ ಮುಕ್ತರಾಗಿರುವುದೂ ಅಲ್ಲಾಹನ ದಾಸ್ಯದ ತಾತ್ಪರ್ಯವಲ್ಲ. ದಾಸ್ಯದ ಈ ಎಲ್ಲಾ ಕಲ್ಪನೆಗಳನ್ನು ನಾವು ತಪ್ಪೆಂದು ಭಾವಿಸುತ್ತೇವೆ. ಅವುಗಳನ್ನು ಅಳಿಸಬೇಕೆಂದೂ ನಾವು ಬಯಸುತ್ತೇವೆ. ಇಸ್ಲಾಮೇತರ ವ್ಯವಸ್ಥೆಗಳ ವಿರುದ್ಧ ನಮ್ಮ ಹೋರಾಟವು ಯಾವ ರೀತಿಯಲ್ಲಿದೆಯೋ ಅಷ್ಟೇ ಅಲ್ಲ ಅದಕ್ಕಿಂತ ತೀವ್ರ ಮತ್ತು ಉಗ್ರವಾಗಿ ದಾಸ್ಯದ ಪ್ರಸ್ತುತ ಕಲ್ಪನೆಯ ವಿರುದ್ಧ ನಾವು ಹೋರಾಡುತ್ತೇವೆ. ಯಾಕೆಂದರೆ ಇಂತಹ ವಿವರಣೆಗಳಿಂದಾಗಿ ಧರ್ಮದ ನೈಜ ಕಲ್ಪನೆಯೇ ವಿಕೃತವಾಗುತ್ತದೆ. ಮಾನವನು ಅಲ್ಲಾಹನನ್ನು ಸಮಗ್ರ ಅರ್ಥದಲ್ಲಿ ಆರಾಧ್ಯ, ಸಂರಕ್ಷಕ, ಯಜಮಾನ, ಆಜ್ಞಾಧಿಕಾರಿ, ಪ್ರಭು, ರಾಜ, ಕಾನೂನು ನಿರ್ಮಾತೃ, ನ್ಯಾಯಾಧೀಶ, ವಿಚಾರಣೆಗಾರ ಮತ್ತು ತೀರ್ಪುಗಾರನೆಂದು ನಂಬಿ ವೈಯಕ್ತಿಕ, ಸಾಮಾಜಿಕ, ನೈತಿಕ, ಆಧ್ಯಾತ್ಮಿಕ, ಸಾಂಸ್ಕೃತಿಕ, ರಾಜಕೀಯ, ಆರ್ಥಿಕ, ವೈಚಾರಿಕ, ನಾಗರಿಕ ಇತ್ಯಾದಿ ಜೀವನದ ಸಕಲ ರಂಗಗಳನ್ನೂ ಅಲ್ಲಾಹನ ದಾಸ್ಯಕ್ಕೆ ವಿಧೇಯಗೊಳಿಸುವುದೆಂಬ-ದಾಸ್ಯದೆಡೆಗೆ ಪವಿತ್ರ ಕುರ್‌ಆನ್ ಮತ್ತು ಇತರೆಲ್ಲಾ ದಿವ್ಯ ಗ್ರಂಥಗಳು, ಪ್ರವಾದಿ ಮುಹಮ್ಮದ್(ಸ) ಮತ್ತು ಪೂರ್ವ ಪ್ರವಾದಿಗಳೆಲ್ಲರೂ ಏಕಕಂಠದಿಂದ ಲೋಕದ ಜನತೆಗೆ ಕರೆ ನೀಡುತ್ತಿದ್ದರೆಂದು ನಾವು ಸಂಪೂರ್ಣವಾಗಿ ವಿಶ್ವಾಸವಿರಿಸುತ್ತೇವೆ. "ಇಸ್ಲಾಮಿನಲ್ಲಿ ಸಂಪೂರ್ಣವಾಗಿ ಪ್ರವೇಶಿಸಿರಿ" ಎಂಬ ಕುರ್‌ಆನ್ ವಾಕ್ಯವು ಇದೇ ತಾತ್ಪರ್ಯವನ್ನು ಹೊಂದಿದೆ. ಅಂದರೆ ಜೀವನದ ಯಾವ ರಂಗವನ್ನೂ ಅಲ್ಲಾಹನ ದಾಸ್ಯದಿಂದ ಮುಕ್ತಗೊಳಿಸದೆ ಸಂಪೂರ್ಣ ಅಸ್ತಿತ್ವದೊಂದಿಗೆ ಆತನ ದಾಸ್ಯ ಮತ್ತು ಅನುಸರಣೆಗೆ ವಿಧೇಯರಾಗಬೇಕು. ಜೀವನದ ಯಾವ ವ್ಯವಹಾರಗಳಲ್ಲಿಯೂ ಅಲ್ಲಾಹನ ದಾಸ್ಯದಿಂದ ನಾವು ಮುಕ್ತರೆಂಬ ರೀತಿಯ ಕಾರ್ಯ ವಿಧಾನವನ್ನು ಅಂಗೀಕರಿಸಬಾರದು. ಆತನ ಆದೇಶಗಳನ್ನು ಧಿಕ್ಕರಿಸಿ ಸ್ವೇಚ್ಛಾಧಿಪತಿಗಳಾಗಿ ಮೆರೆದು ಅಥವಾ ಆ ರೀತಿ ಅಧಿಕಾರ ಚಲಾಯಿಸುವವರ ಗುಲಾಮರು, ದಾಸರು ಅಥವಾ ಆಶ್ರಿತರಾಗಿ ಜೀವಿಸಬಾರದು. ದಾಸ್ಯದ ಈ ಕಲ್ಪನೆಯನ್ನೇ ನಾವು ಪ್ರಚಾರ ಮಾಡುತ್ತೇವೆ. ಮುಸ್ಲಿಮರನ್ನೂ, ಮುಸ್ಲಿಮೇತರರನ್ನೂ ಅದೇ ದಾಸ್ಯದೆಡೆಗೆ ನಾವು ಆಹ್ವಾನಿಸುತ್ತೇವೆ.

## ಕಾಪಟ್ಯದ (ನಿಫಾಕ್) ವಾಸ್ತವಿಕತೆ

ಜಮಾಅತ್ ಎರಡನೆಯದಾಗಿ ಬಯಸುವುದೇನೆಂದರೆ, ಇಸ್ಲಾಮನ್ನು ಅನುಸರಿಸುವವರೆಂದು ವಾದಿಸುವ ಹಾಗೂ ಇಸ್ಲಾಮನ್ನು ಅಂಗೀಕರಿಸುವ ಎಲ್ಲರೂ ಕಾಪಟ್ಯವನ್ನು ತೊರೆದು ತಮ್ಮ ಜೀವನವನ್ನು ವಿರೋಧಾಭಾಸಗಳಿಂದ ಮುಕ್ತಗೊಳಿಸಿ ಶುದ್ಧೀಕರಿಸಬೇಕು. ಇಲ್ಲಿ ಕಾಪಟ್ಯವೆನ್ನುವುದರ ತಾತ್ಪರ್ಯವು, ಮಾನವನು ಅನುಸರಿಸುವೆನೆಂದು ಒಪ್ಪಿಕೊಂಡಿರುವ ಧರ್ಮಕ್ಕೆ ಸಂಪೂರ್ಣ ವಿರುದ್ಧವಾದ ಜೀವನ ವ್ಯವಸ್ಥೆಯು ಆತನ ಮೇಲೆ ಪ್ರಭಾವ ಬೀರಿ ಅಧಿಕಾರ ಚಲಾಯಿಸುವುದನ್ನು ನೋಡಿ ಸಂತೃಪ್ತಿ ತಾಳುವುದಾಗಿದೆ. ಅದನ್ನು ನೀಗಿಸಿ ಸ್ವಧರ್ಮವನ್ನು ಸಂಸ್ಥಾಪಿಸಲು ಯಾವ ಪ್ರಯತ್ನವನ್ನೂ ಮಾಡುವುದಿಲ್ಲ. ಬದಲಾಗಿ ಆ ನಿಷಿದ್ಧ ವಿನಾಶಕಾರೀ ಮತ್ತು ರಾಜದ್ರೋಹಿ ವ್ಯವಸ್ಥೆಯನ್ನೇ ಪ್ರೋತ್ಸಾಹಿಸಿ ಅದರಿಂದ ದುರ್ಲಾಭ ಪಡೆದು ಸುಖ ಪಡೆಯುವ ಬಗ್ಗೆ ಆಲೋಚಿಸುತ್ತಾನೆ. ಇನ್ನು ಪ್ರಾಯಶಃ ಅದನ್ನು ಬದಲಿಸಲು ಪ್ರಯತ್ನಿಸುವುದಿದ್ದರೂ ಕೇವಲ ಇನ್ನೊಂದು ನಿಷಿದ್ಧ ವ್ಯವಸ್ಥೆಯ ಸ್ಥಾಪನೆಗಾಗಿಯೇ ವಿನಾ ಸತ್ಯಧರ್ಮದ ಸಂಸ್ಥಾಪನೆಗಾಗಿರುವುದಿಲ್ಲ. ನಮ್ಮ ಅಭಿಪ್ರಾಯದಂತೆ ಈ ಕಾರ್ಯ ವಿಧಾನವು ಅಪ್ಪಟ ಕಾಪಟ್ಯವಾಗಿದೆ. ಯಾಕೆಂದರೆ ಒಂದು ಜೀವನ ವ್ಯವಸ್ಥೆಯಲ್ಲಿ ವಿಶ್ವಾಸವಿರಿಸಿ ಬೇರೊಂದು ಜೀವನ ವ್ಯವಸ್ಥೆಯಿಂದ ತೃಪ್ತಿ ಪಡೆಯುವುದು ತೀರಾ ವಿರೋಧಾಭಾಸ. ನಿಷ್ಕಳಂಕ ವಿಶ್ವಾಸದ ಅನಿವಾರ್ಯ ಪರಿಣಾಮವು ನಾವು ನಂಬುವ ಜೀವನ ವ್ಯವಸ್ಥೆಯನ್ನು ನಮ್ಮ ಜೀವನದಲ್ಲಿ ಸಾಕ್ಷಾತ್ಕಾರಗೊಳಿಸ ಬಯಸುವುದಾಗಿದೆ. ಅದರೊಂದಿಗೆ ಆ ಜೀವನಕ್ಕೆ ಅಡ್ಡಿ ಪಡಿಸುವ ಅಡೆತಡೆಗಳ ಬಗ್ಗೆ ನಮ್ಮ ಹೃದಯವು ಕಳವಳಗೊಳ್ಳಬೇಕು. ಸತ್ಯವಿಶ್ವಾಸದ ಸ್ವಭಾವವೇ ಅತಿ ಕ್ಷುಲ್ಲಕವಾದ ಅಡೆತಡೆಯನ್ನು ಸಹಿಸದ ರೀತಿಯಲ್ಲಿದೆ. ಹೀಗಿರುತ್ತಾ ಇಡೀ ಜೀವನವನ್ನು ಧರ್ಮ ವಿರುದ್ಧವಾದ ಬೇರೊಂದು ವಿಧಾನದಿಂದ ಕಳೆಯುವುದೆಂಬುದನ್ನು ಊಹಿಸಲೂ ಸಾಧ್ಯವಿಲ್ಲ.

ಕೇವಲ ಅಧಿಕಾರದಲ್ಲಿರುವ ಜೀವನ ವ್ಯವಸ್ಥೆಯು ತನಗೆ ಮಾರಕವಲ್ಲವೆಂದು ಮನಗಂಡು ಅದು ಅನುಮತಿಸಿದ ಧರ್ಮದ ಕೆಲವು ಅಂಶಗಳನ್ನು ಸ್ವಲ್ಪ ಮಟ್ಟಿಗೆ ಅನುಸರಿಸುತ್ತಲಿದ್ದರೂ ಅವುಗಳ ಹೊರತು ಜೀವನದ ಇತರೆಲ್ಲಾ ವ್ಯವಹಾರಗಳಲ್ಲಿಯೂ ಧರ್ಮದ ಹಾದಿಯನ್ನು ಬಿಟ್ಟು ಅಧಿಕಾರದಲ್ಲಿರುವ ಜೀವನ ವ್ಯವಸ್ಥೆಯ ಪ್ರಕಾರ ನಡೆಯುತ್ತಾ ತನ್ನ ಧರ್ಮ ವಿಶ್ವಾಸವು ದೃಢವಾಗಿದೆಯೆಂದು ಸಂತೋಷಪಡುತ್ತಿದ್ದರೆ ಅಥವಾ ಒಂದು ವೇಳೆ ಏನಾದರೂ ಆಲೋಚಿಸುವುದಿದ್ದರೂ ಕುಫ್ರ್‌ನ ಆಧಿಪತ್ಯವನ್ನು ಮನಸಾರೆ ಒಪ್ಪಿಯೇ ಆಲೋಚಿಸಿದ್ದರೆ, ಇಸ್ಲಾಮಿನ ದೃಷ್ಟಿಯಲ್ಲಿ ಇಂತಹ ಈಮಾನ್‌ಗೂ ಮತ್ತು ನಿಫಾಕ್‌ಗೂ ಯಾವ ಅಂತರವೂ ಇಲ್ಲ. ಅದು ನೈಜ ಈಮಾನಾಗಿರದೆ ನಿಫಾಕ್ ಆಗಿದೆಯೆಂಬುದಕ್ಕೆ ಕುರ್‌ಆನ್‌ನ ಅನೇಕ ಆಯತ್‌ಗಳು ಸಾಕ್ಷ್ಯ ವಹಿಸುತ್ತವೆ. ಅಲ್ಲಾಹನ ದಾಸ್ಯವನ್ನು ಅಂಗೀಕರಿಸಿದ ಜನರು ಇಂತಹ ಕಾಪಟ್ಯದಿಂದ ಮುಕ್ತರಾಗಬೇಕೆಂದು ನಾವು ಬಯಸುತ್ತೇವೆ. ಪ್ರಸ್ತುತ ದಾಸ್ಯದ ಪರಿಣಾಮವಾಗಿ ಅಲ್ಲಾಹನ ಪ್ರವಾದಿಗಳ ಮೂಲಕ ನಮಗೆ ನೀಡಲಾಗಿರುವ ಜೀವನ ಮಾರ್ಗಕ್ಕೂ ನಿಯಮಗಳಿಗೂ ರಾಜಕೀಯ, ಆರ್ಥಿಕ, ನೈತಿಕ, ಆಧ್ಯಾತ್ಮಿಕ ಸಿದ್ಧಾಂತಗಳಿಗೂ ವೈಚಾರಿಕ ಮತ್ತು ಕ್ರಿಯಾತ್ಮಕ ವ್ಯವಸ್ಥೆಗೂ ಅನುಗುಣವಾಗಿ ನಮ್ಮ ಜೀವನದ ಎಲ್ಲಾ ವ್ಯವಹಾರಗಳೂ ನಡೆಯಬೇಕೆಂದು

ನಾವು ನಿಸ್ವಾರ್ಥವಾಗಿ ಬಯಸಬೇಕು. ಒಂದು ಕ್ಷಣವಾದರೂ ಜೀವನದ ಅತೀ ಕ್ಷುಲ್ಲಕ ವಿಷಯದ ಬಗ್ಗೆಯೂ ಸತ್ಯದ ವ್ಯವಸ್ಥೆಗೆ ಬದಲಾಗಿ ಬೇರೊಂದು ವ್ಯವಸ್ಥೆಯ ಪ್ರಭಾವವನ್ನು ಸಹಿಸಿಕೊಳ್ಳುವುದೆಂಬುದು ಓರ್ವ ನೈಜ ವಿಶ್ವಾಸಿಗೆ ಭೂಷಣವಲ್ಲ. ನಿಷಿದ್ಧ ವ್ಯವಸ್ಥೆಯ ಪ್ರಭಾವವನ್ನು ಸಹಿಸುವುದೂ ಸತ್ಯವಿಶ್ವಾಸಕ್ಕೆ ವಿರುದ್ಧವೆಂದಾದರೆ ಅದನ್ನು ಮೆಚ್ಚುವುದು, ಅದರಿಂದ ಸಂತೃಪ್ತರಾಗುವುದು, ಅದರ ಸಂಸ್ಥಾಪನೆ ಮತ್ತು ಅಸ್ತಿತ್ವಕ್ಕಾಗಿ ನಡೆಯುವ ಪ್ರಯತ್ನಗಳಲ್ಲಿ ಭಾಗಿಯಾಗುವುದು, ಒಂದು ನೀಚ ವ್ಯವಸ್ಥೆಯ ಸ್ಥಾನದಲ್ಲಿ ಬೇರೊಂದು ನೀಚ ವ್ಯವಸ್ಥೆಯನ್ನು ಸ್ಥಾಪಿಸಲು ಪ್ರಯತ್ನಿಸುವುದೆಲ್ಲವೂ ಸತ್ಯವಿಶ್ವಾಸಕ್ಕೆ ಹೇಗೆ ತಾನೇ ಸಹ್ಯವಾದೀತೆಂದು ನೀವೇ ಆಲೋಚಿಸಿರಿ.

## ವಿರೋಧಾಭಾಸದ ವಾಸ್ತವಿಕತೆ

ನಿಫಾಕ್‌ನ (ಕಾಪಟ್ಯ) ಬಳಿಕ ಮುಸ್ಲಿಮರ ಜೀವನದಿಂದ ಹೊಸ ಹಾಗೂ ಹಳೆಯ ಎಲ್ಲಾ ವಿರೋಧಾಭಾಸಗಳನ್ನೂ ನಾವು ತೊಲಗಿಸ ಬಯಸುತ್ತೇವೆ. ಮಾನವನು ಹೇಳುವುದಕ್ಕೆ ವಿರುದ್ಧವಾಗಿ ವರ್ತಿಸುವುದೇ ಅದರ ತಾತ್ಪರ್ಯ. ಮಾನವನ ವರ್ತನೆಯು ವಿವಿಧ ವಿಷಯಗಳಲ್ಲಿ ವಿಭಿನ್ನವಾಗಿರುವುದೂ ಪರಸ್ಪರ ವೈರುಧ್ಯವೇ ಆಗಿದೆ. ಪರಿಪೂರ್ಣ ಜೀವನವನ್ನು ಅಲ್ಲಾಹನ ದಾಸ್ಯಕ್ಕೆ ಒಪ್ಪಿಸಿರುವೆನೆಂದು ಹೇಳುವ ಯಾವಾತನಿಗೂ ಅಲ್ಲಾಹನ ದಾಸ್ಯಕ್ಕೆ ವಿರುದ್ಧವಾಗಿ ಮನಸಾರೆ ವರ್ತಿಸಲು ಸಾಧ್ಯವಾಗದು. ಮಾನವ ಸಹಜ ದೌರ್ಬಲ್ಯದಿಂದಾಗಿ ಅಂತಹ ಕೃತ್ಯದಲ್ಲಿ ಸಿಲುಕಿದರೆ, ತಕ್ಷಣವೇ ಪಶ್ಚಾತ್ತಾಪ ಪಟ್ಟು ಅಲ್ಲಾಹನ ದಾಸ್ಯಕ್ಕೆ ಮರಳಬೇಕು. ಸಂಪೂರ್ಣ ಜೀವನವು ಇಸ್ಲಾಮಿನ ವರ್ಣದಲ್ಲಿ ವಿಲೀನವಾಗುವುದು ನೈಜ ವಿಶ್ವಾಸದ ಅನಿವಾರ್ಯ ಬೇಡಿಕೆಗಳಲ್ಲಿ ಒಂದಾಗಿದೆ. ನಾಲ್ಕೈದು ವರ್ಣಗಳ ಮಾತಂತಿರಲಿ, ದ್ವಿವರ್ಣ ಜೀವನವೂ ಸತ್ಯವಿಶ್ವಾಸ ವಾದಕ್ಕೆ ಅನುಗುಣವಲ್ಲ. ಒಂದೆಡೆ ನಾವು ಅಲ್ಲಾಹನಲ್ಲಿಯೂ ಪರಲೋಕದಲ್ಲಿಯೂ ದಿವ್ಯ ಸಂದೇಶದಲ್ಲಿಯೂ ಪ್ರವಾದಿತ್ವದಲ್ಲಿಯೂ ವಿಶ್ವಾಸವಿರಿಸುತ್ತೇವೆಂದು ಹೇಳುತ್ತಾ ಇನ್ನೊಂದೆಡೆ ಲೌಕಿಕ ಮದದಿಂದ ಮಾನವನನ್ನು ಅಲ್ಲಾಹನಿಂದ ದೂರ ಗೊಳಿಸುವ, ಪರಲೋಕವನ್ನು ಮರೆಸುವ, ಲೌಕಿಕ ಸೇವೆಯಲ್ಲಿ ತಲ್ಲೀನಗೊಳಿಸುವ ವಿದ್ಯಾ ಸಂಸ್ಥೆಗಳಿಗೆ ಸ್ವಯಂ ಧಾವಿಸುವುದು, ಇತರರನ್ನು ಅದಕ್ಕೆ ಪ್ರೇರೇಪಿಸುವುದು ಸ್ವಂತ ಜವಾಬ್ದಾರಿಕೆಯಿಂದ ಅಂತಹ ಸಂಸ್ಥೆಗಳನ್ನು ನಡೆಸುವುದು. ಒಂದೆಡೆ ನಾವು ಅಲ್ಲಾಹನ ನೀತಿ ಸಂಹಿತೆಯನ್ನು ನಂಬುವವರೆಂದು ವಾದಿಸುತ್ತಾ ಇನ್ನೊಂದೆಡೆ ಅಲ್ಲಾಹನ ಶರೀಅತ್ತನ್ನು ಬಹಿಷ್ಕರಿಸಿ ಇಸ್ಲಾಮೇತರ ಕಾನೂನುಗಳ ಬುನಾದಿಯಲ್ಲಿ ಸ್ಥಾಪಿಸಲ್ಪಟ್ಟ ಕೋರ್ಟುಗಳಲ್ಲಿ ವಕೀಲ ಮತ್ತು ಜಡ್ಜರಾಗಿ ಪ್ರಸ್ತುತ ಕೋರ್ಟುಗಳ ತೀರ್ಪನ್ನು ಸತ್ಯಾಸತ್ಯದ ಮಾಪಕವಾಗಿ ಸ್ವೀಕರಿಸುವುದು. ಒಂದೆಡೆ ನಾವು ಪದೇ ಪದೇ ಮಸೀದಿಗೆ ಹೋಗುತ್ತಾ ಅಲ್ಲಾಹನಿಗಾಗಿ ನಮಾಝ್ ಮಾಡುವುದು, ಇನ್ನೊಂದೆಡೆ ಮಸೀದಿಯಿಂದ ಹೊರ ಬಂದೊಡನೆಯೇ ನಮ್ಮ ಗೃಹ ಜೀವನದಲ್ಲಿಯೂ ವ್ಯಾಪಾರ ವಹಿವಾಟುಗಳಲ್ಲಿಯೂ ಧನ ಸಂಪಾದನೆಯಲ್ಲಿಯೂ ವಿವಾಹಾದಿ ಕಾರ್ಯಗಳಲ್ಲಿಯೂ ವಾರಸುಹಕ್ಕು ವಿತರಣೆಯಲ್ಲಿಯೂ ರಾಜಕೀಯ ಹಾಗೂ ಇತರೆಲ್ಲಾ ವ್ಯವಹಾರಗಳಲ್ಲಿಯೂ ಅಲ್ಲಾಹನನ್ನು ಮತ್ತು ಆತನ ಶರೀಅತನ್ನು ಮರೆತು ಕೆಲವದರಲ್ಲಿ ಸ್ವಂತ ನಿಯಮಗಳನ್ನೂ ಇತರ ಕೆಲವದರಲ್ಲಿ ಸ್ವಗೋತ್ರದ ಆಚಾರಗಳನ್ನೂ

ಅಥವಾ ದೇಶ ರೂಢಿಯನ್ನೂ ಅಲ್ಲಾಹನನ್ನು ಧಿಕ್ಕರಿಸಿದ ಆಡಳಿತಗಾರರ ಕಾನೂನುಗಳನ್ನು ಅನುಸರಿಸುವುದು. ಒಂದೆಡೆ ನಾವು ಕೇವಲ ನಿನ್ನ ದಾಸರೆಂದೂ, ನಿನ್ನ ದಾಸ್ಯವನ್ನು ಮಾತ್ರ ಸ್ವೀಕರಿಸುವೆವೆಂದೂ ಅಲ್ಲಾಹನೊಂದಿಗೆ ಪ್ರತಿಜ್ಞೆ ಮಾಡುತ್ತಾ ಇನ್ನೊಂದೆಡೆ ತಮ್ಮ ಆಸಕ್ತಿ, ಅಭಿರುಚಿ, ಒಲವು ಸುಖಾಡಂಬರಗಳಿಗೆ ಸಂಬಂಧಿಸಿರುವ ಮೂರ್ತಿಗಳನ್ನು ಪೂಜಿಸುವುದು, ಇಂತಹ ಅಸಂಖ್ಯಾತ ವೈರುಧ್ಯಗಳು ಇಂದು ಮುಸ್ಲಿಮರ ಜೀವನದಲ್ಲಿ ಕಂಡು ಬರುತ್ತಿದೆ. ಕಣ್ಣುಳ್ಳ ಯಾರಿಗೂ ಅದನ್ನು ನಿರಾಕರಿಸಲು ಸಾಧ್ಯವಿಲ್ಲ. ಇದು ಮುಸ್ಲಿಮ್ ಸಮುದಾಯದ ಗುಣ ನಡತೆಯನ್ನೂ ಅವರ ಧರ್ಮವನ್ನೂ ವಿಶ್ವಾಸವನ್ನೂ ಒಳಗಿನಿಂದಲೇ ಕೊರೆಯುತ್ತಿರುವ ಮಾರಕ ಕೀಟಗಳೆಂದು ನಾವು ಭಾವಿಸುತ್ತೇವೆ. ಇಂದು ಮುಸ್ಲಿಮರ ಜೀವನದ ನಾನಾ ರಂಗಗಳಲ್ಲಿ ಬಹಿರಂಗವಾಗುತ್ತಿರುವ ಕೊರತೆಗಳಿಗೆ ಈ ವೈರುಧ್ಯಗಳೇ ಮುಖ್ಯ ಕಾರಣವಾಗಿವೆ. ತೌಹೀದ್, ರಿಸಾಲತ್, ಮುಂತಾದವುಗಳನ್ನು ನಾಲಗೆಯಿಂದ ಒಪ್ಪಿ, ನಮಾಝ್, ಉಪವಾಸ ಮುಂತಾದ ಕೆಲವು ಧರ್ಮಾಚಾರಗಳನ್ನು ನಿರ್ವಹಿಸಿ ಬಿಟ್ಟರೆ ಆ ಬಳಿಕ ಧರ್ಮ ಮತ್ತು ವಿಶ್ವಾಸಗಳಿಗೆ ವಿರುದ್ಧವಾಗಿ ವರ್ತಿಸಿದರೂ ತಮ್ಮ ವಿಶ್ವಾಸಕ್ಕೆ ಯಾವ ಧಕ್ಕೆಯೂ ಆಗುವುದಿಲ್ಲ, ಹಾಗೂ ಮೋಕ್ಷಕ್ಕೆ ಯಾವ ತೊಂದರೆಯೂ ಉಂಟಾಗುವುದಿಲ್ಲ ಎಂಬ ಭಾವನೆ ಮುಸ್ಲಿಮರಲ್ಲಿ ವ್ಯಾಪಕವಾಗಿದೆ. ಈ ದೌರ್ಬಲ್ಯವು ಆಳವಾಗಿ ಬೇರು ಬಿಟ್ಟಿದೆ. ಇಂದು ನಮಾಝ್, ಝಕಾತ್, ಉಪವಾಸ ಮುಂತಾದ ಕರ್ಮಗಳೂ ಮುಸ್ಲಿಮನಾಗಲಿಕ್ಕಿರುವ ಶರ್ತವಾಗಿ ಉಳಿದಿಲ್ಲ. ಒಂದೆಡೆ ಈಮಾನ್ ಮತ್ತು ಇಸ್ಲಾಮನ್ನು ಒಪ್ಪುತ್ತಾ ಇನ್ನೊಂದೆಡೆ ಜೀವನವು ಅದಕ್ಕೆ ಸಂಪೂರ್ಣ ವಿರುದ್ಧವಾದರೂ ಏನೂ ತೊಂದರೆಯಿಲ್ಲವೆಂಬ ಭಾವನೆ ಮುಸ್ಲಿಮ್ ಸಮುದಾಯದಲ್ಲಿ ಇಂದು ಸರ್ವ ಸಾಮಾನ್ಯವಾಗಿ ಬಿಟ್ಟಿದೆ. ಆದ್ದರಿಂದಲೇ ಇಂದು ಇಸ್ಲಾಮಿನ ಹೆಸರಿನೊಂದಿಗೆ ಎಲ್ಲಾ ವಿಧದ ಆಜ್ಞೋಲ್ಲಂಘನೆ, ಧಿಕ್ಕಾರ, ಪಾಪ, ನಿಯಮೋಲ್ಲಂಘನೆ, ಅಕ್ರಮ, ವಿದ್ರೋಹ ನಿರಾಯಾಸವಾಗಿ ಸೇರಿಸಲ್ಪಟ್ಟಿರುವುದು ಕಂಡು ಬರುತ್ತದೆ. ತಮ್ಮ ಸಮಯ, ಪರಿಶ್ರಮ, ಸಂಪತ್ತು, ಶಕ್ತಿ, ಸಾಮರ್ಥ್ಯಗಳನ್ನೂ ಜೀವನದ ಇತರೆಲ್ಲಾ ಉಪಾದಿಗಳನ್ನೂ ವೈಯಕ್ತಿಕ ಹಾಗೂ ಸಾಮಾಜಿಕ ಪ್ರಯತ್ನಗಳಿಗಾಗಿ ವಿನಿಯೋಗಿಸುವ ಬಹುತೇಕ ಉದ್ದೇಶಗಳನ್ನು ಈಮಾನಿಗೆ ವಿರುದ್ಧವಾಗಿ ಬಳಸುತ್ತಿರುವೆವೆಂಬ ಪ್ರಜ್ಞೆಯೂ ಮುಸ್ಲಿಮರ ಮನದಿಂದ ಅಳಿದು ಹೋಗಿದೆ. ಈ ಪರಿಸ್ಥಿತಿಯು ಇರುವ ತನಕ ಇಸ್ಲಾಮಿ ವಲಯದೊಳಗೆ ನವ ಮುಸ್ಲಿಮರ ಆಗಮನ ಹೆಚ್ಚಿದರೂ ಪ್ರಯೋಜನವಾಗಲಾರದು. ಯಾಕೆಂದರೆ ಈ ಉಪ್ಪಿನ ರಾಶಿಯೊಂದಿಗೆ ಸೇರುವವರೆಲ್ಲರೂ ಉಪ್ಪಾಗಿ ಪರಿವರ್ತಿತವಾಗುತ್ತಾರಷ್ಟೇ. ಆದ್ದರಿಂದ ತಾನು ಮುಅ್‌ಮಿನ್ ಎಂದು ವಾದಿಸುವ ಪ್ರತಿಯೊಬ್ಬ ವ್ಯಕ್ತಿಯೂ ಇಂತಹ ಜೀವನ ವೈರುಧ್ಯಗಳಿಂದ ಪರಿಶುದ್ಧನಾಗಿರಬೇಕೆಂಬುದು ನಮ್ಮ ಪ್ರಚಾರದ ಅತೀ ಮುಖ್ಯ ಬೇಡಿಕೆಯಾಗಿದೆ. ಮುಸ್ಲಿಮರು ಏಕಾಗ್ರಚಿತ್ತರಾಗಿ ತಮ್ಮ ಗಮನವನ್ನು ಇಸ್ಲಾಮಿನಲ್ಲಿ ಕೇಂದ್ರೀಕರಿಸಿ ಒಂದೇ ವರ್ಣದ ಮುಸ್ಲಿಮ್ ಮತ್ತು ಮೂಮಿನರಾಗಬೇಕೆಂದು ನಾವು ಎಲ್ಲಾ ಮುಅ್‌ಮಿನರೊಂದಿಗೂ ವಿನಂತಿಸುತ್ತೇವೆ. ಈಮಾನ್‌ಗೆ ವಿರುದ್ಧವಾದ ಹಾಗೂ ಇಸ್ಲಾಮಿ ಜೀವನಕ್ಕೆ ಅಸಹ್ಯವಾದ ಸಕಲ ವಿಷಯಗಳ ಸಂಬಂಧವನ್ನು ಮುರಿಯಬೇಕು. ಒಂದೇ ಬಾರಿಗೆ ಮುರಿಯಲು ಸಾಧ್ಯವಾಗದಿದ್ದರೆ ನಿರಂತರ ಅದಕ್ಕಾಗಿ ಪ್ರಯತ್ನಿಸುತ್ತಿರಬೇಕು. ಈಮಾನಿನ

ಸತ್ಫಲವನ್ನೂ ಅದರ ಹೊಣೆಗಾರಿಕೆಗಳನ್ನೂ ಚೆನ್ನಾಗಿ ತಿಳಿದು ಅದರ ಈಡೇರಿಕೆಗಾಗಿ ನಿರಂತರ ಪ್ರಯತ್ನ ನಡೆಸಬೇಕು.

## ನಾಯಕತ್ವ ಬದಲಾವಣೆಯ ಅಗತ್ಯ

ಇನ್ನು ನಮ್ಮ ಪ್ರಚಾರದ ಮೂರನೇ ಅಂಶವನ್ನು ತೆಗೆದುಕೊಳ್ಳೋಣ. ಇದು ನಿಮ್ಮ ಮುಂದೆ ವಿವರಿಸಲಾಗಿರುವ ಎರಡು ಅಂಶಗಳ ಸ್ವಾಭಾವಿಕ ಪರಿಣಾಮವಾಗಿದೆ. ನಾವು ನಮ್ಮನ್ನು ಅಲ್ಲಾಹನ ದಾಸ್ಯಕ್ಕೆ ಅಧೀನಗೊಳಿಸಿ ಆ ಅರ್ಪಣೆಯಲ್ಲಿ ನಿಷ್ಕಪಟ ಮತ್ತು ನಿಷ್ಕಳಂಕರಾಗಿದ್ದುಕೊಂಡು ನಮ್ಮ ಜೀವನದ ವೈರುಧ್ಯಗಳಿಂದ ಪರಿಶುದ್ಧರಾಗಲು ಪ್ರಯತ್ನಿಸುತ್ತಲಿದ್ದರೆ ಇಸ್ಲಾಮೇತರ ಜೀವನ ವ್ಯವಸ್ಥೆಯನ್ನು ಆಮೂಲಾಗ್ರವಾಗಿ ಬದಲಾಯಿಸುವ ಅಭಿಲಾಷೆಯು ಸ್ವಾಭಾವಿಕವಾಗಿ ನಮ್ಮಲ್ಲಿ ಮೂಡುತ್ತದೆ. ಇಂದಿನ ಜೀವನ ವ್ಯವಸ್ಥೆಯು ಕುಫ್ರ್, ಶಿರ್ಕ್, ನಾಸ್ತಿಕತೆ, ಧರ್ಮ ನಿರಪೇಕ್ಷತೆ, ಲೌಕಿಕತೆ, ದುರಾಚಾರ, ದುರ್ಗುಣ ಮುಂತಾದವುಗಳ ಬುನಾದಿಯಲ್ಲಿ ನಡೆಯುತ್ತಿವೆ. ಅದರ ಯೋಜನೆಯನ್ನು ಸಿದ್ಧ ಪಡಿಸುವ ಬುದ್ಧಿ ಜೀವಿಗಳು, ಅದನ್ನು ಜಾರಿಗೊಳಿಸುವವರೆಲ್ಲರೂ ಅಲ್ಲಾಹನಿಂದ ಮುಖ ತಿರುಗಿಸಿ ಆತನ ನಿಯಮಗಳಿಂದ ಮುಕ್ತವಾಗಿರುವವರಾಗಿದ್ದಾರೆ. ವಿಜ್ಞಾನ, ಕಲೆ, ಸಾಹಿತ್ಯ, ಶಿಕ್ಷಣ, ಪ್ರಕಾಶನ, ನ್ಯಾಯಪಾಲನೆ, ಆರ್ಥಿಕ ವ್ಯವಹಾರ, ಉದ್ಯೋಗ, ವ್ಯವಸಾಯ, ವ್ಯಾಪಾರ, ಆಡಳಿತ, ಅಂತಾರಾಷ್ಟ್ರೀಯ ಸಂಬಂಧ ಮುಂತಾದುವುಗಳ ಸೂತ್ರವು ಇಂತಹ ಜನರ ಹಸ್ತದಲ್ಲಿರುವ ತನಕ- ಲೋಕದಲ್ಲಿ ಓರ್ವ ನೈಜ ಮುಸ್ಲಿಮನೆಂಬ ನೆಲೆಯಲ್ಲಿ ಅಲ್ಲಾಹನ ದಾಸ್ಯವನ್ನು ಜೀವನ ವಿಧಾನವಾಗಿಸಿಕೊಂಡು ಬದುಕಲು ಯಾರಿಗೂ ಕಾರ್ಯತಃ ಸಾಧ್ಯವಿಲ್ಲ. ಮಾತ್ರವಲ್ಲ ಭಾವೀ ಸಂತಾನಗಳನ್ನು ಕೇವಲ ವಿಶ್ವಾಸದಲ್ಲಿಯೂ ನೈಜ ಇಸ್ಲಾಮಿನ ಅನುಯಾಯಿಗಳಾಗಿ ಬೆಳೆಸಲು ಸಾಧ್ಯವಾಗಲಾರದು. ಆದರೆ ನಿಜಾರ್ಥದಲ್ಲಿ ಅಲ್ಲಾಹನ ದಾಸನಾಗುವ ಓರ್ವ ವ್ಯಕ್ತಿಯು ಇತರ ಅನೇಕ ಕರ್ತವ್ಯಗಳ ಜತೆಗೆ ಇನ್ನೊಂದು ಪ್ರಾಮುಖ್ಯ ಕರ್ತವ್ಯವನ್ನೂ ವಹಿಸಬೇಕಾಗುತ್ತದೆ. ಅಲ್ಲಾಹನ ಅಭೀಷ್ಟಕ್ಕೊಪ್ಪುವಂತೆ ಜಾಗತಿಕ ವ್ಯವಸ್ಥೆಯನ್ನು ವಿನಾಶದಿಂದ ರಕ್ಷಿಸಿ ಸರಿಯಾದ ಬುನಾದಿಯಲ್ಲಿ ಸಂಸ್ಥಾಪಿಸುವ ನಿಯಂತ್ರಣಾಧಿಕಾರವು ಸಜ್ಜನರ ಹಸ್ತಗಳಿಗೆ ಬಾರದೆ ಈ ಉದ್ದೇಶ ಈಡೇರಬಾರದೆಂಬುದು ವ್ಯಕ್ತ. ಫಾಸಿಕ್ ಮತ್ತು ಫಾಜಿರ್‌ಗಳೂ ಅಲ್ಲಾಹನನ್ನು ಧಿಕ್ಕರಿಸಿ ಪಿಶಾಚಿಯನ್ನು ಅನುಸರಿಸುವಂಥವರೂ ಲೋಕದ ನಾಯಕರು, ಮಾದರೀ ಪುರುಷರು ಮತ್ತು ಆಡಳಿತಗಾರರಾಗಿದ್ದರೆ ಲೋಕದಲ್ಲಿ ವಿನಾಶ, ಅಕ್ರಮ, ಶೋಷಣೆ, ದುರ್ಗುಣ, ದುರಾಚಾರಗಳು ವ್ಯಾಪಕವಾಗಲಾರದೆಂದು ಭಾವಿಸುವುದು ಮೂಢತನವಾಗಿದೆ. ಇಂದಿನ ಅನುಭವಗಳೇ ಅದು ಅಸಾಧ್ಯವೆಂದು ಸೂರ್ಯ ಪ್ರಕಾಶದಂತೆ ಸಾಬೀತು ಪಡಿಸಿವೆ. ಆದ್ದರಿಂದ ನಾವು ಅಲ್ಲಾಹನ ಅನುಸರಣೆ ಮತ್ತು ದಾಸ್ಯದಿಂದ ಜೀವಿಸುವುದರ ಅನಿವಾರ್ಯ ಪರಿಣಾಮವೆಂಬಂತೆ ಲೋಕದ ದಾರಿತಪ್ಪಿದ ಹಾಗೂ ದಾರಿ ತಪ್ಪುತ್ತಿರುವ ನಾಯಕರ ನಾಯಕತ್ವವನ್ನು ಕೊನೆಗೊಳಿಸಿ ಅದರ ಸ್ಥಾನದಲ್ಲಿ ಸತ್ಯಧರ್ಮದ ಸ್ಥಾಪನೆಗಾಗಿ ಪ್ರಯತ್ನಿಸಬೇಕಾಗುವುದು.

### ನಾಯಕತ್ವದಲ್ಲಿ ಕ್ರಾಂತಿ ಹೇಗೆ ಸಾಧ್ಯ

ಆದರೆ ಈ ಬದಲಾವಣೆಯು ಕೇವಲ ಬಯಕೆಯಿಂದ ಸಾಧ್ಯವಾಗದು. ಯಾವುದೇ

ರೀತಿಯಲ್ಲಿ ಲೋಕಕ್ಕೊಂದು ನಿಯಂತ್ರಣವಿರಬೇಕೆಂದು ಅಲ್ಲಾಹನು ಬಯಸುತ್ತಾನೆ. ಲೋಕ ನಿಯಂತ್ರಣಕ್ಕೆ ಕೆಲವು ಯೋಗ್ಯತೆ, ಸಾಮರ್ಥ್ಯ ಮತ್ತು ವಿಶಿಷ್ಟ ಗುಣಗಳು ಅತ್ಯಗತ್ಯವಿದೆ. ಅವುಗಳನ್ನು ಹೊಂದಿರುವ ಯಾವ ಜನ ವಿಭಾಗಗಳಿಗೂ ಲೋಕ ನಿಯಂತ್ರಣಗಳನ್ನು ವಹಿಸಿಕೊಳ್ಳಲು ಸಾಧ್ಯವಿಲ್ಲ. ನಿಯಂತ್ರಣ ಕಾರ್ಯವನ್ನು ನಿರ್ವಹಿಸುವ ಅರ್ಹತೆಯಿರುವ ಸಜ್ಜನರಾದ ಸತ್ಯವಿಶ್ವಾಸಿಗಳ ಸಂಘಟಿತ ವಿಭಾಗವು ಅಸ್ತಿತ್ವದಲ್ಲಿಲ್ಲದಿದ್ದರೆ ಅಲ್ಲಾಹನು ತನ್ನ ಲೋಕದ ನಿಯಂತ್ರಣವನ್ನು ಅವಿಶ್ವಾಸಿಗಳಾದ ದುರ್ಜನರ ಹಸ್ತಗಳಿಗೆ ನೀಡುವನೆಂಬುದರಲ್ಲಿ ಸಂದೇಹವಿಲ್ಲ. ಆದರೆ ಸತ್ಯವಿಶ್ವಾಸಿಗಳಾದ ಸಜ್ಜನರು ಬೆಳೆದು ಬಂದಾಗ, ಲೋಕ ನಿಯಂತ್ರಣಕ್ಕೆ ಅಗತ್ಯವಿರುವ ಗುಣ, ಯೋಗ್ಯತೆ ಮತ್ತು ಸಾಮರ್ಥ್ಯಗಳಲ್ಲಿ ಅಲ್ಲಾಹನನ್ನು ಮರೆತವರಿಗಿಂತ ಅವರು ಉನ್ನತರಾಗಿದ್ದರೂ- ಅಲ್ಲಾಹನು ಲೋಕ ನಿಯಂತ್ರಣವನ್ನು ಫಾಸಿಕ್, ದುರಾಚಾರಿ, ಮತ್ತು ಅವಿಶ್ವಾಸಿಗಳಿಗೇ ನೀಡುವಷ್ಟು ದ್ರೋಹ ಮತ್ತು ವಿನಾಶವನ್ನು ಮೆಚ್ಚುವವನಲ್ಲ. ಆದ್ದರಿಂದ ನಮ್ಮ ಧರ್ಮ ಪ್ರಚಾರದ ಉದ್ದೇಶವು ಕೇವಲ ಲೋಕದ ಸೂತ್ರವನ್ನು ಅಕ್ರಮಿಗಳ ಹಸ್ತದಿಂದ ಸಜ್ಜನರ ಹಸ್ತಗಳಿಗೆ ಬದಲಾಯಿಸುವುದಲ್ಲ. ಬದಲಾಗಿ ಸತ್ಯವಿಶ್ವಾಸಿಗಳ ಒಂದು ಸುಸಂಘಟಿತ ಸಂಘವನ್ನು ತಯಾರುಗೊಳಿಸುವ ಉಪಕ್ರಮವೂ ಅದರಲ್ಲಿ ಸೇರಿದೆ. ಅವರು ಈಮಾನಿನಲ್ಲಿ ಪರಿಪಕ್ವತೆ ಗಳಿಸಬೇಕು, ಇಸ್ಲಾಮಿನಲ್ಲಿ ನಿಷ್ಕಳಂಕರೂ ಏಕವರ್ಣೀಯರೂ ಸದ್ಗುಣವಂತರೂ ಆಗಿರಬೇಕು. ಅದರೊಂದಿಗೆ ಲೋಕವನ್ನು ಸನ್ಮಾರ್ಗದಲ್ಲಿ ಮುನ್ನಡೆಸುವ ಯೋಗ್ಯತೆಗಳೆಲ್ಲವೂ ಅವರಲ್ಲಿ ಮೈಗೂಡಬೇಕು. ಇಂದಿನ ಕಾರ್ಯಕರ್ತರು ಮತ್ತು ಆಡಳಿತಗಾರರಿಗಿಂತ ಉತ್ಕೃಷ್ಟವಾದ ಯೋಗ್ಯತೆ ನಮ್ಮಲ್ಲಿವೆಯೆಂಬುದನ್ನು ಅವರು ಕಾರ್ಯರೂಪದಲ್ಲಿ ತೋರಿಸಬೇಕು.

## ವಿರೋಧದ ಅಲೆ

ನಮ್ಮ ಸಂದೇಶ ಪ್ರಚಾರದ ಸಂಕ್ಷಿಪ್ತ ವಿವರವನ್ನು ಈ ತನಕ ಪ್ರಸ್ತಾಪಿಸಿದೆವು. ಆದರೆ ಈ ಸಂದೇಶ ಪ್ರಚಾರವನ್ನು ತಡೆಯುವ ಮತ್ತು ವಿರೋಧಿಸುವ ವಿಷಯದಲ್ಲಿ ಮುಸ್ಲಿಮರೆನಿಸಿಕೊಂಡವರೇ ಮುಂಚೂಣಿಯಲ್ಲಿರುವರೆಂದರೆ ಪ್ರಾಯಶಃ ನಿಮಗೆ ಅಚ್ಚರಿಯಾಗಬಹುದು. ಮುಸ್ಲಿಮೇತರರಿಂದ ನಮ್ಮ ವಿರುದ್ಧ ಈ ತನಕ ಯಾವ ಅಪಸ್ವರವೂ ಕೇಳಿ ಬರಲಿಲ್ಲ. ನಮ್ಮ ಮಾರ್ಗವನ್ನು ತಡೆಯಲು ಅವರಾರೂ ಮುಂದೆ ಬಂದಿಲ್ಲ. ಆದರೆ ಈ ಸ್ಥಿತಿ ಹೀಗೆಯೇ ಮುಂದುವರಿದೀತೆಂದು ಭವಿಷ್ಯ ನುಡಿಯುವಂತಿಲ್ಲ. ಯಥಾಸ್ಥಿತಿ ಎಷ್ಟರ ತನಕ ಉಳಿದೀತೆಂದೂ ಹೇಳ ಬರುವುದಿಲ್ಲ. ಈ ಸಂದೇಶವನ್ನಾಲಿಸಿ ಮುಸ್ಲಿಮೇತರರ ಬದಲಾಗಿ ಮುಸ್ಲಿಮರೇ ಮುಖ ಸಿಂಡರಿಸಿ, ಅದನ್ನು ಗಂಡಾಂತರಕಾರಿಯೆಂದು ಭಾವಿಸಿ, ತಡೆಯ ಹೊರಟಿರುವುದು ಯಾರನ್ನೂ ಅಚ್ಚರಿಗೊಳಿಸದಿರದು. ಪ್ರಾಯಶಃ ಇಂತಹ ಪರಿಸ್ಥಿತಿಯಲ್ಲಿಯೇ ಅಲ್ಲಾಹನು ಗ್ರಂಥದವರೊಂದಿಗೆ "ನಿರಾಕರಿಸುವುದರಲ್ಲಿ ನೀವು ಮೊದಲಿಗರಾಗಬೇಡಿರಿ" ಎಂದು ಹೇಳಿರಬೇಕು. ಹಿಂದುಗಳು ಮತ್ತು ಸಿಖ್ಖರೊಂದಿಗೂ ಆಂಗ್ಲರೊಂದಿಗೂ ನಮಗೆ ವಿಚಾರ ವಿನಿಮಯ ನಡೆಸುವ ಅವಕಾಶ ದೊರೆತಿದೆ. ಆದರೆ ನಮ್ಮ ಸಾಹಿತ್ಯಗಳನ್ನು ಓದಿದ ಹಾಗೂ ಸಂಭಾಷಣೆಗಳಿಂದ ನಮ್ಮ ಧ್ಯೇಯಧಾರೆಗಳನ್ನು ಚೆನ್ನಾಗಿ ಅರಿತುಕೊಂಡ ಯಾರೂ ಅದನ್ನು

ಸುಳ್ಳೆಂದು ಹೇಳಲು ಮುಂದಾಗಲಿಲ್ಲ. ನೀವು ಅದನ್ನು ಸಂಸ್ಥಾಪಿಸ ಹೊರಟರೆ ನಾವು ಅದನ್ನು ತಡೆಯುವ ಶತ ಪ್ರಯತ್ನ ನಡೆಸುವೆವೆಂದು ಅವರಾರೂ ಹೇಳಿಲ್ಲ. ಸಂಪೂರ್ಣ ನಿಸ್ವಾರ್ಥ ಮತ್ತು ನಿಷ್ಕಳಂಕವಾಗಿ ಈ ಸಿದ್ಧಾಂತವನ್ನು ನೆಲೆ ನಿಲ್ಲಿಸಿ ಅದರ ಉನ್ನತಿಗಾಗಿ ಜೀವನ್ಮರಣಗಳನ್ನು ಮುಡಿಪಾಗಿಡುವ ಒಂದು ಸಂಘಟನೆಯು ಅಸ್ತಿತ್ವಕ್ಕೆ ಬಂದರೆ, ಅದರೊಂದಿಗೆ ನಾವು ಸಹಕರಿಸಲು ಸಿದ್ಧರಿರುವೆವೆಂದು ಅನೇಕ ಮುಸ್ಲಿಮೇತರ ಬಂಧುಗಳೇ ಹೇಳಿದ್ದಾರೆ. ಹೀಗಿರುತ್ತಾ ತದ್ವಿರುದ್ಧವಾಗಿ ನಮ್ಮನ್ನು ವಿರೋಧಿಸುವ ಹಾಗೂ ನಮ್ಮ ಬಗ್ಗೆ ತಪ್ಪು ತಿಳುವಳಿಕೆಗಳನ್ನು ಹರಡುವ ಕಾರ್ಯದಲ್ಲಿ ಮುಸ್ಲಿಮರೆನಿಸಿದವರೇ ಅಗ್ರ ಪಂಕ್ತಿಯಲ್ಲಿದ್ದಾರೆ. ಅವರಲ್ಲೂ ಧಾರ್ಮಿಕರೆನಿಸಿದ ವರ್ಗಕ್ಕೆ ಈ ಗೌರವ ಹೆಚ್ಚಾಗಿ ಸಂದಿದೆ. ಆದರೆ ಇದರಲ್ಲಿರುವ ಸ್ವಾರಸ್ಯಕರ ಅಂಶವೆಂದರೆ, ನಾವು ಯಾವುದರತ್ತ ಜನರನ್ನು ಆಹ್ವಾನಿಸುತ್ತಿರುವೆವೋ ಅದು ತಪ್ಪೆಂದು ಹೇಳುವ ಧೈರ್ಯ ಅವರಿಗಿಲ್ಲ. ಹೆಚ್ಚಿನವರಿಗೆ ಈ ಸಂದೇಶ ಪ್ರಚಾರವನ್ನು ನೇರವಾಗಿ ಆಕ್ರಮಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಅವರು ಒಮ್ಮೆ ಹಿಂದಿನಿಂದ ಕೆಲವೊಮ್ಮೆ ಎಡ ಅಥವಾ ಬಲಗಳಿಂದ ದಾಳಿ ಮಾಡಲು ಪ್ರಯತ್ನಿಸುತ್ತಿದ್ದಾರೆ. ಒಮ್ಮೊಮ್ಮೆ ಅವರ ಸಂದೇಶ ಪ್ರಚಾರವು ಸತ್ಯವೆಂದು ಹೇಳುತ್ತಾರೆ. ಆದರೆ ಅದರಲ್ಲಿರುವವರು ಹಾಗೆ-ಹೀಗೆ ಅಂತ ಹೇಳುತ್ತಾರೆ. ಇನ್ನೊಮ್ಮೆ ಅವರು ಪ್ರಚಾರ ಮಾಡುತ್ತಿರುವ ಸಂದೇಶವು ಸತ್ಯವೆಂಬುದರಲ್ಲಿ ಸಂದೇಹವಿಲ್ಲವೆನ್ನುತ್ತಾ ಅದು ಈ ಕಾಲದಲ್ಲಿ ನಡೆಯದು ಎನ್ನುತ್ತಾರೆ. ಕೆಲವೊಮ್ಮೆ ಹೀಗೆನ್ನುತ್ತಾರೆ: ಇದುವೇ ಸತ್ಯ, ಅದಕ್ಕೆ ಪ್ರವಾದಿವರ್ಯರ(ಸ) ಅನುಯಾಯಿ (ಸಹಾಬಿ)ಗಳಂಥ ಉನ್ನತ ವ್ಯಕ್ತಿಗಳ ಅಗತ್ಯವಿದೆ, ಅಂಥವರು ಈಗ ಯಾರಿದ್ದಾರೆ? ಇನ್ನು ಕೆಲವೊಮ್ಮೆ ಹೀಗೆನ್ನುತ್ತಾರೆ- ಅದು ನಿಜವೆಂಬುದರಲ್ಲಿ ಸಂದೇಹವಿಲ್ಲ, ಆದರೆ ಮುಸ್ಲಿಮರು ತಮ್ಮ ಇಂದಿನ ರಾಜಕೀಯ, ಆರ್ಥಿಕ ಪರಿಸ್ಥಿತಿಗಳಲ್ಲಿ ಅದನ್ನೇ ತಮ್ಮ ಏಕೈಕ ಪ್ರಚಾರವಾಗಿ ಅಂಗೀಕರಿಸಲು ಸಾಧ್ಯವಿಲ್ಲ. ಅದರಿಂದ ನಮ್ಮ ಲೌಕಿಕ ಜೀವನ ಸಂಕಷ್ಟಕ್ಕೀಡಾಗಬಹುದು. ರಾಜಕೀಯ ಮತ್ತು ಆರ್ಥಿಕ ಸಾಮರ್ಥ್ಯಗಳನ್ನು ಮುಸ್ಲಿಮೇತರರೇ ಗಳಿಸಿ ನಾವು ಇಕ್ಕಟ್ಟಿಗೆ ಸಿಲುಕಬಹುದು ಎಂದು ಮುಂತಾಗಿ ಹೇಳುತ್ತಾರೆ. ಇನ್ನು ಅದೃಷ್ಟವಶಾತ್ ಯಾರಾದರೊಬ್ಬರು ನಮ್ಮ ಈ ಸಂದೇಶಗಳನ್ನು ಅಂಗೀಕರಿಸಿ ತಮ್ಮ ಜೀವನವನ್ನು ಕಾಪಟ್ಯ ಮತ್ತು ವೈರುಧ್ಯಗಳಿಂದ ಮುಕ್ತಗೊಳಿಸಿ, ಸಂಪೂರ್ಣ ಜೀವನವನ್ನು ಅಲ್ಲಾಹನ ದಾಸ್ಯಕ್ಕೆ ಅರ್ಪಿಸಲು ಮುಂದಾದರೆ, ಅವರ ಸ್ವಸಹೋದರರು, ಮಾತಾಪಿತರು ಮತ್ತು ಸಂಬಂಧಿಕರೇ ಮುಂತಾದ ಪರಿಚಿತ ವರ್ಗದವರೇ ಅವರನ್ನು ವಿರೋಧಿಸಲಾರಂಭಿಸುತ್ತಾರೆ. ಅವರು ದೇವಭಕ್ತ ಮತ್ತು ಧರ್ಮ ನಿಷ್ಠರಾಗಿದ್ದರೂ ಹಣೆಯಲ್ಲಿ ನಮಾಝಿನ ದಡ್ಡುಗಳಿದ್ದರೂ ಅವರ ನಾಲಗೆಯಿಂದ ಸದಾ ಧರ್ಮದ ಮಾತುಗಳೇ ಹೊರಡುತ್ತಲಿದ್ದರೂ ಅವರ ಮಕ್ಕಳು ಅಥವಾ ಸಂಬಂಧಿಕರು ಈ ಗಂಡಾಂತರಕ್ಕೆ ಸಿಲುಕುವುದನ್ನು ಅವರಿಂದ ಸಹಿಸಲಾಗುವುದಿಲ್ಲ. ಈ ಸಂದೇಶವನ್ನು ಮುಸ್ಲಿಮರು, ಮುಖ್ಯವಾಗಿ ಧರ್ಮನಿಷ್ಠರೆಂದು ಕರೆಯಲ್ಪಡುವವರೇ ವಿರೋಧಿಸುತ್ತಿರುವವರೆಂಬ ವಾಸ್ತವಿಕತೆಯು ಮುಸ್ಲಿಮರಲ್ಲಿ ಸುದೀರ್ಘ ಕಾಲದಿಂದ ಬೆಳೆದು ಬರುತ್ತಿರುವ ಮಹಾ ರೋಗವನ್ನು ಸೂಚಿಸುತ್ತದೆ. ಆದರೆ ಅದು ಈ ವರೆಗೆ ಆಕರ್ಷಕ ಪರದೆಯ ಹಿಂದೆ ಮರೆಯಾಗಿತ್ತು. ಈ ಸಂದೇಶವನ್ನು ಕೇವಲ ವಿಶ್ವಾಸವೆಂಬ ನೆಲೆಯಲ್ಲಿ ಪ್ರಚಾರ ಮಾಡುತ್ತಿದ್ದು, ಅದನ್ನು ಕಾರ್ಯರೂಪದಲ್ಲಿ ಅಳವಡಿಸಿ ಅದರ ಸಂಸ್ಥಾಪನೆಗಾಗಿ ಪ್ರಯತ್ನಿಸಬೇಕೆಂದು ಹೇಳದಿರುತ್ತಿದ್ದರೆ ಈ ವಿರೋಧದ ಬದಲಾಗಿ ನಾನಾ ಕಡೆಗಳಿಂದ ನಮ್ಮನ್ನು

ಪ್ರಶಂಸಿಸುವುದನ್ನು ಕೇಳಬಹುದಾಗಿತ್ತು. ದಾಸ್ಯವು ಅಲ್ಲಾಹನ ಹೊರತು ಇನ್ನಾರಿಗಾದರೂ ಇರಬೇಕೆಂದೂ ಮುಸ್ಲಿಮರಲ್ಲಿ ಕಾಪಟ್ಯ ಹಾಗೂ ವಿಶ್ವಾಸಕ್ಕೆ ವಿರುದ್ಧವಾದ ಕರ್ಮಗಳಿರಬೇಕೆಂದೂ ಯಾವ ಮುಸ್ಲಿಮನಾದರೂ ಹೇಳಿಯಾನೇ? ಅಧಿಕಾರವು ಸಜ್ಜನರ ಹಸ್ತದಲ್ಲಿರಬೇಕೇ ವಿನಾ ದೇವಧಿಕ್ಕಾರಿಗಳ ಹಸ್ತದಲ್ಲಿರಬೇಕೆಂದು ವಾದಿಸಿಯಾನೆ? ಅಲ್ಲಾಹನ ಕಾನೂನುಗಳ ಬದಲಾಗಿ ಲೋಕದಲ್ಲಿ ಕುಫ್ರ್‌ನ ಕಾನೂನು ನಡೆಯಬೇಕೆಂದು ಯಾವ ಮುಸ್ಲಿಮನಾದರೂ ಹಠ ಹಿಡಿದಾನೇ? ನಾವು ಈ ತನಕ ಪ್ರಚಾರ ಮಾಡಿರುವ ಸಂದೇಶಗಳಿಗನುಸಾರವಾಗಿ ಜೀವಿಸುವಂತೆ ಜನರಿಗೆ ಕರೆಕೊಡದೆ ಕೇವಲ ತತ್ವಗಳೆಂಬ ನೆಲೆಯಲ್ಲಿ ಅವುಗಳನ್ನು ವಿವರಿಸುವ ಕೆಲಸವನ್ನಷ್ಟೇ ನಿರ್ವಹಿಸುತ್ತಿದ್ದರೆ ಯಾವ ಪಕ್ಷವೂ ವ್ಯಕ್ತಿಯೂ ಅದರ ವಿರುದ್ಧ ಚಕಾರವೆತ್ತುತ್ತಿರಲಿಲ್ಲವೆಂದು ನಾನು ಧೈರ್ಯದಿಂದ ಹೇಳಬಲ್ಲೆ. ಆದರೆ ನಾವು ಅದನ್ನು ಕೇವಲ ತತ್ವವೆಂಬ ನೆಲೆಯಲ್ಲಿ ಪ್ರಚಾರ ಮಾಡಿ ಸುಮ್ಮನಿರಲಿಲ್ಲ. ಅದರೊಂದಿಗೆ ಸತ್ಯವೆಂದು ಮನಗಂಡ ವಿಷಯವನ್ನು ಪ್ರಥಮವಾಗಿ ಸ್ವಜೀವನದಲ್ಲಿ, ತರುವಾಯ ಪರಿಸರದಲ್ಲಿ ರೂಢಿಗೆ ತರಲು ಪ್ರಯತ್ನಿಸಬೇಕೆಂದು ನಾವು ಹೇಳಿದೆವು. ಇದುವೇ ಅವರ ವಿರೋಧಕ್ಕೆ ಪ್ರೇರಕವಾಯಿತು. ಪ್ರವಾದಿವರ್ಯರ(ಸ) ಕಾಲದಲ್ಲಿಯೂ ಇದೇ ಪರಿಸ್ಥಿತಿ ಎದುರಾಗಿತ್ತು.

## ಇಸ್ಲಾಮೇತರ ಪದ್ಧತಿಗಳೊಂದಿಗೆ ಒಪ್ಪಂದ

ಪ್ರವಾದಿವರ್ಯರು(ಸ) ಬೋಧಿಸುತ್ತಿದ್ದ ತೌಹೀದ್ (ಏಕ ದೇವ ಸಿದ್ಧಾಂತ) ಮತ್ತು ನೈತಿಕ ಸಿದ್ಧಾಂತಗಳು ಅರೇಬಿಯಾಕ್ಕೆ ಸಂಪೂರ್ಣ ಹೊಸತಾಗಿರಲಿಲ್ಲವೆಂದು ಅಜ್ಞಾನ ಕಾಲದ ಅರಬೀ ಸಾಹಿತ್ಯಗಳನ್ನು ಅವಲೋಕಿಸಿದರೆ ತಿಳಿದು ಬರುತ್ತದೆ. ಅಂತಹ ತೌಹೀದ್ ಕಲ್ಪನೆಯನ್ನೇ ಅಜ್ಞಾನ ಕಾಲದ ಅನೇಕ ಕವಿಗಳೂ ಭಾಷಣಗಾರರೂ ಪ್ರಸ್ತಾಪಿಸಿದ್ದರು. ಇಸ್ಲಾಮಿನ ಹಲವು ನೈತಿಕ ಸಿದ್ಧಾಂತಗಳಲ್ಲಿ ಕೆಲವನ್ನು ಅರೇಬಿಯಾದ ಇತಿಹಾಸಕಾರರೂ ಕವಿಗಳೂ ವಾಗ್ಮಿಗಳೂ ಹಿಂದೆಯೇ ವಿವರಿಸಿದ್ದರು. ಆದರೆ ಅದರಲ್ಲಿ ಒಂದು ವ್ಯತ್ಯಾಸವಿತ್ತು. ಪ್ರವಾದಿವರ್ಯರು(ಸ) ಒಂದೆಡೆ ನಿಷಿದ್ಧದ ಕಲಬೆರೆಕೆಯಿಲ್ಲದ ಅಪ್ಪಟ ಸತ್ಯವನ್ನು ಸಂಪೂರ್ಣ ಸುವ್ಯವಸ್ಥಿತವಾದ ಜೀವನ ವಿಧಾನವೆಂಬ ನೆಲೆಯಲ್ಲಿ ಜನರ ಮುಂದಿಟ್ಟು ಇನ್ನೊಂದೆಡೆ ತೌಹೀದ್‌ಗೆ ವಿರುದ್ಧವಾದುದೆಲ್ಲವನ್ನೂ ಕಿತ್ತೆಸೆದು ಜೀವನವನ್ನು ಸಂಪೂರ್ಣವಾಗಿ ತೌಹೀದ್‌ನ ಬುನಾದಿಯಲ್ಲಿ ಕಟ್ಟಿ ಬೆಳೆಸಲು ಉಪದೇಶಿಸಿದ್ದರು. ತಾವು ಮಾನದಂಡವಾಗಿ ಅಂಗೀಕರಿಸಿರುವ ನೈತಿಕ ಸಿದ್ಧಾಂತಗಳ ಬುನಾದಿಯಲ್ಲಿ ತಮ್ಮ ಸಮಗ್ರ ಜೀವನ ಪದ್ಧತಿಯನ್ನು ಸಂಸ್ಥಾಪಿಸಬೇಕೆಂದು ಪ್ರವಾದಿ(ಸ) ಬಯಸಿದ್ದರು. ಅಜ್ಞಾನ ಕಾಲದ ಕವಿ, ತತ್ವಜ್ಞಾನಿ ಮತ್ತು ವಾಗ್ಮಿಗಳಿಗೆ ಪ್ರಶಂಸೆ ಮತ್ತು ಶುಭ ಕಾಮನೆಗಳು ದೊರೆಯುತ್ತಿದ್ದಂತಹ ವಿಷಯಗಳನ್ನು ಪ್ರವಾದಿವರ್ಯರು(ಸ) ಪ್ರತಿಪಾದಿಸಿದಾಗ ವಿರೋಧದ ಭುಗಿಲೇಳುವಿಕೆಗೆ ಅದುವೇ ಹೇತುವಾಯಿತು. ಬಹುದೇವ ವಿಶ್ವಾಸ (ಶಿರ್ಕ್)ದ ಆಧಾರದಲ್ಲಿ ಬೆಳೆದು ಬಂದಿದ್ದ ಜೀವನ ವ್ಯವಸ್ಥೆಯನ್ನು ತೊಲಗಿಸಿ ಅದನ್ನು ಏಕದೇವ ವ್ಯವಸ್ಥೆಯಂತೆ ಸುಧಾರಿಸಲು ಜನರು ಸಿದ್ಧರಿರಲಿಲ್ಲ. ಶತಮಾನಗಳಿಂದ ಅಜ್ಞಾನ ಜನ್ಯ ಜೀವನಕ್ಕೆ ಬುನಾದಿಯಾಗಿದ್ದ ಹಾಗೂ ಕೆಲವು ವಿಶಿಷ್ಟ ವರ್ಗದ, ಗೋತ್ರದ ಹಿತಾಸಕ್ತಿಗಳಿಗೆ ಸಂಬಂಧಿಸಿದ ಸಕಲ ಪಕ್ಷ ಪಾತಿತ್ವಗಳನ್ನೂ ಪೂರ್ವಿಕರ ಆಚಾರ, ಉಚ್ಛನೀಚತೆ, ಪರಂಪರಾಗತ

ಹಕ್ಕು, ಸ್ಥಾನಮಾನ ಮತ್ತು ಆರ್ಥಿಕ ಹಿತಾಸಕ್ತಿಗಳನ್ನೂ ಒಂದೇ ಬಾರಿಗೆ ಕಳೆದುಕೊಳ್ಳಲು ಅವರು ಸಿದ್ಧರಿರಲಿಲ್ಲ. ರೂಢಿಯಲ್ಲಿದ್ದ ದುರಾಚಾರಗಳಿಂದ ದೊರೆಯುತ್ತಿದ್ದ ಸುಖಾಡಂಬರಗಳನ್ನೂ, ಆನಂದವನ್ನೂ ಸ್ವೇಚ್ಛಾ ಸ್ವಾತಂತ್ರ್ಯವನ್ನೂ ಕೈಬಿಟ್ಟು, ಸದ್ಗುಣದ ಮಿತಿಗಳಿಂದ ಬಂಧಿಸಲ್ಪಡುವುದನ್ನು ಅವರು ಮೆಚ್ಚಿರಲಿಲ್ಲ. ಜನರು ಪ್ರವಾದಿವರ್ಯರಂತೆಯೇ(ಸ) ಹಿಂದಿನ ಪ್ರವಾದಿಗಳನ್ನೂ ಇದೇ ಕಾರಣಕ್ಕಾಗಿ ವಿರೋಧಿಸಿದ್ದರು. ಕೇವಲ ಜ್ಞಾನ ಮತ್ತು ಸಾಹಿತ್ಯವೆಂಬ ನೆಲೆಯಲ್ಲಿ ತೌಹೀದ್ (ಏಕದೇವ), ಆಖಿರತ್ (ಪರಲೋಕ) ಮತ್ತು ಸದ್ಗುಣಗಳ ಕುರಿತು ಪ್ರವಾದಿಗಳು ಪ್ರಚಾರ ಮಾಡುತ್ತಿದ್ದರೆ ಅಂದಿನ ಜನತೆಯು ಅವರನ್ನು ಸಹಿಸುತ್ತಿತ್ತು. ಮಾತ್ರವಲ್ಲ ಕವಿಗಳನ್ನೂ, ತತ್ವಜ್ಞಾನಿಗಳನ್ನೂ, ಸಾಹಿತಿಗಳನ್ನೂ ಹೊಗಳಿದಂತೆ ಪ್ರವಾದಿಗಳನ್ನೂ ಹೊಗಳಿ ಬಾನೆತ್ತರಕ್ಕೆ ಏರಿಸುತ್ತಿತ್ತು. ಆದರೆ ಪ್ರತಿಯೊಬ್ಬ ಪ್ರವಾದಿಯ ಕರೆಯು ಕೇವಲ ಅಷ್ಟಕ್ಕೇ ಸೀಮಿತವಾಗಿರಲಿಲ್ಲ. "ಅಲ್ಲಾಹನನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ. ಅಕ್ರಮಿಗಳಾದ ಜನರನ್ನು ಅನುಸರಿಸಬೇಡಿರಿ. ನಿಮ್ಮ ಪ್ರಭುವಿನಿಂದ ಅವತೀರ್ಣಗೊಂಡಿರುವುದನ್ನು ಅನುಸರಿಸಿರಿ. ಆತನ ಹೊರತು ಇನ್ನಾವ ಸಂರಕ್ಷಕನನ್ನು ಅನುಸರಿಸಬೇಡಿರಿ." (ಪವಿತ್ರ ಕುರ್‌ಆನ್) ಎಂಬುದಾಗಿಯೂ ಅವರು ವಿನಂತಿಸಿದರು. ಅಲ್ಲದೆ, ಈ ಧ್ಯೇಯ ಸಾಧನೆಗಾಗಿ ಅವರು ಒಂದು ಸ್ವತಂತ್ರ ಸಂಘಟನೆಯನ್ನೇ ನಡೆಸಿ, ತಮ್ಮ ಅನುಯಾಯಿಗಳನ್ನು ಸುಸಂಘಟಿತವಾಗಿ ಒಗ್ಗೂಡಿಸಿ ಸಾಂಸ್ಕೃತಿಕ, ನಾಗರಿಕ ಮತ್ತು ನೈತಿಕ ವ್ಯವಸ್ಥೆಗಳನ್ನು ಪ್ರಸ್ತುತ ಧ್ಯೇಯಕ್ಕನುರೂಪವಾಗಿ ಬದಲಾಯಿಸಲೂ ಪ್ರಯತ್ನಿಸಿದ್ದರು. ಇಲ್ಲಿ ಇಸ್ಲಾಮೇತರ ವ್ಯವಸ್ಥೆಗಳೊಂದಿಗೆ ಪೂರ್ಣ ಅಥವಾ ಆಂಶಿಕ ಸಂಬಂಧ ಹೊಂದಿದವರಿಂದ ವಿರೋಧ ಆರಂಭವಾಗುತ್ತದೆ. ನಮ್ಮ ಬಗೆಗಿನ ವಿರೋಧವೂ ಅದೇ ಬಿಂದುವಿನಿಂದ ಉಗಮವಾಗಿದೆಯೆಂಬುದನ್ನು ನಾವು ಈಗಾಗಲೇ ಕಂಡುಕೊಂಡಿದ್ದೇವೆ.

ಸುದೀರ್ಘ ಕಾಲದಿಂದ ಮುಸ್ಲಿಮರ ಸಂಪೂರ್ಣ ಜೀವನ ಸೌಧವು ಅನೇಕ ಇಸ್ಲಾಮೇತರ ಪದ್ಧತಿಗಳೊಂದಿಗೆ ಒಪ್ಪಂದ ಮಾಡಿಕೊಂಡು ಮುಂದುವರಿಯುತ್ತಿದೆ. ಇದು ಕೇವಲ ಲೌಕಿಕ ಒಪ್ಪಂದಗಳಲ್ಲ. ಅವುಗಳಿಗೆ ಧರ್ಮದ ಲೇಪವನ್ನೇ ನೀಡಲಾಗಿದೆ. ಅತ್ಯಂತ ನಿಷ್ಕಳಂಕರೆನಿಸಿಕೊಂಡ ಅನೇಕ ಮಂದಿಯೂ ಅದರಲ್ಲಿ ಸಿಲುಕಿದ್ದಾರೆ. ದುಷ್ಟ ಪದ್ಧತಿಯು ಸಂಬಂಧವಿರಿಸಿಕೊಂಡಿರುವುದರೊಂದಿಗೆ ದೇವಭಕ್ತಿ ಮತ್ತು ಆರಾಧನೆಗಳ ಕೆಲವು ಪ್ರದರ್ಶನಗಳಿಂದ ಅವರು ಸಂತೃಪ್ತಿ ತಾಳುತ್ತಾರೆ. ತಮ್ಮ ಮೋಕ್ಷಕ್ಕೆ ಈ ಸೀಮಿತ ದೇವ ಭಕ್ತಿ ಮತ್ತು ಆರಾಧನಾ ಕ್ರಮಗಳು ಸಾಕೆಂದು ಭಾವಿಸಲಾಗುತ್ತಿದೆ. ಅದೆಷ್ಟೇ ಮಹನೀಯರ ಮತ್ತು ಸಭ್ಯರ ಸ್ಥಾನಮಾನಗಳಿಗೂ ಆಧ್ಯಾತ್ಮಿಕ ಉನ್ನತಿಗೂ ಉನ್ನತ ಪದವಿಗಳಿಗೂ ಅವರು ಇಸ್ಲಾಮೇತರ ಪದ್ಧತಿಯೊಂದಿಗೆ ಮಾಡಿಕೊಂಡಿರುವ ಮೈತ್ರಿಯು ಧಕ್ಕೆಯೊದಗಿಸುವುದಿಲ್ಲ. ಸತ್ಯ ನಿಷೇಧ, ಅಜ್ಞಾನ, ಅಂಧವಿಶ್ವಾಸ ಮತ್ತು ಅಕ್ರಮ ಮರ್ದನಗಳನ್ನು ನಾಲಗೆಯಿಂದ ಹಳಿಯುತ್ತಾ, ಪ್ರವಾದಿ ಮತ್ತು ಸಹಾಬಿವರ್ಯರ ಕಾಲವನ್ನು ಭಕ್ತ್ಯಾಧರಗಳಿಂದ ಭಾಷಣ ಮತ್ತು ಲೇಖನಗಳಲ್ಲಿ ಆಕರ್ಷಿತವಾಗಿ ಚಿತ್ರೀಕರಿಸಿದರೆ ತಮ್ಮ ಇಸ್ಲಾಮೀ ಕರ್ತವ್ಯ ಸಂಪೂರ್ಣಗೊಂಡಿತೆಂಬುದು ಅವರ ಧೋರಣೆಯಾಗಿದೆ. ತರುವಾಯ ತಾವು ನಿರಂತರ ಶಪಿಸುತ್ತಿರುವ ಅಂಧವಿಶ್ವಾಸ, ಅನಾಚಾರ, ಅಕ್ರಮ-ಮರ್ದನಗಳ ದುಷ್ಟ ಪದ್ಧತಿಯ ಸೇವೆಗೆ

ತಮ್ಮನ್ನೂ, ಮಕ್ಕಳನ್ನೂ ಬಂಧು ಮಿತ್ರಾದಿಗಳನ್ನೂ ಬಲಿ ಕೊಡುತ್ತಾರೆ. ಇಂತಹ ವಾತಾವರಣದಲ್ಲಿ ನಾವು ಸತ್ಯಧರ್ಮ ಮತ್ತು ಅದರ ಬೇಡಿಕೆಗಳನ್ನೂ ಅದರ ಹೊಣೆಗಾರಿಕೆಯನ್ನೂ ವಸ್ತುನಿಷ್ಠವಾಗಿ ವಿವರಿಸುವುದರಲ್ಲೇ ತೃಪ್ತರಾಗದೆ ನಿಷಿದ್ಧ ಪದ್ಧತಿಯೊಂದಿಗಿನ ಎಲ್ಲಾ ಸಂಬಂಧಗಳನ್ನೂ ಕಡಿದುಕೊಂಡು ಏಕಾಗ್ರತೆ ಮತ್ತು ಏಕವರ್ಣದಿಂದ ಸತ್ಯವನ್ನು ಅನುಸರಿಸಬೇಕೆಂದೂ ಮಿಥ್ಯ ವ್ಯವಸ್ಥೆಯನ್ನು ನಾಶಗೊಳಿಸಿ ಸತ್ಯ ವ್ಯವಸ್ಥೆಯನ್ನು ಸ್ಥಾಪಿಸಲಿಕ್ಕಾಗಿ ತನು, ಮನ, ಧನಗಳನ್ನು ಅರ್ಪಿಸಬೇಕೆಂದೂ ಹೇಳಿದರೆ ಆ ಅಪರಾಧ ಅಕ್ಷಮ್ಯವೆಂಬುದು ಸ್ಪಷ್ಟ. ಇದುವೇ ಧರ್ಮದ ಬೇಡಿಕೆ ಮತ್ತು ಹೊಣೆಗಾರಿಕೆಗಳೆಂದೂ ಇದುವೇ ಏಕಾಗ್ರತೆಯೆಂದೂ ಮಿಥ್ಯ ಪದ್ಧತಿಯೊಂದಿಗಿನ ಸತ್ಯವಿಶ್ವಾಸಿಯ ಸಂಬಂಧವು ಒಪ್ಪಂದವಾಗಿರದೆ ಪೈಪೋಟಿ ಮತ್ತು ಸಂಘರ್ಷವೆಂದು ಯಥಾವತ್ತಾಗಿ ಒಪ್ಪಿಕೊಂಡರೆ ಎರಡರಲ್ಲೊಂದು ವರ್ಗವನ್ನು ಅವರು ಕಡ್ಡಾಯವಾಗಿ ಅನುಸರಿಸಬೇಕಾಗುವುದು. ಒಂದೋ ತಮ್ಮ ಹಿತಾಸಕ್ತಿಗಳನ್ನು ಬಲಿನೀಡಲೊಪ್ಪಿ ಈ ಪ್ರಯತ್ನದಲ್ಲಿ ಭಾಗಿಗಳಾಗಬೇಕು. ಆದರೆ ಇದು ಅಷ್ಟೊಂದು ಸುಲಭವಲ್ಲವೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಹಾಗಿಲ್ಲದಿದ್ದರೆ ಇದೇ ಸತ್ಯವಾಗಿದ್ದರೂ ತಮ್ಮ ದೌರ್ಬಲ್ಯವು ಅದರೊಂದಿಗೆ ಸಹಕರಿಸುವುದಕ್ಕೆ ತಡೆಯಾಗಿದೆಯೆಂದು ಒಪ್ಪಿಕೊಳ್ಳಬೇಕು. ಯಾಕೆಂದರೆ ಅವರು ಈ ತನಕ ಸಂತೃಪ್ತಿಯಿಂದ ನಿರ್ವಹಿಸುತ್ತಿದ್ದ ಆ ಮೋಕ್ಷದ ಭರವಸೆಗೆ ಈ ಮೂಲಕ ಧಕ್ಕೆಯಾಗುವುದಲ್ಲದೇ ವೈಯಕ್ತಿಕ ಮತ್ತು ಆಧ್ಯಾತ್ಮಿಕವಾಗಿ ಅವರಿಗೆ ದೊರೆಯುತ್ತಿದ್ದ ಉನ್ನತ ಪದವಿಗಳು ನಷ್ಟ ಹೊಂದುವುದು. ಇದನ್ನು ಅವರು ಅಷ್ಟು ಸುಲಭದಲ್ಲಿ ಕಳೆದು ಕೊಳ್ಳಲು ಸಿದ್ಧರಿಲ್ಲ. ಹೀಗಾಗಿ ಬಹುದೊಡ್ಡ ವಿಭಾಗವು ಮೂರನೆಯ ಹಾದಿಯೊಂದನ್ನು ಅವಲಂಬಿಸುವುದು ಅನಿವಾರ್ಯವಾಗಿದೆ. ನಮ್ಮ ಧರ್ಮ ಪ್ರಚಾರವನ್ನು ತಪ್ಪೆಂದು ಬಹಿರಂಗವಾಗಿ ಹೇಳದಿರುವುದೇ ಆ ಮಾರ್ಗ. ಯಾಕೆಂದರೆ ಅದಕ್ಕೆ ಅವರಿಗೆ ಯಾವ ಕಾರಣವೂ ದೊರೆಯುವುದಿಲ್ಲ. ಆದರೆ ಇದು ಸತ್ಯವೆಂದು ಬಹಿರಂಗವಾಗಿ ಒಪ್ಪಿಕೊಳ್ಳಲೂ ಅವರು ಸಿದ್ಧರಿಲ್ಲ. ಸಾಂದರ್ಭಿಕವಾಗಿ ಇದರ ವಸ್ತುಸ್ಥಿತಿಯನ್ನು ಒಪ್ಪಬೇಕಾದಾಗಲೆಲ್ಲಾ ಅವರು ಮೂಲಭೂತ ತತ್ವಗಳನ್ನು ಒತ್ತಟ್ಟಿಗಿಟ್ಟು ಅದರಲೊಬ್ಬ ವ್ಯಕ್ತಿ ಅಥವಾ ಕೆಲವು ವ್ಯಕ್ತಿಗಳ ಮೇಲೆ ಆರೋಪಗಳನ್ನು ಹೊರಿಸುತ್ತಾರೆ. ಯಾಕೆಂದರೆ, ತನ್ಮೂಲಕ ಅವರಿಗೆ ಅವರೇ ಒಪ್ಪಿಕೊಂಡಿರುವ ಸತ್ಯದೊಂದಿಗಿನ ತಮ್ಮ ಅಸಹಕಾರಕ್ಕೆ ಆ ರೀತಿಯಿಂದಾದರೂ ಸಮರ್ಥನೆ ದೊರೆಯುತ್ತದಲ್ಲವೇ. ಸೃಷ್ಟಿಗಳ ಬಾಯಿ ಮುಚ್ಚಲಿಕ್ಕಾಗಿ ಅಭಿವ್ಯಕ್ತ ಗೊಳಿಸಲಾಗುತ್ತಿರುವ ಈ ವಾದಗಳಿಂದ ನಾಳೆ ಪರಲೋಕದಲ್ಲಿ ಅಲ್ಲಾಹನ ಬಾಯಿ ಮುಚ್ಚಿಸಲು ಸಾಧ್ಯವಿದೆಯೇ ಎಂಬುದನ್ನು ಈ ಮಹನೀಯರು ಸ್ವಲ್ಪ ಆಲೋಚಿಸುತ್ತಿದ್ದರೆ!

## ನಮ್ಮ ಕಾರ್ಯ ವಿಧಾನ

ಈ ಸಂದೇಶದ ಪ್ರಚಾರಕ್ಕಾಗಿ ನಾವು ಕೈಗೊಂಡಿರುವ ಕಾರ್ಯ ವಿಧಾನವನ್ನು ಸಂಕ್ಷಿಪ್ತವಾಗಿ ವಿವರಿಸುತ್ತೇನೆ. ನಮ್ಮ ಸಂದೇಶದಂತೆಯೇ ಕಾರ್ಯ ವಿಧಾನವನ್ನೂ ಪವಿತ್ರ ಕುರ್‌ಆನ್ ಮತ್ತು ಪ್ರವಾದಿಗಳ ಮಾರ್ಗದಿಂದಲೇ ಆಯ್ದುಕೊಳ್ಳಲಾಗಿದೆ. ನಮ್ಮ ಸಂದೇಶವನ್ನು ಸ್ವೀಕರಿಸಿದುದರಿಂದ ನಾವು ಪ್ರಪ್ರಥಮವಾಗಿ ಬಯಸುವುದೇನೆಂದರೆ ಅವರು ಸಂಪೂರ್ಣವಾಗಿ ಮತ್ತು ಬೇಷರತ್ತಾಗಿ ಅಲ್ಲಾಹನ ದಾಸ್ಯಕ್ಕೆ ತಮ್ಮನ್ನು ಅರ್ಪಿಸಿಕೊಳ್ಳಬೇಕು. ಅವರು ತಮ್ಮ ವರ್ತನೆಗಳಲ್ಲಿ

ನಿಷ್ಕಳಂಕತೆ ಮತ್ತು ಏಕಾಗ್ರತೆಯನ್ನು ರುಜು ಪಡಿಸಬೇಕು. ತಮ್ಮ ವಿಶ್ವಾಸಕ್ಕೆ ವಿರುದ್ಧವಾದ ಎಲ್ಲಾ ವಿಷಯಗಳಿಂದಲೂ ಜೀವನವನ್ನು ಪರಿಶುದ್ಧಗೊಳಿಸಲು ಪ್ರಯತ್ನಿಸಬೇಕು. ಇಲ್ಲಿಂದ ಅವರ ಗುಣನಡತೆಗಳ ಸುಧಾರಣೆ ಮತ್ತು ಪರೀಕ್ಷೆಯ ಆರಂಭವಾಗುತ್ತದೆ. ದೊಡ್ಡ ದೊಡ್ಡ ಗಾಳಿ ಗೋಪುರಗಳ ನಿರೀಕ್ಷೆಯನ್ನು ಇಟ್ಟುಕೊಂಡ ಉನ್ನತ ವಿದ್ಯಾಭ್ಯಾಸವನ್ನು ಗಳಿಸಿದವರಿಗೆ ತಮ್ಮ ಕೈಗಳಿಂದಲೇ ಅವುಗಳನ್ನು ನಾಶಗೊಳಿಸಬೇಕಾದೀತು. ತರುವಾಯ ಅವರು ಹೆಜ್ಜೆಯಿರಿಸುವ ಹಾದಿಯಲ್ಲಿ ಸ್ಥಾನಮಾನ, ಸುಖಾಡಂಬರ, ಆರ್ಥಿಕ ಅಭಿವೃದ್ಧಿ ಇತ್ಯಾದಿಗಳನ್ನು ತಮ್ಮ ಜೀವನದಲ್ಲಿ ನಿರೀಕ್ಷಿಸುವ ಮಾತಂತಿರಲಿ, ಎರಡು ಮೂರು ತಲೆಮಾರುಗಳ ವರೆಗೆ ಅವರಿಗೆ ಆ ಕುರಿತು ಚಿಂತಿಸಲೂ ಸಾಧ್ಯವಿಲ್ಲ. ಅನ್ಯರ ಆಸ್ತಿಪಾಸ್ತಿ, ಸೊತ್ತು ವಿತ್ತಗಳನ್ನು ಅಕ್ರಮವಾಗಿ ವಶವಿಟ್ಟು ಸುಖ ಸಮೃದ್ಧಿಯನ್ನು ಅನುಭವಿಸುತ್ತಿರುವವರು ಅವೆಲ್ಲವನ್ನೂ ತ್ಯಜಿಸಿ ಸುಖಾಡಂಬರಗಳಿಗೆ ವಿದಾಯ ಹೇಳಬೇಕಾಗಬಹುದು. ಯಾಕೆಂದರೆ ಅವರು ತನ್ನ ಯಜಮಾನ, ಪ್ರಭು, ಅಧಿಪತಿಯೆಂದು ಅಂಗೀಕರಿಸಿರುವ ಅಲ್ಲಾಹನ ಇಚ್ಛೆಗೆ ವಿರುದ್ಧವಾಗಿ ಒಂದು ತುತ್ತು ಅನ್ನ ಸೇವಿಸುವುದೂ ಅವರ ವಿಶ್ವಾಸಕ್ಕೆ ವಿರುದ್ಧವಾಗುವುದು. ಇಸ್ಲಾಮೇತರ ಮತ್ತು ನಿಷಿದ್ಧ ಪದ್ಧತಿಯಿಂದ ಜೀವನ ಸಾಗಿಸುತ್ತಿದ್ದವರಿಗೆ ಸುಖ ಸಮೃದ್ಧಿಯ ಕನಸು ಕಾಣಲು ಸಾಧ್ಯವಾಗುವುದಿಲ್ಲ. ಮಾತ್ರವಲ್ಲ ಆ ರೀತಿಯಲ್ಲಿ ಗಳಿಸಿದ ಆಹಾರವನ್ನು ಸೇವಿಸುವುದು ಅವರಿಗೆ ಅಸಹ್ಯವಾಗುತ್ತದೆ. ಪ್ರಸ್ತುತ ಮಾರ್ಗಗಳನ್ನು ತೊರೆದು ಇತರ ಪರಿಶುದ್ಧ ಮಾರ್ಗಗಳನ್ನು ಅವೆಷ್ಟೇ ತುಚ್ಛವಾಗಿದ್ದರೂ ಅವರು ಹುಡುಕುತ್ತಿರುತ್ತಾರೆ. ಅವರೊಂದಿಗೆ ಈ ಹಿಂದೆ ಪ್ರಸ್ತಾಪಿಸಿರುವಂತೆ ಮಾನವನು ಈ ಹಾದಿಯನ್ನು ಕೈಗೊಂಡ ಬಳಿಕ ಆತನ ಅತ್ಯಂತ ನಿಕಟ ಪರಿಸರವು ಆತನ ವೈರಿಯಾಗಿ ಬಿಡಬಹುದು. ಪ್ರಪ್ರಥಮವಾಗಿ ಆತನ ವಿಶ್ವಾಸದ ವಿರುದ್ಧ ಮಾತಾಪಿತರು, ಸಹೋದರ-ಸಹೋದರಿಯರು, ಪತ್ನಿ-ಮಕ್ಕಳು, ಆಪ್ತ ಸ್ನೇಹಿತರು ಸಮರ ಘೋಷಿಸಬಹುದು. ಕೆಲವೊಮ್ಮೆ ಓರ್ವನಲ್ಲಿ ಈ ಮಾರ್ಗದ ಪ್ರಥಮ ಸೂಚನೆಯು ಪ್ರತ್ಯಕ್ಷಗೊಂಡಾಗ ಆತನನ್ನು ಮುದ್ದಿನಿಂದ ಸಾಕಿ ಬೆಳೆಸಿದ ಮನೆ ಮತ್ತು ಕುಟುಂಬಗಳು ಆತನಿಗೆ ಕಣಜದ ಗೂಡಿನಂತೆ ಭಾಸವಾಗಬಹುದು. ಆದರೆ ವಾಸ್ತವದಲ್ಲಿ ಇಸ್ಲಾಮಿ ಆಂದೋಲನದ ಪ್ರಾಥಮಿಕ ತರಬೇತಿ ಕೇಂದ್ರವು ಇದೇ ಆಗಿದೆ. ಇದು ಉತ್ತಮ ನಿಷ್ಠಾವಂತ ಹಾಗೂ ಪರಿಪಕ್ವ ಮತಿಗಳಾದ ಕಾರ್ಯಕರ್ತರ ಆಯ್ಕೆಗೆ ಪ್ರಕೃತಿಯೇ ಏರ್ಪಡಿಸಿರುವ ವ್ಯವಸ್ಥೆ. ಈ ಪ್ರಾಥಮಿಕ ಪರೀಕ್ಷೆಯಲ್ಲಿಯೇ ಸೋಲುವವರು ಇಸ್ಲಾಮಿ ಆಂದೋಲನದಿಂದ ತಾವಾಗಿಯೇ ಬೇರ್ಪಡುತ್ತಾರೆ. ನಮಗೆ ಅವರನ್ನು ಹೊರ ಹಾಕುವ ತೊಂದರೆ ಇರುವುದಿಲ್ಲ. ಆದರೆ ಈ ಹಂತವನ್ನು ಯಶಸ್ವಿಯಾಗಿ ದಾಟುವವರು ತಮ್ಮ ಅರ್ಹತೆಯನ್ನು ತಾವೇ ಎತ್ತಿ ತೋರಿಸುತ್ತಾರೆ. ಅಲ್ಲಾಹನ ಮಾರ್ಗದಲ್ಲಿ ಹೆಜ್ಜೆ ಇರಿಸಿ ಪ್ರಥಮ ಸತ್ವ ಪರೀಕ್ಷೆಯನ್ನು ಗೆಲ್ಲುವ ನಿಷ್ಕಳಂಕತೆ, ಸ್ಥಿರತೆ, ಸಹನೆ, ಧೈರ್ಯ, ಪ್ರೀತಿ ಮುಂತಾದ ಶಕ್ತಿಶಾಲಿ ಗುಣಗಳು ತಮ್ಮಲ್ಲಿವೆಯೆಂದು ಸಾಬೀತು ಪಡಿಸುತ್ತಾರೆ. ಇಂತಹ ಜನರನ್ನು ಆತ್ಮ ವಿಶ್ವಾಸ ಮತ್ತು ತೃಪ್ತಿಯಿಂದ ಮುಂದಿನ ಹಂತಕ್ಕೆ ಒಯ್ಯಬಹುದು. ಎರಡನೇ ಹಂತದಲ್ಲಿ ಮೊದಲಿನದಕ್ಕಿಂತ ಗಂಭೀರವಾದ ಸತ್ವ ಪರೀಕ್ಷೆಗಳು ಎದುರಾಗುವುವು. ಆ ಪರೀಕ್ಷೆಗಳು ಸಾಚಾ ಮತ್ತು ಖೋಟಾ ನಾಣ್ಯಗಳಂತೆಯೇ ನಿಷ್ಕಳಂಕರನ್ನು ಮತ್ತು ಕಪಟಿಗಳನ್ನು ಪ್ರತ್ಯೇಕಿಸಿ ತಿಳಿಯುವ ಒರೆಗಲ್ಲಾಗಿರುವುದು. ನಮಗೆ

ತಿಳಿದಿರುವ ಮಟ್ಟಿಗೆ ಮಾನವನೆಂಬ ಸಂಪನ್ಮೂಲದಿಂದ ಉಪಯೋಗಪ್ರದವಾದ ಮೌಲ್ಯಗಳನ್ನು ಪ್ರತ್ಯೇಕಿಸಿ ಅವುಗಳನ್ನು ಇನ್ನಷ್ಟು ಫಲಪ್ರದಗೊಳಿಸಲಿಕ್ಕಾಗಿ ಹಿಂದೆಯೇ ಈ ಮಾರ್ಗವನ್ನು ಬಳಸಲಾಗುತ್ತಿತ್ತು. ಸತ್ವ ಪರೀಕ್ಷೆಗಳೆಂಬ ಇಂತಹ ಅಗ್ನಿಕುಂಡಗಳಿಂದ ಪರಿಶುದ್ಧ ಗೊಂಡ ದೇವ ಭಕ್ತಿಯ ಪ್ರಮಾಣವು ಕರ್ಮಶಾಸ್ತ್ರದ ಅಳತೆ ಮತ್ತು ತೂಕಗಳಿಗೆ ಸರಿಯಾಗಿ ಸಿಗುವುದಿಲ್ಲವಾದರೂ ಅಥವಾ ಆ ಪ್ರಯತ್ನಗಳ ಮಾಪಕಗಳಿಗೆ ಸ್ವಲ್ಪಂಶ ಕಡಿಮೆಯಾಗಿದ್ದರೂ ಕೇವಲ ಅದರಿಂದಲೇ ಲೋಕ ನಿಯಂತ್ರಣದ ಘನ ಜವಾಬ್ದಾರಿಕೆಯನ್ನೂ ಅಲ್ಲಾಹನ ಭಾರೀ ಅಮಾನತುಗಳನ್ನೂ ವಹಿಸುವ ಕೆಚ್ಚು ಉಂಟಾಗಬಹುದು.

ನಮ್ಮ ಈ ಸಂಘಟನೆಯೊಂದಿಗೆ ಸಂಬಂಧವಿರಿಸಿಕೊಂಡವರಿಂದ ನಾವು ಎರಡನೆಯದಾಗಿ ಬಯಸುವುದೇನೆಂದರೆ ಅವರು ತಮಗೆ ದೊರೆತ ಸತ್ಯಪ್ರಕಾಶವನ್ನು ಸ್ನೇಹಿತರಲ್ಲಿಯೂ ಸಂಬಂಧಿಕರಲ್ಲಿಯೂ ನೆರೆಕರೆಯವರಲ್ಲಿಯೂ ಅವರಿಗೆ ವ್ಯಾಪಾರ ವಹಿವಾಟುಗಳ ಸಂಪರ್ಕವಿರುವವರಲ್ಲಿಯೂ ಪ್ರತಿಬಿಂಬಿಸಿ ಇಸ್ಲಾಮಿ ಜೀವನದೆಡೆಗೆ ಅವರನ್ನು ಆಹ್ವಾನಿಸಬೇಕು. ಇದರಿಂದ ಸತ್ವ ಪರೀಕ್ಷೆಗಳ ಹೊಸ ಸರಣಿಯು ಆರಂಭವಾಗುವುದು. ಮೂರನೇಯದಾಗಿ ಈ ಧರ್ಮ ಪ್ರಚಾರ ನಿರ್ವಹಣೆಯಿಂದಾಗಿ ಪ್ರಚಾರಕನ ಸ್ವಜೀವನದಲ್ಲಿಯೇ ಸುಧಾರಣೆಯುಂಟಾಗಲಾರಂಭಿಸುವುದು. ಯಾಕೆಂದರೆ ಈ ರೀತಿಯಲ್ಲಿ ಕಾರ್ಯತತ್ಪರ ನಾಗುವುದರಿಂದ ಆತನೆಡೆಗೆ ಅನೇಕ ಸೂಕ್ಷ್ಮದರ್ಶಕ ಮತ್ತು ಸರ್ಚ್‌ಲೈಟ್‌ಗಳು ತಿರುಗುತ್ತವೆ. ಆತನ ವಿಶ್ವಾಸ ಮತ್ತು ಬೋಧನೆಗೆ ವಿರುದ್ಧವಾಗಿ ಅವನ ಜೀವನದಲ್ಲಿ ಗೋಚರಿಸುವ ಅತೀ ಕ್ಷುಲ್ಲಕ ತಪ್ಪುಗಳನ್ನೂ ಈ ವಿಮರ್ಶಕರು ಎತ್ತಿ ತೋರಿಸುತ್ತಾರೆ. ಜೀವನವನ್ನು ಅಂತಹ ತಪ್ಪುಗಳಿಂದ ವಿಮುಕ್ತಗೊಳಿಸುವಂತೆ ಅವರು ಆತನನ್ನು ಒತ್ತಾಯಿಸುತ್ತಾರೆ. ಬೋಧಕನು ತನ್ನ ಬೋಧನೆಗಳಲ್ಲಿ ನಿಷ್ಠಾವಂತ ಮತ್ತು ಪ್ರಾಮಾಣಿಕನಾಗಿದ್ದರೆ ಈ ಟೀಕೆಗಳಿಂದ ಆತ ಕುಪಿತನಾಗಲಾರನು. ಅಸಂಬದ್ಧ ಸಮರ್ಥನೆಗಳಿಂದ ತನ್ನ ತಪ್ಪನ್ನು ಮುಚ್ಚಿಡಲು ಪ್ರಯತ್ನಿಸಲಾರನು. ಬದಲಾಗಿ ವಿಮರ್ಶಕರ ಉಪಕಾರವನ್ನು ಬಳಸಿ ತನ್ನಲ್ಲಿ ಇನ್ನಷ್ಟು ಸುಧಾರಣೆ ತರಲು ಪ್ರಯತ್ನಿಸುವನು. ವಿಮರ್ಶಕರ ಬಯಕೆಯು ದುರುದ್ದೇಶ ಪೂರಿತವಾಗಿದ್ದರೂ ಅವರು ಪ್ರತಿಫಲಾಪೇಕ್ಷೆಯಿಲ್ಲದೆ ತಮ್ಮನ್ನು ಸುಧಾರಿಸಲು ತೀವ್ರವಾಗಿ ಪ್ರಯತ್ನಿಸುತ್ತಿರುವರೆಂದು ಪ್ರತಿಯೊಬ್ಬ ಬೋಧಕನು ಭಾವಿಸಬೇಕು. ಒಂದು ಪಾತ್ರೆಯನ್ನು ಅನೇಕ ಮಂದಿ ತೊಳೆದು ಶುಚಿಗೊಳಿಸುವ ಕಾರ್ಯಕ್ಕೆ ತೊಡಗಿದರೆ ಅದು ಎಷ್ಟೇ ಅಶುದ್ಧವಾಗಿದ್ದರೂ ಕೊನೆಗೆ ಸ್ಫಟಿಕದಂತೆ ಶುಭ್ರವಾಗುವುದು ಖಚಿತ.

## ಯುಕ್ತಿ ಮತ್ತು ಸದುಪದೇಶ

ತರುವಾಯ ಈ ಪ್ರಚಾರದ ಮೂಲಕ ನಮ್ಮ ಕಾರ್ಯಕರ್ತರಲ್ಲಿ ಅನೇಕ ಸದ್ಗುಣಗಳು ಮೈಗೂಡುವುದು. ಮುಂದೆ ಆ ಗುಣಗಳನ್ನು ಇತರ ರಂಗದಲ್ಲಿ ಬೇರೆ ರೀತಿಯಲ್ಲಿ ನಾವು ಬಳಸಿಕೊಳ್ಳಬೇಕಾಗುವುದು. ಬೋಧಕನಿಗೆ ಹಲವು ವಿಧದ ನಿರಾಶಾದಾಯಕ ಹಂತಗಳನ್ನು ದಾಟಬೇಕಾಗುತ್ತದೆ. ಕೆಲವೆಡೆ ಆತನು ಅಪಹಾಸ್ಯಕ್ಕೆ ಗುರಿಯಾಗುತ್ತಾನೆ. ಇತರ ಕೆಲವೆಡೆ ಅಸಭ್ಯ ಬೈಗುಳಗಳು ಆತನನ್ನು ಸ್ವಾಗತಿಸುವುದು. ಒಂದೆಡೆ ಆತನ ಮೇಲೆ ದೋಷಾರೋಪಗಳು

ಹೊರಿಸಲ್ಪಡುವಾಗ ಇನ್ನೊಂದೆಡೆ ಆತನನ್ನು ದುಷ್ಕೃತ್ಯಗಳಲ್ಲಿ, ತಂಟೆ-ತಕರಾರುಗಳಲ್ಲಿ ಸಿಲುಕಿಸುವ ಹೊಸ ಹೊಸ ಸೂತ್ರಗಳನ್ನು ಕಂಡು ಹಿಡಿಯಲಾಗುವುದು. ಮನೆಯಿಂದ ಬಹಿಷ್ಕರಿಸಲಾಗುತ್ತದೆ. ವಾರೀಸು ಹಕ್ಕುಗಳನ್ನು ತಡೆಯಲಾಗುತ್ತದೆ. ಸ್ನೇಹ ಮತ್ತು ಸಂಬಂಧಗಳನ್ನು ಮುರಿಯಲಾಗುತ್ತದೆ. ತನ್ನ ಪರಿಸರದಲ್ಲಿ ಉಸಿರು ಬಿಡಲೂ ಆತನಿಗೆ ಕಷ್ಟವಾಗುವುದು. ಇಂತಹ ವಾತಾವರಣದಲ್ಲಿ ಅಧೀರನಾಗದೆ, ಸತ್ಯದಿಂದ ವಿಚಲಿತನಾಗದೆ ದುಷ್ಟವಾದಿಗಳ ಮುಂದೆ ಶಸ್ತ್ರ ಸನ್ಯಾಸ ಮಾಡದೆ ಭಾವೋದ್ವೇಗದಿಂದ ಮಾನಸಿಕ ಸಮತೋಲನವನ್ನು ಕಳೆದುಕೊಳ್ಳದೆ ಬುದ್ಧಿವಂತಿಕೆ, ಚಾತುರ್ಯ, ದೃಢಚಿತ್ತತೆ, ದೇವ ಭಯ ಮತ್ತು ಸನ್ಮಾರ್ಗ ನಿಷ್ಠೆಯಿಂದ ಓರ್ವ ನೈಜ ಸದ್ಭಕ್ತನ ಸಹಾನುಭೂತಿ ಮತ್ತು ಹಿತಾಕಾಂಕ್ಷೆಯಿಂದ ತನ್ನ ಧ್ಯೇಯದಲ್ಲಿ ಅಚಲವಾಗಿ ನಿಂತು ತನ್ನ ಪರಿಸರವನ್ನು ಸುಧಾರಿಸುವ ನಿರಂತರ ಪ್ರಯತ್ನಕ್ಕೆ ತೊಡಗುವ ಕಾರ್ಯಕರ್ತನಲ್ಲಿ ಸದ್ಗುಣಗಳು ಖಂಡಿತವಾಗಿಯೂ ಬೆಳೆದು ಬರುವುವು. ನಮ್ಮ ಭಾವೀ ಚಟುವಟಿಕೆಗಳಲ್ಲಿ ಅದನ್ನು ಇನ್ನಷ್ಟು ವ್ಯಾಪಕವಾಗಿ ಉಪಯೋಗಿಸಿಕೊಳ್ಳಬಹುದು.

ಈ ಧರ್ಮಪ್ರಚಾರ ಕಾರ್ಯದ ಕುರಿತು ಪವಿತ್ರ ಕುರ್‌ಆನ್ ನಿರ್ದೇಶಿಸಿರುವ ವಿಧಾನವನ್ನೇ ನಮ್ಮ ಕಾರ್ಯಕರ್ತರಿಗೂ ನಾವು ಕಲಿಸಲು ಪ್ರಯತ್ನಿಸುತ್ತಿದ್ದೇವೆ. ಅಂದರೆ ಯುಕ್ತಿ (ಹಿಕ್‌ಮತ್) ಮತ್ತು ಸದುಪದೇಶಗಳ ಮೂಲಕ ಅಲ್ಲಾಹನ ಮಾರ್ಗದೆಡೆಗೆ ಆಹ್ವಾನಿಸುವುದು. ಅದರ ಕ್ರಮ ಬದ್ಧತೆಯನ್ನೂ ಪ್ರಕೃತಿದತ್ತ ವ್ಯವಸ್ಥೆಯನ್ನೂ ಗಮನದಲ್ಲಿಟ್ಟು ಜನರ ಮುಂದೆ ಮೊದಲು ಧರ್ಮದ ಪ್ರಾಥಮಿಕ ಮೂಲ ತತ್ವಗಳನ್ನೂ ಅನಂತರ ಆ ಮೂಲಕ ಬರುವ ಜವಾಬ್ದಾರಿಕೆ ಮತ್ತು ಕರ್ತವ್ಯಗಳನ್ನೂ ಕ್ರಮವಾಗಿ ಸಮರ್ಪಿಸಬೇಕು. ಯಾರಿಗೂ ಅವರ ಜೀರ್ಣ ಶಕ್ತಿಗೆ ಮೀರಿದ ಔಷಧವನ್ನು ಕೊಡಬಾರದು. ಶಾಖೆಗಳಿಗೆ ಬುನಾದಿಗಿಂತ ಹೆಚ್ಚು ಮಹತ್ವ ಕೊಡಬಾರದು. ಮೂಲದೋಷಗಳನ್ನು ದೂರಗೊಳಿಸುವುದಕ್ಕಿಂತ ಮುಂಚಿತವಾಗಿ ಬಾಹ್ಯ ಮತ್ತು ಆಂಶಿಕ ದೋಷಗಳನ್ನು ನಿವಾರಿಸಲು ಸಮಯ ವ್ಯರ್ಥ ಗೊಳಿಸಬಾರದು. ಅಸಡ್ಡೆ, ಅಂಧವಿಶ್ವಾಸ, ಕಂದಾಚಾರ ಮತ್ತು ದುರ್ಮಾರ್ಗಗಳಲ್ಲಿ ಸಿಲುಕಿದವರೊಂದಿಗೆ ದ್ವೇಷಪೂರ್ಣವಾಗಿ ವರ್ತಿಸದೆ ಓರ್ವ ನುರಿತ ವೈದ್ಯನ ಅನುಕಂಪ ಮತ್ತು ಹಿತಾಕಾಂಕ್ಷೆಯಿಂದ ಶುಶ್ರೂಷಿಸಬೇಕು. ಅಸಭ್ಯತೆ ಮತ್ತು ಕಲ್ಲೆಸೆತಗಳಿಗೆ ಪ್ರತ್ಯುತ್ತರವಾಗಿ ಒಳಿತನ್ನೇ ಬಯಸಲು ಕಲಿಯಿರಿ. ಅಕ್ರಮ ಮರ್ದನಗಳನ್ನು ಸಹಿಸಿರಿ, ಅಜ್ಞಾನಿ ಹಾಗೂ ಅವಿವೇಕಿಗಳೊಂದಿಗೆ ವಾಗ್ವಾದ ತರ್ಕಗಳಿಗೆ ಇಳಿಯಬೇಡಿರಿ. ನಿರರ್ಥಕ ಮತ್ತು ವಿವೇಕ ಶೂನ್ಯ ವಿಷಯಗಳಿಂದ ವಿಶಾಲ ಮನೋಭಾವಿಗಳಂತೆ ವಿಮುಖರಾಗಿರಿ. ಸತ್ಯದ ಅಗತ್ಯವಿಲ್ಲವೆಂಬ ನೀತಿಯನ್ನು ಅಂಗೀಕರಿಸಿದವರ ಬೆನ್ನು ಹತ್ತುವ ಬದಲಾಗಿ ನಿಷ್ಕಳಂಕರ ಹಾಗೂ ಸತ್ಯಾನ್ವೇಷಿಗಳ ಕಡೆಗೆ ಗಮನ ಹರಿಸಿರಿ. ಲೌಕಿಕ ದೃಷ್ಟಿಯಿಂದ ಅವರೆಷ್ಟೇ ನಗಣ್ಯರಾಗಿದ್ದರೂ ಅವರನ್ನು ಕಡೆಗಣಿಸಬೇಡಿರಿ. ನಿಮ್ಮ ಯಾವ ಪರಿಶ್ರಮಗಳಲ್ಲಿಯೂ ಆಡಂಬರವನ್ನು ಪ್ರದರ್ಶಿಸದಿರಿ. ನಿಮ್ಮ ಚಟುವಟಿಕೆಗಳನ್ನು ಅಹಂಕಾರದಿಂದ ನಿರೂಪಿಸುತ್ತಾ ಸಂತೋಷ ಪ್ರದರ್ಶಿಸಿ ಅನ್ಯರ ಗಮನವನ್ನು ಆಕರ್ಷಿಸಲು ಪ್ರಯತ್ನಿಸಲೇ ಬಾರದು. ಬದಲಾಗಿ ನಮ್ಮ ಎಲ್ಲಾ ಚಟುವಟಿಕೆಗಳು ಅಲ್ಲಾಹನಿಗೆ ಮೀಸಲೆಂದೂ ಆತನು ನಮ್ಮ ಸೇವೆಯನ್ನು ಚೆನ್ನಾಗಿ ತಿಳಿಯುವನೆಂದೂ ಅವುಗಳಿಗೆ ಅಲ್ಲಾಹನ ಬಳಿ ಸ್ಥಾನವಿದೆಯೆಂದೂ ಸೃಷ್ಟಿಗಳು ಅರಿಯಲಿ ಅಥವಾ ಅರಿಯದಿರಲಿ, ಅವರಿಂದ ಪುರಸ್ಕಾರ ಸಿಗಲಿ, ಶಿಕ್ಷೆ ಸಿಗಲಿ ಎಲ್ಲವೂ

ಸಮಾನವೆಂಬ ಮನೋಭಾವ, ದೃಢ ನಿಶ್ಚಯ ಮತ್ತು ಮನಶ್ಶಾಂತಿಯಿಂದ ಕಾರ್ಯನಿರತರಾಗಬೇಕು.

ಈ ಕಾರ್ಯ ತತ್ಪರತೆಗೆ ಅಸಾಮಾನ್ಯ ಸಂಯಮ, ತಾಳ್ಮೆ ಮತ್ತು ಅವಿಶ್ರಾಂತ ಪರಿಶ್ರಮದ ಅಗತ್ಯವಿದೆ. ಈ ರೀತಿ ಸುದೀರ್ಘ ಕಾಲ ಕರ್ತವ್ಯ ನಿರತರಾದರೂ ಕೇವಲ ಬಾಹ್ಯ ಮತ್ತು ಪ್ರದರ್ಶನಾತ್ಮಕ ಚಟುವಟಿಕೆಗಳಿಂದ ದೊರೆಯುವಂತಹ ಫಲವು ಲಭ್ಯವಾಗದಿರಬಹುದು. ಆದರೆ ಈ ಮೂಲಕ ಕಾರ್ಯಕರ್ತರಲ್ಲಿ ಒಂದೆಡೆ ಸಂಘಟನೆಯ ಅತ್ಯಧಿಕ ತ್ಯಾಗಪೂರ್ಣ ಹಂತಕ್ಕೆ ಅಗತ್ಯವಿರುವ ದೂರದೃಷ್ಟಿ, ಗಾಂಭೀರ್ಯ, ಪಕ್ವತೆ ಮತ್ತು ಕಾರ್ಯದಕ್ಷತೆಯು ಉಂಟಾಗುವುದು. ಇನ್ನೊಂದೆಡೆ ಈ ರೀತಿಯ ಚಟುವಟಿಕೆಯಿಂದ ಸಂಘಟನೆಯು ಮೊದಮೊದಲು ಮಂದಗತಿಯಿಂದ ಚಲಿಸಿದರೂ ಅದರ ಪ್ರತಿಯೊಂದು ಹೆಜ್ಜೆಯು ದೃಢವಾಗುತ್ತಾ ಹೋಗುವುದು. ಕೇವಲ ಈ ವಿಧಾನದ ತಬ್‌ಲೀಗ್(ಪ್ರಚಾರ)ನಿಂದ ಸಮಾಜದ ಕೆನೆಯನ್ನು ಹೊರತೆಗೆದು ಸಂಘಟನೆಯೊಂದಿಗೆ ವಿಲೀನಗೊಳಿಸಲು ಸಾಧ್ಯ. ಕೇವಲ ಕಸಗುಪ್ಪೆಯಂತೆ ಒಂದು ಜನಜಂಗುಳಿಯನ್ನು ಸೇರಿಸುವ ಬದಲಾಗಿ ಧರ್ಮ ಬೋಧನೆಯ ಈ ವಿಧಾನದಿಂದ ಸಮಾಜದ ಉತ್ತಮ ವಿಭಾಗವನ್ನು ಆಂದೋಲನದತ್ತ ಆಕರ್ಷಿಸಿದರೆ ನಿಷ್ಠಾವಂತ ಕಾರ್ಯಕರ್ತರು ಆಂದೋಲನಕ್ಕೆ ದೊರೆಯುತ್ತಾರೆ. ಅವರಲ್ಲಿ ಪ್ರತಿಯೊಬ್ಬರ ಸೇರ್ಪಡೆಯು ಸಹಸ್ರ ಸಂಖ್ಯೆಯಲ್ಲಿರುವ ಕುರಿಮಂದೆಗಿಂತಲೂ ಅಮೂಲ್ಯವಾಗಿರುವುದು.

ನಮ್ಮ ಕಾರ್ಯವಿಧಾನದ ಇನ್ನೊಂದು ಪ್ರಾಮುಖ್ಯ ಅಂಶವೇನೆಂದರೆ ನಾವು ನಮ್ಮನ್ನು ಮಿಥ್ಯ ವ್ಯವಸ್ಥೆಯ ಕಾನೂನು ಮತ್ತು ನ್ಯಾಯಾಲಯದ ಸಂರಕ್ಷಣೆಗಳಿಂದ ಮುಕ್ತಗೊಳಿಸಿದ್ದೇವೆ. ನಾವು ಇದನ್ನು ಜಗಜ್ಜಾಹೀರು ಪಡಿಸುತ್ತೇವೆ. ನಾವು ಮಾನವೀಯ ಹಕ್ಕುಗಳಿಗಾಗಲೀ, ಧನ, ಪ್ರಾಣ, ಮಾನ ಅಥವಾ ಇನ್ನಾವುದೇ ವಿಷಯದ ಸಂರಕ್ಷಣೆಗಾಗಲೀ ಮಿಥ್ಯವೆಂದು ಭಾವಿಸುವ ಪದ್ಧತಿಯ ನೆರವು ಪಡೆಯುವುದಿಲ್ಲ. ಆದರೆ ಈ ವಿಷಯವನ್ನು ನಾವು ಎಲ್ಲಾ ಸದಸ್ಯರಿಗೂ ಕಡ್ಡಾಯಗೊಳಿಸುವುದಿಲ್ಲ. ಬದಲಾಗಿ ಒಂದು ಉತ್ಕೃಷ್ಟವಾದ ಮಾದರಿಯನ್ನು ಅವರ ಮುಂದಿಟ್ಟು ಅದರ ಅತ್ಯುನ್ನತ ಮಟ್ಟಕ್ಕೂ ಏರುವ ಅಥವಾ ಪರಿಸ್ಥಿತಿಗೆ ಕಟ್ಟು ಬಿದ್ದು ಕೆಳಗಿಳಿದು ಅಧಃಪತನಹೊಂದುವ ಅವಕಾಶವನ್ನು ನಾವು ಅವರಿಗೆ ನೀಡುತ್ತೇವೆ. ಆದರೆ ಈ ಅಧಃಪತನಕ್ಕೆ ಒಂದು ಮಿತಿಯನ್ನು ನಾವು ನಿಶ್ಚಯಿಸಿದ್ದೇವೆ. ಅದಕ್ಕಿಂತಲೂ ಕೆಳಗೆ ಅಧಃಪತನ ಹೊಂದುವವರನ್ನು ನಾವು ಜಮಾಅತ್‌ನಲ್ಲಿ ಉಳಿಸಿಕೊಳ್ಳುವುದಿಲ್ಲ. ಅರ್ಥಾತ್ ಸುಳ್ಳು ದಾವೆ ಹೂಡುವುದು, ಸುಳ್ಳು ಸಾಕ್ಷಿ ಹೇಳುವುದು, ಕೇವಲ ಲೌಕಿಕ ಲಾಭಗಳಿಗಾಗಿ ಅಥವಾ ಸ್ವೇಚ್ಛೆಗೆ ಬಲಿಯಾಗಿ ಸ್ನೇಹ ಮತ್ತು ಕೌಟುಂಬಿಕ ಪಕ್ಷಪಾತಿತ್ವಕ್ಕೆ ಬಲಿಬಿದ್ದು ಆ ವ್ಯವಹಾರವನ್ನು ಸ್ವೀಕರಿಸುವ ಜನರಿಗೆ ನಮ್ಮ ಜಮಾಅತ್‌ನಲ್ಲಿ ಸ್ಥಳಾವಕಾಶವಿಲ್ಲ.

## ಆಜ್ಞಾಧಿಕಾರ ಅಲ್ಲಾಹನಿಗೆ ಮಾತ್ರ

ಕಾನೂನು ಮತ್ತು ನ್ಯಾಯಾಲಯದ ವಿಷಯದಲ್ಲಿ ನಾವು ಕೈಗೊಂಡಿರುವ ಈ ಕಾರ್ಯ ವಿಧಾನದಲ್ಲಿ ಅಡಕವಾಗಿರುವ ನೀತಿಯನ್ನು ಹೆಚ್ಚಿನವರಿಗೆ ಗ್ರಹಿಸಲು ಸಾಧ್ಯವಾಗಿಲ್ಲ. ಆದ್ದರಿಂದ ಅವರು ಆ ಕುರಿತು ನಮ್ಮೊಂದಿಗೆ ಅನೇಕ ಪ್ರಶ್ನೆಗಳನ್ನು ಕೇಳುತ್ತಾರೆ. ಆದರೆ ವಾಸ್ತವದಲ್ಲಿ

ಅದರಲ್ಲಿ ಅನೇಕ ಒಳಿತಿನ ಅಂಶಗಳು ಅಡಕವಾಗಿವೆ. ನಾವೊಂದು ತತ್ವನಿಷ್ಠ ಪಕ್ಷವೆಂಬುದನ್ನು ಕಾರ್ಯ ರೂಪದಲ್ಲಿ ತೋರ್ಪಡಿಸುವುದೇ ಅದರ ಪ್ರಥಮ ಲಾಭ. ಅದಾದರೋ ಕೇವಲ ಒಂದು ತಮಾಷೆಯ ರೂಪದಲ್ಲಿರುವುದಲ್ಲ, ಬದಲಾಗಿ ಅದು ಅತ್ಯಂತ ಕಠಿಣ ಮತ್ತು ತೀವ್ರವಾದ ಪರೀಕ್ಷೆಗಳನ್ನು ಒಳಗೊಂಡಿದೆ. ಅಲ್ಲಾಹನ ಹೊರತು ಇನ್ನಾರಿಗೂ ಮಾನವ ಜೀವನಕ್ಕೆ ಕಾನೂನು ನಿರ್ಮಿಸುವ ಅಧಿಕಾರವಿಲ್ಲವೆಂದು ನಾವು ಹೇಳುತ್ತೇವೆ. ಆಡಳಿತಾಧಿಕಾರವು ಕೇವಲ ಅಲ್ಲಾಹನ ಹಕ್ಕು. ಅಲ್ಲಾಹನ ಅನುಸರಣೆ ಮತ್ತು ವಿಧೇಯತೆಗಳಿಂದ ಮುಕ್ತರಾಗಿ ಭೂಮಿಯಲ್ಲಿ ಆಡಳಿತ ನಡೆಸುವ ಅಧಿಕಾರ ಯಾರಿಗೂ ಇಲ್ಲವೆಂದು ನಾವು ವಾದಿಸುತ್ತೇವೆ. ಅಲ್ಲಾಹನ ಕಾನೂನಿಗೆ ವಿರುದ್ಧವಾಗಿ ಮಾನವನ ಜೀವನದ ಸಮಸ್ಯೆಗಳ ಕುರಿತು ತೀರ್ಪು ನೀಡುವವನು ಅವಿಶ್ವಾಸಿ, ಧರ್ಮಭ್ರಷ್ಟ ಮತ್ತು ಅಕ್ರಮಿಯೆಂದು ನಾವು ನಂಬುತ್ತೇವೆ. ಹೀಗಿರುತ್ತಾ ನಾವು ನಮ್ಮ ಹಕ್ಕುಗಳನ್ನು ಯಾವುದೇ ಇಸ್ಲಾಮೇತರ ನಿಯಮಗಳ ಬುನಾದಿಯಲ್ಲಿರಿಸಬಾರದು ಮತ್ತು ಸತ್ಯಾಸತ್ಯಗಳ ನ್ಯಾಯತೀರ್ಮಾನವನ್ನು ನಿಷಿದ್ಧವೆಂದು ನಾವು ನಂಬಿರುವ ಯಾವ ಆಡಳಿತಗಾರನಿಗೂ ಬಿಟ್ಟುಕೊಡಬಾರದು. ನಮ್ಮ ವಿಶ್ವಾಸದ ಈ ಅನಿವಾರ್ಯ ಬೇಡಿಕೆಯನ್ನು ಅತ್ಯಂತ ಕಠಿಣ ನಷ್ಟ ಮತ್ತು ಆಪತ್ತುಗಳ ವೇಳೆಯಲ್ಲಿಯೂ ನಾವು ಸಾಕ್ಷಾತ್ಕರಿಸಿದರೆ ಅದು ನಮ್ಮ ಸತ್ಯಸಂಧತೆ, ದೃಢ ಚಾರಿತ್ರ್ಯ, ಪರಿಪಕ್ವ ವಿಚಾರಗಳಿಗೂ, ನಮ್ಮ ವಿಶ್ವಾಸ ಮತ್ತು ಕರ್ಮಗಳ ಪರಸ್ಪರ ಹೊಂದಾಣಿಕೆಗೂ ಸುಸ್ಪಷ್ಟ ನಿದರ್ಶನವಾಗುವುದು. ಅದಕ್ಕಿಂತ ಹೆಚ್ಚಿನ ಬೇರೆ ನಿದರ್ಶನದ ಅಗತ್ಯವಿರಲಾರದು. ತದ್ವಿರುದ್ಧವಾಗಿ ಏನಾದರೂ ಲಾಭದಾಸೆಯಿಂದ ಅಥವಾ ನಷ್ಟದ ಭೀತಿಯಿಂದ, ಹಿಂಸೆ ಮರ್ದನಗಳಿಂದ ಸೋತು, ನಾವು ನಮ್ಮ ವಿಶ್ವಾಸಕ್ಕೆ ವಿರುದ್ಧವಾಗಿ ವರ್ತಿಸಿದರೆ ಅದು ನಮ್ಮ ದೌರ್ಬಲ್ಯ, ಅಪಕ್ವ ಗುಣ ಮತ್ತು ನಿಷ್ಠೆಯ ಕೊರತೆಯ ಪ್ರತ್ಯಕ್ಷ ಸಾಕ್ಷಿಯಾಗಿ ಪರಿಣಮಿಸುವುದು. ತರುವಾಯ ಅದಕ್ಕೆ ಬೇರೊಂದು ಸಾಕ್ಷ್ಯದ ಅಗತ್ಯವಿರಲಾರದು.

ನಮ್ಮ ಕಾರ್ಯಕರ್ತರ ಅರ್ಹತೆ ಮತ್ತು ಪ್ರಾಮಾಣಿಕತೆಯನ್ನು ತಿಳಿಯಲಿಕ್ಕೆ ಅದು ಸೂಕ್ತ ಒರೆಗಲ್ಲೆಂಬುದು ಅದರ ದ್ವಿತೀಯ ಲಾಭ. ಆ ಮೂಲಕ ನಮ್ಮಲ್ಲಿ ಯಾರೆಲ್ಲಾ ಪರೀಕ್ಷಕರಾಗಿದ್ದಾರೆ ಹಾಗೂ ಅವರಿಂದ ಯಾವೆಲ್ಲ ಸತ್ವ ಪರೀಕ್ಷೆಗಳಲ್ಲಿ ಸ್ಥಿರ ಚಿತ್ತತೆಯನ್ನು ನಿರೀಕ್ಷಿಸಬಹುದೆಂಬುದನ್ನು ಸುಲಭದಲ್ಲಿ ಗ್ರಹಿಸಬಹುದು.

ಮೂರನೆಯದಾಗಿ, ನಮ್ಮ ಸದಸ್ಯರು ಈ ಮಾರ್ಗವನ್ನು ಸ್ವೀಕರಿಸಿದ ಬಳಿಕ ತಮ್ಮ ಸಾಮಾಜಿಕ ಸಂಬಂಧಗಳನ್ನು ಕಾನೂನಿನ ಬದಲಾಗಿ ನೈತಿಕ ಬುನಾದಿಯಲ್ಲಿ ಸ್ಥಾಪಿಸಬೇಕಾಗುತ್ತದೆ. ಜನರು ಸ್ವಯಂ ನಮ್ಮ ಹಕ್ಕುಗಳನ್ನೂ, ಧನ, ಪ್ರಾಣ, ಮಾನಗಳನ್ನೂ ಗೌರವಿಸುವುದು ಅನಿವಾರ್ಯವಾಗುವಂತೆ ನಮ್ಮ ನೈತಿಕ ಮಾನದಂಡವನ್ನು ಅತ್ಯಂತ ಉತ್ಕೃಷ್ಟಗೊಳಿಸಬೇಕಾಗುತ್ತದೆ. ನಮ್ಮ ಪರಿಸರದಲ್ಲಿ ನಾವು ನಮ್ಮನ್ನು ಅತ್ಯಂತ ಸತ್ಯ ಸಂಧರೂ, ಧರ್ಮನಿಷ್ಠರೂ, ನಿಷ್ಕಳಂಕರೂ, ಪ್ರಾಮಾಣಿಕರೂ ಅಲ್ಲಾಹನ ಕುರಿತು ಭಯಭಕ್ತಿಯುಳ್ಳವರೂ ಆಗಿ ವರ್ತಿಸಬೇಕಾಗುತ್ತದೆ. ಯಾಕೆಂದರೆ ಲೋಕದಲ್ಲಿ ಈ ನೈತಿಕ ಸಂರಕ್ಷಣೆಯ ಹೊರತು ಇನ್ನಾವ ಸಂರಕ್ಷಣೆಯೂ ನಮಗಿರಲಾರದು. ಕಾನೂನು ಸಂರಕ್ಷಣೆಗಳಿಂದ

ವಂಚಿತರಾಗಿ, ನೈತಿಕ ಸಂರಕ್ಷಣೆಗಳೂ ದೊರೆಯದಿದ್ದರೆ ನಮ್ಮ ಅವಸ್ಥೆಯು ಕಾಡಿನಲ್ಲಿ ತೋಳಗಳ ಮಧ್ಯೆ ಸಿಲುಕಿ ಬಿದ್ದ ಕುರಿಮರಿಯಂತಾದೀತು.

ನಾಲ್ಕನೆಯದಾಗಿ ಇದರಿಂದ ಇನ್ನೊಂದು ಪ್ರಮುಖ ಪ್ರಯೋಜನವಿದೆ. ಅಂದರೆ ನಾವು ಈ ಮೂಲಕ ನಮ್ಮನ್ನೂ ನಮ್ಮ ಹಿತಾಸಕ್ತಿಗಳನ್ನೂ, ಹಕ್ಕುಗಳನ್ನೂ ಗಂಡಾಂತರಕ್ಕೆ ಸಿಲುಕಿಸಿ ಇಂದಿನ ಸಮಾಜದ ನೈತಿಕ ಮಟ್ಟವನ್ನು ಲೋಕದ ಮುಂದೆ ಸಂಪೂರ್ಣ ನಗ್ನಗೊಳಿಸಬಯಸುತ್ತೇವೆ. ನಾವು ನಮ್ಮ ಸಂರಕ್ಷಣೆಗಾಗಿ ಪೊಲೀಸು ಮತ್ತು ಕೋರ್ಟುಗಳ ನೆರವು ಪಡೆಯುವುದಿಲ್ಲವೆಂದು ಜನರು ತಿಳಿದ ಬಳಿಕ ನಮ್ಮ ಹಕ್ಕುಗಳನ್ನು ಬಹಿರಂಗವಾಗಿ ದೋಚಲಾರಂಭಿಸಿದರೆ, ಅದು ನಮ್ಮ ದೇಶದ ಮತ್ತು ಸಮಾಜದ ನೈತಿಕ ಸ್ಥಿತಿಯು ಎಷ್ಟೊಂದು ಟೊಳ್ಳಾಗಿದೆಯೆಂಬುದಕ್ಕೆ ಸ್ಪಷ್ಟ ಸಾಕ್ಷಿಯಾಗಿರುವುದು. ಕೇವಲ ಕಾನೂನಿನ ಬಲದಿಂದಾಗಿ ಸಭ್ಯರಂತೆ ವರ್ತಿಸುವ ಮಂದಿಯೆಷ್ಟಿಲ್ಲ? ಈ ಲೋಕದಲ್ಲಿ ನನ್ನನ್ನು ಹಿಡಿಯುವವರು ಯಾರೂ ಇಲ್ಲವೆಂಬುದು ಖಚಿತವಾದರೆ ಯಾವ ಕ್ರೂರ ಕೃತ್ಯಕ್ಕೂ ಹೇಸದ ಜನರೆಷ್ಟಿಲ್ಲ? ಸಂದರ್ಭಸಿಕ್ಕಿದರೆ, ಯಾವುದೇ ಲೌಕಿಕ ಅಡೆತಡೆಗಳಿಲ್ಲದಿದ್ದರೆ, ಅತ್ಯಂತ ನೀಚಸ್ವಭಾವವನ್ನೂ, ನಾಸ್ತಿಕತೆಯನ್ನೂ, ಪೈಶಾಚಿಕತೆಯನ್ನೂ ಪ್ರದರ್ಶಿಸಲು ಹೇಸದ ಜನರೆಷ್ಟಿಲ್ಲ? ಸಮಾಜದ ಅಂತರಾಳದಲ್ಲಿ ಹುದುಗಿರುವ ಹಾಗೂ ಸಾಮಾಜಿಕ ಸ್ವರೂಪವನ್ನು ಕೊಳೆಯಿಸುತ್ತಿರುವ ಈ ನೈತಿಕ ಅರ್ಬುದಗಳನ್ನು ನಾವು ಹೊರತೆಗೆದು ಸಾರ್ವಜನಿಕರಿಗೆ ಎತ್ತಿ ತೋರಿಸುತ್ತೇವೆ. ತನ್ಮೂಲಕ ದೇಶದ ಸಾಮಾಜಿಕ ಆತ್ಮಸಾಕ್ಷಿಯು ಎಚ್ಚೆತ್ತು, ಈ ತನಕ ಅಲಕ್ಷಿಸಿರುವ ಮಹಾರೋಗವು ಎಷ್ಟೊಂದು ತೀವ್ರವಾಗಿದೆಯೆಂದು ಚೆನ್ನಾಗಿ ಗ್ರಹಿಸಲು ಅವರಿಗೆ ಸಾಧ್ಯವಾಗುವುದು.

"ಪ್ರಿಯ ಬಾಂಧವರೇ! ಜಮಾಅತೆ ಇಸ್ಲಾಮಿಯ ಸಂದೇಶ ಮತ್ತು ಕಾರ್ಯಕ್ರಮವನ್ನು ಈಗಾಗಲೇ ನಾನು ನಿಮ್ಮ ಮುಂದೆ ಸಂಕ್ಷಿಪ್ತವಾಗಿ ವಿವರಿಸಿದ್ದೇನೆ. ನೀವು ಅದನ್ನು ಕೂಲಂಕಷವಾಗಿ ಪರಿಶೀಲಿಸಿರಿ. ಆ ಕುರಿತು ವಿಮರ್ಶಾತ್ಮಕ ದೃಷ್ಟಿಯಿಂದ ಆಲೋಚಿಸಿರಿ. ಜಮಾಅತೆ ಇಸ್ಲಾಮಿಯು ನಿಮ್ಮನ್ನು ಯಾವುದಕ್ಕೆ ಆಹ್ವಾನಿಸುತ್ತಿದೆ? ಅದಕ್ಕೆ ನಾವು ಅಂಗೀಕರಿಸಿರುವ ವಿಧಾನವು ಎಷ್ಟು ಸಮಂಜಸವಾಗಿದೆ? ಇದು ಅಲ್ಲಾಹನ ನಿರ್ದೇಶಕ್ಕೂ ಪ್ರವಾದಿವರ್ಯರ(ಸ) ಬೋಧನೆಗಳಿಗೂ ಎಷ್ಟರ ಮಟ್ಟಿಗೆ ಅನುರೂಪವಾಗಿದೆ? ಜಮಾಅತ್‌ನ ಸಂದೇಶವು ಇಂದಿನ ವೈಯಕ್ತಿಕ ಮತ್ತು ಸಾಮಾಜಿಕ ರೋಗಗಳಿಗೆ ಸೂಚಿಸುವ ಚಿಕಿತ್ಸೆಯು ಎಷ್ಟರ ಮಟ್ಟಿಗೆ ಸೂಕ್ತವಾಗಿದೆ? ನಮ್ಮ ಪರಮ ಧ್ಯೇಯವನ್ನು- ಅಲ್ಲಾಹನ ವಚನವನ್ನು ಮೊಳಗಿಸುವ ಹಾಗೂ ದುಷ್ಟವಚನವನ್ನು ಅಳಿಸುವ ಪರಮ ಧ್ಯೇಯವನ್ನು ಈ ಮೂಲಕ ಸಾಧಿಸಬಹುದೆಂಬುದನ್ನು ಎಷ್ಟರ ಮಟ್ಟಿಗೆ ನಿರೀಕ್ಷಿಸಬಹುದು? ಇತ್ಯಾದಿ ವಿಷಯಗಳ ಕುರಿತು ಗಾಢ ಚಿಂತನೆ ನಡೆಸಿರಿ.

## ಉಲೆಮಾ ಮತ್ತು ಮಶಾಯಿಕ್‌ರ ತೆರೆಮರೆ

ಇನ್ನು, ಈ ಸಮ್ಮೇಳನದಲ್ಲಿ ಕೆಲವು ಕಾರ್ಯಕರ್ತರು ಮತ್ತು ಹಿತೈಷಿಗಳು ವ್ಯಕ್ತಪಡಿಸಿರುವ ಕೆಲವೊಂದು ಸಂದೇಹ ಮತ್ತು ಆರೋಪಗಳ ಬಗ್ಗೆ ನಾನು ಮಾತನಾಡಬಯಸುತ್ತೇನೆ-

ಈ ಹಿಂದೆ ಹಲವು ಬಾರಿ ಆಲಿಸಿರುವ ಹಾಗೂ ಈ ದಿನ ನನಗೆ ಲಿಖಿತರೂಪದಲ್ಲಿ ದೊರೆತಿರುವ ಆರೋಪವು ಹೀಗಿದೆ: "ಈ ಮಹಾ ವಿದ್ವಾಂಸರೂ ಧಾರ್ಮಿಕ ನೇತಾರರೂ

(ಕೆಲವರ ಹೆಸರನ್ನೂ ಇಲ್ಲಿ ನಮೂದಿಸಲಾಗಿದೆ) ಧರ್ಮದ ಕುರಿತು ತೀರಾ ಅಜ್ಞರೆಂದು ನಿಮ್ಮ ಭಾವನೆಯೇ? ಅವರು ನೀವು ವಿವರಿಸುತ್ತಿರುವ ಧರ್ಮದ ಈ ಬೇಡಿಕೆಗಳನ್ನು ಅರಿತು ಅದನ್ನು ಈಡೇರಿಸುವ ಬಗ್ಗೆ ಚಿಂತಿಸುತ್ತಿಲ್ಲ, ಮಾತ್ರವಲ್ಲ ನೀವು ಇಷ್ಟೆಲ್ಲಾ ವಿವರಿಸಿದ ಬಳಿಕವೂ ಅದನ್ನು ಅಂಗೀಕರಿಸಿ ನಿಮ್ಮೊಂದಿಗೆ ಸಹಕರಿಸುವ ಸದ್ಭಾವನೆ ತೋರುತ್ತಿಲ್ಲ- ಹಾಗಿದ್ದರೆ ಅವರೆಲ್ಲರೂ ಧಾರ್ಮಿಕವಾಗಿ ಅಜ್ಞರೆಂದು ಇದರರ್ಥವೇ? ಅಥವಾ ನೀವು ಧರ್ಮದಿಂದ ಹೊರತಾದ ಬೇಡಿಕೆಗಳನ್ನು ಧರ್ಮದ ಹೆಸರಿನಲ್ಲಿ ಪ್ರಚಾರ ಮಾಡುತ್ತಿದ್ದೀರಾ?" ಈ ಪ್ರಶ್ನೆಯ ಕುರಿತು ನನಗೆ ಸಂಕ್ಷಿಪ್ತವಾಗಿ ಹೇಳಲಿಕ್ಕಿರುವುದು ಇಷ್ಟೇ. ನಾನು ಧರ್ಮವನ್ನು ವ್ಯಕ್ತಿಗಳ ಬದಲಾಗಿ ಕುರ್‌ಆನ್ ಮತ್ತು ಸುನ್ನತ್‌ನಿಂದ ಕಲಿಯಲು ಸದಾ ಪ್ರಯತ್ನಿಸಿದ್ದೇನೆ. ಆದ್ದರಿಂದ ಅಲ್ಲಾಹನ ಧರ್ಮವು ನನ್ನಿಂದ ಮತ್ತು ಪ್ರತಿಯೋರ್ವ ಸತ್ಯವಿಶ್ವಾಸಿಯಿಂದ ಏನನ್ನು ಬಯಸುತ್ತಿದೆಯೆಂಬುದನ್ನು ತಿಳಿಯಲಿಕ್ಕಾಗಿ ಇಂತಿಂತಹ ಮಹಾತ್ಮರು ಏನು ಹೇಳಿದ್ದಾರೆ? ಏನು ಮಾಡಿದ್ದಾರೆಂದು ನೋಡುವ ಪ್ರಯತ್ನವನ್ನು ನಾನು ಮಾಡಿಲ್ಲ. ಬದಲಾಗಿ ಕುರ್‌ಆನ್ ಏನು ಹೇಳುತ್ತದೆ. ಪ್ರವಾದಿವರ್ಯರು ಹೇಗೆ ವರ್ತಿಸಿದ್ದಾರೆಂಬುದನ್ನು ನೋಡುವುದಷ್ಟೇ ನನ್ನ ಕ್ರಮ. ನಿಮ್ಮ ಗಮನವನ್ನು ಈ ಜ್ಞಾನ ಮಾರ್ಗದೆಡೆಗೇ ತಿರುಗಿಸಲು ನಾನು ಬಯಸಿದ್ದೇನೆ. ನಾನು ನಿಮ್ಮನ್ನು ಆಹ್ವಾನಿಸುತ್ತಿರುವ ವಿಷಯ ಹಾಗೂ ನಾನು ನಿಮ್ಮ ಮುಂದೆ ಸಮರ್ಪಿಸುತ್ತಿರುವ ಕಾರ್ಯವಿಧಾನವು ಕುರ್‌ಆನಿನ ಸಂದೇಶ ಮತ್ತು ಪ್ರವಾದಿಚರ್ಯೆಗೆ ಅನುಗುಣವಾಗಿದೆಯೇ ಇಲ್ಲವೇ ಎಂಬುದನ್ನು ನೀವು ನೋಡಬೇಕು.

ಈ ವಿಷಯವು ಕುರ್‌ಆನ್ ಮತ್ತು ಪ್ರವಾದಿಚರ್ಯೆಯಲ್ಲಿಯೂ ರುಜುವಾತಾದರೆ ಕೇವಲ ಕುರ್‌ಆನ್ ಮತ್ತು ಸುನ್ನತ್‌ಗಳೇ ನಿಮ್ಮ ಬಳಿ ಸನ್ಮಾರ್ಗದ ಮೂಲವೆಂದಾದರೆ ನನ್ನ ಮಾತನ್ನು ಒಪ್ಪಿರಿ. ನನ್ನೊಡನೆ ಬನ್ನಿರಿ. ಈ ಸಂದೇಶದಲ್ಲಿಯೂ ಕಾರ್ಯ ವಿಧಾನದಲ್ಲಿಯೂ ಕುರ್‌ಆನ್ ಮತ್ತು ಪ್ರವಾದಿಚರ್ಯೆಗೆ ವಿರುದ್ಧವಾದ ಏನಾದರೂ ಇದೆಯೆಂದು ಕಂಡು ಬಂದರೆ ನಿಸ್ಸಂಕೋಚವಾಗಿ ಆ ಕುರಿತು ನನಗೆ ತಿಳಿಸಿರಿ. ನಾವು ಅದರಿಂದ ರವಷ್ಟಾದರೂ ತಪ್ಪಿದ್ದೇವೆಂದು ನನಗೆ ಅಥವಾ ನನ್ನಸಂಗಾತಿಗಳಿಗೆ ಭಾಸವಾದರೆ ಸತ್ಯದೆಡೆಗೆ ಮರಳಲು ನಾವು ಕ್ಷಣ ಮಾತ್ರವೂ ಹಿಂಜರಿಯಲಾರೆವು. ಆದರೆ ಸತ್ಯಾಸತ್ಯಗಳ ತೀರ್ಮಾನವನ್ನು ಅಲ್ಲಾಹನ ಗ್ರಂಥ ಮತ್ತು ಆತನ ಪ್ರವಾದಿಯ ಚರ್ಯೆಯ ಬದಲಾಗಿ ವ್ಯಕ್ತಿಗಳ ಮೇಲೆ ಹೊರಿಸಲು ನೀವು ಬಯಸುವುದಾದರೆ ನೀವು ನಿಮ್ಮ ಭವಿಷ್ಯವನ್ನು ವ್ಯಕ್ತಿಗಳಿಗೆ ಅರ್ಪಿಸಲು ಸಂಪೂರ್ಣ ಸ್ವತಂತ್ರರಿದ್ದೀರಿ. ಪರಲೋಕದಲ್ಲಿಯೂ ಅಲ್ಲಾಹನ ಮುಂದೆ, "ನಾವು ನಮ್ಮ ಧರ್ಮವನ್ನು ದೇವ ಗ್ರಂಥ ಮತ್ತು ಪ್ರವಾದಿಚರ್ಯೆಯ ಬದಲಾಗಿ ಇಂತಿಂತಹ ವ್ಯಕ್ತಿಗಳಿಗೆ ವಹಿಸಿಕೊಟ್ಟಿದ್ದೇವೆ" ಎಂದು ಉತ್ತರ ಹೇಳಿ ಬಿಡಿರಿ. ಈ ಉತ್ತರದಿಂದ ಅಲ್ಲಾಹನ ಬಳಿ ನಿಮಗೆ ಮುಕ್ತಿ ದೊರೆಯುವುದೆಂಬ ಖಾತ್ರಿಯಿದ್ದರೆ ನೆಮ್ಮದಿಯಿಂದ ಹಾಗೆ ಜೀವಿಸಿರಿ.

## ವೈರಾಗ್ಯದ ಆರೋಪ

ನಮ್ಮ ಕುರಿತು ಹೀಗೆ ಆರೋಪಿಸಲಾಗುತ್ತಿದೆ: ನೀವು ಲೋಕ ವ್ಯವಹಾರ ಸಂಬಂಧವನ್ನು ಸಂಪೂರ್ಣವಾಗಿ ಕಡಿದುಕೊಂಡಿರುವ ಕೆಲವು ವೈರಾಗಿಗಳ ಒಂದು ಪಕ್ಷವಾಗಿದ್ದೀರಿ. ಪ್ರಸಕ್ತ

ರಾಜಕೀಯದ ಬಗ್ಗೆ ನಿಮಗೆ ಯಾವ ಕಾಳಜಿಯೂ ಇಲ್ಲ. ಆದರೆ ಇಂದಿನ ಪರಿಸ್ಥಿತಿಯು ಮುಸ್ಲಿಮರು ಒಂದು ಕ್ಷಣವೂ ವ್ಯರ್ಥ ಮಾಡದೆ ರಾಜಕೀಯ ಸಮಸ್ಯೆಗಳ ಪರಿಹಾರಕ್ಕಾಗಿ ಧುಮುಕಬೇಕೆಂದು ಸೂಚಿಸುತ್ತದೆ. ಇಡೀ ಸಮುದಾಯದ ಭವಿಷ್ಯವು ಆ ಸಮಸ್ಯೆಗಳ ಪರಿಹಾರವನ್ನು ಅವಲಂಬಿಸಿದೆ. ಮುಸ್ಲಿಮರಲ್ಲದೆ ಮುಸ್ಲಿಮೇತರರೂ ಪ್ರಥಮವಾಗಿ ದೇಶದ ರಾಜಕೀಯ ಭವಿಷ್ಯದ ಕುರಿತು ಚಿಂತಿಸುತ್ತಿದ್ದಾರೆ. ಯಾಕೆಂದರೆ ಅವರ ವಿಜಯವೂ ಅದನ್ನೇ ಅವಲಂಬಿಸಿದೆ. ಆದ್ದರಿಂದ ಜೀವನದ ರಚನಾತ್ಮಕ ಸಮಸ್ಯೆಗಳ ಬಗ್ಗೆ ಆಸಕ್ತಿ ಮತ್ತು ಅವುಗಳ ಜತೆ ಸಂಬಂಧವಿರುವ ಯಾರಿಗೂ ನಿಮ್ಮ ಪಕ್ಷದಲ್ಲಿ ಆಸಕ್ತಿ ತಾಳಲು ಸಾಧ್ಯವಿಲ್ಲ. ಪ್ರಾಯಶಃ ಧಾರ್ಮಿಕ ಮನೋಭಾವದ ಕೆಲವು ಸನ್ಯಾಸಿಗಳು ಮತ್ತು ವೈರಾಗಿಗಳು ನಿಮಗೆ ದೊರೆಯಲೂ ಬಹುದು. ಈ ಆರೋಪಕ್ಕೆ ಮುಖ್ಯವಾಗಿ ರಾಜಕೀಯ ಸೇವಕರೆಂಬ ವೇಷ ತೊಟ್ಟ ಕೆಲವು ಮಹನೀಯರು ವಸ್ತುಸ್ಥಿತಿಯನ್ನು ನೋಡುವ ಮತ್ತು ಗ್ರಹಿಸುವ ವಿಷಯದಲ್ಲಿ ಬೆಳೆಸಿಕೊಂಡಿರುವ ತಪ್ಪು ದೃಷ್ಟಿಕೋನವೇ ಮೂಲ ಕಾರಣವಾಗಿದೆ. ಇವರು ರಾಜಕೀಯ ಸ್ವರೂಪಗಳ ತಿದ್ದುಪಡಿ, ಬದಲಾವಣೆಗಳನ್ನಷ್ಟೇ ನೋಡುತ್ತಾರೆ. ಕೇವಲ ಅದರಿಂದಲೇ ತಮ್ಮ ಸಮಸ್ಯೆಗಳ ಪರಿಹಾರವನ್ನು ನಿರೀಕ್ಷಿಸುತ್ತಾರೆ. ಆದರೆ ರಾಜಕೀಯ ಸೌಧವು ನಿಂತಿರುವ ಬುನಾದಿಯೆಡೆಗೆ ಅವರ ಗಮನ ಹರಿಯುವುದಿಲ್ಲ. ನೀವಿಂದು ಸಿಲುಕಿರುವ ರಾಜಕೀಯ ಸಮಸ್ಯೆಗಳು ಎಲ್ಲಿಂದ ಉದ್ಭವವಾಗಿವೆ? ಮಾನವನು ಈ ಲೋಕದಲ್ಲಿ ತನಗಿಲ್ಲದಂತಹ ಒಂದು ಸ್ಥಾನವನ್ನು ಅಹಂಕಾರದಿಂದ ಸ್ವಯಂ ಕಲ್ಪಿಸಿ ನೈತಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ವಿಷಯಗಳ ಬುನಾದಿಯನ್ನು ದೇವನಿಂದ ಮುಕ್ತಗೊಳಿಸಿ ತಾನೇ ಕಟ್ಟಿಕೊಂಡಿದ್ದಾನೆ. ತತ್ಪರಿಣಾಮವಾಗಿ ಭಯಂಕರ ವಿನಾಶ, ದುರಾಚಾರ, ದುರ್ಗುಣ, ಅಕ್ರಮ, ಮರ್ದನಗಳ ಮಹಾಪೂರವು ಸಿಡಿದೆದ್ದಿದೆ. ಈ ದುಷ್ಪರಿಣಾಮವನ್ನು ನಿವಾರಿಸಲಿಕ್ಕಾಗಿ ಲೋಕ ವ್ಯವಸ್ಥೆಯ ಬಾಹ್ಯ ರೂಪದಲ್ಲಿ ಮಾಡಬಯಸುತ್ತಿರುವ ಕೆಲವೊಂದು ಬದಲಾವಣೆಯ ಪ್ರಯತ್ನವನ್ನು ಇಂದು ರಾಜಕೀಯವೆಂದು ಕರೆಯಲಾಗುತ್ತಿದೆ. ನನ್ನ ಮಟ್ಟಿಗೆ ಮಾತ್ರವಲ್ಲ ನೈಜ ಇಸ್ಲಾಮಿನ ಮಟ್ಟಿಗೆ ಈ ಎಲ್ಲಾ ರಾಜಕೀಯವು ನಿರರ್ಥಕ ಮತ್ತು ನಿಷ್ಫಲ. ಇಸ್ಲಾಮಿನಿಂದ ನಾನು ಗ್ರಹಿಸಿರುವ ವಾಸ್ತವಿಕಾಂಶಗಳ ಹಿನ್ನೆಲೆಯಲ್ಲಿ ಭಾರತೀಯ ಮುಸ್ಲಿಮರ ಮತ್ತು ಭಾರತದ ಇತರೆಲ್ಲಾ ಜನವಿಭಾಗಗಳ ಹಾಗೂ ಜಾಗತಿಕ ಮುಸ್ಲಿಮರ ಮತ್ತು ಜಗತ್ತಿನ ಎಲ್ಲಾ ಮುಸ್ಲಿಮೇತರರ ರಾಜಕೀಯ ಪರಿಹಾರವು ಕೇವಲ ಒಂದೇ ವಿಷಯದಲ್ಲಿ ಅಡಕವಾಗಿದೆಯೆಂಬುದು ನನ್ನ ದೃಢ ನಂಬಿಕೆಯಾಗಿದೆ. ನಾವೆಲ್ಲರೂ ದೇವನ ದಾಸ್ಯವನ್ನು ಸ್ವೀಕರಿಸಬೇಕು. ಆತನ ನಿಯಮವನ್ನು ನಮ್ಮ ಜೀವನದ ನಿಯಮವಾಗಿ ಅಂಗೀಕರಿಸಬೇಕು. ಜಗತ್ತಿನ ನಿಯಂತ್ರಣ ಸೂತ್ರವು ವಿಧ್ವಂಸಕಾರಿ ಮತ್ತು ಕಿಡಿಗೇಡಿಗಳ ಬದಲಾಗಿ ಸದ್ಗುಣ ಸಂಪನ್ನರಾದ ದೇವನ ದಾಸರ ಹಸ್ತಗಳಲ್ಲಿರಬೇಕು. ಇದು ನಿಮಗೆ ಸರಿಯೆಂದು ತೋರದಿದ್ದರೆ ಅಥವಾ ಇತರ ರಾಜಕೀಯಗಳ ಮೂಲಕ ನಿಮ್ಮ ಸಮಸ್ಯೆಗಳನ್ನು ಪರಿಹರಿಸಬಯಸುವುದಿದ್ದರೆ ನಿಮ್ಮ ಮತ್ತು ನನ್ನ ಮಾರ್ಗವು ಭಿನ್ನ ಭಿನ್ನವಾಗಿದೆ. ನೀವು ಬಯಸಿದ ಮಾರ್ಗದಲ್ಲಿ ನಿಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಿರಿ. ನಾವು ನಮ್ಮ ಮತ್ತು ನಮ್ಮ ಸಮುದಾಯದ ನಮ್ಮ ದೇಶದ ಹಾಗೂ ಮತ್ತು ಇಡೀ ಜಗತ್ತಿನ ಯಶಸ್ಸನ್ನು ಯಾವುದರಲ್ಲಿ ಕಾಣುತ್ತೇವೆಯೋ ಕೇವಲ ಅದಕ್ಕಾಗಿಯೇ ನಮ್ಮೆಲ್ಲಾ ಪರಿಶ್ರಮಗಳನ್ನು ವಿನಿಯೋಗಿಸುತ್ತೇವೆ. ಜನರು ನಮ್ಮ ಮಾತಿನತ್ತ

ಗಮನಹರಿಸಿದರೆ ಅದು ಅವರಿಗೆ ಉತ್ತಮ. ಹಾಗಲ್ಲದಿದ್ದರೆ ನಷ್ಟ ತಂದುಕೊಳ್ಳುವವರು ಅವರೇ ವಿನಾ ನಮಗೆ ಅದರಿಂದ ಯಾವ ನಷ್ಟವೂ ಇಲ್ಲ.

"ನಾವು ಸನ್ಯಾಸಿಯರ ಹಾಗೂ ವೈರಾಗಿಗಳ ಗುಂಪೊಂದನ್ನು ಸಿದ್ಧಪಡಿಸುತ್ತಿದ್ದೇವೆನ್ನುವ ಆರೋಪವು ಮನಃಪೂರ್ವಕವಲ್ಲ. ಕೇವಲ ತಪ್ಪು ತಿಳುವಳಿಕೆಯಿಂದ ಉದ್ಭವಿಸಿದರೆ ಅದನ್ನು ನೀಗಿಸಲಿಕ್ಕಾಗಿ ನಾವು ಎಂತಹ ವಿಭಾಗವನ್ನು ಸಿದ್ಧಪಡಿಸಬಯಸಿರುವೆವೆಂಬುದನ್ನು ಸ್ಪಷ್ಟಗೊಳಿಸ ಬಯಸುತ್ತೇನೆ. ಒಂದೆಡೆ ಇಂದಿನ ವೈರಾಗಿಗಳನ್ನೂ ಧರ್ಮ ನಿಷ್ಠರನ್ನೂ ಮೀರಿಸುವಂತಹ ಹಾಗೂ ಇನ್ನೊಂದೆಡೆ ಜಾಗತಿಕ ವ್ಯವಸ್ಥೆಯನ್ನು ಮುನ್ನಡೆಸುವ ಅರ್ಹತೆಯಲ್ಲಿ ಇಂದಿನ ಲೌಕಿಕ ವಾದಿಗಳಿಗಿಂತ ಹೆಚ್ಚು ಯೋಗ್ಯರೆಂದು ಸಾಬೀತು ಪಡಿಸುವಂತಹ ಒಂದು ಪಕ್ಷವನ್ನು ನಾವು ಸಿದ್ಧಗೊಳಿಸಲಿಚ್ಛಿಸಿದ್ದೇವೆ. ನಮ್ಮ ಅಭಿಪ್ರಾಯದಲ್ಲಿ ಸಜ್ಜನರು ಒಳಿತಿನ ನೈಜ ಉದ್ದೇಶದ ಬಗ್ಗೆ ಅಜ್ಞರಾಗಿ, ಏಕಾಂತವಾಸ ಸ್ವೀಕರಿಸಿ ಲೌಕಿಕ ವ್ಯವಹಾರಗಳಿಂದ ಮುಕ್ತರಾಗಿರುವುದನ್ನು ದೇವ ಭಕ್ತಿಯೆಂದು ತಪ್ಪು ತಿಳಿದಿರುವುದೇ ಲೋಕದ ಎಲ್ಲಾ ವಿನಾಶಗಳ ಮೂಲ ಕಾರಣವಾಗಿದೆ. ತನ್ಮೂಲಕ ಲೋಕದ ಎಲ್ಲಾ ನಿಯಂತ್ರಣವೂ ದುಷ್ಟರ ಕೈಗೆ ಸೇರಿತು. ಅವರ ನಾಲಗೆಯು ಸತ್ಯ ಮತ್ತು ಒಳಿತಿನ ಹೆಸರನ್ನು ಉಚ್ಚರಿಸುತ್ತಿದೆಯಾದರೂ ಅದು ಕೇವಲ ದೇವನ ಸೃಷ್ಟಿಗಳನ್ನು ವಂಚಿಸುವುದಕ್ಕಾಗಿದೆ. ಈ ವಿನಾಶದ ಪರಿಹಾರವು ಸಜ್ಜನರ ಒಂದು ಪಕ್ಷವನ್ನು ಸಂಘಟಿಸುವುದರಿಂದಲೇ ಹೊರತು ಇನ್ನಾವುದರಿಂದಲೂ ಆಗಲಾರದು. ಅವರು ದೇವ ಭಕ್ತರೂ ಸತ್ಯ ಸಂಧರೂ ಪ್ರಾಮಾಣಿಕರೂ ಆಗಿರಬೇಕು. ಅವರು ದೇವನು ಬಯಸುವ ಸದ್ಗುಣಗಳನ್ನು ಹೊಂದಿರಬೇಕು. ಅದರೊಂದಿಗೆ ಲೌಕಿಕ ವಾದಿಗಳಿಗಿಂತ ಚೆನ್ನಾಗಿ ಐಹಿಕ ವ್ಯವಸ್ಥೆಗಳನ್ನು ತಿಳಿದು ತಮ್ಮ ಸಾಮರ್ಥ್ಯ, ಅರ್ಹತೆ, ಚಾತುರ್ಯವನ್ನು ಬಳಸಿ ಪ್ರಸ್ತುತ ವಿಷಯದಲ್ಲಿ ಅವರನ್ನು ಪರಾಭವ ಗೊಳಿಸಲು ಶಕ್ತರಾಗಬೇಕು. ಇದಕ್ಕಿಂತ ಹಿರಿದಾದ ಬೇರೆ ರಾಜಕೀಯ ಕರ್ತವ್ಯ ನಮಗಿಲ್ಲ. ಇದಕ್ಕಿಂತ ವಿಜಯಪ್ರದವಾದಬೇರೊಂದು ರಾಜಕೀಯ ಆಂದೋಲನವೂ ಇಲ್ಲ. ದುಷ್ಕರ್ಮಿಗಳೂ ತತ್ವ ಹೀನರೂ ಆದ ಜನರಿಗೆ ಲೋಕವೆಂಬ ಹುಲ್ಲುಗಾವಲಿನಲ್ಲಿ ಸ್ವೇಚ್ಛೆಯಿಂದ ಮೇಯುವ ಅವಕಾಶವು ಮೇಲೆ ವಿವರಿಸಿದ ರೀತಿಯ ಉತ್ತಮ ವಿಭಾಗವೊಂದು ಪರಿಪೂರ್ಣ ರೀತಿಯಲ್ಲಿ ಸಿದ್ಧವಾಗುವ ವರೆಗೆ ಮಾತ್ರ ದೊರೆಯುವುದು. ಅಂತಹ ಒಂದು ಪಕ್ಷವು ಕಾರ್ಯರೂಪದಲ್ಲಿ ಸಂಘಟಿಸಲ್ಪಟ್ಟರೆ ಈ ದೇಶದ ಮಾತ್ರವಲ್ಲ ಕಾಲ ಕ್ರಮೇಣ ಇಡೀ ಲೋಕದ ರಾಜಕೀಯ, ಆರ್ಥಿಕ, ವೈಜ್ಞಾನಿಕ, ಸಾಹಿತ್ಯ, ನ್ಯಾಯ ಮುಂತಾದವುಗಳ ಸೂತ್ರದಾರವು ಆ ವಿಭಾಗದ ಕೈ ಸೇರುವುದು ಖಚಿತ. ಅಕ್ರಮಿಗಳ ಮತ್ತು ವಿನಾಶಕಾರಿಗಳ ದೀಪವು ಅವರ ಮುಂದೆ ಎಂದೆಂದಿಗೂ ಬೆಳಗಲಾರದು. ಈ ಕ್ರಾಂತಿಯು ಯಾವಾಗ ಹೇಗೆ ಸಾಕ್ಷಾತ್ಕಾರಗೊಳ್ಳುವುದೆಂದು ಹೇಳಲು ನನ್ನಿಂದ ಸಾಧ್ಯವಿಲ್ಲ. ಆದರೆ ಅಂತಹ ಒಂದು ವಿಭಾಗವನ್ನು ಸಂಘಟಿಸುವ ಕಾರ್ಯದಲ್ಲಿ ನಾವು ಯಶಸ್ವಿಯಾದರೆ ಆ ಕ್ರಾಂತಿಯು ಪ್ರತ್ಯಕ್ಷವಾಗುವುದೆಂಬ ಬಗ್ಗೆ ನಾಳಿನ ಸೂರ್ಯೋದಯದಷ್ಟೇ ಖಚಿತ ಭರವಸೆ ನನಗಿದೆ.

## ಕಾರ್ಯಕರ್ತರಿಗೆ ಕಿವಿ ಮಾತು

ಇನ್ನು ಸ್ವಲ್ಪ ಸಮಯದ ಮಟ್ಟಿಗೆ ಸಾರ್ವಜನಿಕ ಚರ್ಚೆಯನ್ನು ನಿಲ್ಲಿಸಿ ನಮ್ಮ

ಕಾರ್ಯಕರ್ತರಿಗೆ ಸಂಬಂಧಿಸಿದ ಕೆಲವು ಎಚ್ಚರಿಕೆಯ ಮಾತುಗಳನ್ನು ಹೇಳ ಬಯಸುತ್ತೇನೆ. ಪ್ರಿಯ ಬಾಂಧವರೇ, ಎಲ್ಲಾ ಸಮ್ಮೇಳನಗಳಲ್ಲಿಯೂ ಸರ್ವ ಸಾಮಾನ್ಯವಾಗಿ ಎಚ್ಚರಿಸುತ್ತಿರುವ ಒಂದು ವಿಷಯವನ್ನು ಎಲ್ಲಕ್ಕಿಂತ ಮುಂಚಿತವಾಗಿ ಈಗ ಇನ್ನೊಮ್ಮೆ ನಿಮ್ಮ ಮುಂದೆ ಪುನರಾವರ್ತಿಸುವುದು ಸೂಕ್ತವೆಂದು ಭಾಸವಾಗುತ್ತಿದೆ. ಅಂದರೆ ನೀವು ಪ್ರಜ್ಞಾಪೂರ್ವಕವಾಗಿ ಅಲ್ಲಾಹನೊಂದಿಗೆ ಮಾಡಿಕೊಂಡಿರುವ ಒಪ್ಪಂದವನ್ನು ದೃಢಗೊಳಿಸಿ ನಮ್ಮ ಮೇಲೆ ಹೊರಿಸಲಾಗಿರುವ ಘನವಾದ ಆ ಜವಾಬ್ದಾರಿಕೆಯನ್ನು ಉತ್ತಮ ರೀತಿಯಲ್ಲಿ ಕಾಪಾಡಿಕೊಳ್ಳಬೇಕಾಗಿದೆ. ಆ ಒಪ್ಪಂದದ ಬೇಡಿಕೆಯು ಕೇವಲ ಅಲ್ಲಾಹನ ನಿಯಮಗಳನ್ನು ಗರಿಷ್ಠಮಟ್ಟದಲ್ಲಿ ಪಾಲಿಸುವುದು. ನಿಮ್ಮ ವಿಶ್ವಾಸ, ಮಾತು ಮತ್ತು ಕೃತಿಗಳೆಲ್ಲವೂ ಸಂಪೂರ್ಣವಾಗಿ ಪರಸ್ಪರ ಹೊಂದಿಕೊಳ್ಳುವುದು, ಜೀವನದ ಎಲ್ಲಾ ರಂಗಗಳಲ್ಲಿಯೂ ನಿಮ್ಮ ವಿಚಾರ ಮತ್ತು ಕೃತಿಗಳು ನೀವು ನಂಬಿದ ಇಸ್ಲಾಮಿಗೆ ವಿರುದ್ಧವಲ್ಲದಂತೆ ಮಾಡುವುದಷ್ಟೇ ಅಲ್ಲ- ನೀವು ವಿಶ್ವಾಸವಿರಿಸಿರುವ, ನೀವು ನಿಮ್ಮ ಪ್ರಭುವಿನ ಜೀವನ ವ್ಯವಸ್ಥೆಯೆಂದು ಭಾವಿಸುವ, ಮಾನವಕುಲ ಹಾಗೂ ಸತ್ಯ ಮತ್ತು ವಿಜಯದ ಸೋಪಾನವೆಂದು ನೀವು ನಂಬಿರುವ ಇಸ್ಲಾಮನ್ನು ಎಲ್ಲಾ ಧರ್ಮಗಳಿಗಿಂತಲೂ ಎಲ್ಲಾ ವ್ಯವಸ್ಥೆಗಳಿಗಿಂತಲೂ ಯಶಸ್ವಿಗೊಳಿಸಲಿಕ್ಕಾಗಿ ಪ್ರಯತ್ನಿಸುವುದೂ ಆ ಒಪ್ಪಂದದ ಅನಿವಾರ್ಯ ಬೇಡಿಕೆಯಾಗಿದೆ. ಮಾನವ ಲೋಕವನ್ನು ಮಿಥ್ಯ ಧರ್ಮಗಳ ವಿನಾಶಕಾರಿ ವಿಪತ್ತುಗಳಿಂದ ರಕ್ಷಿಸಿ ಸತ್ಯಧರ್ಮದ ಅನುಗ್ರಹಗಳನ್ನು ದೊರಕಿಸಿಕೊಡಲಿಕ್ಕಾಗಿ ನೀವು ಕಡಿಮೆ ಪಕ್ಷ ಮಿಥ್ಯ ಧರ್ಮದ ಅನುಯಾಯಿಗಳು ತಮ್ಮ ಧರ್ಮಗಳ ಸಂರಕ್ಷಣೆ ಮತ್ತು ಯಶಸ್ವಿಗಾಗಿ ತೋರುವ ಕಳಕಳಿ ಮತ್ತು ತ್ಯಾಗ ಸನ್ನದ್ಧತೆಯನ್ನಾದರೂ ಬೆಳೆಸಿ ಕೊಳ್ಳಬೇಕು. ತಾವು ಸತ್ಯವೆಂದೂ ಕಲ್ಯಾಣಕರವೆಂದೂ ಮನಗಂಡಿರುವ ವ್ಯವಸ್ಥೆಗಳನ್ನು ಕೇವಲ ಸ್ವದೇಶದಂತೆಯೇ ಇಡೀ ಭೂಲೋಕದಲ್ಲಿ ಯಶಸ್ವಿಗೊಳಿಸಲಿಕ್ಕಾಗಿ ತೀವ್ರ ನಷ್ಟಗಳನ್ನು ಸಹಿಸಿ, ಧನ ಮತ್ತು ಪ್ರಾಣದ ತ್ಯಾಗವನ್ನು ನೀಡಿ ದೇಶ, ಸಂತಾನ, ಕುಟುಂಬ ಮತ್ತು ಸ್ವಜೀವದ ವಿನಾಶವನ್ನು ನಿರ್ಲಕ್ಷಿಸುವ ಜನರ ಉದಾಹರಣೆ ನಿಮ್ಮ ಮುಂದೆ ಬಹಳಷ್ಟು ಇದೆ. ಅವರ ತಾಳ್ಮೆ ಮತ್ತು ಸಹನೆಯನ್ನೂ ಪ್ರಯತ್ನಗಳನ್ನೂ ತಮ್ಮ ದೇಹದ ಬಗೆಗಿನ ಕಾಳಜಿಯನ್ನೂ ನಿಮ್ಮ ಚಟುವಟಿಕೆಗಳೊಡನೆ ಒಮ್ಮೆ ಹೋಲಿಸಿ ನೋಡಿರಿ. ಎಷ್ಟೊಂದು ವ್ಯತ್ಯಾಸ ಕಾಣಿಸುತ್ತದೆ! ಆದ್ದರಿಂದ ಅವರ ಮುಂದೆ ಎಂದಾದರೂ ಜಯಶೀಲರಾಗಬೇಕಾದರೆ ಅಂತಹ ವಿಷಯಗಳಲ್ಲಿ ನೀವು ಅವರನ್ನು ಮೀರಿಸದೆ ನಿರ್ವಾಹವಿಲ್ಲ. ಅಲ್ಲದೇ ನಿಮ್ಮ ಇಂದಿನ ಧನ, ಸಮಯ ಮತ್ತು ಪರಿಶ್ರಮಗಳ ತ್ಯಾಗ ಮಟ್ಟವನ್ನೂ ಧ್ಯೇಯದ ಬಗೆಗಿನ ನಿಮ್ಮ ಒಲವಿನ ಮಟ್ಟವನ್ನೂ ನೋಡುವಾಗ ಎಂದಾದರೂ ಈ ಧ್ವಜವು ನಿಮ್ಮ ಹಸ್ತಗಳಲ್ಲಿ ಮೇಲೇರಿತೆಂದು ನಿರೀಕ್ಷಿಸುವಂತಿಲ್ಲ.

ನಿಮಗೆ ಪದೇ ಪದೇ ಜ್ಞಾಪಿಸಿ ಕೊಡಬೇಕಾಗುತ್ತಿರುವ ಎರಡನೆಯ ವಿಷಯವೇನೆಂದರೆ ನೀವು ಧರ್ಮದ ತಾತ್ವಿಕ ಮತ್ತು ಮೂಲಭೂತ ವಿಷಯಗಳ ಪ್ರಾಮುಖ್ಯತೆಯನ್ನು ಅರ್ಥ ಮಾಡಿಕೊಳ್ಳಬೇಕು. ಆಂಶಿಕ ವಿಷಯಕ್ಕೆ ನೀವು ಈ ವರೆಗೆ ನೀಡುತ್ತಿರುವ ಪ್ರಾಮುಖ್ಯತೆಯ ಈ ರೋಗವು ಇಡೀ ಧಾರ್ಮಿಕ ಪರಿಸರವನ್ನೇ ಕೆಡಿಸುತ್ತಿದೆ. ಅದನ್ನು ಕೊನೆಗೊಳಿಸಲು ನೀವು ಪ್ರಯತ್ನಿಸಬೇಕು. ನಾನು ಹಾಗೂ ಜಮಾಅತ್‌ನಲ್ಲಿರುವ ಇತರ ವಿದ್ವಾಂಸರು ತೀವ್ರವಾಗಿ

ಪ್ರಯತ್ನಿಸುತ್ತಿದ್ದರೂ ಜಮಾಅತ್‌ನಲ್ಲಿ ಇಂದಿಗೂ ಆಂಶಿಕ ವಿಷಯಗಳ ಕುರಿತು ಆಸಕ್ತಿ ಮಿತಿಮೀರಿರುವುದು ಕಂಡು ಬರುತ್ತದೆ. ವಾಸ್ತವದಲ್ಲಿ ಈ ಕಾರಣದಿಂದಲೇ ಮುಸ್ಲಿಮರಲ್ಲಿ ಗುಂಪುಗಾರಿಕೆಯು ತುಂಬಾ ಕಾಲದಿಂದ ನಡೆದು ಬರುತ್ತಿದೆ. ಈ ಸ್ಥಿತಿಯು ಹಲವೊಮ್ಮೆ ಅತಿರೇಕದ ಮಟ್ಟಕ್ಕೆ ತಲಪುತ್ತಿವೆ. ಅದರಿಂದಾಗಿ ನಮ್ಮ ಉಪದೇಶದಿಂದ ಈ ರೀತಿಯನ್ನು ತೊರೆಯುವ ಬದಲಾಗಿ ಕೆಲವು ಬಾಂಧವರು ನಮ್ಮನ್ನೇ ಅಂತಹ ತರ್ಕದಲ್ಲಿ ಸಿಲುಕಿಸಲು ಪ್ರಯತ್ನಿಸುತ್ತಿದ್ದಾರೆ. ಆದರೆ ಒಂದು ವಿಷಯವು ನಿಮಗೆ ಚೆನ್ನಾಗಿ ತಿಳಿದಿರಲಿ. ಅದೇನೆಂದರೆ ನೀವು ತರ್ಕಿಸಿ ಕಾಲಹರಣ ಮಾಡುತ್ತಿರುವ ಈ ಆಂಶಿಕ ವಿಷಯವು ಅದೆಷ್ಟೇ ಪ್ರಾಮುಖ್ಯವಾಗಿದ್ದರೂ ಅವುಗಳ ಸ್ಥಾಪನೆಗಾಗಿ ಅಲ್ಲಾಹನ ಪ್ರವಾದಿಗಳ ನೇಮಕ ಮತ್ತು ಗ್ರಂಥಗಳ ಅವತೀರ್ಣವಾಗಿಲ್ಲವೆಂಬುದು ವ್ಯಕ್ತ. ಇಂತಹ ಅಂಶಿಕ ವಿಷಯಗಳ ಸ್ಥಾಪನೆಯು ಪ್ರವಾದಿಗಳ ನೇಮಕ ಹಾಗೂ ಗ್ರಂಥಗಳ ಅವತರಣದ ನೈಜ ಉದ್ದೇಶವಾಗಿರಲಿಲ್ಲ. ಬದಲಾಗಿ ಅಲ್ಲಾಹನ ಸೃಷ್ಟಿಗಳು ಆತನ ನೈಜ ಪ್ರಭುವಿನ ಹೊರತು ಇತರರ ಆಜ್ಞಾನುವರ್ತಿಗಳಾಗದಿರುವುದು, ಕಾನೂನು ಕೇವಲ ಅಲ್ಲಾಹನದ್ದಾಗಿರುವುದು, ಅಲ್ಲಾಹನ ಆಜ್ಞೆಯನ್ನು ಮಾತ್ರ ಸ್ವೀಕರಿಸುವುದು, ಸತ್ಯಾಸತ್ಯಗಳ ವಿವೇಚನೆ ಮತ್ತು ಜೀವನ ವ್ಯವಸ್ಥೆಗೆ ಕೇವಲ ಅಲ್ಲಾಹನ ಆದೇಶಗಳನ್ನು ಸ್ವೀಕರಿಸುವುದು, ಲೋಕದಲ್ಲಿ ಅಲ್ಲಾಹನು ಮೆಚ್ಚದ ಕೆಡುಕುಗಳ ಮೂಲೋತ್ಪಾಟನೆ ಮಾಡುವುದು, ಆತನು ಮೆಚ್ಚುವ ಒಳಿತನ್ನು ಸಂಸ್ಥಾಪಿಸುವುದೆಂಬುದೇ ನೈಜ ಧರ್ಮ. ಇದರ ಸ್ಥಾಪನೆಯೇ ನಮ್ಮ ಧ್ಯೇಯ. ಮುಸ್ಲಿಮರೆಂಬ ನೆಲೆಯಲ್ಲಿ ಈ ಕರ್ತವ್ಯವೇ ನಮ್ಮ ಮೇಲೆ ಹೊರಿಸಲ್ಪಟ್ಟಿದೆ. ಈ ಕೆಲಸದ ಪ್ರಾಮುಖ್ಯತೆಯನ್ನು ನೀವು ಚೆನ್ನಾಗಿ ಗ್ರಹಿಸಿದರೆ ಅದು ಸ್ಥಗಿತಗೊಂಡು ಲೋಕದಲ್ಲಿ ನಿಷಿದ್ಧ ವ್ಯವಸ್ಥೆಗಳು ಆಧಿಪತ್ಯ ಪಡೆದುದರ ಕಾರಣದಿಂದ ಇಂದು ಲೋಕವು ದೇವ ಶಾಪಕ್ಕೆ ಎಷ್ಟರ ಮಟ್ಟಿಗೆ ಅರ್ಹವಾಗಿದೆಯೆಂಬುದನ್ನು ತಿಳಿದು ಕೊಂಡರೆ ಈ ದುಃಸ್ಥಿತಿಯಲ್ಲಿ ದೇವ ಶಾಪದಿಂದ ಕಾಪಾಡಲಿಕ್ಕೆ ನಮ್ಮ ಎಲ್ಲಾ ಶಕ್ತಿ (ಸೊತ್ತು, ಪ್ರಾಣ, ಬುದ್ಧಿ, ನಾಲಗೆ ಮುಂತಾದ ಸರ್ವಶಕ್ತಿ)ಯನ್ನೂ ಅಲ್ಲಾಹನ ಧರ್ಮದ ಸೇವೆಗೆ ಮುಡಿಪಾಗಿಡುವ ಹೊರತು ಅನ್ಯ ಮಾರ್ಗವಿಲ್ಲವೆಂದು ಮನವರಿಕೆಯಾದರೆ ಇಂದು ನಮ್ಮಲ್ಲಿ ಅನೇಕ ಮಂದಿ ನಿರತವಾಗಿರುವಂತಹ ನಿರರ್ಥಕ ತರ್ಕ ವಿತರ್ಕಗಳಲ್ಲಿಯೂ ನಿಷ್ಫಲ ವಿಚಾರಗಳಲ್ಲಿಯೂ ತಮ್ಮ ಕಾಲಹರಣ ಮಾಡುತ್ತಿರಲಿಲ್ಲ. ವಾಸ್ತವದಲ್ಲಿ ಧರ್ಮವು ಅದರ ಅನುಯಾಯಿಗಳಿಂದ ಏನು ಬಯಸುತ್ತದೆಯೆಂಬುದರ ಕುರಿತು ಜನರು ಈ ತನಕ ಚೆನ್ನಾಗಿ ತಿಳಿದು ಕೊಳ್ಳದಿರುವುದೇ ಇದಕ್ಕೆ ಕಾರಣವಾಗಿದೆ.

## ಆಮೂಲಾಗ್ರ ಬದಲಾವಣೆಯ ಏಕೈಕ ಮಾರ್ಗ

ನಮ್ಮ ಕೆಲವು ಸ್ನೇಹಿತರಲ್ಲಿ ಕಂಡು ಬರುತ್ತಿರುವ ಕೊರತೆಯೇನೆಂದರೆ- ಅದು ನಮ್ಮನ್ನು ಹಲವೊಮ್ಮೆ ತೊಂದರೆಗೆ ಸಿಲುಕಿಸಿದೆ- ಈ ಮಹನೀಯರು ತತ್ವ, ಧ್ಯೇಯ ಮತ್ತು ಸಿದ್ಧಾಂತಗಳಲ್ಲಿ ಜಮಾಅತ್‌ನ ಸ್ಥಾನವನ್ನು ಗ್ರಹಿಸಿರುವವರಾದರೂ ನಮ್ಮ ಕಾರ್ಯ ವಿಧಾನವನ್ನು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ. ಆದ್ದರಿಂದ ಅವರ ಗಮನವು ಆಗಾಗ ಇತರ ಸಂಘಟನೆಗಳ ಕಾರ್ಯವಿಧಾನದೆಡೆಗೆ ಹೊರಳುತ್ತದೆ. ಹೇಗಾದರೂ ಮಾಡಿ ನಮ್ಮ ಧ್ಯೇಯವನ್ನೂ ಇತರರ ಕಾರ್ಯ ವಿಧಾನವನ್ನೂ ಸೇರಿಸಿ ಒಂದು 'ರಸಾಯನ' ತಯಾರಿಸಲು ಅವರು

ಪ್ರಯತ್ನಿಸುತ್ತಿದ್ದಾರೆ. ಆದರಿಂದ ಅವರನ್ನು ತಡೆದರೆ, ನಾವು ಪ್ರಚಾರದಲ್ಲಿರುವ ಒಂದು ಯಶಸ್ವೀ ಕಾರ್ಯ ವಿಧಾನವನ್ನು ಅದು ಕೇವಲ ಅನ್ಯ ಕಾರ್ಯವಿಧಾನವೆಂಬ ಪಕ್ಷಪಾತೀ ಧೋರಣೆಯಿಂದ ನಿರ್ಲಕ್ಷಿಸುತ್ತಿದ್ದೇವೆಂದು ಅವರು ಭ್ರಮಿಸುತ್ತಾರೆ. ಇನ್ನು ಕೆಲವು ಮಹನೀಯರು ಅದಕ್ಕಿಂತ ಮುಂದುವರಿದು ಇತರ ಕಾರ್ಯವಿಧಾನದಿಂದ ನಾವು ಅವರನ್ನು ತಡೆದಾಗ, "ವಿಧಾನವು ಅನ್ಯರದ್ದಾದರೂ ನಿಮ್ಮ ಹೆಸರೇ ಹೇಳೋಣ" ಎಂದು ನಮ್ಮನ್ನು ಸಮಾಧಾನ ಪಡಿಸುತ್ತಿದ್ದಾರೆ. ಅಂದರೆ ಅವರ ಅಭಿಪ್ರಾಯದಲ್ಲಿ ನಮ್ಮ ಎಲ್ಲಾ ಪ್ರಯತ್ನಗಳೂ ನಮ್ಮ "ರಿಜಿಸ್ಟರ್ಡ್ ಟ್ರೇಡ್ ಮಾರ್ಕ"ನ್ನು ಪ್ರಚಾರ ಮಾಡಲಿಕ್ಕೆಂದರ್ಥ. ಆದರೆ ಈ ಎಲ್ಲಾ ಭಾವನೆಗಳ ಹೊರತಾಗಿಯೂ ಅವರು ನಮ್ಮ ಜಮಾಅತ್‌ನಲ್ಲಿ ಸೇರಿಕೊಂಡಿರುವರೆಂಬುದೇ ಬಹು ಸೋಜಿಗದ ವಿಷಯ. ಜಮಾಅತ್‌ನ ಕೆಲವು ಸ್ಥಾನೀಯ ಶಾಖೆಗಳಲ್ಲಿ ಈ ರೋಗವು ವ್ಯಾಪಕವಾಗಿದೆ. ಆದರೆ ಅದರ ಬಾಧೆಯು ಅಷ್ಟೊಂದು ತೀವ್ರವಾಗಿರದ ಇತರ ಕೆಲವೆಡೆಗಳಲ್ಲಿಯೂ ಶೀಘ್ರಗಾಮಿ ಕಾರ್ಯವಿಧಾನವನ್ನು ಸ್ವೀಕರಿಸಿ ಆಕರ್ಷಕವಾದ ಏನಾದರೂ ಚಟುವಟಿಕೆಯನ್ನು ಲೋಕದ ಮುಂದೆ ತೋರಿಸಬೇಕೆಂಬ ಹಂಬಲವನ್ನು ವಿವಿಧ ರೀತಿಯಲ್ಲಿ ಪ್ರಕಟ ಪಡಿಸುತ್ತಿದ್ದಾರೆ. ಇದೆಲ್ಲವೂ ಮುಸ್ಲಿಮರಲ್ಲಿ ತುಂಬಾ ಕಾಲದಿಂದ ಬೆಳೆದು ಬಂದಿರುವ "ಆಲೋಚಿಸದೆ ಕೆಲಸ ಮಾಡುವ" ಆ ಹಳೆಯ ರೋಗದ ದಾರುಣ ಫಲವಾಗಿದೆ. ಇದಾದರೋ "ಕೆಲಸ ಮಾಡದೇ ಕೇವಲ ಆಲೋಚಿಸುವ" ಆಪತ್ತಿಗಿಂತಲೂ ಕಡಿಮೆಯದೇನಲ್ಲ. ಆದರೆ ಇಂದು ಮುಸ್ಲಿಮರಲ್ಲಿ ನಡೆಯುತ್ತಿರುವ ಧಾರ್ಮಿಕ ಹಾಗೂ ರಾಜಕೀಯ ಸಂಘಟನೆಗಳ ಪೈಕಿ ಯಾವುದಾದರೊಂದರಲ್ಲಿ ಸ್ವಲ್ಪವಾದರೂ ನೈಜ ಚೈತನ್ಯವಿರುತ್ತಿದ್ದರೆ ಈ ಜಮಾಅತ್‌ನ ಸ್ಥಾಪನೆಯ ಕಾರ್ಯವನ್ನು ಇನ್ನೂ ಸ್ವಲ್ಪಕಾಲ ಮುಂದೂಡಿ ಪ್ರಸ್ತುತ ಸೂತ್ರಗಳ ಪರಿಶೀಲನೆಗಾಗಿ ನಮ್ಮ ಸಂಪೂರ್ಣ ಶಕ್ತಿ ಸಾಮರ್ಥ್ಯವನ್ನು ವಿನಿಯೋಗಿಸುತ್ತಿದ್ದೇವೆಂದು ನಾನು ನಿಮಗೆ ಖಚಿತ ಭರವಸೆ ನೀಡುತ್ತಿದ್ದೇನೆ. ಆದರೆ ನಮಗೆ ಇಂದು ದೊರೆತಿರುವ ಸ್ವಲ್ಪ ವಿವೇಕ ಮತ್ತು ದೂರದೃಷ್ಟಿಯ ಆಧಾರದಲ್ಲಿ ಹೇಳುವುದಿದ್ದರೆ ಇಂದು ನಡೆಯುತ್ತಿರುವ ಸಂಘಟನೆಗಳಲ್ಲಾಗಲೀ ನಾಯಕರಲ್ಲಾಗಲೀ ಮುಸ್ಲಿಮರ ರೋಗಕ್ಕೆ ಸೂಕ್ತ ಚಿಕಿತ್ಸೆಯಿಲ್ಲ. ಹಾಗೆಯೇ ಇಸ್ಲಾಮಿನ ನೈಜ ಉದ್ದೇಶವೂ ಪೂರ್ತಿಯಾಗಲಾರದೆಂದೂ ನಮಗೆ ವೇದ್ಯವಾಗಿದೆ. ಕೇವಲ ಆಂಶಿಕವಾಗಿ ಮುಸ್ಲಿಮರನ್ನು ಅಪೂರ್ಣ ಹಾಗೂ ಅಪಕ್ವ ರೀತಿಯಲ್ಲಿ ಪರೀಕ್ಷಿಸಲಾಯಿತು. ಇಸ್ಲಾಮಿನ ನೈಜ ಬೇಡಿಕೆಗಳನ್ನು ಚೆನ್ನಾಗಿ ತಿಳಿಯಲು ಪ್ರಯತ್ನಿಸಲಿಲ್ಲ. ಮಾತ್ರವಲ್ಲ ಪ್ರಚಲಿತವಿರುವ 'ಕುಫ್ರ್' (ಸತ್ಯ ನಿಷೇಧ) ಮತ್ತು 'ಫಿಸ್ಕ್'ನ (ದೇವ ನಿರ್ಧರಿತ ಸೀಮೋಲ್ಲಂಘನೆ)ನ ಆಧಿಪತ್ಯಕ್ಕೂ ಧರ್ಮದ ಅಸಹಾಯಕತೆ ಮತ್ತು ಸೋಲಿಗೆ ನೈಜ ಕಾರಣವೇನೆಂದೂ ಈ ಸ್ಥಿತಿಗತಿಗಳ ಬದಲಾವಣೆಗೆ ಯಾವ ರೀತಿಯಲ್ಲಿ ಯಾವೆಲ್ಲಾ ರಂಗಗಳಲ್ಲಿ ಕಾರ್ಯನಿರತರಾಗಬೇಕೆಂದೂ ಚೆನ್ನಾಗಿ ತಿಳಿದು ಕೊಳ್ಳಲಿಲ್ಲ. ಈ ವಾಸ್ತವಿಕಾಂಶವನ್ನು ತಿಳಿಯದೆ, ಆಲೋಚಿಸದೆ ನಡೆಸಲಾಗುತ್ತಿರುವ ಅಪೂರ್ಣ ಆಂದೋಲನಗಳನ್ನೂ ಸಾರ್ವಜನಿಕರ ಗಮನವನ್ನು ಕ್ಷಿಪ್ರವಾಗಿ ತಮ್ಮೆಡೆಗೆ ಆಕರ್ಷಿಸಲಿಕ್ಕಾಗಿ ಅವು ಕೈಗೊಂಡಿರುವ ಕಾರ್ಯ ವಿಧಾನಗಳನ್ನು ನಾವು ತಪ್ಪೆಂದು ದೂರುವುದಿಲ್ಲ. ಅದಕ್ಕಾಗಿ ಕಾರ್ಯ ನಿರತರಾಗಿರುವ ಜನರ ನಿಸ್ವಾರ್ಥತೆಯನ್ನೂ ನಾವು ಗೌರವಿಸುತ್ತೇವೆ. ಆದರೆ ಅವೆಲ್ಲವೂ ನಿಷ್ಫಲವೆಂದು ನಾವು ಭಾವಿಸುತ್ತೇವೆ. ಅಂತಹ ಆಂದೋಲನಗಳು ಶತಮಾನಗಳ

ತನಕ ಯಶಸ್ವಿಯಾಗಿ ಗೌಜು ಗದ್ದಲಗಳ ಸಹಿತ ನಡೆಯುತ್ತಲಿದ್ದರೂ ಜೀವನ ವ್ಯವಸ್ಥೆಯಲ್ಲಿ ಯಾವುದೇ ನೈಜ ಕ್ರಾಂತಿಯು ಪ್ರತ್ಯಕ್ಷವಾಗದೆಂಬುದು ಖಚಿತ. ಅಂತಹ ಆಮೂಲಾಗ್ರ ಬದಲಾವಣೆ ನಡೆಯುವುದಿದ್ದರೆ ನಮ್ಮ ಈ ಸಂಘಟನೆಯಿಂದ ಮಾತ್ರ ಸಾಧ್ಯ. ಅದಕ್ಕಿರುವ ವ್ಯವಸ್ಥೆ ಕೇವಲ ಇದೊಂದೆ. ನಾವು ಧರ್ಮದ ಪ್ರಕೃತಿಯನ್ನೂ ಅದರ ಇತಿಹಾಸವನ್ನೂ ಗಹನವಾಗಿ ಪರಿಶೀಲಿಸಿ ನಂತರ ಈ ಮಾರ್ಗವನ್ನು ತುಳಿದಿದ್ದೇವೆ. ನಮ್ಮ ಕಾರ್ಯ ವಿಧಾನದಲ್ಲಿ ಸಹನೆಯು ತೀವ್ರ ಪರೀಕ್ಷೆಗೆ ಗುರಿಯಾಗುವುದು ಹಾಗೂ ಇದು ಮಂದಗತಿಯಲ್ಲಿ ಸಾಗುವುದೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಆದರಿಂದ ಯಾವ ಕ್ಷಿಪ್ರ ಪರಿಣಾಮವೂ ಗೋಚರಿಸಲಾರದು. ಅದಕ್ಕಾಗಿ ವರ್ಷಗಟ್ಟಲೆ ನಿರಂತರ ಪರಿಶ್ರಮಗಳನ್ನು ನಡೆಸಬೇಕಾಗುವುದು. ಅದರ ಸೂಚನೆ ಮತ್ತು ಕರ್ಮ ಫಲಗಳು ಕೆಲವೊಮ್ಮೆ ಅದಕ್ಕಾಗಿ ಪರಿಶ್ರಮಿಸುತ್ತಿರುವವರಿಗೇ ಅನುಭವವಾಗದಿರಬಹುದು. ಆದರೆ ಇದರಲ್ಲಿ ವಿಜಯಕ್ಕೆ ಇದೊಂದೇ ಮಾರ್ಗವಿರುವುದು. ಇದರ ಹೊರತು ಅನ್ಯ ಕಾರ್ಯವಿಧಾನದಿಂದ ಈ ಧ್ಯೇಯ ಸಾಧನೆಯಾಗದು. ನಮ್ಮ ವಿಶ್ವಾಸ ಹಾಗೂ ಕಾರ್ಯವಿಧಾನದ ಬಗ್ಗೆ ಅಥವಾ ಅವೆರಡರ ಬಗ್ಗೆಯೂ ಸಂತೃಪ್ತಿಯಿಲ್ಲದವರಿಗೆ ಜಮಾಅತ್‌ನಿಂದ ಹೊರ ಹೋಗಿ ತಮ್ಮಿಷ್ಟದಂತೆ ವರ್ತಿಸುವ ಮಾರ್ಗವು ತೆರೆದಿದೆ. ಆದರೆ ಜಮಾಅತ್‌ನ ಒಳಗಿದ್ದುಕೊಂಡು ಆ ಪೈಕಿ ಯಾವುದಾದರೊಂದನ್ನು ಇಷ್ಟಾನುಸಾರ ಬದಲಾಯಿಸುವ ಅಧಿಕಾರವನ್ನು ಯಾವ ರೀತಿಯಿಂದಲೂ ಅವರಿಗೆ ನೀಡಲು ಸಾಧ್ಯವಿಲ್ಲ. ನಮ್ಮೊಂದಿಗೆ ನಡೆಯಬಯಸುವವರು ಸಂಪೂರ್ಣ ಸಂತೃಪ್ತಿ ಮತ್ತು ಮನಃಪೂರ್ವಕವಾಗಿ ನಮ್ಮ ವಿಶ್ವಾಸ ಮತ್ತು ಕಾರ್ಯಕ್ರಮಗಳನ್ನು ಚೆನ್ನಾಗಿ ತಿಳಿದು ನಡೆಯಬೇಕು. ಇತರ ಆಂದೋಲನ ಅಥವಾ ಪಕ್ಷಗಳ ಬಗ್ಗೆ ಮನದಲ್ಲಿ ಸ್ವಲ್ಪವಾದರೂ ಆದ್ಯತೆ ಭಾಸವಾಗುವುದಿದ್ದರೆ ಅವರು ಪ್ರಥಮವಾಗಿ ಆ ಮಾರ್ಗಗಳನ್ನು ಪ್ರಯೋಗಿಸಿ ನೋಡಬೇಕು. ತರುವಾಯ ಅವರ ಮನಸ್ಸು ನಾವು ತಲಪಿರುವ ನಿರ್ಧಾರಕ್ಕೆ ತಲಪಿದರೆ ಅವರು ಸಂತೋಷದಿಂದ ನಮ್ಮೊಂದಿಗೆ ಬರಬಹುದು.

ಮುಸ್ಲಿಮರಲ್ಲಿ ಸಾಮಾನ್ಯವಾಗಿ ರೂಢಮೂಲವಾಗಿರುವ ವ್ಯರ್ಥ ಚಟುವಟಿಕೆ ಮತ್ತು ಪ್ರದರ್ಶನ ಪ್ರಿಯತೆ ಹಾಗೂ ಅವಸರ ಮುಂತಾದ ದೌರ್ಬಲ್ಯಗಳ ಒಂದು ಪ್ರತ್ಯಕ್ಷ ದೃಷ್ಟಾಂತವು ಇತ್ತೀಚೆಗೆ ನನ್ನ ಗಮನಕ್ಕೆ ಬಂದಿದೆ. ಸಾರ್ವಜನಿಕರಲ್ಲಿ ವಯಸ್ಕರ ಶಿಕ್ಷಣದ ಮೂಲಕ ಕಾರ್ಯೋನ್ಮುಖರಾಗಬೇಕೆಂದು ಕೆಲವು ತಿಂಗಳ ಹಿಂದೆ ನಾನು ನಿರ್ದೇಶಿಸಿದ ಕಾರ್ಯಕ್ರಮದಲ್ಲಿ ಕೆಲವೇ ಮಂದಿ ಆಸಕ್ತಿ ತೋರಿದ್ದಾರೆ. ಆದರೆ ತಂಡಗಳಾಗಿ ವಿವಿಧ ಗ್ರಾಮಗಳಿಗೆ ಭೇಟಿ ನೀಡಿ ಜನರನ್ನು ಕ್ಷಿಪ್ರವಾಗಿ ಆಕರ್ಷಿಸುವಂತಹ ಕಾರ್ಯಕ್ರಮಗಳನ್ನು - ಅವುಗಳ ಪ್ರಭಾವವು ಎಷ್ಟೇ ಕ್ಷಣಿಕವಾಗಿದ್ದರೂ- ರೂಪಿಸಬೇಕೆಂದು ಅನೇಕ ಕಾರ್ಯಕರ್ತರು ನನ್ನನ್ನು ಒತ್ತಾಯಿಸುತ್ತಿದ್ದಾರೆ. ಇಷ್ಟೆಲ್ಲಾ ಉಪದೇಶಿಸಿಯೂ ಅವರು ಅದಕ್ಕಾಗಿ ಪ್ರಯತ್ನ ನಡೆಸುವುದಿಲ್ಲ. ವಾಸ್ತವದಲ್ಲಿ ಈ ಎರಡು ಕಾರ್ಯ ವಿಧಾನಗಳಲ್ಲಿಯೂ ಅಜಗಜಾಂತರವಿದೆ. ಒಂದನೆಯ ಕಾರ್ಯವಿಧಾನದ ಸ್ವರೂಪವು ಈ ರೀತಿಯಿದೆ- ಒಂದು ಅಥವಾ ಅದಕ್ಕಿಂತ ಹೆಚ್ಚು ವರ್ಷಗಳ ವರೆಗೆ ಅಕ್ಷರಜ್ಞಾನವಿಲ್ಲದವರಲ್ಲಿ ಕೆಲವು ಮಂದಿಗೆ ವಿದ್ಯಾಭ್ಯಾಸ ನೀಡಿ ಅವರನ್ನು ಸುಧಾರಿಸಬೇಕು. ಅವರ ವಿಶ್ವಾಸ, ಸ್ವಭಾವ, ಕರ್ಮ, ಜೀವನಧ್ಯೇಯ, ಸ್ಥಾನಮಾನದ ಮಾನದಂಡ ಇತ್ಯಾದಿಗಳನ್ನು ಸಂಪೂರ್ಣವಾಗಿ ಬದಲಾಯಿಸಬೇಕು. ತರುವಾಯ ಅವರನ್ನು

ತಮ್ಮ ಜಮಾಅತ್‌ನ ನಿಷ್ಠಾವಂತ ಕಾರ್ಯಕರ್ತರನ್ನಾಗಿ ಮಾಡಿ ಕೃಷಿ ಕಾರ್ಮಿಕರಲ್ಲಿಯೂ ಇತರ ಜನ ವಿಭಾಗಗಳಲ್ಲಿಯೂ ಅವರ ಸೇವೆಯನ್ನು ಬಳಸಿಕೊಳ್ಳಬೇಕು. ಆದರೆ ಎರಡನೇ ಕಾರ್ಯ ವಿಧಾನದಂತೆ, ಅತ್ಯಲ್ಪ ಸಮಯದಲ್ಲಿ ಸಹಸ್ರಾರು ಜನರಿಗೆ ಧರ್ಮದ ಕೆಲವು ಪ್ರಾಥಮಿಕ ಆಚಾರ ಕರ್ಮಗಳ ಕುರಿತು ತಿಳುವಳಿಕೆ ನೀಡಿ ಅವರಲ್ಲಿ ತಾತ್ಕಾಲಿಕ ಸ್ಫೂರ್ತಿ ಹುಟ್ಟಿಸುವುದು, ಎರಡನೇ ಬಾರಿಗೆ ಭೇಟಿ ನೀಡುವಾಗ ಅಲ್ಲಿ ಪ್ರಥಮ ಬಾರಿಯ ಸ್ಫೂರ್ತಿಯ ಗಂಧಗಾಳಿಯೂ ಉಳಿದಿರದಿದ್ದರೂ ಚಿಂತೆಯಿಲ್ಲ. ಈ ವಿಧಾನಗಳಲ್ಲಿ ತಡವಾಗಿ ಸೂಕ್ತ ಪರಿಣಾಮ ಬೀರಬಲ್ಲ ಮತ್ತು ನಿರಂತರ ಪ್ರಯತ್ನದ ಅಗತ್ಯವಿರುವ ಹಾಗೂ ತಾಳ್ಮೆಯನ್ನು ಪರೀಕ್ಷಿಸುವ ಮಾರ್ಗವನ್ನು ಜನರು ಗಮನಿಸಿದರೆ, ಇತರ ಮಾರ್ಗಗಳಲ್ಲಿ ಓಡುತ್ತಿರಲು ಆಗಾಗ ಪ್ರಯತ್ನಿಸುತ್ತಿರುವುದನ್ನು ನೋಡುವಾಗ, ಮುಸ್ಲಿಮರು ಈ ತನಕ ವ್ಯರ್ಥ ಹಾಗೂ ನಿಷ್ಫಲ ಕಾರ್ಯಕ್ರಮಗಳಿಗಾಗಿ ತಮ್ಮ ಶಕ್ತಿ, ಸಾಮರ್ಥ್ಯ, ಸಂಪತ್ತು, ಸಮಯವನ್ನು ದುರ್ವ್ಯಯಗೊಳಿಸಲು ಪ್ರೇರಕವಾದ ಕಾರಣಗಳು ನನಗೆ ಸ್ಪಷ್ಟವಾಗುತ್ತದೆ. ಈ ಬಗ್ಗೆ ನಾನು ಇಷ್ಟು ಮಾತ್ರ ಹೇಳ ಬಲ್ಲೆ- ಈ ಜಮಾಅತ್‌ನ ಸೂತ್ರವು ನನ್ನ ಕೈಯಲ್ಲಿರುವ ತನಕ ನಾನು ನನ್ನ ಸಂಗಾತಿಗಳನ್ನು ಸರಿಯಾದ ಹಾಗೂ ಪರಿಣಾಮಕಾರಿಯಾದ ಚಟುವಟಿಕೆಗಳಲ್ಲಿ ತಲ್ಲೀನರಾಗಿರುವಂತೆ ಪ್ರಯತ್ನಿಸುತ್ತೇನೆ. ವ್ಯರ್ಥ ಕಾರ್ಯಗಳಲ್ಲಿ ನಿರತರಾಗಲು ಖಂಡಿತ ಅನುಮತಿಸಲಾರೆ."

ನನ್ನ ಈ ಭಾಷಣವನ್ನು ನಿಲ್ಲಿಸುವುದಕ್ಕಿಂತ ಮುಂಚಿತವಾಗಿ ಒಂದು ಅಂತಿಮ ವಿಷಯವನ್ನು ನಿಮ್ಮ ಗಮನಕ್ಕೆ ತರುವುದು ಅಗತ್ಯವೆಂದು ಭಾವಿಸುತ್ತೇನೆ. ನಮ್ಮ ವರ್ತುಲದಲ್ಲಿ ಹೆಚ್ಚಿನವರು ಪ್ರಚಾರ-ಸುಧಾರಣಾ ಚಟುವಟಿಕೆಗಳ ಉಗ್ರ ನೀತಿಯನ್ನು ಅನುಸರಿಸುತ್ತಿರುವಂತೆ ಭಾಸವಾಗುತ್ತಿದೆ. ಅವರು ಕೇಳುತ್ತಿರುವ ಪ್ರಶ್ನೆಗಳಿಂದ ನಾನು - ಇದನ್ನು ಊಹಿಸಿದ್ದೇನೆ. ದುರ್ಜನರನ್ನು ಸುಧಾರಿಸುವ ಬದಲಾಗಿ ಅವರ ಸಂಬಂಧ ಕಡಿದುಕೊಂಡು ದೂರಗೊಳಿಸುವ ಕುರಿತು ಈ ಸ್ನೇಹಿತರು ಚಿಂತಿತರಾಗಿದ್ದಾರೆ. ಧರ್ಮದ ಸ್ಫೂರ್ತಿಯು ಅವರಲ್ಲಿ ಅನುಕಂಪ, ಕರುಣೆ, ಸಹಾನುಭೂತಿಗಳನ್ನು ಬೆಳೆಸುವ ಬದಲಾಗಿ ಕೋಪ, ದ್ವೇಷಗಳ ಭಾವನೆಗಳನ್ನು ಬೆಳೆಸುತ್ತಿದೆ. ಆದ್ದರಿಂದ ಅವರು ಅಂತಹ ವ್ಯಕ್ತಿಗಳೊಂದಿಗೆ ಯಾಕೆ ಸಂಬಂಧ ಕಡಿದುಕೊಳ್ಳಬಾರದು? ಅವರ ಹಿಂದೆ ನಿಂತು ನಾವು ನಮಾಝ್ ಮಾಡುವುದು ಹೇಗೆ ? ಅವರನ್ನು ಕಾಫಿರ್ (ಧರ್ಮ ಭ್ರಷ್ಟ) 'ಮುಶ್ರಿಕ್' (ಬಹುದೇವಾರಾಧಕರು)ಗಳೆಂದು ಯಾಕೆ ಘೋಷಿಸಬಾರದು? ಎಂದು ಮುಂತಾಗಿ ಆಗಾಗ ನನ್ನೊಂದಿಗೆ ವಿಚಾರಿಸುತ್ತಿದ್ದಾರೆ. ಆದರೆ ಅಂತಹ ಪಥಭ್ರಷ್ಟ ಸಹೋದರರನ್ನು ಸನ್ಮಾರ್ಗಕ್ಕೆ ತರುವುದು ಹೇಗೆ? ಅವರ ನಿರ್ಲಕ್ಷ್ಯ ಮತ್ತು ಅಸಡ್ಡೆಗಳನ್ನು ದೂರಗೊಳಿಸುವುದು ಹೇಗೆ? ಅವರ ದುಷ್ಕಾರ್ಯಗಳನ್ನು ಸತ್ಕಾರ್ಯಗಳಾಗಿ ಬದಲಾಯಿಸುವುದು ಹೇಗೆ? ಸನ್ಮಾರ್ಗದ ಪ್ರಕಾಶವನ್ನು ಅನುಭವಿಸಲು ಅವರನ್ನು ಹೇಗೆ ಪ್ರೇರೇಪಿಸಬೇಕು. ಮುಂತಾದವುಗಳ ಬಗ್ಗೆ ಅವರು ವಿಚಾರ ಮಾಡುವುದಿಲ್ಲ. ಅಲ್ಲಾಹನ ಅನುಗ್ರಹ ಮತ್ತು ತಮ್ಮ ಸೌಭಾಗ್ಯದಿಂದ ದೊರೆತಿರುವ ಸತ್ಯಕ್ಕಾಗಿ ಕೃತಜ್ಞತೆ ತೋರುವ ಬದಲಾಗಿ ಅವರು ಅಹಂಕಾರದ ಭಾವನೆಗಳನ್ನು ಬೆಳೆಸಿಕೊಳ್ಳುತ್ತಿರುವಂತೆ ಭಾಸವಾಗುತ್ತಿದೆ. ಆ ಭಾವನೆಗಳೇ ಪ್ರಸ್ತುತ ರೂಪದಲ್ಲಿ ಪ್ರಕಟವಾಗುತ್ತಿದೆ. ನನ್ನ ಈ ಊಹೆಯು ಸುಳ್ಳಾಗಲೆಂದು ನಾನು ಪ್ರಾರ್ಥಿಸುತ್ತೇನೆ. ಆದರೆ ಈ ಮಹಾ ರೋಗವನ್ನು ಸೈತಾನನು ನಮ್ಮಲ್ಲಿಯೂ

ಬೆಳೆಸುತ್ತಾನೆಯೇ ಎಂಬುದನ್ನು ಪ್ರತಿಯೊಬ್ಬ ಕಾರ್ಯಕರ್ತರೂ ದೇವಭಯದೊಂದಿಗೆ ಆತ್ಮಾವಲೋಕನ ನಡೆಸಬೇಕೆಂಬ ಉದ್ದೇಶದಿಂದ ನಾನು ಈ ವಿಷಯವನ್ನು ಇಷ್ಟೊಂದು ಸ್ಪಷ್ಟವಾಗಿ ಹೇಳುತ್ತಿದ್ದೇನೆ. ಒಂದೇ ಮಾತಿನಲ್ಲಿ ಹೇಳುವುದಿದ್ದರೆ, ಕೊಳೆತು ನಾರುವ ಸಮಾಜದಲ್ಲಿ ನೈಜ ತಿಳುವಳಿಕೆ ಮತ್ತು ಸತ್ಕರ್ಮ ಮಾಡುವವರ ಉದಾಹರಣೆಯು ಸಾಂಕ್ರಾಮಿಕ ರೋಗ ಹರಡಿರುವ ಒಂದು ಊರಿನಲ್ಲಿ ಔಷಧ ಮತ್ತು ವೈದ್ಯಕೀಯ ತಿಳುವಳಿಕೆಯಿರುವ ವಿರಳ ಆರೋಗ್ಯವಂತ ವ್ಯಕ್ತಿಗಳ ತೆರನಾಗಿದೆ. ಮಹಾವ್ಯಾಧಿ ಪೀಡಿತವಾಗಿರುವ ಈ ಊರಿನಲ್ಲಿ ಆ ವಿರಳ ವ್ಯಕ್ತಿಗಳ ಕರ್ತವ್ಯವೇನೆಂದು ನೀವೇ ಹೇಳಿರಿ. ಅವರು ರೋಗಿಗಳನ್ನೂ ರೋಗಿಗಳಿಗೆ ಬಾಧಿಸಿರುವ ಸೋಂಕುಗಳನ್ನೂ ದ್ವೇಷಿಸಿ ರೋಗಿಗಳನ್ನು ಹೊಡೆದೋಡಿಸಲು ಅಥವಾ ಸ್ವಯಂ ಊರು ತೊರೆಯಲು ಪ್ರಯತ್ನಿಸಬೇಕೇ? ಅಥವಾ ತಮ್ಮನ್ನೇ ಪಣಕ್ಕೊಡ್ಡಿ ರೋಗಿಗಳ ಶುಶ್ರೂಷೆಯಲ್ಲಿ ನಿರತರಾಗಿ ತನ್ಮಧ್ಯೆ ಎದುರಾಗುವ ಎಲ್ಲಾ ಕಷ್ಟಗಳನ್ನು ಸಹಿಸುವುದು ಅವರ ಕರ್ತವ್ಯವೇ? ಮೊದಲು ಹೇಳಿದ ರೀತಿಯಲ್ಲಿ ವರ್ತಿಸಿದರೆ ಅವರು ಅಲ್ಲಾಹನ ದೃಷ್ಟಿಯಲ್ಲಿ ಅಪರಾಧಿಯಾಗುವರೆಂದು ನಾನು ಖಚಿತವಾಗಿ ಹೇಳಬಲ್ಲೆ. ಅವರ ಆರೋಗ್ಯ, ವೈದ್ಯಕೀಯ ತಿಳುವಳಿಕೆ ಮತ್ತು ಔಷಧಗಳೆಲ್ಲವೂ ಫಲಕಾರಿಯಾಗುವ ಬದಲಾಗಿ ಅವರ ಅಪರಾಧವನ್ನು ಇನ್ನಷ್ಟು ಹೆಚ್ಚಿಸಲು ಸಹಾಯಕವಾಗಬಹುದು. ಆದ್ದರಿಂದ 'ಧಾರ್ಮಿಕ ಆರೋಗ್ಯ'ವು-ಧರ್ಮದ ತಿಳುವಳಿಕೆ ಮತ್ತು ಸುಧಾರಣಾ ಮಾರ್ಗಗಳನ್ನು ಪಡೆದಿರುವ ಜನರು ಅಲ್ಲಾಹನ ಸಂಪ್ರೀತಿಯ ಗಳಿಕೆಗೆ ಯಾವ ಮಾರ್ಗ ಸೂಕ್ತವೆಂಬುದನ್ನು ಪ್ರಸ್ತುತ ಉದಾಹರಣೆಯೊಂದಿಗೆ ಹೋಲಿಸಿ ನೋಡಿರಿ.

ಈ ಭಾಷಣದೊಂದಿಗೆ ಪ್ರಥಮ ಅಧಿವೇಶನ ಕೊನೆಗೊಂಡಿತು.

## ದ್ವಿತೀಯ ಮತ್ತು ತೃತೀಯ ಅಧಿವೇಶನ

ಮಗ್ರಿಬ್ ನಮಾಝ್‌ನ ಬಳಿಕ ದ್ವಿತೀಯ ಅಧಿವೇಶನವೂ (19.4.45) 7ನೇ ಶುಕ್ರವಾರ ಬೆಳಿಗ್ಗೆ 6 ಗಂಟೆಯಿಂದ ತೃತೀಯ ಅಧಿವೇಶನವೂ ಆರಂಭಗೊಂಡಿತು. ಉಭಯ ಅಧಿವೇಶನಗಳಲ್ಲಿಯೂ ವಿವಿಧ ಪ್ರಾಂತ್ಯಗಳ ವರದಿಗಳು ಸಮರ್ಪಿಸಲ್ಪಟ್ಟವು. ಅಮೀರರು ಅವುಗಳ ನಿರೂಪಣೆ ಮಾಡಿದರು. ಅವರ ಭಾಷಣದ ಪ್ರಾಮುಖ್ಯ ಅಂಶಗಳನ್ನು ಕೆಳಗೆ ಕೊಟ್ಟಿದೆ-

1. ಹಲವು ಪ್ರದೇಶಗಳಿಂದ ಸಮ್ಮೇಳದಲ್ಲಿ ಭಾಗವಹಿಸದ ಹಾಗೂ ತಮ್ಮ ಗೈರು ಹಾಜರಿಯನ್ನು ಮುಂಚಿತವಾಗಿ ತಿಳಿಸದ ಸದಸ್ಯರ ಮಟ್ಟಿಗೆ ಅವರ ಗೈರು ಹಾಜರಿಗೆ ಯಾವ ಕಾರಣವೂ ಇಲ್ಲವೆಂದೇ ಭಾವಿಸಬೇಕಾಗುತ್ತದೆ. ಸ್ಥಾನೀಯ ಜಮಾಅತ್‌ನ ಮುಖ್ಯಸ್ಥರು ಅಂಥವರ ವಿಚಾರಣೆ ನಡೆಸಬೇಕು. ಜಮಾಅತ್‌ನಲ್ಲಿ ಅವರ ನಡವಳಿಕೆಯು ಈ ತನಕ ತೃಪ್ತಿಕರವಾಗಿದ್ದರೆ ಮುಂದೆ ಇಂತಹ ಅಶಿಸ್ತು ನಡೆಯದಂತೆ ಎಚ್ಚರಿಕೆ ನೀಡಿದರೆ ಸಾಕು. ಅವರಿಗೆ ಜಮಾಅತ್‌ನ ಚಟುವಟಿಕೆಗಳಲ್ಲಿ ಮೊದಲೇ ಆಸಕ್ತಿಯಿಲ್ಲದಿದ್ದರೆ ಜಮಾಅತ್‌ನ ಸದಸ್ಯತನದಿಂದ ಹೊರ ಹೋಗುವಂತೆ ನೇರವಾಗಿ ಅವರಿಗೆ ಹೇಳಬೇಕು. ಗೈರು ಹಾಜರಿಗೆ ನಾವು ಶರಈ ಕಾರಣಗಳನ್ನಷ್ಟೇ ನಿರ್ಣಯಿಸಿದ್ದೇವೆ. ಅದರ ಪ್ರಕಾರ ವ್ಯಾಪಾರ ವಹಿವಾಟುಗಳಿಗೆ ಸಂಬಂಧಿಸಿದ ಅಡಚಣೆ ಅಥವಾ ಹಣದ ನಷ್ಟವನ್ನು ಪರಿಗಣಿಸಲಾಗದು! ಇಂದು ನಮ್ಮ

ಮಿತ್ರರು ಇಷ್ಟು ಸಣ್ಣ ತ್ಯಾಗಕ್ಕೂ ಸಿದ್ಧರಿಲ್ಲದಿದ್ದರೆ ಭವಿಷ್ಯದಲ್ಲಿ ಅವರಿಂದ ಏನು ತಾನೇ ನಿರೀಕ್ಷಿಸಬಹುದು? ಸಂಬಳದ ಉದ್ಯೋಗ ಮಾಡುವ ಅನೇಕ ಮಿತ್ರರು ನಮ್ಮಲ್ಲಿದ್ದಾರೆ. ಸಮ್ಮೇಳನದಲ್ಲಿ ಭಾಗವಹಿಸಲಿಕ್ಕಾಗಿ ಅವರಿಗೆ ರಜೆ ದೊರೆಯುವುದಿಲ್ಲ. ಆದರೂ ಅವರು ಸಮ್ಮೇಳನಕ್ಕೆ ಆಗಮಿಸಿದ್ದಾರೆ. ಅದರ ಪರಿಣಾಮವನ್ನು ಅನುಭವಿಸಲೂ ಅವರು ಸಿದ್ಧರಿದ್ದಾರೆ. ವಾಸ್ತವದಲ್ಲಿ ಅಂಥವರೇ ವಿಶ್ವಾಸಯೋಗ್ಯರು. ಕೇವಲ ವ್ಯಾಪಾರ ನಷ್ಟದ ಭೀತಿಯಿಂದ ಸಮ್ಮೇಳನಕ್ಕೆ ಗೈರು ಹಾಜರಾಗಿರುವವರೊಂದಿಗೆ ಸ್ಪಷ್ಟವಾಗಿ ಈ ರೀತಿ ಹೇಳಬೇಕು- ನೀವು ನಿಮ್ಮ ವ್ಯಾಪಾರದ ಸೇವೆಯನ್ನೇ ಮಾಡಿರಿ. ಇನ್ನು ನೀವು ಅತ್ಯುನ್ನತವಾದ ಈ ಧ್ಯೇಯದ ಸೇವೆಯ ಹೆಸರನ್ನು ಉಚ್ಚರಿಸುವುದು ನಿಮಗೆ ಭೂಷಣವಲ್ಲ. ಆದರೆ ಹಣದ ಕೊರತೆಯಿಂದಾಗಿ ಸಮ್ಮೇಳನದಲ್ಲಿ ಭಾಗವಹಿಸಲಾಗದ ಸದಸ್ಯರ ಅಡಚಣೆಯು ನ್ಯಾಯೋಚಿತವಾಗಿದೆ. ಅವರ ಖರ್ಚನ್ನು ವಹಿಸುವ ಸಾಮರ್ಥ್ಯವಿದ್ದು ಅವರ ತಾಪತ್ರಯಗಳನ್ನು ತಿಳಿದಿದ್ದೂ ಇಲ್ಲಿಗೆ ಬರಲು ಅವರಿಗೆ ನೆರವಾಗದ ಇತರ ಸದಸ್ಯರೇ ಅವರ ಗೈರು ಹಾಜರಿಗೆ ಹೊಣೆಗಾರರು. ಇದು ಕಾನೂನಿನ ಹೊಣೆಯಲ್ಲ. ನೈತಿಕ ಹೊಣೆಯಾಗಿತ್ತು. ಅಂಥವರು ತಮ್ಮ ಸಂಕುಚಿತ ಮನೋಭಾವವನ್ನು ತೊರೆಯಬೇಕು. ಇಂದು ಇಂತಹ ಸಣ್ಣ ಹಣ ತ್ಯಾಗಕ್ಕೂ ಸಿದ್ಧರಿಲ್ಲದವರಿಂದ ಮುಂದೆ ಯಾವ ಮಹಾ ಸಾಧನೆಯನ್ನೂ ನಿರೀಕ್ಷಿಸುವಂತಿಲ್ಲ.

2. ಸ್ಥಾನೀಯ ಜಮಾಅತ್‌ಗಳು ಸ್ಥಾಪಿಸಲ್ಪಟ್ಟಿರುವೆಡೆಗಳಲ್ಲಿ ಸದಸ್ಯರು ತಮ್ಮ ಝಕಾತನ್ನು ಸ್ಥಾನೀಯ 'ಬೈತುಲ್ ಮಾಲ್'ಗಳಿಗೆ ನೀಡಬೇಕು. ತಮ್ಮ ಸಂಪತ್ತು ಮತ್ತು ಝಕಾತ್‌ನ ಸರಿಯಾದ ಲೆಕ್ಕವನ್ನು ಮಾಡಬೇಕು. ಬೈತುಲ್ ಮಾಲ್ ಇರುತ್ತಾ ಸದಸ್ಯರು ತಮ್ಮ ಝಕಾತನ್ನು ವೈಯಕ್ತಿಕವಾಗಿ ಹಂಚಿ ಬಿಡಬಾರದು. ಝಕಾತ್ ನೀಡಬೇಕಾದ ನಿರ್ದಿಷ್ಟ ಮೊತ್ತ ಇದ್ದರೂ ಅದನ್ನು ಕ್ರಮ ಪ್ರಕಾರವಾಗಿ ನೀಡದವನ ಸ್ಥಾನವು ಶರಈ ದೃಷ್ಟಿಯಿಂದ ನಮಾಝ್ ಉಪೇಕ್ಷಿಸಿದವನಿಗೆ ಸಮಾನವಾಗಿದೆ. ಅಂಥವರು ನಮ್ಮ ಜಮಾಅತ್‌ನಲ್ಲಿ ಇರಬಾರದು.

3. ಕೆಲವು ಉಲೆಮಾಗಳೊಂದಿಗೆ ನಡೆಸಿದ ಸಂಭಾಷಣೆಗಳನ್ನು ಕೆಲವು ಸದಸ್ಯರು ಪ್ರಸ್ತಾಪಿಸಿದ್ದಾರೆ. ಆ ಬಗ್ಗೆ ಜಮಾಅತ್‌ನ ಸ್ಥಾಪನೆಯ ವೇಳೆ ನಾನು ನೀಡಿದ್ದ ಕೆಲವು ನಿರ್ದೇಶಗಳನ್ನು ಪುನಃ ನಿಮಗೆ ನೆನಪಿಸಬಯಸುತ್ತೇನೆ. ಆಗ ನಾನು ಈ ರೀತಿ ಹೇಳಿದ್ದೆ- ಪ್ರತಿಯೋರ್ವ ಕಾರ್ಯಕರ್ತನೂ ತನಗೆ ಎದುರಿಸುವ ಸಾಮರ್ಥ್ಯವಿರುವ ವಲಯದಲ್ಲಿಯೇ ಕಾರ್ಯ ನಿರ್ವಹಿಸಬೇಕು. ಮುಖ್ಯವಾಗಿ ವಿದ್ವಾಂಸರಲ್ಲದವರು ವಿದ್ವಾಂಸರಲ್ಲಿ ಸಂದೇಶ ಪ್ರಚಾರ ನಡೆಸುವಾಗ ತುಂಬಾ ಜಾಗ್ರತೆ ವಹಿಸಬೇಕು. ಯಾಕೆಂದರೆ ಉಲೆಮಾಗಳ ಕಠಿಣ ಹಾಗೂ ಕ್ಲಿಷ್ಟವಾದ ಪ್ರಶ್ನೆಗಳನ್ನು ವ್ಯವಹರಿಸುವಾಗ ಸದಾ ಆಪತ್ತಿನ ಭೀತಿಯಿರುತ್ತದೆ. ಧರ್ಮದ ಅಗಾಧ ಪಾಂಡಿತ್ಯ ಮತ್ತು ಪರಿಜ್ಞಾನ ಹಾಗೂ ಉಲೆಮಾಗಳ "ಧಾರ್ಮಿಕತೆಯ ಬಗ್ಗೆ ಚೆನ್ನಾಗಿ ಅರಿತವರಿಗೆ ಮಾತ್ರ ಅವರ ಮನೋಧರ್ಮ ಅರ್ಥವಾದೀತು. ಉಲೆಮಾರಿಗೆ ಸತ್ಯ ಬೋಧನೆ ನೀಡುವ ಕಾರ್ಯಕ್ರಮವು ಆಧುನಿಕ ವಿದ್ಯಾವಂತರ ಮಟ್ಟಿಗೆ ತೀರಾ ಅಸಾಧ್ಯ. ಅವರು ಉಲೇಮಾರ ಬಳಿ ಹೋಗುವುದರಿಂದ ಪ್ರಯೋಜನಕ್ಕಿಂತ ಹಾನಿಯಾಗುವ ಸಂಭವವೇ ಹೆಚ್ಚು.

4. ರಾತ್ರಿಯಿಂದ ಈ ತನಕ ಆಲಿಸಿರುವ ವರದಿಗಳ ಬಗ್ಗೆ ನನ್ನ ಅಭಿಪ್ರಾಯವೇನೆಂದರೆ ನಮ್ಮ ಮಿತ್ರರು ವರದಿ ತಯಾರಿಸುವಾಗ ಅನಗತ್ಯ ವಿವರಣೆಗಳನ್ನು ಸೇರಿಸಿ ಅಗತ್ಯದ

ವಿಷಯಗಳನ್ನು ಪ್ರಸ್ತಾಪಿಸದೆ ಬಿಡುತ್ತಾರೆ. ಈ ಶೈಲಿ ಬದಲಾಯಿಸಬೇಕು. ಕೇವಲ ಸ್ಥಾನೀಯ ಮಟ್ಟದ ಹಾಗೂ ವಸ್ತುಸ್ಥಿತಿಯನ್ನು ಗ್ರಹಿಸಲು ನೆರವಾಗದ ಅಸ್ಪಷ್ಟ ವಿಷಯಗಳನ್ನು ವರದಿಗಳಲ್ಲಿ ಸೇರಿಸಬಾರದು. ವ್ಯಕ್ತಿ ಹಾಗೂ ಪಕ್ಷಗಳ ಹೆಸರುಗಳನ್ನು ದೂರು ಅಥವಾ ಪ್ರಶಂಸೆಗಾಗಿಯೂ ವರದಿಗಳಲ್ಲಿ ಸೇರಿಸಬಾರದು. ಕೇಂದ್ರಕ್ಕೆ ಕಳುಹಿಸುವ ವರದಿಗಳಲ್ಲಿ ಅಂತಹ ಹೆಸರುಗಳನ್ನು ಉಲ್ಲೇಖಿಸುವುದಕ್ಕೆ ಅಡ್ಡಿಯಿಲ್ಲ. ಆದರೆ ಸಮ್ಮೇಳನದಲ್ಲಿ ಓದುವ ವರದಿಗಳಲ್ಲಿ ಅವು ಅನಗತ್ಯವಾಗಿದೆ. ವಾಸ್ತವದಲ್ಲಿ ಸಮ್ಮೇಳನದಲ್ಲಿ ವರದಿ ಸಲ್ಲಿಸುವ ಉದ್ದೇಶವು ವಿವಿಧ ಕಡೆಗಳಲ್ಲಿ ಈ ಆಂದೋಲನ ಹೇಗೆ ಮುನ್ನಡೆಯುತ್ತಿದೆ? ಯಾವೆಡೆಗಳಲ್ಲಿ ಎಂಥೆಂತಹ ಅಡೆತಡೆಗಳಿವೆ? ವಿವಿಧ ಪ್ರದೇಶಗಳ ಸದಸ್ಯರು ಯಾವೆಲ್ಲಾ ವಿಧಾನದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ? ಯಾವ ವಲಯಗಳಲ್ಲಿ ನಮ್ಮ ಪ್ರಚಾರಗಳು ಪ್ರಭಾವ ಬೀರಿವೆ. ಯಾರೆಡೆ ಪ್ರತಿಕ್ರಿಯೆ ಆಶಾಜನಕ ಅಥವಾ ನಿರಾಶಾಜನಕವಾಗಿವೆ. ಇತ್ಯಾದಿ ವಿಷಯಗಳನ್ನು ಕಾರ್ಯಕರ್ತರು ತಿಳಿದು ಕೊಳ್ಳುವುದೇ ಆಗಿದೆ.

5. ಕೆಲವು ಸ್ಥಾನೀಯ ಜಮಾಅತ್‌ಗಳ ಅಮೀರ್‌ರ ಆಯ್ಕೆಯಲ್ಲಿ ಸಾಮಾನ್ಯವಾಗಿ ಓರ್ವ ಸಭಾಧ್ಯಕ್ಷನನ್ನು ಆರಿಸುವ ನೀತಿಯನ್ನು ಅನುಸರಿಸಿರುವಂತೆ ಕಂಡು ಬರುತ್ತದೆ. ವಾಸ್ತವದಲ್ಲಿ ಅಮೀರ್‌ರಿಗೆ ಸ್ಥಾನೀಯ ನಾಯಕನ ಸ್ಥಾನವಿದೆ. ಅತ್ಯಂತ ಯೋಗ್ಯನನ್ನು ಆ ಸ್ಥಾನಕ್ಕೆ ನೇಮಿಸಬೇಕು. ಆದರೆ ಈ ಸ್ಥಾನವನ್ನು ಯಾರ ಮೇಲೆಯೂ ಒತ್ತಾಯ ಪೂರ್ವಕ ಹೇರಬಾರದು. ಅದೇ ರೀತಿ ಹೊಣೆಯನ್ನು ವಹಿಸುವ ಅರ್ಹತೆ ತನಗಿದೆಯೆಂದಾಗಲೀ ಅಥವಾ ಅನ್ಯರಿಗೆ ನನ್ನಷ್ಟು ಯೋಗ್ಯತೆಯಿಲ್ಲವೆಂದಾಗಲೀ ಯಾವನಾದರೂ ನಿಸ್ವಾರ್ಥವಾಗಿ ಭಾವಿಸುವುದಿದ್ದರೆ ಆ ಹೊಣೆಗಾರಿಕೆಯನ್ನು ವಹಿಸಿಕೊಳ್ಳುವುದಕ್ಕೆ ಹಿಂಜರಿಯಬಾರದು. ಯಾವ ರೀತಿಯಲ್ಲಾದರೂ ಈ ಕರ್ತವ್ಯವನ್ನು ನಿರ್ವಹಿಸಲೇಬೇಕು. ಆದ್ದರಿಂದ ಹೊಣೆಗಾರಿಕೆಯನ್ನು ಸ್ವೀಕರಿಸಲು ಯಾರೂ ಮುಂದೆ ಬಾರದಿದ್ದರೆ ನಾನೇ ಸಿದ್ಧನಿದ್ದೇನೆಂಬ ಭಾವನೆ ನಮ್ಮಲ್ಲಿ ಪ್ರತಿಯೊಬ್ಬರಲ್ಲಿಯೂ ಇರಬೇಕು.

6. ನಮ್ಮ ಚಟುವಟಿಕೆಗಳಿಗಾಗಿ ಜನರಿಂದ ಯಾವ ರೂಪದಲ್ಲಿ ಹಣ ಸ್ವೀಕರಿಸಬೇಕು. ಈ ಕುರಿತು ಜಮಾಅತ್‌ನ ನಿಲುಮೆಯನ್ನು ಇನ್ನೊಮ್ಮೆ ಸ್ಪಷ್ಟಪಡಿಸಬಯಸುತ್ತೇನೆ. ಯಾಕೆಂದರೆ ಕೆಲವು ಜಮಾಅತ್ ಸದಸ್ಯರು ಅದನ್ನು ಸರಿಯಾಗಿ ಇನ್ನೂ ಅರ್ಥ ಮಾಡಿಕೊಂಡಿಲ್ಲವೆಂದು ವರದಿಗಳಿಂದ ಭಾಸವಾಗುತ್ತಿದೆ. ಈ ಕೆಳಗಿನ ಜನರಿಂದ ಮಾತ್ರ ನಾವು ಹಣವನ್ನು ಸ್ವೀಕರಿಸಬಹುದು. 1) ನಮ್ಮ ಧ್ಯೇಯವನ್ನು ಚೆನ್ನಾಗಿ ಅರಿತಿದ್ದು ಅದರೊಂದಿಗೆ ಸಂಪೂರ್ಣ ಸಹಮತ ತೋರುವವರು. 2)ನಮ್ಮ ಕಾರ್ಯವಿಧಾನದ ಬಗ್ಗೆ ಸಂಪೂರ್ಣ ಸಹಮತವಿದ್ದು ವ್ಯಕ್ತಿ ಮತ್ತು ಪಕ್ಷವೆಂಬ ನೆಲೆಯಲ್ಲಿ ನಮ್ಮಲ್ಲಿ ಸಂಪೂರ್ಣ ವಿಶ್ವಾಸವಿರಿಸುವವರು. 3) ಹಣ ಅಥವಾ ಇತರ ರೂಪದಲ್ಲಿ ದೇಣಿಗೆ ನೀಡಿದ ಬಳಿಕ ನಮ್ಮ ಮೇಲೆ ಅದಕ್ಕಾಗಿ ಯಾವ ಶರ್ತವನ್ನೂ ಹೇರದವರು. ಹಣದ ಮೂಲಕ ನಮ್ಮ ಚಟುವಟಿಕೆಗಳಲ್ಲಿ ಯಾವುದೇ ಹಸ್ತಕ್ಷೇಪಕ್ಕೂ ಪ್ರಯತ್ನಿಸದವರು. ಅವರು ತಮ್ಮ ಹಣವನ್ನು ನಮ್ಮ ಯೋಜನೆಯಿಂದ ಹೊರತಾದ ಚಟುವಟಿಕೆಗಳಿಗೆ ವ್ಯಯಿಸಬೇಕೆಂದು ಆದೇಶಿಸಬಾರದು. ಆದರೆ ಆ ಹಣವನ್ನು ನಮ್ಮ ಯೋಜನೆಯ ಆಶ್ರಯದಲ್ಲಿರುವ ವಿವಿಧ ಕಾರ್ಯಕ್ರಮಗಳಲ್ಲಿ ಯಾವುದಾದರೂ

ನಿರ್ದಿಷ್ಟ ಕಾರ್ಯಕ್ರಮಕ್ಕೆ ವಿನಿಯೋಗಿಸಬಹುದೆಂದು ಅವರಿಗೆ ಆಗ್ರಹಿಸಬಹುದಾಗಿದೆ. 4) ಅವರ ಹೆಸರು ಮೇಲೆ ಬರಬೇಕು. ನಮ್ಮ ಚಟುವಟಿಕೆಗಳು ಅವರ ಚಟುವಟಿಕೆಗಳೆಂದು ಪರಿಗಣಿಸಲ್ಪಡಬೇಕು. ನಾವು ವೈಯಕ್ತಿಕವಾಗಿಯೂ ಸಂಘಟನೆಯ ನೆಲೆಯಲ್ಲಿಯೂ ಅವರಿಗೆ ಕೃತಜ್ಞರಾಗಿರಬೇಕು ಇತ್ಯಾದಿ ದುರುದ್ದೇಶಗಳು ಯಾರಲ್ಲಿಯೂ ಮೂಡಬಾರದು. ನಮ್ಮ ಈ ಸಂಘಟನೆಗೆ ಯಾರಾದರೂ ಹಣ ನೀಡುವುದಿದ್ದರೆ ಕೇವಲ ಅಲ್ಲಾಹನಿಗಾಗಿ ನೀಡಬೇಕು. ಅದರ ಪ್ರತಿಫಲವನ್ನು ಕೇವಲ ಅಲ್ಲಾಹನಿಂದಲೇ ನಿರೀಕ್ಷಿಸಬೇಕು. ಅಲ್ಲಾಹನ ವಚನವು ಉತ್ತುಂಗವಾಗಬೇಕೆಂಬುದರ ವಿನಾ ಧನ ತ್ಯಾಗಕ್ಕೆ ಇನ್ನಾವ ಉದ್ದೇಶವೂ ಇರಬಾರದು. ಎಷ್ಟೇ ದೊಡ್ಡ ಮನುಷ್ಯನಾಗಿರಲಿ ಅಥವಾ ಎಷ್ಟೇ ದೊಡ್ಡ ಮೊತ್ತವಾಗಿರಲಿ ನಾವು ಈ ನೀತಿಯಲ್ಲಿ ಯಾವ ಬದಲಾವಣೆಯನ್ನೂ ಮಾಡುವಂತಿಲ್ಲ.

7. ಇಂದು ದೇಶದಲ್ಲಿ ಸ್ಥಾಪಿತವಾಗಿರುವ ಹಾಗೂ ಇನ್ನು ಮುಂದೆ ಸ್ಥಾಪಿಸಲಿರುವ ಶಿಕ್ಷಣ ಪ್ರಚಾರ ಮತ್ತು ಸುಧಾರಣಾ ಸಂಸ್ಥೆಗಳ ಕುರಿತು ಜಮಾಅತ್‌ನ ನಿಲುವೆಯನ್ನು ಇನ್ನೊಮ್ಮೆ ಸ್ಪಷ್ಟಪಡಿಸುವ ಅಗತ್ಯವಿದೆಯೆಂದು ಭಾವಿಸುತ್ತೇನೆ. ಯಾಕೆಂದರೆ ಈ ವಿಷಯದಲ್ಲಿ ಕೆಲವು ಸದಸ್ಯರ ನೀತಿಯನ್ನು ಸುಧಾರಿಸುವ ಅಗತ್ಯ ಕಂಡು ಬರುತ್ತಿದೆ. ಅಂತಹ ಸಂಸ್ಥೆಗಳನ್ನು ಸಂಪೂರ್ಣವಾಗಿ ಜಮಾಅತ್‌ಗೆ ವಹಿಸಿಕೊಟ್ಟು ಅವು ನಮಗೆ ಅನಗತ್ಯ ಹಾಗೂ ನಿಷ್ಫಲವೆಂದು ತೋರಿದಾಗ ಅವುಗಳನ್ನು ವಿಸರ್ಜಿಸಲೂ ಅನುಕೂಲವಾಗುವಂತೆ ಅವುಗಳನ್ನು ನಮ್ಮ ನೀತಿಗನುಸಾರ ನಡೆಸುವುದಿದ್ದರೆ ಜಮಾಅತ್ ಸದಸ್ಯರು ಅವುಗಳ ಕಾರ್ಯ ನಿರ್ವಹಣೆಯ ಜವಾಬ್ದಾರಿಕೆಯನ್ನು ವಹಿಸಿಕೊಳ್ಳಬಹುದು. ಅನ್ಯಥಾ ಜಮಾಅತ್ ಸದಸ್ಯರು ಆ ಹೊಣೆಯನ್ನು ಸ್ವೀಕರಿಸಬಾರದು. ಒಂದು ವೇಳೆ ಆರ್ಥಿಕ ದುಸ್ಥಿತಿಯಿಂದಾಗಿ ಅಂತಹ ಸಂಸ್ಥೆಗಳಲ್ಲಿ ಉದ್ಯೋಗಿಗಳೆಂಬ ನೆಲೆಯಲ್ಲಿ ಕೆಲಸ ಮಾಡಬಹುದಾದರೂ ಅದರ ಪದಾಧಿಕಾರಿಗಳಾಗಬಾರದು. ಯಾಕೆಂದರೆ ಆಗ ಆ ಸಂಸ್ಥೆಗಳನ್ನು ನಮ್ಮದೆಂದೇ ಭಾವಿಸಲಾಗುವುದು. ಅವುಗಳ ಚಟುವಟಿಕೆಗಳ ಕುರಿತು ನಾವು ಉತ್ತರ ನೀಡಬೇಕಾಗುವುದು. ಅವುಗಳ ನಿರ್ವಹಣೆಯಲ್ಲಿ ಸಾಮಾನ್ಯವಾಗಿ ಸ್ವೀಕರಿಸಲ್ಪಡುವ ಅಸೂಕ್ತ ಮಾರ್ಗಗಳನ್ನೂ ಅರೆ ಮನಸ್ಸಿನಿಂದ ನಮ್ಮ ಸದಸ್ಯರು ಅನುಸರಿಸಬೇಕಾಗುವುದು. ತನ್ಮೂಲಕ ಜಮಾಅತ್‌ನ ನೈತಿಕತೆ ನೆಲೆಗೆ ಧಕ್ಕೆಯುಂಟಾಗಬಹುದು.

## ಜುಮಾ ಪ್ರವಚನ

ಕ್ಲಪ್ತವಾಗಿ ಒಂದೂವರೆ ಗಂಟೆಗೆ ಅಧ್ಯಕ್ಷರು ಜುಮಾ ಭಾಷಣ ಆರಂಭಿಸಿದರು. ಅಲ್ಲಾಹನ ಕೀರ್ತನೆ ಮತ್ತು ಪ್ರವಾದಿವರ್ಯರಿಗಾಗಿ ಸಲಾತ್ ಹೇಳಿದ ಬಳಿಕ ಅವರು ಹೀಗೆಂದರು:

"ಮುಸ್ಲಿಮ್ ಸಹೋದರರೇ, ಅಲ್ಲಾಹನು ಆತನ ಪವಿತ್ರ ಗ್ರಂಥದಲ್ಲಿ ಈ ರೀತಿ ಹೇಳಿದ್ದಾನೆ. ಹೇಳಿರಿ, ನನ್ನ ನಮಾಝ್, ನನ್ನ ಇತರೆಲ್ಲಾ ತ್ಯಾಗಗಳು, ನನ್ನ ಜೀವನ ಮತ್ತು ನನ್ನ ಮರಣ ಎಲ್ಲವೂ ಸರ್ವಲೋಕಗಳ ಸೃಷ್ಟಿಕರ್ತ ಮತ್ತು ಸಂರಕ್ಷಕನಾದ ಅಲ್ಲಾಹನಿಗೆ ಮೀಸಲು. ಅವನಿಗೆ ಯಾರೂ ಸಹಭಾಗಿಗಳಿಲ್ಲ. ನನಗೆ ಅದನ್ನೇ ಆದೇಶಿಸಲಾಗಿದೆ. ನಾನು ಮೊಟ್ಟಮೊದಲಾಗಿ ಮುಸ್ಲಿಮರಲ್ಲಾಗಿರುವೆನು"

ಪ್ರವಾದಿವರ್ಯರ ಒಂದು ವಚನವು ಪ್ರಸ್ತುತ ಸೂಕ್ತವನ್ನು ಸ್ಪಷ್ಟವಾಗಿ ವಿವರಿಸುತ್ತದೆ. ಪ್ರವಾದಿ(ಸ) ಹೇಳಿದರು: "ಯಾರು ಅಲ್ಲಾಹನಿಗಾಗಿ ಪ್ರೀತಿಸುತ್ತಾನೋ ಅಲ್ಲಾಹನಿಗಾಗಿ ನೀಡುತ್ತಾನೋ ಅಲ್ಲಾಹನಿಗಾಗಿ ತಡೆಯುತ್ತಾನೋ ಅಂಥವನು ತನ್ನ ವಿಶ್ವಾಸವನ್ನು (ಈಮಾನ್) ಪೂರ್ಣ ಗೊಳಿಸಿದನು." ಮಾನವನು ತನ್ನ ದಾಸ್ಯ- ಆರಾಧನೆ, ಜೀವನ, ಮರಣಗಳೆಲ್ಲವನ್ನೂ ಕೇವಲ ಅಲ್ಲಾಹನಿಗೆ ಮೀಸಲಿರಿಸಬೇಕು. ಅದರಲ್ಲಿ ಇತರ ಯಾರನ್ನೂ ಸಹಭಾಗಿಗಳನ್ನಾಗಿ ಮಾಡಬಾರದು. ಅರ್ಥಾತ್ ತನ್ನ ದಾಸ್ಯ ಆರಾಧನೆ, ಜೀವನ ಮರಣಗಳನ್ನೂ ಇನ್ನಾರಿಗೂ ಮೀಸಲಿಡಬಾರದು. ಇದು ಪ್ರಸ್ತುತ ಸೂಕ್ತದ ತಾತ್ಪರ್ಯ. ಹಾಗೆಯೇ ಮಾನವನ ಪ್ರೀತಿ-ದ್ವೇಷಗಳೂ ಜೀವನ ರಂಗದ ಎಲ್ಲಾ ವ್ಯವಹಾರಗಳೂ ಕೇವಲ ಅಲ್ಲಾಹನಿಗಾಗಿರಬೇಕೆಂಬುದೂ ನಾನು ಮೇಲೆ ಉದ್ಧರಿಸಿರುವ ಪ್ರವಾದಿ ವಚನದಿಂದ ತಿಳಿಯುತ್ತದೆ. ಅದು ವಿಶ್ವಾಸದ ಅನಿವಾರ್ಯ ಬೇಡಿಕೆಯಾಗಿದೆ. ಈ ಆಚಾರವಿಲ್ಲದೆ ಉನ್ನತ ಸ್ಥಾನಮಾನಗಳನ್ನು ಗಳಿಸುವ ಮಾತಂತಿರಲಿ, ಸತ್ಯವಿಶ್ವಾಸವೂ ಪೂರ್ಣವಾಗದೆಂದೂ ಮೇಲಿನ ಹದೀಸ್‌ನಿಂದ ನಮಗೆ ವೇದ್ಯವಾಗುತ್ತದೆ. ಈ ನಿಟ್ಟಿನಲ್ಲಿ ಸಂಭವಿಸುವ ಯಾವುದೇ ಲೋಪದೋಷ ಆತನ ವಿಶ್ವಾಸಕ್ಕೂ ಅಷ್ಟೇ ಧಕ್ಕೆಯೊದಗಿಸುವುದು. ಇಂತಹ ವಿಷಯಗಳು ಕೇವಲ ಉನ್ನತ ಸ್ಥಾನಮಾನಗಳ ಗಳಿಕೆಗೆ ಮಾತ್ರ ಅಗತ್ಯ. ನೈಜ ಈಮಾನ್ ಮತ್ತು ಇಸ್ಲಾಮಿನ ಗಳಿಕೆಗೆ ಆ ಸ್ವಭಾವವನ್ನು ರೂಢಿಸಿಕೊಳ್ಳಬೇಕಾದ ಅಗತ್ಯವಿಲ್ಲವೆಂಬ ತಪ್ಪು ಭಾವನೆ ಕೆಲವರಲ್ಲಿದೆ. ಅರ್ಥಾತ್ ಪ್ರಸ್ತುತ ಸ್ಥಿತಿಯಲ್ಲದೆಯೂ ಮುಅ್‌ಮಿನ್ ಮತ್ತು ಮುಸ್ಲಿಮನಾಗಬಹುದೆಂದು ಕೆಲವರು ಭಾವಿಸುತ್ತಾರೆ. ವಾಸ್ತವದಲ್ಲಿ ಆ ಭಾವನೆ ತಪ್ಪು. ಅವರ ಈ ಭಾವನೆಗೆ 'ಫಿಕ್ಹ್' ಮತ್ತು ನೀತಿ ನಿಯಮಕ್ಕೆ ಸಂಬಂಧಿಸಿದ ಇಸ್ಲಾಮ್ ಮತ್ತು ಅಲ್ಲಾಹನ ಬಳಿ ಅಂಗೀಕಾರಾರ್ಹವಾದ ನೈಜ ಇಸ್ಲಾಮಿನ ವ್ಯತ್ಯಾಸಗಳನ್ನು ಸಾಮಾನ್ಯವಾಗಿ ಜನರು ಗ್ರಹಿಸದಿರುವುದೇ ಕಾರಣವಾಗಿದೆ. ಫಿಕ್ಹ್ ಮತ್ತು ಕಾನೂನು ಸಂಬಂಧವಾದ ಇಸ್ಲಾಮಿನಲ್ಲಿ ಮಾನವನ ಮನಃಸ್ಥಿತಿಯು ಗಮನಿಸಲ್ಪಡುವುದಿಲ್ಲ. ಅದು ಸಾಧ್ಯವೂ ಅಲ್ಲ. ಬದಲಾಗಿ, ಆತನ ನಾಲಗೆಯ ಒಪ್ಪಿಗೆ ಮತ್ತು ಆ ಒಪ್ಪಿಗೆಯನ್ನು ಪ್ರಬಲ ಗೊಳಿಸಲಿಕ್ಕೆ ಅಗತ್ಯವಿರುವ ಕಡ್ಡಾಯ ಲಕ್ಷಣಗಳನ್ನು ಗಮನಿಸಲಾಗುತ್ತದೆ. ಓರ್ವನನ್ನು ಇಸ್ಲಾಮಿ ವಲಯದಲ್ಲಿ ಸೇರಿಸಬೇಕಾದರೆ ಆತನು ಅಲ್ಲಾಹನಲ್ಲಿಯೂ, ಪ್ರವಾದಿಯಲ್ಲಿಯೂ, ಕುರ್‌ಆನಿನಲ್ಲಿಯೂ, ಪರಲೋಕದಲ್ಲಿಯೂ, ಇತರ ವಿಶ್ವಾಸ ಕಾರ್ಯಗಳಲ್ಲಿಯೂ ತನಗೆ ವಿಶ್ವಾಸವಿದೆಯೆಂದು ನಾಲಗೆಯಿಂದ ಒಪ್ಪಿ ಅದನ್ನು ಸಾದರ ಪಡಿಸಲಿಕ್ಕೆ ಅಗತ್ಯವಿರುವ ಶರ್ತಗಳನ್ನು ಪೂರ್ಣಗೊಳಿಸಬೇಕು. ಈ ರೀತಿಯಿಂದ ಸೇರ್ಪಡೆಗೊಂಡ ಬಳಿಕ ಆತನೊಂದಿಗೆ ಮುಸ್ಲಿಮನೆಂಬ ನೆಲೆಯಲ್ಲಿ ವ್ಯವಹರಿಸಲಾಗುವುದು. ಆದರೆ ಇದು ಕೇವಲ ಇಹಲೋಕಕ್ಕೆ ಸೀಮಿತ. ಈ ಮೂಲಕ ಮುಸ್ಲಿಮ್ ಸಮಾಜವನ್ನು ಲೌಕಿಕವಾಗಿ ಕಟ್ಟಿ ಬೆಳೆಸುವ ಕಾನೂನು ಮತ್ತು ನಾಗರಿಕತೆಯ ಬುನಾದಿ ಮಾತ್ರ ದೊರೆಯುತ್ತದೆ. ಈ ಒಪ್ಪಿಗೆಯಿಂದ ಮುಸ್ಲಿಮ್ ಸಮಾಜದ ಜನರಿಗೆ ಧಾರ್ಮಿಕ, ನೈತಿಕ, ಸಾಂಸ್ಕೃತಿಕ ಮತ್ತು ಕಾನೂನು ಹಕ್ಕುಗಳು ದೊರೆಯುವುದು, ಅವರಲ್ಲಿ ವಿವಾಹ ಸಂಬಂಧಗಳು ಏರ್ಪಡುವುದು, ವಾರೀಸು ಸೊತ್ತುಗಳ ಹಂಚಿಕೆಯಾಗುವುದು. ಇತರ ನಾಗರಿಕ ಸಂಬಂಧಗಳು ಕಾರ್ಯಗತವಾಗುವುವು. ಅದಕ್ಕಿಂತ ಹೆಚ್ಚಾಗಿ ಬೇರೇನೂ ದೊರೆಯಲಾರದು. ಆದರೆ ಮಾನವನಿಗೆ ಪರಲೋಕ ಮೋಕ್ಷ ದೊರೆಯುವುದೂ

ಅವನು ಮುಸ್ಲಿಮ್ ಮತ್ತು ಮುಅ್‌ಮಿನ್ ಆಗಿ ಪರಿಗಣಿಸಲ್ಪಡುವುದೂ ಮೆಚ್ಚುಗೆಗೆ ಪಾತ್ರವಾದ ಅಲ್ಲಾಹನ ದಾಸನೆಂದು ಪರಿಗಣಿಸಲ್ಪಡುವುದೂ ಪ್ರಸ್ತುತ ಕಾನೂನು ಸಂಬಂಧವಾದ ಒಪ್ಪಿಗೆಯನ್ನೇ ಅವಲಂಬಿಸಿಲ್ಲ. ಅದಕ್ಕೆ ಹೃದಯದ ನೈಜ ಒಪ್ಪಿಗೆ ಮತ್ತು ವಿಧೇಯತೆಗಳಿರಬೇಕು. ಸಂತೋಷ ಮತ್ತು ಸಂತೃಪ್ತಿಯಿಂದ ತನ್ನನ್ನು ಅಲ್ಲಾಹನಿಗೆ ಸಂಪೂರ್ಣವಾಗಿ ಅರ್ಪಿಸಬೇಕು. ನಾಲಗೆಯಿಂದ ಮಾಡುವ ಒಪ್ಪಿಗೆಯು ಈ ಲೋಕದಲ್ಲಿ ಕಾಝಿಗಳಿಗೂ, ಮುಸ್ಲಿಮರಿಗೂ, ಸಾರ್ವಜನಿಕವಾಗಿ ಸಕಲ ಮಾನವರಿಗೂ ಆಗಿದೆ. ಯಾಕೆಂದರೆ ಅವರಿಗೆ ಬಾಹ್ಯ ಸ್ಥಿತಿ ಮಾತ್ರ ಗೋಚರಿಸುತ್ತದೆ. ಆದರೆ ಅಲ್ಲಾಹನು ಮಾನವನ ಹೃದಯ ಮತ್ತು ಅಂತರಾಳವನ್ನು ನೋಡಿ ವಿಶ್ವಾಸವನ್ನು ಅಳೆಯುತ್ತಾನೆ. ಮಾನವನು ತನ್ನ ಜೀವನ, ಮರಣ, ನಿಷ್ಠೆ, ಭಯಭಕ್ತಿ, ಅನುಸರಣೆ, ದಾಸ್ಯ ಮಾತ್ರವಲ್ಲ ಜೀವನದ ಎಲ್ಲಾ ವ್ಯವಹಾರಗಳನ್ನೂ ಆತನಿಗಾಗಿ ಮಾಡುತ್ತಿದ್ದಾನೆಯೇ ಎಂದು ಪರೀಕ್ಷಿಸುತ್ತಾನೆ. ಅವು ಅಲ್ಲಾಹನಿಗಾಗಿದ್ದರೆ ಆತನು ನಿಸ್ಸಂದೇಹವಾಗಿಯೂ ಮುಸ್ಲಿಮ್ ಮತ್ತು ಮುಅ್‌ಮಿನ್ ಆಗುತ್ತಾನೆ. ತದ್ವಿರುದ್ಧವಾದರೆ ಆತನು ಮುಸ್ಲಿಮನೂ ಅಲ್ಲ, ಮುಅ್‌ಮಿನನೂ ಅಲ್ಲ. ಈ ಬಗ್ಗೆ ಆತನಲ್ಲಿರುವ ಲೋಪಕ್ಕನುಗುಣವಾಗಿ ಆತನ ಈಮಾನ್ ಮತ್ತು ಇಸ್ಲಾಮಿನಲ್ಲಿಯೂ ಲೋಪವಿರುತ್ತದೆ. ಇಹಲೋಕದಲ್ಲಿ ಆತನು ಎಷ್ಟೇ ಉತ್ತಮ ಮುಸ್ಲಿಮನೆಂದು ಪರಿಗಣಿಸಲ್ಪಡಲಿ ಅಥವಾ ಆತನಿಗೆ ಎಷ್ಟೇ ಉನ್ನತ ಸ್ಥಾನಮಾನಗಳು ನೀಡಲ್ಪಡಲಿ ಅಲ್ಲಾಹನ ದೃಷ್ಟಿಯಲ್ಲಿ ಅದಕ್ಕೆ ಬೆಲೆಯಿಲ್ಲ. ಅಲ್ಲಾಹನು ತನ್ನ ಮಾರ್ಗದಲ್ಲಿ ಸರ್ವಸ್ವವನ್ನೂ ಬಲಿ ನೀಡಲಾಗಿದೆಯೇ ಇಲ್ಲವೇ ಎಂಬುದನ್ನು ನೋಡಿ ಮಾನವನಿಗೆ ಸ್ಥಾನಮಾನಗಳನ್ನು ನಿರ್ಧರಿಸುತ್ತಾನೆ. ಕೇವಲ ಅಲ್ಲಾಹನಿಗಾಗಿ ನೀಡಿದ್ದರೆ ಅಲ್ಲಾಹನೊಂದಿಗೆ ನಿಷ್ಠೆ, ಭಯ, ಭಕ್ತಿ ತೋರಿ ದಾಸ್ಯದ ಕರ್ತವ್ಯವನ್ನು ನಿರ್ವಹಿಸಿದವರಿಗೆ ದೊರೆಯುವ ಸ್ಥಾನವೇ ಅವರಿಗೂ ದೊರೆಯುವುದು. ಆದರೆ ಆತನು ಏನನ್ನಾದರೂ ಅಲ್ಲಾಹನ ದಾಸ್ಯದಿಂದ ಹೊರತು ಪಡಿಸಿದ್ದರೆ ನಾನು ಮುಸ್ಲಿಮ್ ಸರ್ವಸ್ವವನ್ನೂ ಅಲ್ಲಾಹನಿಗೆ ಅರ್ಪಿಸಿದವನೆಂಬ ಆತನ ವಾದಕ್ಕೆ ಹುರುಳಿಲ್ಲ. ಪ್ರಾಯಶಃ ತನ್ನ ವಾದದಿಂದ ಜನರನ್ನು ವಂಚಿಸಬಹುದು. ಆದ್ದರಿಂದ ಆತನಿಗೆ ಮುಸ್ಲಿಮ್ ಸಮಾಜದಲ್ಲಿ ಉನ್ನತ ಸ್ಥಾನಮಾನಗಳು ಲಭಿಸಬಹುದು. ಇಹಲೋಕದಲ್ಲಿ ಮುಸ್ಲಿಮರಿಗೆ ದೊರೆಯುವ ಎಲ್ಲಾ ಹಕ್ಕುಗಳೂ ಆತನಿಗೆ ಲಭ್ಯವಾಗಬಹುದು. ಆದರೆ ಅಲ್ಲಾಹನು ಅದರಿಂದ ವಂಚಿತನಾಗಿ ಅವರಿಗೆ ತನ್ನ ನಿಷ್ಠಾವಂತದಾಸರ ಸಾಲಿನಲ್ಲಿ ಸ್ಥಾನ ನೀಡುವನೆಂಬುದು ಸಂಭಾವ್ಯವಲ್ಲ.

## ತಾತ್ವಿಕ ಇಸ್ಲಾಮ್ ಮತ್ತು ನೈಜ ಇಸ್ಲಾಮ್

ಲೋಕದ ಹಿಂದಿನ ಹಾಗೂ ಇಂದಿನ ಎಲ್ಲಾ ಮುಸ್ಲಿಮರನ್ನೂ ಎರಡು ವರ್ಗಗಳಾಗಿ ವಿಂಗಡಿಸಬಹುದು. ಒಂದು ವರ್ಗವು ಅಲ್ಲಾಹ್ ಮತ್ತು ಪ್ರವಾದಿಗಳಲ್ಲಿ ವಿಶ್ವಾಸವಿರಿಸಿ, ಇಸ್ಲಾಮನ್ನು ತಮ್ಮ ಧರ್ಮವೆಂದು ಅಂಗೀಕರಿಸಿದ್ದರೂ ಅವರು ತಮ್ಮ ಧರ್ಮವನ್ನು ಸಂಪೂರ್ಣ ಜೀವನದ ಒಂದು ಅಂಶ ಅಥವಾ ಭಾಗವಾಗಿರಿಸಿಕೊಳ್ಳುತ್ತಾರೆ. ಆ ವಿಶಿಷ್ಟ ಅಂಶ ಅಥವಾ ಭಾಗದಲ್ಲಿ ಇಸ್ಲಾಮನ್ನು ಗೌರವಿಸಿ ಆರಾಧನೆಗಳನ್ನು ನಿರ್ವಹಿಸುತ್ತಾರೆ. ಜಪಸರ ಮತ್ತು ಮುಸಲ್ಲಾ ಅವರ ಜತೆಗಿರುವುದು. ಅವರು ದಿಕ್ರ್‌ಗಳಲ್ಲಿ ಮಗ್ನರಾಗಿರುತ್ತಾರೆ. ಆಹಾರ

ಪಾನೀಯಗಳ ಸೇವನೆಯಲ್ಲಿಯೂ ಕೌಟುಂಬಿಕ ವ್ಯವಹಾರಗಳಲ್ಲಿಯೂ ಅವರು ಜಾಗ್ರತೆ ವಹಿಸುತ್ತಾರೆ. ಸಂಕ್ಷಿಪ್ತದಲ್ಲಿಧಾರ್ಮಿಕ ಆಚಾರವೆಂದು ಕರೆಯಲ್ಪಡುವ ಎಲ್ಲವನ್ನೂ ಅವರು ಪಾಲಿಸುತ್ತಾರೆ. ಆದರೆ ಪ್ರಸ್ತುತ ಅಂಶದ ಹೊರತು ಇತರೆಲ್ಲಾ ಅಂಶಗಳಲ್ಲಿಯೂ ಅವರು ತಮ್ಮ ಮುಸ್ಲಿಮರೆಂಬ ಸ್ಥಿತಿಯಿಂದ ದೂರ ಸರಿದಿದ್ದಾರೆ.ಅವರು ಪ್ರೀತಿಸುವುದಿದ್ದರೆ ಕೇವಲ ತಮ್ಮ ದೇಹ, ಸ್ವಾರ್ಥ ಹಿತಾಸಕ್ತಿ, ಸ್ವದೇಶ, ಸ್ವಸಮುದಾಯ ಅಥವಾ ಲೌಕಿಕ ಲಾಭಗಳಿಗಾಗಿ ಪ್ರೀತಿಸುತ್ತಾರೆ. ಅವರ ದ್ವೇಷ ಮತ್ತು ಹೋರಾಟಗಳೂ ಲೌಕಿಕ ಯಾ ಸ್ವಾರ್ಥದ ಬುನಾದಿಯಲ್ಲಿರುವುದು. ಅವರ ವ್ಯಾಪಾರ, ವ್ಯವಹಾರ, ಸಂಬಂಧ ಮತ್ತು ಪತ್ನಿ, ಮಕ್ಕಳು, ಕುಟುಂಬ ಹಾಗೂ ಸಮಾಜದೊಂದಿಗಿನ ಅವರ ನಡತೆ ಇತ್ಯಾದಿಗಳೆಲ್ಲವೂ ಧರ್ಮದಿಂದ ಬಹುವಂಶ ಮುಕ್ತವಾಗಿ ಲೌಕಿಕ ಬುನಾದಿಯಲ್ಲಿ ಅಧಿಷ್ಠಿತವಾಗಿರುವುದು. ಭೂಮಾಲಿಕ, ವ್ಯಾಪಾರಿ, ಆಡಳಿತಗಾರ, ಯೋಧ ಅಥವಾ ಕಾರ್ಮಿಕರೆಂಬ ನೆಲೆಯಲ್ಲಿ ಅವರಿಗೆ ವಿಶಿಷ್ಟ ಅಸ್ತಿತ್ವವಿರುವುದು. ಆದರೆ ಮುಸ್ಲಿಮರೆಂಬ ನೆಲೆಯಲ್ಲಿ ಅವರಿಗೆ ಅದರೊಂದಿಗೆ ಯಾವ ಸಂಬಂಧವೂ ಇರುವುದಿಲ್ಲ.

ಎರಡನೇ ವರ್ಗದ ಮುಸ್ಲಿಮರು ತಮ್ಮ ಅಸ್ತಿತ್ವವನ್ನು ಸಂಪೂರ್ಣವಾಗಿ ಇಸ್ಲಾಮಿಗೆ ಅರ್ಪಿಸುತ್ತಾರೆ. ಅವರ ಸಂಪೂರ್ಣ ಅಸ್ತಿತ್ವವು ಮುಸ್ಲಿಮನೆಂಬ ಸ್ಥಿತಿಯಲ್ಲಿ ಲೀನವಾಗುವುದು. ಅವರು ಮುಸ್ಲಿಮ್ ಎಂಬ ನೆಲೆಯಲ್ಲಿ ತಂದೆಯಾಗುತ್ತಾರೆ. ಮುಸ್ಲಿಮೆಂಬ ನೆಲೆಯಲ್ಲಿ ಸಂತಾನವಾಗುತ್ತಾರೆ. ಮುಸ್ಲಿಮೆಂಬ ನೆಲೆಯಲ್ಲಿ ಪತಿ ಪತ್ನಿಯರಾಗುತ್ತಾರೆ. ಅವರು ವ್ಯಾಪಾರಿ, ಭೂಮಾಲಿಕ, ಕಾರ್ಮಿಕ, ನೌಕರ ಅಥವಾ ಕೃಷಿಕರಾಗುವುದಿದ್ದರೂ ಮುಸ್ಲಿಮನೆಂಬ ನೆಲೆಯಲ್ಲಿಯೇ ಆಗುತ್ತಾರೆ. ಅವರ ಆಶೆ, ಆಕಾಂಕ್ಷೆ, ವಿಶ್ವಾಸ, ವಿಚಾರ, ಅಭಿಪ್ರಾಯ, ಪ್ರೀತಿ, ದ್ವೇಷ ಎಲ್ಲವೂ ಇಸ್ಲಾಮಿಗೆ ವಿಧೇಯವಾಗಿರುತ್ತದೆ. ಅವರ ಹೃದಯ, ಮನ, ಮಸ್ತಿಷ್ಕ, ಕಣ್ಣು, ಕಿವಿ, ಹೊಟ್ಟೆ, ಗುಪ್ತಾಂಗ, ಕೈಕಾಲು, ದೇಹ, ಆತ್ಮ-ಹೀಗೆ ಪ್ರತಿಯೊಂದರ ಮೇಲೆಯೂ ಇಸ್ಲಾಮಿನ ಸಂಪೂರ್ಣ ಹಿಡಿತವಿರುತ್ತದೆ. ಅವರ ಪ್ರೀತಿ ಅಥವಾ ದ್ವೇಷವು ಇಸ್ಲಾಮಿನಿಂದ ಸ್ವತಂತ್ರವಾಗಿರುವುದಿಲ್ಲ. ಅವರು ಅನ್ಯರೊಡನೆ ಇಸ್ಲಾಮಿಗಾಗಿ ಸಂಬಂಧ ಬೆಳೆಸುತ್ತಾರೆ. ಇಸ್ಲಾಮಿಗಾಗಿ ಹೋರಾಡುತ್ತಾರೆ. ಅವರು ಇತರರಿಗೆ ಏನಾದರೂ ನೀಡುವುದೂ ನೀಡದಿರುವುದೂ ಇಸ್ಲಾಮೀ ಕಾನೂನಿಗೆ ವಿಧೇಯವಾಗಿಯೇ ಆಗಿರುವುದು. ಅವರ ಈ ವರ್ತನೆಯು ಕೇವಲ ಖಾಸಗೀ ಜೀವನಕ್ಕೆ ಸೀಮಿತವಾಗಿರುವುದಿಲ್ಲ. ಸಾಮಾಜಿಕ ಜೀವನವು ಇಸ್ಲಾಮೀ ಬುನಾದಿಯಲ್ಲಿಯೇ ಸ್ಥಾಪಿತವಾಗುತ್ತದೆ. ಒಂದು ಸಂಘಟನೆಯೆಂಬ ನೆಲೆಯಲ್ಲಿ ಅವರ ಅಸ್ತಿತ್ವವೂ ಇಸ್ಲಾಮಿಗೆ ಮೀಸಲಾಗಿದೆ. ಅವರ ಸಾಮಾಜಿಕ ವ್ಯವಹಾರಗಳೆಲ್ಲವೂ ಇಸ್ಲಾಮೀ ತತ್ವಗಳಲ್ಲಿ ಅಧಿಷ್ಠಿತವಾಗಿರುವುದು.

ಈ ಉಭಯ ವರ್ಗದ ಮುಸ್ಲಿಮರು ಪರಸ್ಪರ ತೀರಾ ಭಿನ್ನವಾಗಿದ್ದಾರೆ. ಕಾನೂನಿನ ದೃಷ್ಟಿಯಿಂದ ಉಭಯ ವರ್ಗಗಳಿಗೂ ಮುಸ್ಲಿಮೆಂಬ ಹೆಸರು ಸಮಾನವಾಗಿ ಬಳಸಲ್ಪಡಬಹುದು. ಒಂದನೇ ವರ್ಗದವರ ಚಟುವಟಿಕೆಯ ಬಗ್ಗೆ ಹೇಳುವುದಿದ್ದರೆ, ಅದು ಇಸ್ಲಾಮೀ ಇತಿಹಾಸದಲ್ಲಿ ಎತ್ತಿ ಹೇಳಬೇಕಾದ ಅಥವಾ ಅನುಮೋದಿಸಲ್ಪಡುವಂಥದ್ದಾಗಿರಲಾರದು. ಅವರು ವಾಸ್ತವದಲ್ಲಿ ಜಾಗತಿಕ ಇತಿಹಾಸದಲ್ಲಿ ಇಸ್ಲಾಮಿನ ಮಾದರಿಯು ಉಳಿಯುವಂತಹ ಚಟುವಟಿಕೆಗಳನ್ನು

ಮಾಡಿಲ್ಲ. ಒಂದು ವೇಳೆ ಇಸ್ಲಾಮ್ ಅಧಃಪತನಗೊಂಡಿದ್ದರೆ ಅದಕ್ಕೆ ಆ ಜನರೇ ಕಾರಣರು. ಮುಸ್ಲಿಮ್ ಸಮಾಜದಲ್ಲಿ ಅಂಥವರು ಬಹುಸಂಖ್ಯಾತರಾದುದರಿಂದಲೇ ಜೀವನ ಪದ್ಧತಿಯ ಸೂತ್ರವು ಕುಫ್ರ್‌ನ ಕೈಗಳಿಗೆ ಹೋಗಿ ಮುಸ್ಲಿಮರು ಅದರ ಅಧೀನದಲ್ಲಿ ಕೇವಲ ಸೀಮಿತ ಧಾರ್ಮಿಕ ಸ್ವಾತಂತ್ರ್ಯದಿಂದ ಸಂತೃಪ್ತವಾಗಬೇಕಾದ ಸ್ಥಿತಿ ಉಂಟಾಯಿತು. ಅಲ್ಲಾಹನಿಗೆ ಅಂತಹ ಮುಸ್ಲಿಮರ ಅವಶ್ಯಕತೆ ಕಿಂಚಿತ್ತೂ ಇಲ್ಲ. ಅಲ್ಲಾಹನು ಪ್ರವಾದಿಗಳನ್ನು ನೇಮಿಸಿರುವುದೂ ಗ್ರಂಥಗಳನ್ನು ಅವತೀರ್ಣಗೊಳಿಸಿರುವುದೂ ಅಂತಹ ಮುಸ್ಲಿಮರನ್ನು ಬೆಳೆಸಲಿಕ್ಕಾಗಿಯಲ್ಲ. ವಾಸ್ತವದಲ್ಲಿ ಅಲ್ಲಾಹನಿಗೆ ಕೇವಲ ಎರಡನೇ ವರ್ಗದ ಮುಸ್ಲಿಮರ ಅಗತ್ಯವಿದೆ. ಅವರನ್ನು ಸಿದ್ಧಪಡಿಸಲಿಕ್ಕಾಗಿಯೇ ಅಲ್ಲಾಹನು ಪ್ರವಾದಿಗಳನ್ನು ನೇಮಿಸಿದನು. ಗ್ರಂಥಗಳನ್ನು ಅವತೀರ್ಣಗೊಳಿಸಿದನು. ಇಸ್ಲಾಮಿ ದೃಷ್ಟಿಕೋನದಲ್ಲಿ ಸೇವೆ ಸಲ್ಲಿಸಿದವರೂ ಮುಂದೆ ಸಲ್ಲಿಸುವವರೂ ಅಂಥವರೇ ಆಗಿರುತ್ತಾರೆ.

ಇದು ಕೇವಲ ಇಸ್ಲಾಮಿನ ವಿಶೇಷತೆಯಲ್ಲ. ಪ್ರತಿಯೊಂದು ಆಂದೋಲನದ ಸ್ಥಿತಿಯೂ ಇದುವೇ ಆಗಿದೆ. ವಿಶ್ವಾಸವನ್ನು ಒಪ್ಪಿ, ತತ್ವವನ್ನು ಪಾಲಿಸಿ, ಅದನ್ನು ಸಮಗ್ರ ಜೀವನದ ಒಂದು ಪರಿಚ್ಛೇದವಾಗಿಸಿ ಜೀವನ ಮತ್ತು ಮರಣವನ್ನು ಆಂದೋಲನದ ಬದಲಾಗಿ ಇತರ ಯಾವುದಕ್ಕಾದರೂ ವಿನಿಯೋಗಿಸುವ ಅನುಯಾಯಿಗಳಿಂದ ಲೋಕದ ಯಾವ ಆಂದೋಲನವೂ ಜಯಗಳಿಸಲಾರದು. ಹೃತ್ಪೂರ್ವಕವಾಗಿ ತಮ್ಮ ಸಂಘಟನೆಯೊಂದಿಗೆ ನಿಷ್ಠೆ ಮತ್ತು ಭಕ್ತಿ ತೋರಿ ಸಂಪೂರ್ಣ ಅಸ್ತಿತ್ವವನ್ನು ಆಂದೋಲನದಲ್ಲಿ ವಿಲೀನಗೊಳಿಸಿ ಸಂತಾನವನ್ನೂ ಪ್ರಾಣವನ್ನೂ ವಿಶ್ವಾಸದ ಮುಂದೆ ತೃಣೀಕರಿಸುವ ಜನರೇ ಇಂದಿಗೂ ಯಾವುದೇ ಆಂದೋಲನದ ನೈಜ ಅನುಯಾಯಿಗಳಾಗಿ ಉಳಿದು ಕೊಂಡಿದ್ದಾರೆ. ಲೋಕದ ಪ್ರತಿಯೊಂದು ಆಂದೋಲನವೂ ಅಂತಹ ಅನುಯಾಯಿಗಳನ್ನೇ ಬಯಸುತ್ತದೆ. ಯಾವುದೇ ವ್ಯವಸ್ಥೆಯು ಅಂತಹ ಅನುಯಾಯಿಗಳಿಂದಲೇ ಪ್ರಾಬಲ್ಯ ಪಡೆಯುತ್ತದೆ. ಆದರೆ ಈ ನಿಟ್ಟಿನಲ್ಲಿ ಇಸ್ಲಾಮ್ ಮತ್ತು ಇತರ ಆಂದೋಲನಗಳಲ್ಲಿ ವ್ಯತ್ಯಾಸವಿದೆ. ಇತರ ಆಂದೋಲನಗಳಿಗೆ ಮಾನವನಿಂದ ಇಂತಹ ತ್ಯಾಗ, ನಿಷ್ಠೆ, ಭಯಭಕ್ತಿಯನ್ನು ಅಪೇಕ್ಷಿಸುವ ಹಕ್ಕಿಲ್ಲ. ಒಂದು ವೇಳೆ ಅವು ಹಾಗೆ ಅಪೇಕ್ಷಿಸುವುದಿದ್ದರೂ ಅವು ಅದಕ್ಕೆ ಅನರ್ಹವಾಗಿದೆ. ಆದರೆ ಇಸ್ಲಾಮ್ ಮಾನವನಿಂದ ತ್ಯಾಗ, ಸಮರ್ಪಣೆಗಳನ್ನು ಅಪೇಕ್ಷಿಸುವುದಿದ್ದರೆ ವಾಸ್ತವದಲ್ಲಿ ಅದಕ್ಕೆ ಆ ಹಕ್ಕಿದೆ. ಇತರ ಸಂಘಟನೆಗಳು ಸ್ವಜೀವನ ಮತ್ತು ವ್ಯಕ್ತಿತ್ವವನ್ನು ಬಲಿಯರ್ಪಿಸಲು ಹೇಳುತ್ತಿರುವ ಧ್ಯೇಯ ಸಾಧನೆಗಳು ವಾಸ್ತವದಲ್ಲಿ ಮಾನವನು ಏನನ್ನಾದರೂ ಬಲಿಯರ್ಪಿಸಲು ಯೋಗ್ಯವಾದ ಧ್ಯೇಯಗಳಲ್ಲ. ಆದರೆ ಇಸ್ಲಾಮ್ ಮಾನವನಿಂದ ಅಲ್ಲಾಹನಿಗಾಗಿ ಅಪೇಕ್ಷಿಸುತ್ತಿರುವ ತ್ಯಾಗಗಳು ಆತನಿಗೆ ಯೋಗ್ಯವಾದವುಗಳೇ ಆಗಿವೆ. ಮಾನವನು ಸರ್ವಸ್ವವನ್ನೂ ಆತನಿಗೆ ಅರ್ಪಿಸಬೇಕು. ಆಕಾಶ ಭೂಮಿಗಳಲ್ಲಿರುವ ಸಕಲ ಚರಾಚರಗಳೂ ಅಲ್ಲಾಹನವೇ. ಮಾನವನೂ ಅವನ ವಶದಲ್ಲಿರುವುದೆಲ್ಲವೂ ಆತನಿಗೆ ನೀಡಲ್ಪಟ್ಟಿರುವುದೆಲ್ಲವೂ ಅಲ್ಲಾಹನವೇ. ಮಾನವನೂ ಈ ಲೋಕದಲ್ಲಿ ಬಳಸುವ ಎಲ್ಲಾ ವಸ್ತುಗಳೂ ಅಲ್ಲಾಹನವೇ. ಆದ್ದರಿಂದ ಏನೆಲ್ಲಾ ಅಲ್ಲಾಹನದಾಗಿವೆಯೋ ಅವೆಲ್ಲವೂ ಆತನಿಗೆಯೇ ಮೀಸಲಿರಿಸಬೇಕಾದುದು ಸಂಪೂರ್ಣ ಸೂಕ್ತ ಮತ್ತು ನ್ಯಾಯೋಚಿತವಾಗಿದೆ. ಅಲ್ಲಾಹನ ಅನುಮತಿಯಿಲ್ಲದೆ ಅನ್ಯರಿಗೆ ಅಥವಾ ಸ್ವಾರ್ಥ

ಮತ್ತು ದೇಹೇಚ್ಛೆಗಳಿಗಾಗಿ ಮಾನವನು ಮಾಡುವ ತ್ಯಾಗಗಳು ವಂಚನೆಯಾಗಿವೆ. ಅಲ್ಲಾಹನಿಗಾಗಿ ಮಾಡುವ ಯಾವುದೇ ತ್ಯಾಗವು ಆತನ ಋಣ ಸಂದಾಯ ಮಾಡಿದಂತಾಗುವುದು. ಆದರೆ ಈ ಅಂಶವನ್ನು ತೊರೆದು ಆಲೋಚಿಸುವುದಿದ್ದರೂ ಮಿಥ್ಯದ ಆಂದೋಲನಗಳಿಗಾಗಿಯೂ ದೇಹೇಚ್ಛೆಗಳೆಂಬ ಮಿಥ್ಯ ಆರಾಧ್ಯರಿಗಾಗಿಯೂ ಸರ್ವಸ್ವವನ್ನೂ ಬಲಿಯರ್ಪಿಸಿ, ಇತಿಹಾಸದಲ್ಲಿಯೇ ಅದ್ವಿತೀಯವಾದ ಧೈರ್ಯ, ಸ್ಥೈರ್ಯಗಳನ್ನು ಪ್ರದರ್ಶಿಸುವ ಜನರ ಕಾರ್ಯ ವಿಧಾನದಲ್ಲಿ ಮುಸ್ಲಿಮರಿಗೆ ಹಲವು ಪಾಠಗಳಿವೆ. ಮಿಥ್ಯಕ್ಕಾಗಿ ಅಂತಹ ಅಗಾಧ ತ್ಯಾಗ ಪರಿಶ್ರಮಗಳು ನಡೆಯುತ್ತಿರುವಾಗ, ಸತ್ಯಕ್ಕಾಗಿ ಅದರ ಸಾವಿರದಲ್ಲೊಂದು ಅಂಶವಾದರೂ ಅರ್ಪಿಸಲು ಸಿದ್ಧವಿಲ್ಲವೆನ್ನುವುದು ಅಚ್ಚರಿದಾಯಕ.

"ನಾನು ಆರಂಭದಲ್ಲಿ ಪಠಿಸಿದ ಕುರ್‌ಆನ್ ಸೂಕ್ತ ಮತ್ತು ಪ್ರವಾದಿ ವಚನದ ಆಧಾರದಲ್ಲಿ ನಾವು ನಮ್ಮನ್ನೇ ಒಮ್ಮೆ ಅವಲೋಕಿಸಬೇಕು. ನಾವು ವಿಶ್ವಾಸವಿರಿಸಿ ಇಸ್ಲಾಮನ್ನು ಅಂಗೀಕರಿಸಿದ್ದೇವೆಂದು ವಾದಿಸುತ್ತೇವೆ. ಹಾಗಿದ್ದರೆ ವಾಸ್ತವದಲ್ಲಿ ನಮ್ಮ ಜೀವನ ಮತ್ತು ಮರಣಗಳು ಅಲ್ಲಾಹನಿಗಾಗಿವೆಯೇ? ನಾವು ಆತನ ಧರ್ಮಕ್ಕಾಗಿ ಜೀವಿಸುತ್ತಿದ್ದೇವೆಯೇ? ನಮ್ಮ ಹೃದಯ, ಮಸ್ತಿಷ್ಕಗಳ, ದೇಹ ಮತ್ತು ಆತ್ಮದ ಸಂಪೂರ್ಣ ಸಾಮರ್ಥ್ಯ, ಕಾಲ, ಪರಿಶ್ರಮಗಳು ಅಲ್ಲಾಹನ ಇಚ್ಛೆಯನ್ನು ಈಡೇರಿಸುವ ಪ್ರಯತ್ನಗಳಿಗಾಗಿ ವಿನಿಯೋಗವಾಗುತ್ತಿವೆಯೇ? ಅಲ್ಲಾಹನು ಮುಸ್ಲಿಮರಿಂದ ನೆರವೇರಿಸ ಬಯಸುವ ಕೆಲಸಗಳಲ್ಲಿಯೇ ನಾವು ನಮ್ಮ ಗಮನವನ್ನು ಕೇಂದ್ರೀಕರಿಸಿದ್ದೇವೆಯೇ? ಎಂಬುದನ್ನು ನಾವು ಕೂಲಂಕುಷವಾಗಿ ಪರಿಶೀಲಿಸಬೇಕು. ಅದಲ್ಲದೇ ನಾವು ನಮ್ಮ ಅನುಸರಣೆ ಮತ್ತು ದಾಸ್ಯ ಆರಾಧನೆಯನ್ನು ಕೇವಲ ಅಲ್ಲಾಹನಿಗೆ ಅರ್ಪಿಸುತ್ತಿದ್ದೇವೆಯೇ? ನಾವು ನಮ್ಮ ಜೀವನವನ್ನು ಸ್ವದೇಹ, ಕುಟುಂಬ, ಬಂಧು ಮಿತ್ರಾದಿಗಳು, ಸಮಾಜ ಮತ್ತು ಸರಕಾರದ ದಾಸ್ಯ ಆರಾಧನೆಯಿಂದ ಮುಕ್ತಗೊಳಿಸಿದ್ದೇವೆಯೇ? ನಮ್ಮ ಇಷ್ಟಾನಿಷ್ಟಗಳು ಅಲ್ಲಾಹನ ಸಂಪ್ರೀತಿಗೆ ಅಧೀನವಾಗಿವೆಯೇ? ನಮ್ಮ ಪ್ರೀತಿ ಮತ್ತು ದ್ವೇಷಗಳು ಕೇವಲ ಅಲ್ಲಾಹನಿಗಾಗಿವೆಯೇ? ಪ್ರಸ್ತುತ ಪ್ರೀತಿ ಮತ್ತು ದ್ವೇಷಗಳಲ್ಲಿ ಸ್ವಾರ್ಥಕ್ಕೆ ಎಡೆ ನೀಡಿದ್ದೇವೆಯೇ? ನಾವು ನೀಡುವುದು ಅಥವಾ ನೀಡದಿರುವುದು ಕೇವಲ ಅಲ್ಲಾಹನ ಅಭೀಷ್ಟವನ್ನು ಅವಲಂಬಿಸಿದೆಯೇ? ನಾವು ನಮ್ಮ ಹೊಟ್ಟೆಗೂ ದೇಹಕ್ಕೂ ಅಥವಾ ಇನ್ನಾವುದಕ್ಕಾದರೂ ನೀಡುವುದಿದ್ದರೆ ಅದು ಅಲ್ಲಾಹನು ಅವುಗಳಿಗೆ ನೀಡಿರುವ ಹಕ್ಕು, ಅದನ್ನು ನೀಡುವ ಮೂಲಕ ಅಲ್ಲಾಹನ ಸಂಪ್ರೀತಿಗೆ ಪಾತ್ರರಾಗಬೇಕೆಂಬ ಬಯಕೆ ಮಾತ್ರವೇ ಪ್ರಧಾನವಾಗಿದೆಯೇ? ಹಾಗೆಯೇ ಯಾರಿಗಾದರೂ ಏನಾದರೂ ನೀಡದಿರುವುದಿದ್ದರೂ ಅಲ್ಲಾಹನು ಆಜ್ಞಾಪಿಸುವುದರಿಂದಲೂ ಆತನ ಸಂಪ್ರೀತಿಯ ಗಳಿಕೆಯ ಬಯಕೆಯಿಂದಲೂ ಮಾತ್ರವಾಗಿದೆಯೇ? ಈ ಸ್ಥಿತಿ ನಮ್ಮಲ್ಲಿ ಉಂಟಾಗಿದ್ದರೆ ಅಲ್ಲಾಹನು ತನ್ನ ಅನುಗ್ರಹವನ್ನು ನಿಮ್ಮ ಮೇಲೆ ಪೂರ್ಣಗೊಳಿಸಿರುವುದಕ್ಕಾಗಿ ನೀವು ಆತನನ್ನು ಸ್ತುತಿಸಿರಿ. ಪ್ರಸ್ತುತ ವಿಷಯದಲ್ಲಿ ನಿಮ್ಮಲ್ಲೇನಾದರೂ ಲೋಪದೋಷ ವಿದೆಯೆಂದು ಭಾಸವಾಗುವುದಿದ್ದರೆ ಇತರೆಲ್ಲಾ ವಿಚಾರಗಳನ್ನು ತೊರೆದು ಆ ಲೋಪವನ್ನು ನಿವಾರಿಸಲಿಕ್ಕಾಗಿ ಪ್ರಯತ್ನಿಸಿರಿ. ನಿಮ್ಮೆಲ್ಲಾ ಪ್ರಯತ್ನ ಪರಿಶ್ರಮಗಳನ್ನು ಅದಕ್ಕಾಗಿ ವಿನಿಯೋಗಿಸಿರಿ. ಯಾಕೆಂದರೆ ಆ ಕೊರತೆಯ ನಿವಾರಣೆಯಲ್ಲಿಯೇ ನಿಮ್ಮ ಐಹಿಕ ವಿಜಯ ಮತ್ತು ಪರಲೋಕ ಮೋಕ್ಷವು ಅಡಗಿದೆ. ಈ ಕೊರತೆಯನ್ನು ನೀವು ತುಂಬಿದರೆ ನಿಮಗೆ ಲೋಕದಲ್ಲಿ ಬೇರೇನೂ ದೊರೆಯದಿದ್ದರೂ ನಿಮಗೆ ಯಾವ ನಷ್ಟವೂ ಇಲ್ಲ.

## ಚತುರ್ಥ ಅಧಿವೇಶನ:

ಜುಮಾ ನಮಾಝ್‌ನ ಬಳಿಕ ಪುನರಾರಂಭಗೊಂಡ ಅಧಿವೇಶನದಲ್ಲಿ ವಿವಿಧ ಕಡೆಗಳ ವರದಿಗಳನ್ನು ಸಲ್ಲಿಸಲಾಯಿತು. ಅಮೀರರು ಅವುಗಳನ್ನು ವಿಮರ್ಶಿಸುತ್ತಾ ಹೀಗೆಂದರು:

ನಿಮ್ಮ ವರದಿಗಳಲ್ಲಿ ಪ್ರಸ್ತಾಪಿಸಲಾಗಿರುವ ವಿಷಯವು ನನ್ನ ಅನುಭವಕ್ಕೂ ಬಂದಿದೆ. ಕೆಲವು ಪಕ್ಷಗಳು ನಮಗೂ ಅವರಿಗೂ ಏನೋ ವಿರಸವಿದೆಯೆಂದು ಭಾವಿಸಲಾರಂಭಿಸಿವೆ. ಆ ಹಿನ್ನಲೆಯಲ್ಲಿ ಅವು ಅನೇಕ ಕಡೆಗಳಲ್ಲಿ ನಮ್ಮ ಹಾದಿಗೆ ಅಡೆತಡೆಗಳನ್ನು ನಿರ್ಮಿಸಿ, ನಮ್ಮ ಬಗ್ಗೆ ತಪ್ಪು ತಿಳುವಳಿಕೆಗಳನ್ನು ಪ್ರಚಾರಗೊಳಿಸುವ ಕಾರ್ಯ ಆರಂಭಿಸಿವೆ. ವಸ್ತುತಃ ನಮಗೆ ಅವರೊಂದಿಗೆ ಯಾವ ವಿರಸವೂ ಇಲ್ಲ. ಅವರನ್ನು ನಾವು ನಮ್ಮ ಶತ್ರುವೆಂದು ಪರಿಗಣಿಸುವುದಿಲ್ಲ. ವಿವಿಧ ಮುಸ್ಲಿಮ್ ಸಂಘಟನೆಗಳ ಕಾರ್ಯ ವಿಧಾನಗಳನ್ನೂ ಅವರ ರಾಜಕೀಯ ನೀತಿಯನ್ನೂ ನಾವು ನಮ್ಮ ಸಾಹಿತ್ಯಗಳಲ್ಲಿ ವಿಮರ್ಶಿಸಿರುವುದು ನಿಜ. ಆದರೆ ಆ ವಿಮರ್ಶೆಯ ಉದ್ದೇಶವು ಹಗೆತನದಿಂದಾಗಿರಲಿಲ್ಲ. ಅದು ಸಂಘಟನೆಗಳು ನಮ್ಮ ದೃಷ್ಟಿಕೋನವನ್ನು ತಿಳಿದು ಸರಿಯೆಂದು ಕಂಡರೆ ಅವರು ತಮ್ಮ ಕಾರ್ಯವಿಧಾನವನ್ನು ಬದಲಾಯಿಸಿಕೊಳ್ಳಲೆಂಬ ಉದ್ದೇಶದಿಂದ ಮಾತ್ರವಾಗಿತ್ತು. ಸುಧಾರಣೆಗೆ ಇಂತಹ ವಿಮರ್ಶೆಗಳು ಬೇಕೇ ಬೇಕು. ಅದರ ವಿನಾ ಲೋಕದಲ್ಲೆಲ್ಲಿಯೂ ಪರಿಸ್ಥಿತಿ ಸುಧಾರಣೆಯಾಗುವುದಿಲ್ಲ. ವಿವೇಕದಿಂದ ವರ್ತಿಸುವ ಹಾಗೂ ಉನ್ನತಿಯನ್ನು ಬಯಸುವ ಪಕ್ಷಗಳು ಅಂತಹ ವಿಮರ್ಶೆಗಳನ್ನು ಸ್ವಾಗತಿಸಬೇಕಲ್ಲದೆ ಅದರಿಂದ ಪ್ರಯೋಜನವನ್ನೂ ಪಡೆಯಲು ಪ್ರಯತ್ನಿಸಬೇಕು. ಆದರೆ ಭಾರತದಲ್ಲಿ ವಿಮರ್ಶೆಯು ಸದಾ ಶತ್ರುತ್ವವೆಂದು ಪರಿಗಣಿಸಲ್ಪಡುತ್ತಿರುವುದು ವಿಷಾದನೀಯ. ನೀವು ಓರ್ವರನ್ನು ನಿಸ್ವಾರ್ಥವಾಗಿ ಸಹಾನುಭೂತಿ ಮತ್ತು ಹಿತಾಕಾಂಕ್ಷೆಯಿಂದ ವಿಮರ್ಶಿಸುತ್ತೀರೆಂದು ಇಟ್ಟುಕೊಳ್ಳೋಣ. ಆದರೂ ಆ ವ್ಯಕ್ತಿಯು ನಿಮ್ಮ ವಿಮರ್ಶೆಯನ್ನು ಸಹಿಸಲು ತುಂಬಾ ಕಷ್ಟವಿದೆ.

ಇದೆಲ್ಲವೂ ಭಾರತದ ನೈತಿಕ ಮತ್ತು ವೈಚಾರಿಕ ಅಧಃಪತನದ ದುಷ್ಪರಿಣಾಮಗಳಾಗಿವೆ. ಇದರ ಕಾರಣಗಳನ್ನು ನಾವು ಸರಿಯಾಗಿ ಅರ್ಥಮಾಡಿಕೊಂಡರೆ ಅಂತಹ ಪ್ರಕ್ರಿಯೆಯನ್ನು ನೋಡಿ ಕೋಪಿಸುವ ಅಗತ್ಯವಿಲ್ಲ. ಬದಲಾಗಿ ಅವರೊಂದಿಗೆ ಸಹಾನುಭೂತಿ ಅಥವಾ ಕನಿಷ್ಠ ಪಕ್ಷ ಸಂಯಮದ ನೀತಿಯನ್ನು ಕೈಗೊಳ್ಳಬೇಕು. ನಿಮ್ಮ ವರದಿಗಳಲ್ಲಿ ಕೆಲವೆಡೆ ಆ ವಿರೋಧಗಳ ಬಗ್ಗೆ ಕೋಪ ಮತ್ತು ಅಸಂತೃಪ್ತಿ ಕಂಡು ಬರುತ್ತಿದೆ. ಈ ಸ್ವಭಾವವನ್ನು ಸಂಪೂರ್ಣ ತೊರೆಯಿರಿ. ವಿರೋಧವಿರುವೆಡೆಗಳಲ್ಲಿ ಬುದ್ಧಿವಂತಿಕೆ ಮತ್ತು ಶಾಂತಿಯಿಂದ ಅವರಿಗೆ ಮನವರಿಕೆ ಮಾಡಿಕೊಡಿರಿ. ನಮ್ಮ ನೈಜ ಹೋರಾಟವು ನಿಮ್ಮೊಂದಿಗಲ್ಲ. ದುಷ್ಟ ವ್ಯವಸ್ಥೆಯೊಂದಿಗೆ ಎಂಬುದನ್ನು ಅವರಿಗೆ ತಿಳಿಯಪಡಿಸಿರಿ. ನಾವು ಆ ವ್ಯವಸ್ಥೆಯನ್ನು ತಪ್ಪೆಂದು ತಿಳಿದು ಅದನ್ನು ವಿಮರ್ಶಿಸುತ್ತಿದ್ದೇವೆ. ನೀವು ಆ ವ್ಯವಸ್ಥೆಯೊಂದಿಗೆ ಇರಿಸಿಕೊಂಡಿರುವ ಸಂಬಂಧದ ಪ್ರಮಾಣಕ್ಕನುಸಾರವಾಗಿ ನಮ್ಮ ವಿಮರ್ಶೆಯು ನಿಮ್ಮನ್ನು ಪರೋಕ್ಷವಾಗಿ ಘಾಸಿಗೊಳಿಸುವುದು. ಆದರೆ ನಮ್ಮ ನೈಜ ಗುರಿಯು ನೀವಲ್ಲ, ದುಷ್ಟವ್ಯವಸ್ಥೆ ಮಾತ್ರವಾಗಿದೆ. ಇನ್ನು ನಿಮಗೆ ಆ ವ್ಯವಸ್ಥೆಯೊಂದಿಗೆ ಯಾವ ಸಂಬಂಧವೂ ಇಲ್ಲದಿದ್ದರೆ ನಮ್ಮ ಚಟುವಟಿಕೆಗಳಿಂದ ನೀವು ಚಿಂತಿತರಾಗಬೇಕಾದ ಅಗತ್ಯವಿಲ್ಲ. ಇತರೆಡೆಗೆ ಸಾಗುವ ಬಾಣವನ್ನು

ನೀವು ನಿಮ್ಮ ಎದೆಗೇಕೆ ಎಳೆದು ಕೊಳ್ಳುತ್ತೀರಿ? ಎಂದು ಹೇಳಿ ಬಿಡಿರಿ. ಈ ರೀತಿ ಸ್ಪಷ್ಟವಾಗಿ ತಿಳಿಸಿದ ಬಳಿಕವೂ ಮತ್ಸರ ನೀತಿಯನ್ನು ಅವಲಂಬಿಸುವವರನ್ನು ನೀವು ಅವರ ಪಾಡಿಗೆ ಬಿಟ್ಟು ಬಿಡಿರಿ. ಅವರ ಆರೋಪಗಳಿಗೆ ಉತ್ತರ ನೀಡುವ ಅಥವಾ ಕುಪಿತರಾಗುವ ಅಗತ್ಯವಿಲ್ಲ. ಅವರ ವಿರೋಧಿ ಚಟುವಟಿಕೆಗಳು ಅವಾಸ್ತವ ಹೇಳಿಕೆಗಳು ಮತ್ತು ನಿರಾಧಾರ ಆರೋಪಗಳೆಲ್ಲವೂ ಅವರಿಗೇ ಹಾನಿಕಾರಕವಾಗಿದೆಯೆಂದು ಭಾವಿಸಿರಿ. ಆದರೆ ಅದಕ್ಕಾಗಿ ನಿಮ್ಮ ನೀತಿಯು ಅತ್ಯಂತ ಸಭ್ಯವೂ ಉನ್ನತವೂ ಯುಕ್ತಿಪೂರ್ಣವೂ ಆಗಿರಬೇಕಾದುದು ಅತ್ಯಗತ್ಯ. ನೀವು ಸತ್ಯಸಂಧರಂತೆ ಸರಿಯಾದ ರೀತಿಯಲ್ಲಿ ನಿಮ್ಮ ಚಟುವಟಿಕೆಗಳನ್ನು ಮುಂದುವರಿಸಿರಿ. ನಿಮ್ಮ ನೀತಿಯು ಸಭ್ಯವಾಗಿದ್ದು ಅವರ ವಿರೋಧಿ ಚಟುವಟಿಕೆಗಳು ಅಸಭ್ಯ ಹಾಗೂ ಅಸತ್ಯದಿಂದ ಕೂಡಿದ್ದರೆ, ಜನ ಸಾಮಾನ್ಯರು ಅವರ ಚಟುವಟಿಕೆಗಳಿಂದ ಸ್ವಯಂ ದೂರವಾಗಿ ನಿಮ್ಮೆಡೆಗೆ ಆಕರ್ಷಿತರಾಗುವುದನ್ನು ಕಾಣುವಿರಿ. ಇನ್ನು ನೀವು ಕುಪಿತರಾಗಿ ಅವರ ಬೈಗಳಿಗೆ ಅದೇ ಶೈಲಿಯಲ್ಲಿ ಉತ್ತರ ನೀಡಲಾರಂಭಿಸಿದರೆ ನೀವೂ ಅವರಂತೆಯೇ ಆಗುವಿರಿ. ಆ ಹೋರಾಟದಲ್ಲಿ ಅವರೊಂದಿಗೆ ನೀವು ನಷ್ಟ ಅನುಭವಿಸಬೇಕಾಗುವುದು. ವಾಸ್ತವದಲ್ಲಿ ಸತ್ಯ ಪ್ರಚಾರಕರನ್ನು ಅವರ ಹಾದಿಯಿಂದ ತಪ್ಪಿಸಿ ಅವರನ್ನು ದೇಹೇಚ್ಛೆಗಳಿಗಾಗಿ ಹೋರಾಡುವಂತೆ ಮಾಡಲು ಪಿಶಾಚಿಯು ಸದಾ ಪ್ರಯತ್ನಿಸುತ್ತಿದೆ. ಈ ಕುರಿತು 'ಸೂರಾ ಅಲ್ ಅಅ್‌ರಾಫ್'ನ ಕೊನೆಯ ಪಾರಾದ ಟಿಪ್ಪಣಿಯಲ್ಲಿ ನಾನು ಬರೆದಿರುವ ವಿಷಯಗಳನ್ನು ನೀವು ಗಮನವಿಟ್ಟು ಓದಿರಿ. ದೇವನಿಚ್ಛಿಸಿದರೆ ಅದು ತುಂಬಾ ಪ್ರಯೋಜನಕಾರಿಯಾಗಬಹುದು.

## ಸಮತಾವಾದದ ಗಂಡಾಂತರ

ಸಮತಾವಾದದ ಭೋರ್ಗರೆಯುತ್ತಿರುವ ಪ್ರವಾಹದಿಂದ ಏನೋ ಒಂದು ವಿಧದ ಭಯಾಶಂಕೆ ಜಮಾಅತ್‌ನ ಹಿತೈಷಿಗಳಲ್ಲಿ ಹುಟ್ಟಿಕೊಂಡಿದೆಯೆಂಬುದು ಈ ಹಿಂದೆ ದೊರೆತ ಅನೇಕ ಪತ್ರಗಳಿಂದಲೂ ಇಲ್ಲಿ ಸಲ್ಲಿಸಲ್ಪಟ್ಟಿರುವ ವರದಿಗಳಿಂದಲೂ ನಾನು ಸ್ಪಷ್ಟವಾಗಿ ಊಹಿಸಿದ್ದೇನೆ. ಸಮತಾವಾದೀ ಆಂದೋಲನವು ರಶ್ಯದ ವಿಜಯದಿಂದಾಗಿ ಈಗ ಪ್ರಾಬಲ್ಯ ಪಡೆದಿರುವುದರಲ್ಲಿ ಸಂದೇಹವಿಲ್ಲ. ಸರಕಾರದ ಪಥಭ್ರಷ್ಟ ನೀತಿಯೂ ಅದರ ಬೆಳವಣಿಗೆಗೆ ಸಹಾಯಕವಾಗಿದೆ. ಆದರೆ ಅಷ್ಟರಿಂದಲೇ ಕಳವಳ ಪಡಬೇಕಾದ ಯಾವ ಅಗತ್ಯವೂ ಇಲ್ಲ. ಕಳವಳ ಅಥವಾ ಭಯದಿಂದ ಮಾಡುವ ಚಟುವಟಿಕೆಗಳಿಂದ ಲಾಭಕ್ಕಿಂತ ಹೆಚ್ಚು ಹಾನಿಯೇ ಸಂಭವಿಸುತ್ತದೆ. ಸಮತಾವಾದವು ಜನಸಾಮಾನ್ಯರ ಪೈಶಾಚಿಕ ಭಾವನೆಗಳನ್ನೂ ದೇಹೇಚ್ಛೆಗಳನ್ನೂ ಆಕರ್ಷಿಸುವುದರಿಂದಾಗಿ ಅದಕ್ಕೆ ಕಾಳ್ಗಿಚ್ಚಿನಂತೆ ಹಬ್ಬುವ ಶಕ್ತಿಯಿದೆಯೆಂಬುದು ನಿಜ. ಒಂದು ದೀರ್ಘ ಕಾಲದಿಂದ ಅದರ ಪ್ರಚಾರಕಾರ್ಯ ಅವ್ಯಾಹತವಾಗಿ ನಡೆಯುತ್ತಿರುವುದೂ ನಿಜ. ಪ್ರಭಾವಶಾಲಿ ಸಾಹಿತ್ಯವನ್ನು ಅದು ಸಿದ್ಧಗೊಳಿಸಿದೆ. ದೊಡ್ಡ ಸಂಖ್ಯೆಯ ಕಾರ್ಯಕರ್ತರು ಅದಕ್ಕಿದ್ದಾರೆ. ಲೋಕದ ನಾನಾ ಕಡೆಗಳಲ್ಲಿ ಅದು ಯಶಸ್ವಿಯಾಗಿ ಪ್ರಚಾರಗೊಂಡಿದೆ. ಒಂದು ಬೃಹತ್ ಸರಕಾರವು ಅದರ ಧ್ವಜಹಿಡಿದಿದೆ. ಅದರ ಹೊಸ ವಿಜಯಗಳು ಅದಕ್ಕೆ ಅಸಾಮಾನ್ಯ ಬಲ ಮತ್ತು ಪ್ರಭಾವವನ್ನು ನೀಡಿದೆ. ಈ ಆಂದೋಲನವು ನೆರೆಯುಬ್ಬರದಂತೆ ನಮ್ಮ ದೇಶವನ್ನೂ ಇತರ ಅನೇಕ ದೇಶಗಳನ್ನೂ ಒಂದು ಬಾರಿಗೆ ಸ್ವಾಧೀನ ಪಡಿಸುವ ದಿನ

ದೂರವಿಲ್ಲ. ಆದರೆ ಈ ವಾಸ್ತವಿಕಾಂಶಗಳ ಇನ್ನೊಂದು ಮುಖವೂ ಇದೆ- ಭಾರತದಲ್ಲಿಯೂ ಗುಲಾಮ ಮನೋಭಾವವು ಕೊನೆಗೊಂಡಿಲ್ಲದ ಇತರ ಪ್ರದೇಶಗಳಲ್ಲಿಯೂ ಈ ಆಂದೋಲನದ ಬೆಳವಣಿಗೆಯು ರಶ್ಯದ ಬಲವನ್ನು ಅವಲಂಬಿಸಿದೆ. ರಶ್ಯಾವು ಜರ್ಮನಿಯಿಂದ ಹೊಡೆತ ತಿನ್ನುತ್ತಿದ್ದಾಗ ಇಲ್ಲಿ ಸಮತಾವಾದವು ನಿಟ್ಟುಸಿರು ಬಿಡುತ್ತಿದ್ದುದನ್ನೂ ಜರ್ಮನಿಯ ವಿರುದ್ಧ ರಶ್ಯವು ಜಯಗಳಿಸಲಾರಂಭಿಸಿದಾಗ ಇಲ್ಲಿ ಸಮತಾವಾದವೆಂಬ ದೇಹಕ್ಕೆ ಹೊಸ ಜೀವ ಬಂದು, ಎಚ್ಚೆತ್ತು ನಿಲ್ಲಲಾರಂಭಿಸಿರುವುದನ್ನು ನಾವು ಕಂಡಿದ್ದೇವೆ. ಆದ್ದರಿಂದ ಸಮತಾವಾದದ ಬೆಳವಣಿಗೆ ಮತ್ತು ಪತನವು ರಶ್ಯಾವನ್ನು ಅವಲಂಬಿಸಿದೆಯೆಂದರೆ ತಪ್ಪಾಗಲಾರದು. ಆದರೆ ಇಂದು ರಶ್ಯಾದ ಸ್ಥಿತಿಯು, ಒಂದು ಅಂತಾರಾಷ್ಟ್ರೀಯ ಸಮತಾವಾದೀ ಆಂದೋಲನವೆಂಬ ನೆಲೆಯಿಂದ ಆಗಾಗ್ಗೆ ಹಿಂದೆ ಸರಿದು, ಒಂದೊಮ್ಮೆ ನಾಝೀ ಜರ್ಮನಿಯು ನೆಲೆನಿಂತಿದ್ದ ಸ್ಥಾನಕ್ಕೇ ಅದು ತಲುಪಿದೆ. ಅಂದರೆ ಇಂದು ರಶ್ಯಾದ ಸಮತಾವಾದವು ರಾಷ್ಟ್ರೀಯ ಸಮತಾವಾದವಾಗಿದೆ. ಅದು ಸಾಮ್ರಾಜ್ಯಶಾಹೀ ರಂಗದಲ್ಲಿ ಅಮೇರಿಕ ಮತ್ತು ಇಂಗ್ಲೆಂಡಿನ ಪ್ರತಿ ಸ್ಪರ್ಧಿಯಾಗಲು ತವಕಿಸುತ್ತಿದೆ. ರಶ್ಯದ ಸಾಮ್ರಾಜ್ಯಶಾಹಿ ಮನೋಭಾವವು ಅದನ್ನು ಕ್ಷಿಪ್ರ ಅಧಃಪತನಗೊಳಿಸದಿದ್ದರೂ ಸಮತಾವಾದವನ್ನು ಅಂತಾರಾಷ್ಟ್ರೀಯ ಆಂದೋಲನವೆಂಬ ಸ್ಥಾನದಿಂದ ಕೆಳಗಿಳಿಸುವುದು ಖಚಿತ. ಅಂತಾರಾಷ್ಟ್ರೀಯ ಆಂದೋಲನದ ಯಶಸ್ಸಿಗೆ ಕೆಲವು ಪ್ರಾಮುಖ್ಯ ಉಪಾಧಿಗಳಿವೆ. ಆ ಆಂದೋಲನದ ಧ್ವಜವಾಹಕರು ವೈಯಕ್ತಿಕ, ಸಾಮಾಜಿಕ ಮತ್ತು ವರ್ಗೀಯ ಹಿತಾಸಕ್ತಿಗಳನ್ನು ಮೀರಿ ನಿಲ್ಲಬೇಕು. ಎಲ್ಲರನ್ನೂ ಸಮಾನ ರೀತಿಯಲ್ಲಿ ಸಹಭಾಗಿಗಳನ್ನಾಗಿ ಮಾಡಬೇಕು. ಆಂದೋಲನದ ವಿಜಯ ಹಂತದಲ್ಲಿ ದೊರೆತ ಸತ್ಫಲಗಳನ್ನು ಆಂದೋಲನಕ್ಕೆ ಸಂಬಂಧಿಸಿದ ಎಲ್ಲರಿಗೂ ಸಮಾನವಾಗಿ ನೀಡಬೇಕು. ನಿನ್ನೆಯ ತನಕ ನಾವು ಹೋರಾಡುತ್ತಿದ್ದ ಶತ್ರುಗಳೂ ಇಂದು ಆಂದೋಲನದೊಂದಿಗೆ ಸಹಮತ ತೋರಿದರೆ ಅವರ ಬಗೆಗಿನ ದ್ವೇಷ, ಪಕ್ಷಪಾತ ಮತ್ತು ಪ್ರತೀಕಾರ ಭಾವನೆಗಳನ್ನು ತೊರೆದು ಅವರೊಂದಿಗೆ ಸಹೋದರರಂತೆ ವರ್ತಿಸಬೇಕು. ಆದರೆ ಇದಕ್ಕೆ ಉನ್ನತ ನೈತಿಕ ಮಟ್ಟದ ಅಗತ್ಯವಿದೆ. ತನ್ನ ಆರ್ಥಿಕ ಸಮಸ್ಯೆಯೇ ಮಹಾ ಸಮಸ್ಯೆಯೆಂದು ಪರಿಗಣಿಸಿರುವ ಓರ್ವ ಭೌತಿಕವಾದಿಯಲ್ಲಿ ಇಂತಹ ಉತ್ಕೃಷ್ಟ ಗುಣವು ಹೇಗೆ ಉಂಟಾದೀತು. ಆದ್ದರಿಂದಲೇ ರಶ್ಯಾವು ಲೌಕಿಕ ಸಾಧನೆಗಳಲ್ಲಿ ಮುಂದುವರಿಯುವಷ್ಟೇ ವೇಗದಲ್ಲಿ ರಾಷ್ಟ್ರೀಯವಾದಿಯಾಗಿ ಹಿಂದೆ ಸರಿಯುತ್ತಿದೆ. ತಮ್ಮ ಸೈನಿಕ ಸಾಧನೆಗಳಿಂದ ದೊರೆಯುವ ಲಾಭಗಳಲ್ಲಿ ಸ್ವಸಮಾಜದಂತೆಯೇ ಅನ್ಯರಿಗೂ ಸಮಾನವಾಗಿ ಸಹಭಾಗಿತ್ವ ನೀಡುವ ಉನ್ನತ ಮನೋಭಾವ ರಶ್ಯಾದ ಇಂದಿನ ಸಮತಾವಾದಿಗಳಲ್ಲಿಲ್ಲ. ಇಂದು ಅವರ ಬಯಕೆಯೆಲ್ಲವೂ ಸ್ವಸಮುದಾಯಕ್ಕೆ ಸೀಮಿತವಾಗಿದೆ. ಇಂದು ರಶ್ಯಾವು ಸಮತಾವಾದದ ಅಂತಾರಾಷ್ಟ್ರೀಯ ನಿಲುಮೆಯನ್ನು ಕೇವಲ ಒಂದು ರಾಷ್ಟ್ರೀಯ ಆಯುಧವಾಗಿ ಬಳಸುತ್ತದೆ. ತನ್ಮೂಲಕ ವಿವಿಧ ರಾಷ್ಟ್ರಗಳಲ್ಲಿ ಬೇಹುಗಾರರನ್ನು ಸೃಷ್ಟಿಸಿ ಅವರ ಮೂಲಕ ತಮ್ಮ ರಾಷ್ಟ್ರೀಯ ಸಾಮ್ರಾಜ್ಯ ಶಾಹಿತ್ವವನ್ನು ತಳವೂರಿಸುವುದೇ ಇಂದು ರಶ್ಯದ ಹಂಚಿಕೆ. ಈ ವಾಸ್ತವಿಕತೆಯು ಕಣ್ಣುಳ್ಳವರಿಗೆ ಈಗಲೇ ಕಾಣಿಸುತ್ತಿದೆಯಾದರೂ ರಶ್ಯಾದ ರಾಜಕೀಯ ಧೋರಣೆಯು ಈ ನಿಟ್ಟಿನಲ್ಲಿ ಅನಾವರಣಗೊಳ್ಳುವ ದಿನ ದೂರವಿಲ್ಲ. ರಶ್ಯಾವನ್ನು ನಾಯಕ ಮತ್ತು ಮಾರ್ಗದರ್ಶಿಯಾಗಿ ಅಂಗೀಕರಿಸಿ, ಮರ್ದಿತ ವರ್ಗದ ಸಹಾಯಕ

ಮತ್ತು ಸ್ವಾತಂತ್ರ್ಯದ ಧ್ವಜವಾಹಕನೆಂದು ತಪ್ಪು ತಿಳಿದಿದ್ದ ಗುಲಾಮ ವರ್ಗದ ಜನರು ಅಂದು ಸಂಪೂರ್ಣವಾಗಿ ನಿರಾಶೆ ಹೊಂದುವರು.

ಈ ನನ್ನ ಹೇಳಿಕೆಯ ಇಂಗಿತವು ನೀವು ಸಮತಾವಾದದ ಗಂಡಾಂತರದ ಬಗ್ಗೆ ಸಂಪೂರ್ಣ ನಿಶ್ಚಿಂತರಾಗಿರಬೇಕೆಂದಲ್ಲ. ಬದಲಾಗಿ ಸಮತಾವಾದದ ಅಪಾಯದ ಕುರಿತು ನಿಮ್ಮಲ್ಲಿ ಕೆಲವರು ಕಳವಳ ತೋರುವಷ್ಟು ಅದು ಭಯಾನಕವಲ್ಲ. ಈ ಗಂಡಾಂತರವು ವೇಗವಾಗಿ ಬರುತ್ತಿದೆಯೆಂದು ಕಳವಳ ಪಡುತ್ತಿರುವವರು ತಕ್ಷಣವೇ ಅದರ ವಿರುದ್ಧ ಕ್ರಮ ಕೈಗೊಳ್ಳಬೇಕೆಂದು ಬಯಸುತ್ತಿದ್ದಾರೆ. ಸಮತಾವಾದದ ವಿರುದ್ಧ ಲೇಖನ ಮತ್ತು ಪುಸ್ತಕಗಳನ್ನು ವ್ಯಾಪಕ ಪ್ರಮಾಣದಲ್ಲಿ ಪ್ರಕಟಿಸಿ, ನಮ್ಮ ಕಾರ್ಯಕರ್ತರು ಕೃಷಿಕರಲ್ಲಿಯೂ ಕಾರ್ಮಿಕರಲ್ಲಿಯೂ ಪ್ರಚಾರ ಕಾರ್ಯವನ್ನು ಆರಂಭಿಸಿ ಅವರನ್ನು ಸಮತಾವಾದದ ಕಪಿಮುಷ್ಟಿಯಿಂದ ವಿಮೋಚನೆಗೊಳಿಸಬೇಕೆಂದು ವಿನಂತಿಸುತ್ತಿದ್ದಾರೆ. ಆದರೆ ಅವಸರ ಮತ್ತು ಕಳವಳದಿಂದ ಕೈಗೊಳ್ಳುವ ಯಾವ ಕ್ರಮವೂ ಎಂದಿಗೂ ಯಶಸ್ವಿಯಾಗಲಾರದು. ಕಳೆದ ವರ್ಷ ಇದೇ ಉದ್ದೇಶಾರ್ಥವಾಗಿ ನಿಮ್ಮ ಮುಂದೆ ವಯಸ್ಕರ ಶಿಕ್ಷಣದ ಯೋಜನೆಯೊಂದನ್ನು ಇರಿಸಿದ್ದೆ. ಅದು ಕೃಷಿಕ-ಕಾರ್ಮಿಕ ವಿಭಾಗದ ನೈತಿಕ-ವೈಚಾರಿಕ ಸುಧಾರಣೆಯೊಂದಿಗೆ ಆರ್ಥಿಕ, ರಾಜಕೀಯ ಅಥವಾ ಧಾರ್ಮಿಕ ಅಧಃಪತನಕ್ಕೆ ತಳ್ಳುವ ಆಂದೋಲನಗಳಿಂದ ಅವರನ್ನು ರಕ್ಷಿಸುವ ಸಾರ್ವಜನಿಕ ಆಂದೋಲನವೊಂದನ್ನು ಬಲಿಷ್ಠ ಬುನಾದಿಯಲ್ಲಿ ಸ್ಥಾಪಿಸಲಿಕ್ಕಾಗಿ ಜನ ಸಾಮಾನ್ಯರಲ್ಲಿ ಸೇವೆ ಸಲ್ಲಿಸುವ ಸಾಮರ್ಥ್ಯವಿರುವ ಜಮಾಅತ್ ಸದಸ್ಯರಿಗೆ ಉತ್ತೇಜನ ನೀಡುವುದಾಗಿತ್ತು. ತನ್ಮೂಲಕ ನಮ್ಮ ಸಾರ್ವಜನಿಕರಲ್ಲಿ ಪ್ರಾಮಾಣಿಕರಾದ ಕಾರ್ಯಕರ್ತರು ಗಣನೀಯ ಸಂಖ್ಯೆಯಲ್ಲಿ ಸಿದ್ಧರಾಗಿ ನಮ್ಮ ಸಾರ್ವಜನಿಕ ಆಂದೋಲನವನ್ನು ವ್ಯಾಪಕ ಪ್ರಮಾಣದಲ್ಲಿ ದೇಶದಲ್ಲಿ ಪ್ರಚಾರ ಪಡಿಸಲು ಸಹಾಯಕವಾಗುತ್ತಿತ್ತು. ಪ್ರಸ್ತುತ ಯೋಜನೆಯನ್ನು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸುತ್ತೇನೆ. ಜಮಾಅತ್‌ನ ಪ್ರತಿಯೊಬ್ಬ ವಿದ್ಯಾವಂತ ಕಾರ್ಯಕರ್ತನೂ ಪರಿಸರದ ಎಂಟು ಹತ್ತು ಮಂದಿಯನ್ನು ವಿದ್ಯಾಭ್ಯಾಸಕ್ಕಾಗಿ ಪ್ರೇರೇಪಿಸಬೇಕು. ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ ಅವರಿಗೆ ಓದು ಬರಹ ಕಲಿಸಲು ಸಿದ್ಧರಾಗಬೇಕು.ಅದಕ್ಕಾಗಿ ಅವರ ಮೇಲೆ ಯಾವ ಖರ್ಚಿನ ಹೊಣೆಯನ್ನೂ ಹೇರಬಾರದು. ಬದಲಾಗಿ ಅವರ ಸೌಲಭ್ಯಗಳಿಗೆ ಪ್ರಾಮುಖ್ಯತೆ ನೀಡಬೇಕು. ಸ್ಥಳ ಸೌಕರ್ಯವನ್ನೂ ಮಾಡಿ ಕೊಡಬೇಕು. ಆರಂಭದಲ್ಲಿ ಸ್ವಲ್ಪ ಸಮಯ ವ್ಯಯಿಸಿ ಅವರನ್ನು ಓದು ಬರಹ ಬಲ್ಲವರನ್ನಾಗಿ ಮಾಡಬೇಕು. ತರುವಾಯ ಜಮಾಅತ್‌ನ ಸಾಹಿತ್ಯಗಳಿಂದ ಸರಳವಾದ ವಿಷಯಗಳನ್ನು ಪಾಠದ ರೂಪದಲ್ಲಿ ಅವರಿಗೆ ಹೇಳಿ ಕೊಡಬೇಕು. ಈ ಹಂತದಲ್ಲಿ ನಿಮ್ಮ ಅಭಿಪ್ರಾಯಗಳನ್ನು ಅವರ ಹೃದಯದಲ್ಲಿ ಪ್ರತಿಬಿಂಬಿಸಲು ಪ್ರಯತ್ನಿಸುವುದರೊಂದಿಗೆ ಸಹಾನುಭೂತಿ, ಸಹೋದರತೆ ಮತ್ತು ವಿಶಾಲ ಮನೋಭಾವದಿಂದ ವರ್ತಿಸಬೇಕು. ಅವರ ದುಃಖಗಳಲ್ಲಿಯೂ ಸಹಭಾಗಿಗಳಾಗಬೇಕು. ಅವರ ಸಂಕಷ್ಟಗಳನ್ನು ದೂರೀಕರಿಸಲು ಕೈಲಾದಷ್ಟು ಪ್ರಯತ್ನಿಸಿ ಅನುಕಂಪ ತೋರಬೇಕು. ಮಾನವರಲ್ಲಿ ಯಾವೊಂದು ವಿಧದ ಉಚ್ಚ ನೀಚತೆಯೂ ಇರಬಾರದೆಂಬುದನ್ನು ನೀವು ಕಾರ್ಯ ರೂಪದಲ್ಲಿ ತೋರಿಸಿಕೊಡಬೇಕು. ವಿದ್ಯಾವಂತರಲ್ಲಿ ಸಾಮಾನ್ಯವಾಗಿ ಕಂಡು ಬರುವ ಅಹಂಭಾವದ ಲವಲೇಶವಾದರೂ ನಿಮ್ಮಲ್ಲಿರಬಾರದು. ಅತ್ಯಂತ ನಿಷ್ಕಳಂಕತೆ ಮತ್ತು ಹಿತಾಕಾಂಕ್ಷೆಯಿಂದ ಅವರ ನೈತಿಕ ಕುಂದು ಕೊರತೆಗಳನ್ನು

ನಿವಾರಿಸಲು ಶ್ರಮಿಸಬೇಕು. ಅವರ ಅಂತರಾಳದಲ್ಲಿ ಆರ್ಥಿಕ ಬವಣೆ, ಅಜ್ಞಾನ, ನೈತಿಕ ಮತ್ತು ವೈಚಾರಿಕ ಅಧಃಪತನ ಇತ್ಯಾದಿಗಳಿಂದ ನಿದ್ರಾವಶವಾಗಿರುವ ಮಾನವನನ್ನು ನೀವು ಬಡಿದೆಬ್ಬಿಸಬೇಕು. ಇಸ್ಲಾಮ್ ಮತ್ತು ಈಮಾನ್‌ನ ಬುನಾದಿಯಲ್ಲಿ ಜನ್ಮತಾಳಿದ ಮಾನವೀಯ ಪ್ರಜ್ಞೆಯನ್ನು ಅವರಲ್ಲಿ ಬೆಳೆಸಬೇಕು. ಇಂದಿನ ನಾಗರಿಕ ವ್ಯವಸ್ಥೆಯು ನಿರ್ಮಿಸಿರುವ ಅವರ ಎಲ್ಲಾ ವಿಧದ ಸಾಮಾಜಿಕ, ರಾಜಕೀಯ, ಆರ್ಥಿಕ ಸಂಕಷ್ಟಗಳ ಏಕೈಕ ಪರಿಹಾರವು ನಮ್ಮ ಜೀವನ ವ್ಯವಸ್ಥೆಯನ್ನು ಇಸ್ಲಾಮಿ ಸಿದ್ಧಾಂತಕ್ಕನುಸಾರವಾಗಿ ರೂಪಿಸುವುದಾಗಿದೆ ಎಂಬ ಸತ್ಯವನ್ನು ಅವರಿಗೆ ಮನವರಿಕೆ ಮಾಡಿಕೊಡಬೇಕು. ತರುವಾಯ ಅವರ ಮೂಲಕ ನಿಮ್ಮ ನೈತಿಕ ಮತ್ತು ವೈಚಾರಿಕ ಸಿದ್ಧಾಂತಗಳನ್ನು ಪ್ರಚಾರ ಪಡಿಸಲು ಸಾಧ್ಯವಿದೆ. ಈ ಕಾರ್ಯವಿಧಾನದ ಫಲವು ಬಹಳ ನಿಧಾನವಾಗಿ ಕೈಗೂಡುವುದಾದರೂ ಸಂಪತ್ಸರಿತ ಭಾಷಣಗಳ ಮೂಲಕ ಬಹಳ ಕಡಿಮೆ ಸಮಯದಲ್ಲಿ ಸಮತಾವಾದೀ ಕಾರ್ಯಕರ್ತರು ಮಜ್ದೂರ್ ಸಭಾ, ಕಿಸಾನ್ ಪಕ್ಷ, ಟ್ರೇಡ್ ಯೂನಿಯನ್‌ಗಳನ್ನು ರಚಿಸುವಷ್ಟು ಬೇಗನೆ ಒಂದು ಕುರಿ ಮಂದೆಯನ್ನು ಸೇರಿಸಲು ನಿಮಗೆ ಸಾಧ್ಯವಾಗದಿದ್ದರೂ ನೀವು ಈ ಮಾರ್ಗವನ್ನವಲಂಬಿಸಿದರೆ ಕೆಲವೇ ವರ್ಷಗಳಲ್ಲಿ ಸುಶಕ್ತವಾದ ಒಂದು ಸಾರ್ವಜನಿಕ ಆಂದೋಲನ ಎದ್ದೇಳುವುದನ್ನು ನೀವು ಕಾಣಬಹುದು. ಬೇರೆ ಯಾವ ಆಂದೋಲನದಿಂದಲೂ ಆಗ ಅದನ್ನು ಸೋಲಿಸಲು ಸಾಧ್ಯವಿಲ್ಲ. ಅತ್ಯುತ್ಕೃಷ್ಟವಾದ ನೈತಿಕ ಬುನಾದಿಗಳಲ್ಲಿ ಸುಸಜ್ಜಿತವಾದ ಬೆರಳೆಣಿಕೆಯಷ್ಟಿರುವ ಜನರು ತೋರುವ ಸಹನೆ, ಧೈರ್ಯ- ಸ್ಥೈರ್ಯಗಳನ್ನು ಕೇವಲ ಹೊಟ್ಟೆಗಾಗಿ ಒಂದುಗೂಡುವ ಕುರಿ ಮಂದೆಗಳಲ್ಲಿ ಎಂದಿಗೂ ಪ್ರಕಟವಾಗದು. ಜನಸಾಮಾನ್ಯರಲ್ಲಿ ನೈಜ ದೇವ ಭಕ್ತರಿಗೆ ದೊರೆಯುವ ನೈತಿಕ ಪ್ರಾಬಲ್ಯವು ಉದರ ಪೂಜಕರಿಗೆ ಎಂದಿಗೂ ದೊರೆಯಲಾರದು.

## ಇಸ್ಲಾಮಿನ ಮೂಲೋತ್ಪಾಟನೆಯ ತಂತ್ರ

ಸಮತಾವಾದಿಗಳು ಮತ್ತು ಸಮಾಜವಾದಿಗಳು ಕಾರ್ಮಿಕ ವಲಯಗಳಲ್ಲಿ ಹಬ್ಬಿಸಿರುವ ವಿಷವನ್ನು ನೀಗಿಸಲು ನಮ್ಮ ಕಾರ್ಯಕರ್ತರು ಪ್ರಯತ್ನಿಸುತ್ತಿರುವಾಗ ಉಲೆಮಾಗಳು ಸಮತಾವಾದಿ ಮತ್ತು ಸಮಾಜವಾದಿಗಳೊಂದಿಗೆ ಸಹಕರಿಸುತ್ತಿದ್ದಾರೆ. ಮಾತ್ರವಲ್ಲ; ಸಮಾಜವಾದವು ನಮ್ಮ ಧರ್ಮಕ್ಕೆ ವಿರುದ್ಧವಲ್ಲವೆಂಬ ಭರವಸೆಯನ್ನು ಅದು ಕೊಡುತ್ತಿದ್ದಾರೆ. ಹೀಗಿರುತ್ತಾ ಸಮಾಜವಾದವು ನಾಸ್ತಿಕತೆಯೆಡೆಗೊಯ್ಯುತ್ತದೆಂದೂ ಅವರು ಅನಿಸ್ಲಾಮಿಕವೆಂದೂ ಹೇಳಿ ನಮ್ಮನ್ನು ಹೆದರಿಸುವುದೇಕೆ? ಎಂದು ಮುಂತಾಗಿ ಈ ವಲಯಗಳ ಮುಸ್ಲಿಮರು ಪ್ರಶ್ನಿಸುತ್ತಿರುವರೆಂಬ ಕೆಲವು ವರದಿಗಳನ್ನು ನೋಡಿ ನನಗೆ ತುಂಬಾ ದುಃಖವಾಯಿತು. ಹಿಂದೆ ರಶ್ಯನ್ ತುರ್ಕಿಸ್ಥಾನದ ಉಲೆಮಾಗಳು ಮಾಡಿದ ದುರಂತ ಫಲವನ್ನು ಅನುಭವಿಸುತ್ತಿರುವಂತಹ ತಪ್ಪುಗಳನ್ನೇ ಭಾರತದಲ್ಲಿಯೂ ಪುನರಾವರ್ತಿಸಲು ಕೆಲವು ಉಲೆಮಾಗಳು ಪ್ರಯತ್ನಿಸುತ್ತಿದ್ದಾರೆ. ರಶ್ಯನ್ ತುರ್ಕಿಸ್ಥಾನದ ಸಮಾಜವಾದೀ ಕ್ರಾಂತಿಯು ಹೆಚ್ಚು ಹಳತಲ್ಲ. ಅದು ನಡೆದು ಸುಮಾರು ಇಪ್ಪತ್ತೈದು ವರ್ಷಗಳಾಗಬಹುದು. ಅದರ ಪರಿಣಾಮವೇನಾಯಿತು. ಹನ್ನೆರಡು ಶತಮಾನಗಳ ತನಕ ಇಸ್ಲಾಮಿನ ಭದ್ರಕೋಟೆಯಾಗಿ ವಿರಾಜಿಸಿದ್ದ ಹಾಗೂ ಘನ ಹದೀಸ್ ವಿದ್ವಾಂಸರೂ, ಕರ್ಮಶಾಸ್ತ್ರಪಂಡಿತರೂ, ಸೂಫೀವರ್ಯರೂ ಹುಟ್ಟಿ ಬೆಳೆದಿದ್ದ ಆ ಪ್ರದೇಶಗಳಲ್ಲಿ ಇಂದು

ಇಸ್ಲಾಮಿನ ಹೆಸರು ಕೂಡಾ ಉಳಿದಿಲ್ಲ. ಮಸೀದಿ-ಮದರಸಗಳೆಲ್ಲ ಕ್ಲಬ್ಬುಗಳಾಗಿಯೂ ಮತ್ತು ನೃತ್ಯಕೇಂದ್ರಗಳಾಗಿಯೂ ಲೌಕಿಕ-ನಾಸ್ತಿಕ ಶಿಕ್ಷಣ ಸಂಸ್ಥೆಗಳಾಗಿಯೂ ಪರಿವರ್ತನೆಗೊಂಡಿವೆ. ಪರಂಪರಾಗತ ಮುಸ್ಲಿಮ್ ಕುಟುಂಬದಿಂದಲೇ ನಾಸ್ತಿಕ ಮತ್ತು ಧರ್ಮ ನಿಷೇಧಿಗಳಾದ ಕಮ್ಯೂನಿಸ್ಟರು ಹುಟ್ಟಿಕೊಳ್ಳುತ್ತಿದ್ದಾರೆ. ಅವರ ದೃಷ್ಟಿಯಲ್ಲಿ ಪ್ರವಾದಿ ಮುಹಮ್ಮದ್(ಸ) ಕೇವಲ ಓರ್ವ ಬಂಡವಾಳಶಾಹಿಗಳ ಏಜೆಂಟ್. ಪ್ರವಾದಿವರ್ಯರು(ಸ) ತಮ್ಮ ಕಾಲದ ಆರ್ಥಿಕ ವ್ಯವಸ್ಥೆಗೆ ನೈತಿಕ ಆಧಾರ ಸಂಗ್ರಹಿಸಲಿಕ್ಕಾಗಿ ದಿವ್ಯವಾಣಿ ಮತ್ತು ಪ್ರವಾದಿತ್ವದ ಸೋಗು ಹಾಕಿಕೊಂಡರೆಂದು ಅವರು ವಾದಿಸುತ್ತಾರೆ. ಕಮ್ಯೂನಿಝಮ್ ಅಷ್ಟೊಂದು ಪ್ರಭಾವ ಬೀರಿದ ಆ ಪ್ರದೇಶವು ಯಾವುದೆಂದು ನೋಡಿರಿ- 25 ವರ್ಷಗಳ ತನಕ ಹಳೆಯ ರೀತಿಯ ಧಾರ್ಮಿಕತೆಯು ಅಲ್ಲಿ ಭಾರತಕ್ಕಿಂತಲೂ ಹೆಚ್ಚು ರೂಢ ಮೂಲವಾಗಿತ್ತು. ಇಸ್ಲಾಮಿ ವಿಶ್ವಾಸವು ಆ ಜನರಲ್ಲಿ ಹಾಸುಹೊಕ್ಕಾಗಿತ್ತು. ಕಾಲು ಶತಮಾನದಲ್ಲಿ ಆ ಪ್ರದೇಶದಿಂದ ಇಸ್ಲಾಮಿನ ಮೂಲೋತ್ಪಾಟನೆಯಾಗಬಹುದೆಂದು ಯಾರೂ ಊಹಿಸಿರಲಿಲ್ಲ. ಹೀಗಿರುತ್ತಾ, ಕಮ್ಯೂನಿಸ್ಟ್ ವಕ್ತಾರರು ಈ ವಿಜಯವನ್ನು ಹೇಗೆ ಸಾಧಿಸಿದರು? ಅವರು ಅದಕ್ಕೆ ಅನುಸರಿಸಿದ ಮಾರ್ಗವೇನು? ಕಮ್ಯೂನಿಸ್ಟ್ ಪ್ರಚಾರಕರು, ಮಹಾ ಪುರುಷರ ವೇಷ ತೊಟ್ಟು ಮರ್ದಿತ ಮಾನವನ ಉದ್ಧಾರಕರ ಸೋಗಿನಿಂದ ಮೊದಲು ಉಲೆಮಾಗಳ ವಿಶ್ವಾಸವನ್ನು ಗಳಿಸಿದರು. ತುರ್ಕಿಸ್ತಾನದಲ್ಲಿ ನವ ವಿದ್ಯಾವಂತರೂ ಸತ್ಯವಿಶ್ವಾಸಿಗಳಾದ ಮುಸ್ಲಿಮರೂ ವಿರಳವಾಗಿದ್ದರೂ ಅವರು ಈ ಕಮ್ಯೂನಿಸ್ಟ್ ಆಂದೋಲನವು ವಾಸ್ತವದಲ್ಲಿ ಇಸ್ಲಾಮಿಗೆ ಕಡು ವಿರುದ್ಧವೆಂದು ಉಲೆಮಾಗಳನ್ನು ಎಚ್ಚರಿಸಿದ್ದರು. ಆದರೆ ಆ ಉಲೆಮಾಗಳು ಮಾಡಿದ್ದೇನು? ಅವರು ಕತ್ತಲಕೋಣೆಯಲ್ಲಿ ಕಣ್ಣು ಮುಚ್ಚಿ ಕುಳಿತಿದ್ದರು. ಆಧುನಿಕ ಯುಗದ ಆಂದೋಲನಗಳ ನೇರ ಪರಿಚಯ ಅವರಿಗಿರಲಿಲ್ಲ. ಮಾತ್ರವಲ್ಲ ಕಮ್ಯೂನಿಸ್ಟ್ ವಿಪತ್ತಿನ ಕುರಿತು ಅವರಿಗೆ ಮನವರಿಕೆ ಮಾಡಿಕೊಡುವ ಈ ಸುಧಾರಕ ವಿಚಾರದ ಮುಸ್ಲಿಮರನ್ನು, ಅವರು 'ಶರಹ್‌ಜಾಮಿ', 'ಮುತ್ತವ್ವಲ್' ಮುಂತಾದ ಗ್ರಂಥಗಳನ್ನು ಕೈಬಿಟ್ಟು ಹೊಸ ಪಾಠ ಪದ್ಧತಿಯೊಂದನ್ನು ಜಾರಿಗೊಳಿಸಬಯಸುತ್ತಿರುವರೆಂಬ ಕಾರಣಕ್ಕಾಗಿ, ತೀವ್ರವಾಗಿ ದ್ವೇಷಿಸುತ್ತಿದ್ದರು. ಆದ್ದರಿಂದ 'ಶರಹ್ ಜಾಮಿ'ಯನ್ನು ಅಸಿಂಧುಗೊಳಿಸಬಯಸುವ ಮುಸ್ಲಿಮರ ಉಪದೇಶವನ್ನು ಸ್ವೀಕರಿಸದೆ, ತಮ್ಮೆಲ್ಲಾ ನೈತಿಕ ಬೆಂಬಲವನ್ನೂ ಕುರ್‌ಆನನ್ನೇ ಅಸಿಂಧುಗೊಳಿಸಲಿಕ್ಕಾಗಿ ಟೊಂಕ ಕಟ್ಟಿದ ಆ ಧರ್ಮ ನಿರಪೇಕ್ಷಕ, ನಾಸ್ತಿಕರಿಗೆ ಅರ್ಪಿಸಿದರು. ಈ ರೀತಿ ಮಧ್ಯವರ್ತಿಗಳಾದ ಉಲೆಮಾಗಳ ಮೂಲಕ ಕಮ್ಯೂನಿಸ್ಟರು ಟರ್ಕಿಯ ಜನಸಾಮಾನ್ಯರ ವಿಶ್ವಾಸಗಳಿಸಿ, ಪಾಮರರನ್ನು ಅಧೀನಗೊಳಿಸಿ ರಾಜಕೀಯ ವ್ಯವಸ್ಥೆಯ ಮೇಲೆ ತಮ್ಮ ಸ್ವಾಯತ್ತತೆಯನ್ನು ಸಾಧಿಸಿದರು. ತರುವಾಯ ಕಮ್ಯುನಿಸ್ಟರು ಅಧಿಕಾರಗಳಿಕೆಗಾಗಿ ತಾವು ಹಸ್ತಕರಾಗಿ ಬಳಸಿದ ಆ ಉಲೆಮಾ ಮತ್ತು ಶೇಖ್‌ಗಳನ್ನೇ ಪ್ರಥಮವಾಗಿ ನಾಶಗೊಳಿಸಿದರು. ಕಮ್ಯೂನಿಸ್ಟ್ ಕ್ರಾಂತಿಯು ಪೂರ್ಣಗೊಂಡ ಬಳಿಕ ಟರ್ಕಿಯಾದ್ಯಂತ ಉಲೆಮಾ ಮತ್ತು ಸೂಫಿಗಳ ಸಾಮೂಹಿಕ ಹತ್ಯೆ ನಡೆಸಿ ಆಸ್ತಿಕರನ್ನು ಪೈಶಾಚಿಕವಾಗಿ ಹಿಂಸಿಸಿ ನಾಮಾವಶೇಷಗೊಳಿಸಿದ ಘಟನೆಗಳಿಗೆ ಇತಿಹಾಸದಲ್ಲಿ ಸಾಟಿಯಿಲ್ಲ. ಆ ಮರ್ದನಗಳಿಗೆ ಹೋಲಿಸಿದಾಗ ಚೆಂಗಿಸ್‌ಖಾನ್‌ನ ಅಕ್ರಮ ಮರ್ದನಗಳ ಇತಿಹಾಸವೂ ತುಚ್ಛವಾಗಿ ಕಾಣುತ್ತದೆ. ಇದೆಲ್ಲವೂ ಕೇವಲ 20 ವರ್ಷಗಳ ಹಿಂದಿನ ಘಟನೆ. ಭಾರತದ

ಗಡಿಯಿಂದ ಕೇವಲ 600 ಮೈಲು ದೂರದ ಪ್ರದೇಶದಲ್ಲಿ ಇದು ನಡೆದಿದೆ. ಆದರೆ ನಮ್ಮ ವಿದ್ವಾಂಸರುಗಳಿಗೆ ಆ ಕುರಿತು ಏನೂ ತಿಳಿದಿಲ್ಲ. ಅವರು ಬುಖಾರಾ ಮತ್ತು ಸಮರ್ಕಂದ್‌ಗಳ ಘಟನೆಗಳನ್ನು ಭಾರತದಲ್ಲಿ ಪುನರಾವರ್ತಿಸಲು ಪಾಡು ಪಡುತ್ತಿದ್ದಾರೆ. ಅವರ ಗಂಭೀರ ಸಮ್ಮೇಳನಗಳಲ್ಲಿ ಸಮಾಜವಾದೀ ನಾಯಕರಿಗೂ ಸಮಾಜವಾದೀ ಮನೋಭಾವದ ಜನರಿಗೂ ಸ್ವಾಗತ ಭಾಷಣ ನೀಡಲು ಅವಕಾಶ ಕೊಡಲಾಗುತ್ತಿದೆ. ಅವರ ಹೊಣೆಗಾರ ವ್ಯಕ್ತಿಗಳು ಕಮ್ಯೂನಿಸ್ಟ್, ಸೋಶಿಯಲಿಸ್ಟ್ ಕಾರ್ಯಕರ್ತರೊಂದಿಗೆ ಜನಸಾಮಾನ್ಯರಲ್ಲಿ ಕೆಲಸ ಮಾಡುತ್ತಿದ್ದಾರೆ.

"ಇಸ್ಲಾಮ್ ಮತ್ತು ಸೋಶಲಿಝುಮ್‌ಗಳಲ್ಲಿ ಒಂದರಲ್ಲಿ ದೇವನ ಕಲ್ಪನೆಯಿದೆ- ಇನ್ನೊಂದರಲ್ಲಿ ಅದಿಲ್ಲವೆಂಬುದಷ್ಟೇ ವ್ಯತ್ಯಾಸ. ಅದರ ಹೊರತು ಸಮಾಜವಾದೀ ವ್ಯವಸ್ಥೆಯು ಇಸ್ಲಾಮಿ ವ್ಯವಸ್ಥೆಯ ಹೊಸ 'ಆವೃತ್ತಿ'ಯಾಗಿದೆಯೆಂದು" ಕೆಲವು ಪ್ರಸಿದ್ಧ ವಿದ್ವಾಂಸರು ಹೇಳುವುದನ್ನು ಕೇಳಿದ್ದೇನೆ. ಅದೇನಿದ್ದರೂ ಇವರು ಅಲ್ಲಾಹನ ಮುಂದೆ ತಮ್ಮ ಹೊಣೆಗಾರಿಕೆಗಳಿಂದ ಎಂದಿಗೂ ತಪ್ಪಿಸಿಕೊಳ್ಳಲಾರರು.

ಇಲ್ಲಿಗೆ ಈ ಅಧಿವೇಶನವು ಸಮಾರೋಪಗೊಂಡು ಮಗ್ರಿಬ್ ನಮಾಝ್‌ನ ಬಳಿಕ 5ನೇ ಅಧಿವೇಶನವು ಆರಂಭಗೊಂಡಿತು.

## ಉಲೆಮಾಗಳ ಟೀಕೆ

ಈ ಅಧಿವೇಶನದಲ್ಲಿ ವಿವಿಧ ಪ್ರದೇಶಗಳ ವರದಿಗಳು ಸಲ್ಲಿಸಲ್ಪಟ್ಟುವು. ಅವುಗಳ ಕುರಿತು ಅಮೀರರು ಮಾಡಿದ ನಿರೂಪಣೆಯ ಕೆಲವು ಆಯ್ದ ಭಾಗಗಳನ್ನು ಇಲ್ಲಿ ಕೊಡಲಾಗಿದೆ:

ಒಬ್ಬರು ಧನ, ಪ್ರಾಣ ಇತ್ಯಾದಿ ಸರ್ವಸ್ವವನ್ನೂ ಜಮಾಅತ್‌ಗೆ ಅರ್ಪಿಸುತ್ತಾರೆ- ಅವುಗಳನ್ನು ತಮ್ಮಿಷ್ಟದಂತೆ ವಿನಿಯೋಗಿಸುವ ಅನುಮತಿಯನ್ನೂ ಅಮೀರರಿಗೆ ನೀಡುವರೆಂಬ ವರದಿಯ ಅಂಶದ ಬಗ್ಗೆ ಪ್ರಸ್ತಾವಿಸುತ್ತಾ ಅಮೀರರು ಹೀಗೆಂದರು: ಇದು ಅತ್ಯಂತ ಪ್ರಶಂಶಸನೀಯ ಮತ್ತು ಅಭಿನಂದನಾರ್ಹ ವಿಷಯವಾಗಿದೆ. ನಾನು ಯಾರನ್ನೂ ನಿರಾಸೆಗೊಳಿಸಬಯಸುವುದಿಲ್ಲ, ಅಥವಾ ಮುಂದಿಟ್ಟ ಅವರ ಹೆಜ್ಜೆಯನ್ನು ತಡೆಯಬಯಸುವುದಿಲ್ಲ. ಮಾತ್ರವಲ್ಲ ಅಲ್ಲಾಹನು ಅವರ ಈ ಸತ್ಕಾರ್ಯವನ್ನು ಸ್ವೀಕರಿಸಿ, ಅವರ ಹೆಜ್ಜೆಗಳನ್ನು ಈ ಮಾರ್ಗದಲ್ಲಿ ದೃಢಗೊಳಿಸಲೆಂದು ನಾನು ಪ್ರಾರ್ಥಿಸುತ್ತೇನೆ. ಆದರೆ, ಅವರು ಸಮ್ಮೇಳನದ ಬಳಿಕ ಮನೆಗೆ ಮರಳಿ ತನ್ನ ಸಂಪೂರ್ಣ ಸ್ಥಿತಿಗತಿಗಳ ಕುರಿತು ಆತ್ಮಾವಲೋಕನ ನಡೆಸಿ ಎರಡು ಮೂರು ತಿಂಗಳು ಶಾಂತ ಮನಸ್ಸಿನಿಂದ ಈ ಬಗ್ಗೆ ಆಲೋಚಿಸಲಿ. ಆ ಬಳಿಕವೂ ಅವರು ಇದೇ ನಿರ್ಧಾರದಲ್ಲಿ ಅಚಲರಾಗಿದ್ದರೆ ನನಗೆ ತಿಳಿಸಲಿ; ಮುಂದೆ ಅವರು ಏನು ಮಾಡಬೇಕೆಂದು ನಾನು ಅವರಿಗೆ ತಿಳಿಸುತ್ತೇನೆ. ನಾನು ಹೀಗೆ ಹೇಳುವುದರ ಕಾರಣವೇನೆಂದರೆ ಜನರು ಕೆಲವೊಮ್ಮೆ ತಾತ್ಕಾಲಿಕ ಭಾವಾತಿರೇಕಕ್ಕೆ ಬಲಿಬಿದ್ದು ತಮ್ಮ ಧೈರ್ಯ, ಸ್ಥೈರ್ಯ ಅಥವಾ ಸಹನಾಶಕ್ತಿಯನ್ನು ಚೆನ್ನಾಗಿ ನಿರ್ಣಯಿಸದೆ ಏನಾದರೂ ತೀರ್ಮಾನ ಕೈಗೊಳ್ಳುತ್ತಾರೆ. ತರುವಾಯ ನೈಜ ಪರಿಸ್ಥಿತಿಯನ್ನು ಎದುರಿಸಬೇಕಾದ ಸಂದರ್ಭದಲ್ಲಿ ಅವರಿಗೆ ತಮ್ಮ ಹಿಂದಿನ ತೀರ್ಮಾನದಲ್ಲಿ ದೃಢವಾಗಿ ನಿಲ್ಲಲು ಸಾಧ್ಯವಾಗುವುದಿಲ್ಲ.

"ಮೊದಲು ಮಾದರಿ ಮುಸ್ಲಿಮನಾಗಬೇಕು. ಆ ಬಳಿಕ ಇತರರ ಸುಧಾರಣೆಗೆ ಪ್ರಯತ್ನಿಸಬೇಕೆಂದು ಕೆಲವರು ಆಕ್ಷೇಪಿಸುತ್ತಿರುವರೆಂದು ಒಂದು ವರದಿಯಲ್ಲಿ ಕಂಡಿತು. ಇದು ಭಾರೀ ತಪ್ಪು ತಿಳುವಳಿಕೆಯಾಗಿದೆ. ಧರ್ಮ ಅಥವಾ ಬುದ್ಧಿಯಿಂದ ಅದಕ್ಕೆ ಸಮರ್ಥನೆ ದೊರೆಯದು. ಇವೆರಡು ಏಕ ಕಾಲದಲ್ಲಿ ನಡೆಯುತ್ತಿರಬೇಕೆಂದು ಕುರ್‌ಆನ್ ಮತ್ತು ಹದೀಸ್‌ನಿಂದ ತಿಳಿಯುತ್ತದೆ. ಮಾನವನು ಸತ್ಯವನ್ನು ಗ್ರಹಿಸಿದ ಮೊದಲ ಕ್ಷಣದಿಂದ ಸ್ವಯಂ ಸತ್ಯನಿಷ್ಠನಾಗಲು ಪ್ರಯತ್ನಿಸುವುದರೊಂದಿಗೆ ಇತರರನ್ನು ಸತ್ಯದೆಡೆಗೆ ಆಹ್ವಾನಿಸಬೇಕೆಂಬುದು ಬುದ್ಧಿಗೆ ನಿಲುಕುವಂಥದ್ದಾಗಿದೆ. ಹಲವು ಮಂದಿಯೊಂದಿಗೆ ನೀವು ವಾಸವಾಗಿರುವ ಮನೆಗೆ ಬೆಂಕಿ ಬಿದ್ದರೆ ನೀವು ಮಾತ್ರ ಅದರಿಂದ ರಕ್ಷಣೆ ಹೊಂದುವುದು ನಿಮ್ಮ ಕರ್ತವ್ಯವಲ್ಲ. ಬದಲಾಗಿ ಇತರ ಸಹೋದರರಿಗೂ ವಿಷಯ ತಿಳಿಸಿ ಅವರನ್ನೂ ವಿಮೋಚಿಸಬೇಕಾದುದು ನಿಮ್ಮ ಕರ್ತವ್ಯವಾಗಿದೆ. ಸ್ವಯಂ ಮಾದರಿ ಮುಸ್ಲಿಮನಾಗಬೇಕೆನ್ನುವವರೊಂದಿಗೆ ವಿಚಾರಿಸಿ ನೋಡಿರಿ- ಮನುಷ್ಯನು ಮಾದರೀ ಮುಸ್ಲಿಮನಾಗಿರುವನೆಂದು ತೀರ್ಮಾನಿಸುವ ಏನಾದರೂ ಮಿತಿಮೇರೆಗಳನ್ನು ಸಂಶೋಧಿಸಿದ್ದೀರಾ. ಪ್ರಾಯಶಃ ನೀವು ಸಂಪೂರ್ಣನೆಂದು ಯಾವಾಗ ಭಾವಿಸಿದಿರೋ ಅಂದೇ ನಿಮ್ಮ ಅಪೂರ್ಣತೆಯ ಆರಂಭವಾಗಿರಬಹುದು. ಅನ್ಯರ ಸುಧಾರಣಾ ಪ್ರಯತ್ನಕ್ಕೆ ಆ ಸಮಯವೇ ಹೆಚ್ಚು ಅನರ್ಹವಾಗಿರುವುದು."

ಇಲ್ಲಿ ಸಲ್ಲಿಸಲಾಗಿರುವ ವರದಿಗಳಿಂದ ಉಲೆಮಾಗಳು ಮತ್ತು ಇತರ ಪಕ್ಷ ಹಾಗೂ ಸಂಘಟನೆಗಳಿಂದ ತೀವ್ರ ಟೀಕೆಗಳು ಆರಂಭಗೊಂಡಿವೆಯೆಂಬ ದೂರುಗಳನ್ನು ನಾನು ಗ್ರಹಿಸಿದೆ, ಒಂದು ರೀತಿಯಿಂದ ಈ ಆರೋಪಗಳು ಸರಿಯಾಗಿವೆ. ಭಿನ್ನಾಭಿಪ್ರಾಯ ಮತ್ತು ವಿರೋಧದ ನಿಮಿತ್ತ ಮಾನವರಲ್ಲಿ ಕೋಪ-ದ್ವೇಷಗಳು ಕಂಡು ಬರುವುದು ಸ್ವಾಭಾವಿಕವಾದರೂ ಅದೊಂದು ದೌರ್ಬಲ್ಯವಾಗಿದೆ. ಅತ್ಯುನ್ನತ ಧ್ಯೇಯಕ್ಕಾಗಿ ಪ್ರಯತ್ನಿಸುವವರು ಈ ದೌರ್ಬಲ್ಯದಿಂದ ಮುಕ್ತರಾಗಬೇಕಾಗಿದೆ. ಅಂದರೆ ಸತ್ಯ ಮತ್ತು ಪ್ರಚಾರವನ್ನು ತಡೆಯುವವರ ಕಾರ್ಯ ವಿಧಾನವನ್ನು ಪ್ರಶಂಸಿಸಬೇಕು ಅಥವಾ ಖಂಡಿಸಬಾರದೆಂದು ನನ್ನ ಮಾತಿನ ಉದ್ದೇಶವಲ್ಲ. ಅವರ ತಪ್ಪುಗಳನ್ನು ತಪ್ಪುಗಳೆಂದು ಹೇಳಲು ನಾನು ಹಿಂಜರಿಯುವುದಿಲ್ಲ. ನೀವೂ ಹಿಂಜರಿಯಬೇಕಾಗಿಲ್ಲ. ಸ್ಥಿತಿಗತಿಗಳನ್ನು ಗ್ರಹಿಸಲು ಅಗತ್ಯವಿದ್ದರೆ ಘಟನೆಯನ್ನು ಯಥಾವತ್ತಾಗಿ ವಿವರಿಸುವುದರಿಂದಲೂ ನಾನು ನಿಮ್ಮನ್ನು ತಡೆಯಬಯಸುವುದಿಲ್ಲ. ಯಾವುದೇ ಪಕ್ಷದ ಕಾರ್ಯ ವಿಧಾನವನ್ನು ವಾಸ್ತವಿಕವಾಗಿ ವಿಮರ್ಶಿಸಬೇಕಾದ ಪರಿಸ್ಥಿತಿಯಲ್ಲಿ ಮೌನ ವಹಿಸಬೇಕೆಂದೂ ನಾನು ಯಾರನ್ನೂ ಉಪದೇಶಿಸುವುದಿಲ್ಲ. ಆದರೆ ನನ್ನ ಉದ್ದೇಶವೇನೆಂದರೆ ಇಂತಹ ವಿರೋಧಗಳ ಕಾರಣ ನಿಮ್ಮ ಸ್ವಭಾವವು ಪ್ರಕ್ಷುಬ್ಧಗೊಂಡು ನಾಲಗೆಯಲ್ಲಿ ದ್ವೇಷ ಮತ್ತು ಕಠೋರತೆ ಪ್ರತ್ಯಕ್ಷವಾಗುವುದನ್ನು ತಡೆಯುವುದಷ್ಟೇ ಆಗಿದೆ. ಹಾಗಿಲ್ಲದಿದ್ದರೆ ಪ್ರತ್ಯುತ್ತರವಾಗಿ ಅತ್ತ ಕಡೆಯಿಂದ ಪರಿಸ್ಥಿತಿ ಉಲ್ಬಣಿಸಿ ಕಟ್ಟಕಡೆಗೆ ಅದು ಅನೇಕ ದುರಂತಗಳಿಗೆ ಹೇತುವಾಗಬಹುದು. ಅದಲ್ಲದೇ ನಮ್ಮ ಬಾಂಧವರು ಇನ್ನೊಂದು ವಿಷಯವನ್ನು ಗಮನಿಸಬೇಕು. ಅದೇನೆಂದರೆ ನಮ್ಮ ಈ ಸಂಘಟನೆಯಲ್ಲಿ ಸೇರಿರುವವರು ವಿವಿಧ ವರ್ಗ ಮತ್ತು ಪಕ್ಷಗಳಿಂದ ಬಂದವರೇ ಆಗಿದ್ದಾರೆ. ತಮ್ಮ ಹಳೆಯ ಪಕ್ಷ ಮತ್ತು ವ್ಯಕ್ತಿಗಳೊಂದಿಗಿನ ನಂಬಿಕೆ ಮತ್ತು ಹಿತಾಸಕ್ತಿಗಳಿಂದ ಅವರು ಇನ್ನೂ ಸಂಪೂರ್ಣ ಮುಕ್ತರಾಗಿಲ್ಲ. ಇಂತಹ ವಾತಾವರಣದಲ್ಲಿ

ಒಂದು ವಿಭಾಗದವರು ಇನ್ನೊಂದು ವಿಭಾಗದವರನ್ನು ಆರೋಪಿಸಲಾರಂಭಿಸಿದರೆ ಆ ವಿಭಾಗದವರಿಂದ ಅದಕ್ಕೆ ಪ್ರಬಲ ಪ್ರತಿಕ್ರಿಯೆ ವ್ಯಕ್ತವಾಗುವುದು. ಅಲ್ಲದೆ ಅವರಿಂದಲೇ ಒಂದು ಜಮಾಅತನ್ನು ಸೇರಿದವರ ಮನಸ್ಸಿನಲ್ಲಿಯೂ ದ್ವೇಷ ಪ್ರತ್ಯಕ್ಷವಾಗಬಹುದು. ಇದಕ್ಕೆ ಪ್ರವಾದಿವರ್ಯರ(ಸ) ಕಾಲದಲ್ಲಿ ನಡೆದ ಘಟನೆಗಳೇ ನಿಮ್ಮ ಮುಂದೆ ಉದಾಹರಣೆಗಳಾಗಿವೆ. ಇಸ್ಲಾಮ್ ಸ್ವೀಕರಿಸಿದ ಬಳಿಕವೂ ಹಲವು ಕಾಲ ಅನ್ಸಾರಿಗಳಲ್ಲಿ ಔಸ್ ಮತ್ತು ಖಝ್ರಜ್ ಗೋತ್ರದಲ್ಲಿದ್ದ ಹಳೆಯ ದ್ವೇಷದ ಚಿಹ್ನೆಗಳು ಉಳಿದಿದ್ದುವು. ಮುಸ್ಲಿಮರಲ್ಲಿ ಒಡಕು ಹುಟ್ಟಿಸಲಿಕ್ಕಾಗಿ ಯಹೂದಿಯರು ಕೆಲವೊಮ್ಮೆ ಈ ಹಳೆಯ ಶತ್ರುತ್ವದ ಸ್ಮರಣೆಯನ್ನು ಪ್ರಚೋದಿಸುತ್ತಿದ್ದರು. ಈ ಉದಾಹರಣೆಗಳಿಂದ ನಾವು ಪಾಠ ಕಲಿಯಬೇಕು. ಪಕ್ಷೀಯ ಪಕ್ಷಪಾತಗಳು ಜಮಾಅತ್‌ನ ಒಳಗಿಂದಲೇ ಸ್ಫೋಟಗೊಂಡು ನಾಶನಷ್ಟಗಳಿಗೆ ಕಾರಣವಾಗದಿರಲಿಕ್ಕಾಗಿ ವಿಮರ್ಶೆ ಮತ್ತು ಆರೋಪಗಳ ಬಗ್ಗೆ ಅತ್ಯಂತ ಜಾಗ್ರತೆ ವಹಿಸಬೇಕು."

ಇನ್ನು ಕೆಲವು ವಿಭಾಗ ಮತ್ತು ವ್ಯಕ್ತಿಗಳೊಂದಿಗಿನ ವಿಶ್ವಾಸದಲ್ಲಿ ಸಿಲುಕಿರುವ ಕಾರಣ ವಿಮರ್ಶೆಗಳ ತೀಕ್ಷ್ಣತೆಯ ಕುರಿತು ದೂರುತ್ತಿರುವ ಬಾಂಧವರೊಂದಿಗೂ ನನಗೆ ಕೆಲವು ಮಾತುಗಳನ್ನು ಹೇಳಲಿಕ್ಕಿದೆ. ನೀವು ಈ ಜಮಾಅತ್‌ನಲ್ಲಿ ಪ್ರವೇಶಿಸಿದ್ದರೆ ಸತ್ಯ ಸಂಧತೆ ಮತ್ತು ನ್ಯಾಯದ ಗುಣವನ್ನು ನಿಮ್ಮಲ್ಲಿ ಬೆಳೆಸಿರಿ. ಎಲ್ಲಕ್ಕಿಂತ ಹೆಚ್ಚಾಗಿ ಸತ್ಯದಲ್ಲಿ ನಿಷ್ಠೆಯಿರಿಸಿರಿ. ಕೆಲವು ಉನ್ನತ ವ್ಯಕ್ತಿಗಳ ತಪ್ಪುಗಳನ್ನು ವರದಿಗಳಲ್ಲಿ ಎತ್ತಿ ತೋರಿದಾಗ ಕೆಲವರು ನಕ್ಕರೆಂದು ಕೆಲವರು ದೂರಿದ್ದಾರೆ. ನಕ್ಕದ್ದು ಖಂಡಿತಕ್ಕೂ ಸರಿಯಲ್ಲ. ಇತರರು ನಮ್ಮನ್ನು ಎಷ್ಟು ಗೌರವಿಸಬೇಕೆಂದು ನಾವು ಬಯಸುತ್ತೇವೂ ಅಷ್ಟೇ ಗೌರವವನ್ನು ನಾವು ಅನ್ಯರಿಗೂ ತೋರಿಸಬೇಕು. ಆದರೆ, ವಾಸ್ತವದಲ್ಲಿ ಹಾಸ್ಯಾಸ್ಪದ ವಿಷಯಗಳನ್ನೆಸಗುವವರ ಕುರಿತು ನಗದಿರಲು ಲೋಕಕ್ಕೆ ಎಷ್ಟರ ತನಕ ಸಾಧ್ಯವಿದೆಯೆಂದು ನೀವೊಮ್ಮೆ ಆಲೋಚಿಸಿ ನೋಡಿರಿ. ನಾವು ಅವರ ಕುರಿತು ನಗುವುದಿಲ್ಲವಾದರೂ ನಗುವಂತಹ ವಿಷಯವನ್ನು ಎಸಗಿದ ಬಳಿಕ ನಗದೆ ಇರಲು ಸಾಧ್ಯವೇ? ಆತನು ತನ್ನ ಅಭಿಮಾನಕ್ಕೆ ಸ್ವಯಂ ತಂದು ಕೊಂಡಿರುವ ಕಳಂಕವನ್ನು ನೀಗಿಸಲು ಆತನ ಬಗ್ಗೆ ನಿಮಗಿರುವ ನಂಬಿಕೆಗೆ ಖಂಡಿತಾ ಸಾಧ್ಯವಿಲ್ಲ. ಹಾಗೆಯೇ ಕೆಲವು ವ್ಯಕ್ತಿಗಳನ್ನು ಮತ್ತು ಸಂಘಟನೆಗಳನ್ನು ವಿಮರ್ಶಿಸುವಲ್ಲಿ ಕಠಿಣ ನೀತಿಯನ್ನು ಕೈಗೊಳ್ಳಲಾಗುತ್ತಿದೆಯೆಂದೂ ನೀವು ದೂರುತ್ತೀರಿ. ಅದನ್ನು ನಾವು ಮೆಚ್ಚುವುದಿಲ್ಲ. ಆದರೆ ವಾಸ್ತವದಲ್ಲಿ ಆ ವಿಮರ್ಶಿತ ವಿಷಯಗಳು ಅವರಲ್ಲಿ ಅಸ್ತಿತ್ವದಲ್ಲಿರುವವುಗಳಲ್ಲವೇ ಎಂಬುದನ್ನೂ ನೀವು ಆಲೋಚಿಸಬೇಕು. ಅದು ನಿಜವೆಂದಾದರೆ ಈ ಸತ್ಯ ಪ್ರಚಾರ ಮಾರ್ಗಕ್ಕೆ ತಡೆಯೊಡ್ಡಲು ಪ್ರಯತ್ನಿಸುತ್ತಿರುವವರ ಪ್ರಸ್ತುತ ಕಾರ್ಯ ವಿಧಾನವು ತಪ್ಪೆಂದಾದರೆ ನೀವು ಲೋಕವು ಅವರನ್ನು ಗೌರವಿಸುವಂತೆ ಮಾಡಲಿಕ್ಕಾಗಿ ವ್ಯಯಿಸುತ್ತಿರುವ ಶ್ರಮದ ಅರ್ಧಾಂಶವನ್ನಾದರೂ ಅವರ ಕಾರ್ಯನೀತಿಯನ್ನು ಬದಲಾಯಿಸುವ ಪ್ರಯತ್ನಕ್ಕೆ ವಿನಿಯೋಗಿಸಿರಿ. ಒಂದೆಡೆ ಸತ್ಯ, ಇನ್ನೊಂದೆಡೆ ಘನ ವ್ಯಕ್ತಿಗಳಿರುವೆಡೆಯಲ್ಲಿ ನಿಮ್ಮ ಹೃದಯವು ವ್ಯಕ್ತಿಗಳ ಕಡೆಗೆ ಹೆಚ್ಚು ಆಕರ್ಷಕವಾದರೆ ಅದಕ್ಕಿಂತ ದೊಡ್ಡ ವಿಪತ್ತು ಬೇರಿಲ್ಲ. ತನ್ಮೂಲಕ ನಿಮ್ಮ ಸತ್ಯನಿಷ್ಠೆಗೆ ತೀವ್ರ ಹಾನಿ ತಟ್ಟುತ್ತದೆ. ಓರ್ವ ನೈಜ ಮುಸ್ಲಿಮನು ಇತರ ಯಾವ ಪ್ರೇಮವೂ ತನ್ನ ಸತ್ಯ ಪ್ರೇಮವನ್ನು ಸೋಲಿಸದಂತೆ ಹಾಗೂ ಸತ್ಯ ಮತ್ತು ಭಕ್ತಿಯ ಒಲವಿನ ವಿರುದ್ಧವಾಗಿ ತನ್ನ ಹೃದಯದಲ್ಲಿ ಇತರ ಯಾವ ಪ್ರೇಮಗಳೂ

ತಳವೂರದಂತೆ ಸದಾ ಜಾಗ್ರತೆ ವಹಿಸಬೇಕು. ಈ ಧರ್ಮ ಪ್ರಚಾರವನ್ನು ದಮನಿಸುವ ವಿಷಯದಲ್ಲಿ ಯಾವ ವಿರೋಧವೂ ಯಶಸ್ವಿಯಾಗಲಾರದೆಂದು ನಾನು ದೃಢವಾಗಿ ನಂಬಿದ್ದೇನೆ. ಇದಕ್ಕೆ ಹಾನಿಯನ್ನುಂಟುಮಾಡಲು ಪ್ರಯತ್ನಿಸುವವರೇ ನಿಜವಾಗಿಯೂ ನಷ್ಟಕ್ಕೀಡಾಗುವರು. ಆದ್ದರಿಂದ ಯಾವನೇ ದೊಡ್ಡ ವ್ಯಕ್ತಿಯ ವಿರೋಧದಿಂದ ಈ ಆಂದೋಲನವು ನಾಶ ಹೊಂದೀತೆಂಬ ಭೀತಿಯಿಂದ ನಾನು ಈ ಎಲ್ಲಾ ಮಾತುಗಳನ್ನು ಹೇಳುತ್ತಿರುವುದಲ್ಲ. ಬದಲಾಗಿ, ಒಂದು ವಿಭಾಗವು ಸತ್ಯವನ್ನು ವಿರೋಧಿಸುತ್ತಲಿದ್ದರೂ ಅವರೊಂದಿಗಿನ ಗೌರವಾದರಗಳೆಂಬ ವಿಪದಿಂದ ನಿಮ್ಮ ಸತ್ಯ ನಿಷ್ಠೆಯನ್ನು ಕಾಯ್ದುಕೊಳ್ಳಬೇಕೆಂಬ ಬಗ್ಗೆ ನೀವು ಆಲೋಚಿಸಬೇಕು. ಮತ್ತು ಇನ್ನೊಂದೆಡೆ ನೀವು ಗೌರವಾದರದಿಂದ ಪ್ರೀತಿಸುವ ಮಾನ್ಯರನ್ನು 'ಮನ್ನಾವುನ್ ಲಿಲ್ ಖೈರ್" (ಒಳಿತನ್ನುತಡೆಯುವವರು)ನ ದುರಂತ ಫಲದಿಂದ ರಕ್ಷಣೆ ಹೊಂದುವಂತೆ ಉಪದೇಶಿಸಬೇಕೆಂದಷ್ಟೇ ನನ್ನ ಉದ್ದೇಶ.

## 'ವಹ್ಹಾಬಿ' ಎಂಬ ಮೂದಲಿಕೆ

ನಾನು ಈಗ ಸೂಚಿಸಿರುವ ವಿಷಯದ ಒಂದು ಶೋಚನೀಯ ದೃಷ್ಟಾಂತವು ಸ್ವಾರಸ್ಯಕರವಾದ ಒಂದು ಆರೋಪದ ರೂಪದಲ್ಲಿ ನನಗೆ ದೊರೆತಿದೆ. ಕಮ್ಯೂನಿಸ್ಟ್ ಪ್ರಚಾರದೊಂದಿಗೆ ರಶ್ಯನ್ ತುರ್ಕಿಸ್ತಾನದ ವಿದ್ವಾಂಸರು ಸಹಕರಿಸಿದ ಕಾರಣ ಆ ವಿದ್ವಾಂಸರಿಗೂ ಇಸ್ಲಾಮಿಗೂ ಒದಗಿದ ದುಷ್ಪರಿಣಾಮಗಳನ್ನು ಈ ಹಿಂದೆ ನಾನು ವಿವರಿಸಿರುವುದು ನಿಮಗೆ ಜ್ಞಾಪಕವಿರಬಹುದು. ನನ್ನ ಭಾಷಣವನ್ನು ಉದ್ಧರಿಸುತ್ತಾ "ಒಂದೆಡೆ ವಿದ್ವಾಂಸರನ್ನು ತೀಕ್ಷ್ಣವಾಗಿ ಟೀಕಿಸುವುದನ್ನು ನೀವೇ ತಡೆಯುತ್ತೀರಿ ಇನ್ನೊಂದೆಡೆ ಅಂತಹ ಟೀಕೆಗಳನ್ನು ನೀವೇ ಮಾಡುತ್ತೀರಿ" ಎಂಬುದಾಗಿ ಆರೋಪಿಸಿದ್ದಾರೆ. ಇಂತಹ ಕೆಲವು ವಿಷಯಗಳ ಆಧಾರದಲ್ಲಿಯೇ ನಿಮ್ಮಲ್ಲಿ ಕೆಲವರಿಗೆ ಸತ್ಯಕ್ಕಿಂತ ವ್ಯಕ್ತಿಗಳಲ್ಲಿ ಹೆಚ್ಚಿನ ಅಭಿಮಾನವಿದೆಯೆಂದು ನನಗನಿಸುತ್ತದೆ. ರಶ್ಯನ್ ತುರ್ಕಿಸ್ತಾನದ ವಿದ್ವಾಂಸರು ಕಮ್ಯೂನಿಸ್ಟ್‌ಕಾರ್ಯಕರ್ತರೊಂದಿಗೆ ಆರಂಭದಲ್ಲಿ ಕೈಗೊಂಡ ಸಹಮತದ ನೀತಿಯಿಂದಾಗಿ ಅವರು ದಾರುಣ ಕಹಿ ಅನುಭವಗಳನ್ನು ಅನುಭವಿಸಬೇಕಾಯಿತು. 1200 ವರುಷಗಳ ತನಕ ಇಸ್ಲಾಮಿನ ತಾಣವಾಗಿದ್ದ ಆ ಪ್ರದೇಶದಿಂದ ಹೇಗೆ ಅದು ಹೊರ ಹಾಕಲ್ಪಟ್ಟಿತೆಂಬ ಅನುಭವ ಸತ್ಯವನ್ನು ನಾನು ನಿಮಗೆ ವಿವರಿಸಿದ್ದೇನೆ. ಹಾಗೆಯೇ ಕೆಲವು ಗಣ್ಯ ವಿದ್ವಾಂಸರು ಭಾರತದಲ್ಲಿಯೂ ಅದೇ ನೀತಿಯನ್ನು ಹೇಗೆ ಅನುಸರಿಸುತ್ತಿರುವರೆಂದೂ ನಾನು ನಿಮಗೆ ವಿವರಿಸಿದ್ದೇನೆ. ಅವೆರಡನ್ನೂ ನೀವು ನಿರಾಕರಿಸುವುದಿಲ್ಲ. ಅದು ಸಾಧ್ಯವೂ ಅಲ್ಲ. ಆದರೂ ನೀವು ನಿಮ್ಮ ಅವಿವೇಕದ ಕಾರಣ ಇಸ್ಲಾಮನ್ನು ಗಂಡಾಂತರಕ್ಕೆ ಸಿಲುಕಿಸುತ್ತಿರುವ ಆ ಮಂದಿಯನ್ನು ಆರೋಪಿಸುವ ಬದಲಾಗಿ ಆ ಅವಿವೇಕವನ್ನು ಅವರಿಗೆ ಮನವರಿಕೆ ಮಾಡಲು ಪ್ರಯತ್ನಿಸುತ್ತಿರುವ ವ್ಯಕ್ತಿಯನ್ನೇ ದೂರುತ್ತಿದ್ದೀರಿ. ಅಂದರೆ ಇಸ್ಲಾಮಿನ ಮೂಲಕ್ಕೆ ಕೊಡಲಿಯೇಟು ಬೀಳುತ್ತಿರುವ ಬಗ್ಗೆ ನಿಮಗೆ ಚಿಂತೆಯಿಲ್ಲ. ಭಕ್ತ್ಯಾದರಗಳೆಂಬ ನಿಮ್ಮ ಮೂರ್ತಿಗೆ ಹಾನಿಯಾಗುತ್ತಿರುವುದು ನಿಮ್ಮ ಮನ ನೋಯಿಸುತ್ತಿದೆ "ಇನ್ನಾಲಿಲ್ಲಾಹಿ ವ ಇನ್ನಾ ಇಲೈಹಿ ರಾಜಿವೂನ್". ನಿಮ್ಮ ಸ್ಥಿತಿ ಹೀಗಿದ್ದರೆ ನಿಮ್ಮನ್ನು ಈ ಜಮಾಅತ್‌ಗೆ ಸೇರುವಂತೆ ಹೇಳಿದವರಾರು? ಈ ಜಮಾಅತ್ ಎಲ್ಲಾ ವಿಧದ ಭಕ್ತಿ ವಿಶ್ವಾಸವನ್ನು ಕೊನೆಗೊಳಿಸಿ ಕೇವಲ ಏಕ ಆರಾಧ್ಯನ,

ಆತನ ಪ್ರವಾದಿಯ ಮತ್ತು ಧರ್ಮದ ಭಕ್ತಿ ವಿಶ್ವಾಸವನ್ನು ಉಳಿಸಲು ಸಿದ್ಧಾಂತದ ಆಧಾರದಲ್ಲಿ ಸ್ಥಾಪಿಸಲ್ಪಟ್ಟಿದೆ. ಆ ಬಳಿಕವೂ ಇತರ ಯಾವುದಾದರೂ ಭಕ್ತಿ ವಿಶ್ವಾಸ ಉಳಿದು ಕೊಂಡಿದ್ದರೆ ಅದು ಎಂದಿಗೂ ಆ ಮೂಲ ವಿಶ್ವಾಸಕ್ಕೆ ವಿರುದ್ಧವಾಗಿರದೆ ಸಂಪೂರ್ಣ ವಿಧೇಯವಾಗಿರಬೇಕು. ಆದರೆ ನೀವು ಇನ್ನೂ ಮೂಲ ಭಕ್ತಿ ವಿಶ್ವಾಸಕ್ಕೆ ವಿರುದ್ಧವಾದ ಭಕ್ತಿ ವಿಶ್ವಾಸಗಳಲ್ಲಿ ಸಿಲುಕಿದ್ದರೆ ನಿಮ್ಮ ಸ್ಥಳವು ಜಮಾಅತ್‌ನ ಒಳಗಲ್ಲ, ಹೊರಗಿದೆ.

ವಯಸ್ಕರ ಶಿಕ್ಷಣದ ಅಗತ್ಯ ಮತ್ತು ಅದರ ಪ್ರಯೋಜನಗಳನ್ನು ನಾನು ಈ ಹಿಂದೆ ಸವಿವರವಾಗಿ ಪ್ರಸ್ತಾಪಿಸಿದ್ದೇನೆ. ನಿಮ್ಮಲ್ಲಿರುವ ಪ್ರತಿಯೊಬ್ಬ ವಿದ್ವಾಂಸನೂ ತಾನು ತನ್ನ ಸಮಯದ ಹಾಗೂ ಬುದ್ಧಿ ಸಾಮರ್ಥ್ಯ ಮತ್ತು ದೈಹಿಕ ಬಲದ ಎಷ್ಟಂಶವನ್ನು ಸ್ವರಕ್ಷಣೆಗಾಗಿ ವಿನಿಯೋಗಿಸಿದ್ದೇನೆ- ಎಷ್ಟಂಶ ಅಲ್ಲಾಹನ ಕೆಲಸಕ್ಕಾಗಿ ವಿನಿಯೋಗಿಸಿದ್ದೇನೆಂದು ಆತ್ಮಾವಲೋಕನ ನಡೆಸಬೇಕು. ಹಾಗೆ ಅವಲೋಕಿಸಿದರೆ ಕೇವಲ ನಗಣ್ಯ ಭಾಗ ಮಾತ್ರ ಅಲ್ಲಾಹನ ಕೆಲಸಕ್ಕೆ ಸಮರ್ಪಿತವಾಗಿದೆಯೆಂದು ನಿಮಗೆ ತಕ್ಷಣವೇ ತಿಳಿಯುವುದು. ಸರ್ವಸ್ವವೂ ಅಲ್ಲಾಹನದೆಂಬುದು ನಿಮ್ಮ ವಿಶ್ವಾಸವಾಗಿದೆ. ಹೀಗಿರುತ್ತಾ ಅಲ್ಲಾಹನ ಹಕ್ಕನ್ನು ಪೂರೈಸಬೇಕೆಂಬ ಪ್ರಜ್ಞೆಯು ನಿಮ್ಮಲ್ಲಿ ಮೂಡಿ ನೀವು ಅದಕ್ಕಾಗಿ ಪ್ರೇರಿತವಾದರೆ ಆ ಹಕ್ಕು ನಿರ್ವಹಣೆಗಾಗಿ ನೀವು ಕನಿಷ್ಟ ಅಸಡ್ಡೆ, ಅಜ್ಞಾನ ಮತ್ತು ನೈತಿಕ ಅಧಃಪತನಕ್ಕೆ ಸಿಲುಕಿರುವ ಅಲ್ಲಾಹನ ದಾಸರ ಸುಧಾರಣೆಗಾಗಿ ನಿಮ್ಮ ಸಮಯದ ಸ್ವಲ್ಪಂಶವನ್ನಾದರೂ ನಿರಂತರ ವ್ಯಯಿಸುತ್ತಿರಬೇಕು.

ಜನ ಸಾಮಾನ್ಯರಿಗೆ ನಮ್ಮ ಈ ಆಂದೋಲನವನ್ನು ಅರ್ಥ ಮಾಡಿಕೊಳ್ಳಲು ಕಷ್ಟವಿದೆಯೆಂದು ಕೆಲವರಿಗೆ ಅಭಿಪ್ರಾಯವಿದೆ. ಆದರೆ ಈ ಅಭಿಪ್ರಾಯ ತಪ್ಪು. ಈ ಧರ್ಮವನ್ನು ಆರಂಭದಲ್ಲಿ ಅರೇಬಿಯಾದ ಮರುಭೂಮಿ ನಿವಾಸಿಗಳಾದ ಗ್ರಾಮೀಣರು ಮತ್ತು ಸಾಹಿತ್ಯ ಜ್ಞಾನವಿಲ್ಲದ ನಿರಕ್ಷರ ಕುಕ್ಷಿಗಳು ಗ್ರಹಿಸಿದರೆಂದು ನಿಮಗೆ ಚೆನ್ನಾಗಿ ತಿಳಿದಿದೆಯಲ್ಲವೇ? ಅದಲ್ಲದೇ ಅದರ ಆಳಕ್ಕೆ ತಲುಪಿ ಧರ್ಮದ ನೀತಿ ಸಿದ್ಧಾಂತಗಳನ್ನು ಮೈಗೂಡಿಸಿಕೊಂಡವರು ಲೋಕದ ಉನ್ನತ ಮಾರ್ಗದರ್ಶಕರಾದರು. ಹೀಗಿರುತ್ತಾ ಭಾರತದ ಇಂದಿನ ರೈತರಿಗೂ ಜನ ಸಾಮಾನ್ಯರಿಗೂ ಈ ಆಂದೋಲನವನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಿಲ್ಲವೆಂಬ ಸಂದೇಹ ಹೇಗೆ ಬಂತು? ನನ್ನ ಅನುಭವವು ನಿಮ್ಮ ಅಭಿಪ್ರಾಯಕ್ಕೆ ತದ್ವಿರುದ್ಧವಾಗಿದೆ.ವಿದ್ವಾಂತರ ಮನದಲ್ಲಿ ಖಂಡಿತವಾಗಿಯೂ ಅನೇಕ ವಕ್ರತೆಗಳು ತುಂಬಿರುತ್ತದೆ. ಅದರಿಂದಾಗಿ ಈ ಧರ್ಮದ ನೈಜ ವಿಷಯಗಳನ್ನು ಅದರೊಳಗೆ ಹರಿಸಲು ತುಂಬಾ ಕಷ್ಟವಿದೆ. ಆದ್ದರಿಂದಲೇ ಅಂಥವರಿಗೆ ಮನವರಿಕೆ ಮಾಡಿಕೊಡಲು ಸುದೀರ್ಘವಾದ ವೈಚಾರಿಕ ಚರ್ಚೆ ನಡೆಸಬೇಕಾಗುತ್ತದೆ. ಆದರೆ ಜನ ಸಾಮಾನ್ಯರ ಸ್ಥಿತಿ ಹಾಗಲ್ಲ. ಅವರ ಮನ ಮಸ್ತಿಷ್ಕಗಳು ಸಾಮಾನ್ಯವಾಗಿ ಅವುಗಳ ನೈಸರ್ಗಿಕ ಸ್ಥಿತಿಯಲ್ಲಿಯೇ ಇರುತ್ತದೆ. ಮನವರಿಕೆ ಮಾಡಿಕೊಡುವವರು ಜನಸಾಮಾನ್ಯರು ಗ್ರಹಿಸುವ ರೀತಿಯ ವಿವರಣಾ ಶೈಲಿಯನ್ನು ಬಳಸಿ ದರೆ ಮತ್ತು ಧರ್ಮದ ವಿಷಯಗಳಲ್ಲಿ ನಮಗೆ ಸಂಪೂರ್ಣ ಮತ್ತು ನೈಜ ವಿಶ್ವಾಸವಿದೆಯೆಂಬುದನ್ನು ತನ್ನ ಜೀವನದಲ್ಲಿಯೂ ಸಾಧಿಸಿ ತೋರಿಸಿದರೆ ಈ ಧರ್ಮವನ್ನು ನಿರಾಯಾಸವಾಗಿ ಅವರು ತಿಳಿದು ಕೊಳ್ಳುವರು. ಜನ ಸಾಮಾನ್ಯರಿಗೆ ವಿಷಯವನ್ನು ತಿಳಿಯಲು ಕಷ್ಟವಾಗುವುದಿದ್ದರೆ, ಅದಕ್ಕೆ ಎರಡು ಕಾರಣಗಳಿವೆ. 1) ಅರಬೀ ಮದ್ರಸಾ ವಿದ್ಯಾರ್ಥಿಗಳು ಅಥವಾ ಕಾಲೇಜು ಯುವಕರೆಂಬ ತರದಲ್ಲಿ ಅವರೊಡನೆ

ಸಂಭಾಷಣೆ ನಡೆಸುವುದು. 2) ನಿಮ್ಮ ಮಾತು ಮತ್ತು ಕೃತಿಗಳಲ್ಲಿರುವ ವೈರುಧ್ಯ. ಈ ದೌರ್ಬಲ್ಯದಿಂದ ಪ್ರಚಾರವು ಮುಕ್ತವಾದರೆ ಜನಸಾಮಾನ್ಯರು ಸುಲಭದಲ್ಲಿ ಈ ಧರ್ಮವನ್ನು ತಿಳಿದುಕೊಳ್ಳುವುದನ್ನು ನೀವು ಕಾಣುವಿರಿ.

"ಧರ್ಮ ಪ್ರಚಾರಕ್ಕಾಗಿ ಜನ ಸಾಮಾನ್ಯರಲ್ಲಿ ಕೆಲಸ ಮಾಡುವಾಗ, ಸ್ವಾರ್ಥಿ ಮತ್ತು ಕಿಡಿಗೇಡಿಯಾದ ಓರ್ವ ವ್ಯಕ್ತಿಯು ಮುಂದೆ ಬಂದು ಇವರು 'ವಹ್ಹಾಬಿ'ಗಳೆಂದು ಹೇಳಿದರೆ, ಆ ಬಳಿಕ ಯಾರೂ ನಮ್ಮ ಮಾತನ್ನು ಆಲಿಸಲು ತಯಾರಿರಲಾರರೆಂದು ಕೆಲವರು ದೂರಿದ್ದಾರೆ. ಇದು ಪ್ರಚಾರದ ಹಾದಿಯಲ್ಲಿ ಮಹಾ ತಡೆಯೆಂದು ಪ್ರಾಯಶಃ ಹಾಗೆ ದೂರುವವರು ಭಾವಿಸಿರಬಹುದು. ವಾಸ್ತವದಲ್ಲಿ ಈ 'ವಹ್ಹಾಬಿ' ಪದದ ಇತಿಹಾಸ ಹಾಗೂ ಆ ಪದದಿಂದ ಹುಟ್ಟಿದ ಕುಟಿಲ ಪ್ರಚಾರದ ಬಗ್ಗೆ ಸರಿಯಾಗಿ ತಿಳಿದು ಕೊಂಡರೆ ಅದರ ಪ್ರತಿ ಔಷಧಿಯನ್ನು ಸುಲಭದಲ್ಲಿ ಕಂಡು ಹಿಡಿಯಬಹುದಾಗಿದೆ. 19ನೇ ಶತಮಾನದಲ್ಲಿ ಕೆಲವು ರಾಜಕೀಯ ಕಾರಣಗಳಿಗಾಗಿ ಈಜಿಪ್ಟ್ ಮತ್ತು ಟರ್ಕಿಯ ಮುಸ್ಲಿಮರು ಹಾಗೂ ಭಾರತದ ಮುಸ್ಲಿಮೇತರರು ಭಾರತದಲ್ಲಿಯೂ ಅರೇಬಿಯಾದಲ್ಲಿಯೂ ತಲೆಯೆತ್ತಿದ ಸುಧಾರಣಾ ಚಳವಳಿಗಳ ದಮನಕ್ಕಾಗಿ ಈ ಪದ ಪ್ರಯೋಗ ಆರಂಭಗೊಂಡಿತು. ತಾವು ಸೋಲಿಸಬಯಸುವ ವಿಭಾಗಕ್ಕೆ ಒಂದು ಹೆಸರಿಡುವುದೇ ಅತ್ಯಂತ ಸಮರ್ಥ ಪ್ರಚಾರ ತಂತ್ರ. ತರುವಾಯ, ಆ ವಿಭಾಗದ ಮೇಲೆ ಹೊರಿಸಬಯಸುವ ಆರೋಪ, ಕಳಂಕಗಳನ್ನೂ ಆ ಹೆಸರಿಗೆ ಸೇರಿಸಲು ಪ್ರಯತ್ನಿಸುವುದು. ಆ ಬಳಿಕ ಆ ಹೆಸರನ್ನು ಆಲಿಸಿದ ಮಾತ್ರಕ್ಕೆ ಅದರಲ್ಲಿ ಅಡಕವಾಗಿರುವ ಎಲ್ಲಾ ಕೆಡುಕು, ದುರ್ಗುಣ, ದುರಾಚಾರಗಳ ಅಸಹ್ಯ ಚಿತ್ರವು ಶ್ರೋತೃಗಳ ಕಣ್ಮುಂದೆ ಪ್ರತ್ಯಕ್ಷವಾಗುವಂತೆ ಮಾಡಲಿಕ್ಕಾಗಿ ಆ ಹೆಸರನ್ನು ಅತಿಯಾಗಿ ಪ್ರಚಾರ ಮಾಡುವುದು. ಈ ರೀತಿಯಿಂದ ಸುದೀರ್ಘ ಭಾಷಣ-ಹೇಳಿಕೆ-ಲೇಖನಗಳ ಅಗತ್ಯವಿಲ್ಲದೇ ಕೇವಲ ಆ ಹೆಸರು ಹೇಳುವುದರ ಮೂಲಕ ಕೆಲಸ ಸಾಧಿತವಾಗುವುದು. ಇಂದು ವಿವಿಧ ಪಕ್ಷಗಳು ಇಂತಹ ಪ್ರಚಾರ ತಂತ್ರವನ್ನು ಬಳಸುತ್ತಿವೆ. 'ಮುಲ್ಲಾ', ಯಥಾ ಸ್ಥಿತಿವಾದಿಗಳು, ಸಂಪ್ರದಾಯ ಪ್ರಿಯರು, ಬೂರ್ಶ್ವಾ, ಪ್ರತಿಗಾಮಿ ಇತ್ಯಾದಿ ಶಬ್ದಗಳೆಲ್ಲವೂ ಪ್ರಸ್ತುತ ಉದ್ದೇಶಕ್ಕಾಗಿ ಸೃಷ್ಟಿಸಿ ಯಶಸ್ವಿಯಾಗಿ ಪ್ರಯೋಗಿಸಲ್ಪಡುತ್ತಿದೆ. 'ವಹ್ಹಾಬಿ' ಎಂಬ ಪದ ಪ್ರಯೋಗವೂ ಇದೇ ರೀತಿಯ ಅಸ್ತ್ರ. ಆರಂಭದಲ್ಲಿ ಕೆಲವು ಸ್ವಾರ್ಥ ಪೂಜಕರಾದ ಸರಕಾರಗಳು ರಾಜಕೀಯ ಉದ್ದೇಶಗಳಿಗಾಗಿ ಅದನ್ನು ಸೃಷ್ಟಿಸಿದವು. ತರುವಾಯ ಜನ ಸಾಮಾನ್ಯರಲ್ಲಿ ಧಾರ್ಮಿಕ ಮತ್ತು ನೈತಿಕ ಜಾಗೃತಿಯುಂಟಾಗುವುದರಿಂದ ತಮ್ಮ ಲೌಕಿಕ ಹಿತಾಸಕ್ತಿಗಳಿಗೆ ಧಕ್ಕೆಯಾಗಬಹುದೆಂದು ಭಾವಿಸಿದ ಕೆಲವು ಮುಸ್ಲಿಮ್ ವಿಭಾಗಗಳೂ ಆ ಪದವನ್ನು ದುರುಪಯೋಗಿಸಿದವು. ಈಗ ನಾವು ಊರೆಲ್ಲಾ ಸುತ್ತಾಡಿ ನಾವು 'ವಹ್ಹಾಬಿ'ಗಳಲ್ಲವೆಂದು ಭಾಷಣ ಬಿಗಿಯುವುದು ಅದಕ್ಕೆ ಮದ್ದಲ್ಲ. ಈ ಅಸ್ತ್ರಕ್ಕೆ ಶರಣಾಗಿ ಹಿಂಜರಿಯುವುದೂ ಅಲ್ಲ. ಬದಲಾಗಿ ಒಬ್ಬ ನೈಜ ಮುಸ್ಲಿಮನಾಗಿ ಜೀವಿಸಿ ತೋರಿಸಬೇಕು. ದೇವನ ದಾಸರನ್ನು ನೈಜ ಏಕ ದೇವ ಸಿದ್ಧಾಂತ, ಕುರ್‌ಆನ್ ಮತ್ತು ಸುನ್ನತ್‌ಗಳನ್ನು ಹಿಂಬಾಲಿಸುವಂತೆ ಆಹ್ವಾನಿಸುತ್ತಿರಬೇಕು. 'ವಹ್ಹಾಬಿ'ಗಳೆಂದು ಕರೆಯುವವರು ಹಾಗೆಯೇ ಜಪಿಸುತ್ತಿರಲಿ. ಇದುವೇ ಅದಕ್ಕೆ ಸೂಕ್ತ ಮದ್ದು. ಆದ್ದರಿಂದ ನಿಮ್ಮ ವರ್ತನೆ ಮತ್ತು ವಿರೋಧಿಗಳ 'ವಹ್ಹಾಬಿ' ಪ್ರಚಾರವು ಒಟ್ಟಾಗಿ ಕ್ರಮೇಣ ಆ ಪದಕ್ಕೆ ಒಂದು ಹೊಸ ಅರ್ಥ ಬರುವುದು, ಅಂದರೆ

'ವಹ್ಹಾಬಿ' ಎಂಬುದರ ತಾತ್ಪರ್ಯವು ಯಥಾವತ್ತಾಗಿ ಓರ್ವ ನೈಜ ಮುಸ್ಲಿಮನಂತೆ ಜೀವಿಸುತ್ತಾ ಯಾವುದೇ ರೀತಿಯ ಕಲಹ, ತರ್ಕ-ಕುತರ್ಕಗಳಲ್ಲಿ ಸೇರದೆ, ತೌಹೀದ್, ಕುರ್‌ಆನ್ ಮತ್ತು ಸುನ್ನತ್‌ನೆಡೆಗೆ ಆಹ್ವಾನಿಸುವ ವಿಭಾಗವೆಂದು ಜನರು ಸ್ವಯಂ ಅರ್ಥ ಮಾಡಿಕೊಳ್ಳುವರು. ತರುವಾಯ ನಿಮ್ಮಿಂದ ದೊರೆಯುವ ಮೌಲ್ಯಗಳನ್ನು ಯಥಾರ್ಥವಾಗಿ ಬಯಸುವ ಯಾವನೇ ವ್ಯಕ್ತಿಯು ನಿಮ್ಮ ಹತ್ತಿರ ಬರುವುದಕ್ಕೆ 'ವಹ್ಹಾಬಿ'ಯೆಂಬ ಪದವು ತಡೆಯಾಗದು. ಬದಲಾಗಿ ಅವರು ನಿಮ್ಮೊಡನೆ ಹೆಚ್ಚು ಆಕರ್ಷಿತರಾಗುವರು. ಅವರು ಭೂಮಿಯಲ್ಲಿ 'ವಹ್ಹಾಬಿ'ಗಳನ್ನೇ ಆರಿಸಿಕೊಳ್ಳುವುದನ್ನು ನೀವು ಕಾಣುವಿರಿ. ಇನ್ನು ಇಸ್ಲಾಮನ್ನು ಅದರ ನೈಜ ರೂಪದಲ್ಲಿ ಮೆಚ್ಚದವರಾಗಿದ್ದರೆ ಅವರು ಖಂಡಿತವಾಗಿಯೂ ನಿಮ್ಮಿಂದ ದೂರ ಸರಿಯುವರು. ಆದರೆ ಸತ್ಯದಿಂದ ಮುಖ ತಿರುಗಿಸುವಂತಹ ಮಂದಿ ನಿಮ್ಮಿಂದ ದೂರವಾಗುವುದಕ್ಕೆ ನೀವು ಚಿಂತಿಸಬೇಕಾಗಿಲ್ಲ."

## ಇಮಾಮ್ ಮತ್ತು ಮುದರ್ರಿಸರ ತರಬೇತಿ?

ತರುವಾಯ ಉಪಯುಕ್ತವಾದ ಹಲವು ಸಲಹೆಗಳನ್ನು ಮಂಡಿಸಲಾಯಿತು. ಅವುಗಳ ಕುರಿತು ಅಮೀರ್ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು. ಸಲಹೆಗಳನ್ನು ಮಂಡಿಸಿದವರಿಗೆ ತಮ್ಮ ನಿಲುಮೆಯನ್ನು ಸ್ಪಷ್ಟಗೊಳಿಸಲು ಸಮಯಾವಕಾಶ ನೀಡಿದ್ದರೂ ಅಮೀರರು ಅಭಿಪ್ರಾಯ ನೀಡಿದ ಬಳಿಕ ಯಾರಿಗೂ ಆ ಅವಕಾಶವನ್ನು ಉಪಯೋಗಿಸುವ ಅಗತ್ಯ ಉಳಿಯಲಿಲ್ಲ. ವಾಚಕರಿಗೆ ಪ್ರಯೋಜನವಾಗಬಹುದೆಂಬ ಉದ್ದೇಶದಿಂದ ಆ ಪೈಕಿ ಕೆಲವು ಸಲಹೆಗಳನ್ನು ಅಮೀರ್‌ರ ಅಭಿಪ್ರಾಯ ಸಹಿತ ಇಲ್ಲಿ ಉದ್ಧರಿಸುತ್ತೇವೆ-

ಮಸೀದಿಗಳ ಇಮಾಮರನ್ನೂ, ಪ್ರಾಥಮಿಕ ಮದ್ರಸಗಳ ಅಧ್ಯಾಪಕರನ್ನೂ, ಹಳ್ಳಿಗಳಲ್ಲಿ ಸೇವೆ ಸಲ್ಲಿಸುವ ಧರ್ಮ ಪ್ರಚಾರಕರನ್ನೂ ತರಬೇತುಗೊಳಿಸುವ ಕಾರ್ಯ ಆರಂಭಿಸಬೇಕೆಂದು ಒಂದು ಸಲಹೆಯಲ್ಲಿ ವಿನಂತಿಸಲಾಗಿತ್ತು. ಆ ಕುರಿತು ಅಮೀರ್ ಹೀಗೆಂದರು:

ಈ ಸಲಹೆಯಲ್ಲಿ ವ್ಯಕ್ತಪಡಿಸಲಾಗಿರುವ ನೈಜ ಬೇಡಿಕೆಯು ನಮ್ಮ ಶಿಕ್ಷಣ ಪದ್ಧತಿಯು ಜಾರಿಕೊಂಡಾಗ ಈಡೇರುವುದೆಂದು ನಿರೀಕ್ಷಿಸುತ್ತೇವೆ. ಆದರೆ ಸಾಮಾನ್ಯವಾಗಿ ಮಸೀದಿ ಇಮಾಮರ ಟ್ರೈನಿಂಗ್, ಪ್ರಚಾರಕರ ತರಬೇತಿ, ಮುದರ್ರಿಸರ ತಯಾರಿ ಮುಂತಾದ ಹೆಸರುಗಳಿಂದ ನಡೆಯುತ್ತಿರುವ ಗದ್ದಲಗಳ ಪಳೆಯುಳಿಕೆಯು ಈ ಸಲಹೆಯಲ್ಲಿ ಅಡಕವಾಗಿದೆಯೇ ಎಂಬ ಸಂದೇಹ ಮೂಡುತ್ತಿದೆ. ಪರಿಸ್ಥಿತಿಯ ಸುಧಾರಣೆಯ ಅಗತ್ಯವನ್ನು ಚೆನ್ನಾಗಿ ಮನಗಂಡಿರುವ ತುಂಬಾ ಮಂದಿ ನಮ್ಮಲ್ಲಿದ್ದಾರೆ. ಆದರೆ ನೈಜ ಕೆಡುಕನ್ನು ಗುರುತಿಸುವ ವಿವೇಕವಾಗಲೀ ಅವುಗಳನ್ನು ನಿವಾರಿಸುವ ಸೂಕ್ತ ಮಾರ್ಗದ ಪರಿಜ್ಞಾನವಾಗಲೀ ಅವರಿಗಿಲ್ಲ. ಆದ್ದರಿಂದ ಕೆಲವು ಬಾಹ್ಯ ಕೊರತೆಗಳನ್ನೇ ಅವರು ನೈಜ ರೋಗವೆಂದು ಭ್ರಮಿಸುತ್ತಾರೆ. ತರುವಾಯ ಅವುಗಳ ನಿವಾರಣೆಗಾಗಿ ತೇಪೆ ಕ್ರಮಗಳನ್ನು ಸೂಚಿಸಿ ನಾಡಿನಾದ್ಯಂತ ಅದರ ಡಂಗುರ ಸಾರುತ್ತಾರೆ. ಕೆಲವು ಸಮಯ ಈ ಡಂಗುರಗಳು ವಾತಾವರಣದಲ್ಲಿ ಪ್ರತಿಧ್ವನಿಸುತ್ತಿರುವುದರಿಂದ ಮನದಲ್ಲಿ ಅವು ತಳವೂರಲಾರಂಭಿಸುತ್ತವೆ. ತರುವಾಯ ಸುಧಾರಣೆಯ ಕುರಿತು ಆಲೋಚಿಸಿದಾಗಲೆಲ್ಲಾ, "ಮಸೀದಿ ಇಮಾಮರ ಟ್ರೈನಿಂಗ್, ಪ್ರಚಾರಕರ ತರಬೇತಿ" ಮುಂತಾದವುಗಳು ನಾಲಗೆಯಿಂದ

ಹರಿಯುತ್ತವೆ. ಈ ಪ್ರಚಾರ ತಂತ್ರವು ನಿಮ್ಮ ಮೇಲೆಯೂ ಪ್ರಭಾವ ಬೀರಿದೆಯೇ ಎಂಬ ಸಂದೇಹ ನನ್ನನ್ನು ಕಾಡುತ್ತಿದೆ. ಮಸೀದಿ ಇಮಾಮರನ್ನು ತರಬೇತುಗೊಳಿಸುವುದೇಕೆಂದು ನೀವೊಮ್ಮೆ ಆಲೋಚಿಸಿ ನೋಡಿರಿ. ಅನರ್ಹ ಇಮಾಮರು ಮಸೀದಿಗಳನ್ನು ವಶಪಡಿಸಿಕೊಂಡಿರುವುದಕ್ಕೆ ಯೋಗ್ಯ ಇಮಾಮರ ಅಭಾವ ಕಾರಣವೆಂದು ನೀವು ಭಾವಿಸುತ್ತೀರಾ? ಉತ್ತಮ ಇಮಾಮರನ್ನು ಒದಗಿಸುವ ವ್ಯವಸ್ಥೆ ಮಾಡಿದರೆ, ನಾಡಿನ ಮಸೀದಿಗಳೆಲ್ಲವೂ ಅವರನ್ನು ಸ್ವಾಗತಿಸಬಹುದೆಂದೂ ರೆಪ್ಪೆ ಬಡಿಯುವುದರೊಳಗೆ ಎಲ್ಲಾ ಮಸೀದಿಗಳೂ ಮುಸ್ಲಿಮ್ ಸಮಾಜದ ಸಕ್ರಿಯ ಕೇಂದ್ರ ಬಿಂದುವಾಗಿ ಪರಿಣಮಿಸಬಹುದೆಂದೂ ನೀವು ನಿರೀಕ್ಷಿಸುತ್ತೀರಾ? ವಾಸ್ತವಿಕತೆ ಹೀಗಿರುತ್ತಿದ್ದರೆ ಯಾವ ಕಷ್ಟವೂ ಇರಲಿಲ್ಲ. ಅನರ್ಹ ಇಮಾಮರು ತಾವಾಗಿಯೇ ಮಸೀದಿಗಳಿಗೆ ಬರಲಿಲ್ಲ. ಮುಸ್ಲಿಮರೇ ಅವರನ್ನು ಕರೆ ತಂದಿದ್ದಾರೆ. ನಾಡಿನಲ್ಲಿ ನಮ್ಮ ನೈಜ ಇಮಾಮ (ನಾಯಕ) ರಾಗಿದ್ದು, ಮಸೀದಿಗಳನ್ನು ಇಸ್ಲಾಮೀ ಜೀವನದ ಕೇಂದ್ರಗೊಳಿಸುವಂತಹ ಜನರು, ವಾಸ್ತವದಲ್ಲಿ ಮುಸ್ಲಿಮರಿಗೆ ಅಗತ್ಯವೇ ಇಲ್ಲ. ಅವರು ತಮ್ಮ ದುಃಸ್ವಭಾವ, ನೀಚ ಅಭಿರುಚಿ, ಧಾರ್ಮಿಕ ಪ್ರಜ್ಞೆಯ ಕೊರತೆ, ನೈತಿಕ ಪತನ, ಲೌಕಿಕ ಮೋಹ, ಅಲ್ಲಾಹನೊಂದಿಗಿನ ಕಪಟ ನಿಲುಮೆ ಇತ್ಯಾದಿಗಳಿಂದಾಗಿ ನಾಡಿನ ಜೀತದಾಳುಗಳಂತೆ ತಮ್ಮ ಕೂಳು ತಿಂದು ಇಮಾಮತ್ ನಿರ್ವಹಿಸುವ ಇಮಾಮರನ್ನೇ ಬಯಸುತ್ತಾರೆ. ಆದ್ದರಿಂದಲೇ ಮುಸ್ಲಿಮ್ ಸಮಾಜವು ಜೀವಂತವಿದೆಯಾದರೂ ಯಾವುದೋ ದುರಾಗ್ರಹಕ್ಕೊಳಪಟ್ಟು ಅದರ ಹೃದಯ (ಮಸೀದಿ) ನಿರ್ಜೀವಗೊಂಡಿದೆಯೆಂದು ಹೇಳುವಂತಿಲ್ಲ. ಬದಲಾಗಿ ಸ್ವಯಂ ದೇಹವೇ ತಣ್ಣಗಾಗಿ, ಮರಕಟ್ಟಿ, ಕೊನೆಗೆ ಹೃದಯವನ್ನೂ ಮರಗಟ್ಟಿಸಿರುವುದೇ ಇಲ್ಲಿ ಆಗಿರುವ ಕೇಡು. ಈಗ ನಿಮ್ಮ ಬಯಕೆಯು ಈ ಕೆಟ್ಟ ಸಮಾಜವು ಬಯಸುವಂತಹ ಕೂಲಿಯಾಳುಗಳಾದ ಇಮಾಮರನ್ನೂ ಖತೀಬರನ್ನೂ ಪರಿಣತಗೊಳಿಸಿ, ಸ್ಥಾನಕ್ಕೆ ತಕ್ಕಂತೆ ಸಂಬಳ ಮತ್ತು ಆಹಾರ ನಿಗದಿಪಡಿಸಿ ವಿತರಣೆ ಮಾಡುವುದೆಂದಾದರೆ, ಅಂತಹ ಇಮಾಮತ್‌ನ ಉದ್ಯೋಗವನ್ನು ಕಲಿಸುವುದೂ ಅದಕ್ಕಾಗಿ ಕೂಲಿಯಾಳುಗಳನ್ನು ಸಿದ್ಧಗೊಳಿಸುವುದೂ ನಮ್ಮ ಕೆಲಸವಲ್ಲ. ಬದಲಾಗಿ ನಿಮ್ಮ ಸಲಹೆಯ ಇಂಗಿತವು ಒಂದು ಸಕ್ರಿಯ ಮುಸ್ಲಿಮ್ ಸಮಾಜಕ್ಕೆ ಅಗತ್ಯವಿರುವ ನೈಜ ಇಮಾಮರನ್ನು ಸಿದ್ಧಗೊಳಿಸುವುದಾಗಿದ್ದರೆ, ಆ ಸಕ್ರಿಯ ಸಮಾಜವು ಸಿದ್ಧಗೊಳ್ಳುವುದಕ್ಕಿಂತ ಮುಂಚಿತವಾಗಿ ಅದಕ್ಕೆ ಇಮಾಮರನ್ನು ಸಿದ್ಧಗೊಳಿಸುವುದೆಂಬುದು ಗರ್ಭಾಶಯದಲ್ಲಿಯೂ ಹುಟ್ಟಿಲ್ಲದ ವಧುವಿಗೆ ವರನನ್ನು ಅಲಂಕರಿಸಿ ಕುಳ್ಳಿರಿಸಿದಂತಾಗಬಹುದು. ಒಂದು ಜೀವಂತ ಮುಸ್ಲಿಮ್ ಸಮಾಜವನ್ನು ಬೆಳೆಸುವುದೇ ನಮ್ಮ ಪಾಠ ಶಾಲೆ ಮತ್ತು ತರಬೇತಿ ಕೇಂದ್ರಗಳಿಂದ ಹೊರ ಬರುವ ಜನರ ನೈಜ ಕರ್ತವ್ಯವಾಗಿದೆ. ಕ್ರಮೇಣ, ಅವರ ಧರ್ಮ ಪ್ರಚಾರಗಳಿಂದ ಅಂತಹ ಸಮಾಜವು ಬೆಳೆಯ ತೊಡಗಿದಾಗ, ಅದೇ ಪ್ರಚಾರಕರು ಸ್ವಾಭಾವಿಕವಾಗಿ ನಾಯಕ (ಇಮಾಮ್) ರಾಗುತ್ತಾರೆ. ಅವರು ಯಾವ ಮಸೀದಿಗಳನ್ನು ಹಾಗೂ ಸ್ಪಂದಿಸುವ ಹೃದಯವನ್ನಾಗಿಸುವರೋ ಅದರ ಇಮಾಮರು ನಾಡಿನ ಆಧ್ಯಾತ್ಮಿಕ, ನೈತಿಕ, ಸಾಮಾಜಿಕ ಮತ್ತು ರಾಜಕೀಯ ನಾಯಕರು ಅವರೇ ಆಗುವರು.

ಮದ್ರಸಾ ಅಧ್ಯಾಪಕರನ್ನು (ಮುದರ್ರಿಸ್) ಸಿದ್ಧಗೊಳಿಸುವ ವಿಷಯದಲ್ಲಿಯೂ ನಿಮ್ಮಲ್ಲಿ ಇದೇ ರೀತಿಯ ತಪ್ಪು ತಿಳುವಳಿಕೆ ನೆಲೆಸಿದೆ. ಜನರು ನೈಜ ಇಸ್ಲಾಮೀ ಶಿಕ್ಷಣವನ್ನು

ಬಯಸುತ್ತಿದ್ದಾರೆ. ಆದರೆ ಅದಕ್ಕೆ ಮುದರ್ರಿಸರ ಕೊರತೆಯು ತಡೆಯಾಗಿದೆಯೆಂಬುದು ನಿಜವಲ್ಲ, ನೈಜ ಇಸ್ಲಾಮಿ ಶಿಕ್ಷಣದ ಹಂಬಲವೇ ನಾಸ್ತಿಯಾಗಿರುವುದು ನೈಜ ದುರಂತವಾಗಿದೆ. ಅವರು ಬಯಸುವಂತೆ ಅಧ್ಯಾಪಕ ನೌಕರರನ್ನು ಕೂಲಿಗೆ ಕೊಡಲು ತರಬೇತು ಗೊಳಿಸುವುದೇ ನಿಮ್ಮ ಉದ್ದೇಶವೆಂದಾದರೆ, ಅದು ನಮ್ಮ ಕೆಲಸವಲ್ಲ. ಅದಕ್ಕೆ ಬದಲಾಗಿ, ಇಸ್ಲಾಮಿ ದೃಷ್ಟಿಕೋನಕ್ಕನುಗುಣವಾಗಿ ಮುಂದಿನ ಪೀಳಿಗೆಯನ್ನು ಬೆಳೆಸಲು ಶಕ್ತವಾದ ನೈಜ ವಿದ್ಯಾಭ್ಯಾಸ ನಿಮ್ಮ ಬಯಕೆಯಾಗಿದ್ದರೆ, ಅದಕ್ಕೆ ಬೇಕಾದ ಮುದರ್ರಿಸರನ್ನು ಸಿದ್ಧಗೊಳಿಸುವುದಕ್ಕಿಂತ, ಮುಂಚಿತವಾಗಿ ಅಂತಹ ಮುದರ್ರಿಸರ ಬೇಡಿಕೆಯನ್ನು ಸೃಷ್ಟಿಸಬೇಕು. ಹಾಗೆಯೇ 'ಮುಬಲ್ಲಿಗ್'ರನ್ನು (ಧರ್ಮ ಪ್ರಚಾರಕರು) ಸಿದ್ಧಗೊಳಿಸುವುದರ ಇಂಗಿತವೂ ಪ್ರಾಯಶಃ ನಿಮಗೆ ಸ್ಪಷ್ಟವಾಗಿರಲಾರದು. ದೇಶದ ವಿವಿಧ ಸಂಸ್ಥೆಗಳಿಗೆ ಅಗತ್ಯವಿರುವ ವೃತ್ತಿ ನಿರತ ಅಧ್ಯಾಪಕರನ್ನು ವಿತರಣೆ ಮಾಡಲಿಕ್ಕಾಗಿ ಕೆಲವರಿಗೆ ಪ್ರಚಾರ ಕಲೆ ಕಲಿಸಬೇಕೆಂದು ನಿಮ್ಮ ಆಸೆಯೇ? ಅಲ್ಲವಾದರೆ ಅವರನ್ನು ಸಿದ್ಧಗೊಳಿಸಲಿಕ್ಕಾಗಿ ಪ್ರತ್ಯೇಕ ಸಲಹೆಯ ಅಗತ್ಯವಿಲ್ಲ. ನಾವು ಶಿಕ್ಷಣ ಸಂಸ್ಥೆಗಳ ಮೂಲಕ ಜನರಿಗೆ ನೀಡುವ ಜ್ಞಾನವೂ ಅವರಲ್ಲಿ ಉದ್ದೀಪನ ಗೊಳಿಸುವ ಧಾರ್ಮಿಕ ಸ್ಫೂರ್ತಿಯೂ ನಿಮ್ಮ ಬೇಡಿಕೆಗೆ ಸಂಪೂರ್ಣ ಪರ್ಯಾಪ್ತವಿದೆ. ಅಂತಹ ಜನರು ಎಲ್ಲಿ ಯಾವ ಕೆಲಸದಲ್ಲಿ ನಿರತರಾದರೂ ತಮ್ಮ ಗುಣ ನಡತೆ, ವ್ಯವಹಾರಗಳ ಮೂಲಕ ಸತ್ಯಧರ್ಮವನ್ನು ಪ್ರಚಾರಗೊಳಿಸುವರು.

## ಸ್ತ್ರೀಯರನ್ನು ಸೇರಿಸುವ ಬಗೆ

ಜಮಾಅತ್ ಸದಸ್ಯರ ಮಕ್ಕಳನ್ನು ಧರ್ಮನಿಷ್ಠೆಯುಳ್ಳವರಿಗೇ ವಿವಾಹ ಮಾಡಿ ಕೊಡಬೇಕೆಂದು ಇನ್ನೊಂದು ಸಲಹೆಯಲ್ಲಿ ವಿನಂತಿಸಲಾಯಿತು. ಆ ಕುರಿತು ಅಮೀರ್ ಹೀಗೆಂದರು:

ಇದು ಸಲಹೆ ಮಂಡಿಸಬೇಕಾದಂತಹ ವಿಷಯವಲ್ಲ. ಅದು ನೈಜ ಧಾರ್ಮಿಕ ಪ್ರಜ್ಞೆ ಹೃದಯದಲ್ಲಿರುವುದರ ಅನಿವಾರ್ಯ ಫಲವಾಗಿದೆ. ಈ ಪ್ರಜ್ಞೆಯು ಹೃದಯದಲ್ಲಿ ಮೂಡಿದವರು ಧರ್ಮದಿಂದ ವಿಮುಖರಾದ, ನೈತಿಕವಾಗಿ ಕೆಟ್ಟ ಜನರೊಂದಿಗೆ ವಿವಾಹ ಸಂಬಂಧ ಬೆಳೆಸುವ ಮಾತಂತಿರಲಿ, ಸ್ನೇಹ, ಸಹವಾಸ, ಗೆಳೆತನವನ್ನೂ ಇಷ್ಟಪಡಲಾರರು. ಧರ್ಮದ ಕುರಿತು ನನಗೆ ನೈಜ ಪ್ರಜ್ಞೆಯಿದೆಯೆಂದು ವಾದಿಸುವ ಓರ್ವ ವ್ಯಕ್ತಿಯು ವೈವಾಹಿಕ ಸಂಬಂಧದಲ್ಲಿ ಧರ್ಮವನ್ನೂ ನೈತಿಕತೆಯನ್ನೂ ಕಡೆಗಣಿಸಿ, ಸಂಪತ್ತು ಮತ್ತು ಲೌಕಿಕ ಸ್ಥಾನಮಾನಗಳತ್ತ ನೋಡುತ್ತಾನೆಂದಾದರೆ ಆತನ ವಾದವು ಅಪ್ಪಟ ವಂಚನೆಯಾಗಿದೆ ಅಥವಾ ಆತನೇ ಆತನನ್ನು ತಪ್ಪು ತಿಳಿದು ಕೊಂಡಿದ್ದಾನೆ. ಒಂದು ವೇಳೆ ಅಂಥವರು ಜಮಾಅತ್‌ನೊಂದಿಗೆ ಸಂಬಂಧ ಹೊಂದಿದ್ದರೆ, ಅವರಿಗೆ ಇಲ್ಲಿ ಸ್ಥಳವಿಲ್ಲವೆಂದು ತಿಳಿಸಲೇಬೇಕು. ಯಾಕೆಂದರೆ ಅವರ ಈ ನೀತಿಯು ಅವರಲ್ಲಿ ಧಾರ್ಮಿಕ ಪ್ರಜ್ಞೆ ತೀರಾ ಕಡಿಮೆಯಾಗಿದ್ದು ಸ್ಥಾನಮಾನಗಳ ಕುರಿತು ಅವರ ದೃಷ್ಟಿಕೋನವು ಇನ್ನೂ ಲೌಕಿಕವಾಗಿದೆಯೆಂಬುದನ್ನು ಸಾಬೀತುಪಡಿಸುತ್ತದೆ. ಆದ್ದರಿಂದ ಧಾರ್ಮಿಕ ಪ್ರಜ್ಞೆಯ ಮಾನದಂಡವಾಗಿರುವ ಒಂದು ವಿಷಯವನ್ನು ಸಲಹೆಯ ರೂಪದಲ್ಲಿ ಇಲ್ಲಿ ಮಂಡಿಸಿ ತರುವಾಯ ಜಮಾಅತ್‌ನ ತೀರ್ಮಾನವೆಂಬ ನೆಲೆಯಲ್ಲಿ ಅದನ್ನು ಜಾರಿಗೊಳಿಸಬೇಕೆಂಬುದು

ಮುಂದೆ ಇನ್ನೊಂದು ಸಮ್ಮೇಳನದಲ್ಲಿ ಜಮಾಅತ್‌ನ ಸದಸ್ಯರೆಲ್ಲರೂ ನಮಾಝ್ ಮಾಡಬೇಕೆಂದು ಮಂಜೂರು ಮಾಡುವುದಕ್ಕೆ ಸಮಾನವಾಗಿದೆ. ಜಮಾಅತ್‌ನ ಸದಸ್ಯರು ತಮ್ಮ ಧಾರ್ಮಿಕ ಪ್ರಜ್ಞೆಯಿಂದ ಕರ್ತವ್ಯವನ್ನು ಗ್ರಹಿಸಿ ಯಾವ ಬಾಹ್ಯ ಪ್ರೇರಣೆಯೂ ಇಲ್ಲದೆಯೇ ಸರಿಯಾಗಿ ನಮಾಝ್ ಮಾಡುವರೆಂದು ನಾವು ನಿರೀಕ್ಷಿಸುವಂತೆಯೇ ವಿವಾಹ ಮುಂತಾದ ಎಲ್ಲಾ ವ್ಯವಹಾರಗಳಲ್ಲಿಯೂ ಗೆಳೆತನಗಳಲ್ಲಿಯೂ ಲೇವಾದೇವಿಗಳಲ್ಲಿಯೂ ಧರ್ಮ ನಿಷ್ಠೆ ಮತ್ತು ಸದ್ಗುಣದ ಆಧಾರದಲ್ಲಿಯೇ ವ್ಯವಹರಿಸುವರೆಂದು ನಾವು ನಿರೀಕ್ಷಿಸುತ್ತೇವೆ."

ಇನ್ನೊಂದು ಸಲಹೆಯಲ್ಲಿ ಸಂಘಟನೆಯ ಬೆಳವಣಿಗೆಗಾಗಿ ವ್ಯಾವಹಾರಿಕ ಯೋಜನೆಗಳನ್ನು ಸಿದ್ಧಗೊಳಿಸಬೇಕೆಂದೂ ಅದಕ್ಕೆ ಅಗತ್ಯವಿರುವ ನಿರ್ದೇಶಗಳನ್ನು ನೀಡಬೇಕೆಂದೂ ವಿನಂತಿಸಲಾಗಿತ್ತು. ಆ ಕುರಿತು ಅಮೀರರು ಹೀಗೆಂದರು:

"ಸ್ತ್ರೀಯರನ್ನು ನಮ್ಮೊಂದಿಗೆ ಸೇರಿಸುವ ಬಗೆಯು ನಮ್ಮ ಮಟ್ಟಿಗೆ ಅತಿ ಪ್ರಾಮುಖ್ಯ ಸಮಸ್ಯೆಯಾಗಿದೆ. ಸ್ತ್ರೀಯರ ಸಹಕಾರ ದೊರೆಯದ ವರೆಗೆ 50% ಜನಸಂಖ್ಯೆಗೆ ನಮ್ಮೊಂದಿಗೆ ಸಂಬಂಧವಿರುವುದಿಲ್ಲವೆಂಬುದು ವ್ಯಕ್ತ. ಮಾತ್ರವಲ್ಲ ಆ 50% ಮಂದಿಯ ಮಡಿಲಲ್ಲೇ ಉಳಿದ 50% ಬೆಳೆದು ಬರುತ್ತದೆ. ಆದ್ದರಿಂದ ಸಂಘಟನೆಯ ಬೆಳವಣಿಗೆಗೆ ಪುರುಷರಂತೆಯೇ ಸ್ತ್ರೀಯರ ಪಾತ್ರವೂ ಅತಿ ಅಗತ್ಯವಾಗಿದೆ. ಆದರೆ, ನಮ್ಮ ಮಟ್ಟಿಗೆ ಈ ಕಾರ್ಯವು ಅನ್ಯ ಸಂಘಟನೆಗಳಷ್ಟು ಸುಲಭವಲ್ಲ. ಅವರಾದರೋ ಸ್ವಾತಂತ್ರ್ಯದ ಪಾಠ ಹೇಳಿಕೊಟ್ಟು, ಸ್ತ್ರೀಯರನ್ನು ಹೊರತಂದು ಭುಜಕ್ಕೆ ಭುಜ ತಾಗಿಸಿ ಪುರುಷರೊಂದಿಗೆ ಕೆಲಸಮಾಡಲು ಸಿದ್ಧಗೊಳಿಸುತ್ತಾರೆ. ಆದರೆ ನಮಗೆ ಇಸ್ಲಾಮೀ ಸಿದ್ಧಾಂತವನ್ನು ಸರಿಯಾಗಿ ಪಾಲಿಸುತ್ತಾ ಶರೀಅತ್‌ನ ಮೇರೆ ಉಲ್ಲಂಘಿಸದೆ ಆ ಕಾರ್ಯವನ್ನು ಸಾಧಿಸಬೇಕಾಗಿದೆ. ಆದ್ದರಿಂದಲೇ ಇಂದಿನ ವಾತಾವರಣದಲ್ಲಿ ನಮಗೆ ಈ ಬಗ್ಗೆ ತುಂಬಾ ಅಡಚಣೆಗಳು ಎದುರಾಗುತ್ತಿವೆ. ಈ ಸಂದರ್ಭದಲ್ಲಿ ಸ್ತ್ರೀಯರಲ್ಲಿ ಸಂಘಟನೆಯನ್ನು ಪ್ರಚಾರಗೊಳಿಸುವ ನಿಟ್ಟಿನಲ್ಲಿ ಕೇವಲ ಒಂದೇ ವಿಧಾನ ವ್ಯಾವಹಾರಿಕವಾಗಿದೆ. ಅರ್ಥಾತ್ ಸದಸ್ಯರು ಮತ್ತು ಹಿತೈಷಿಗಳು ಸ್ವಯಂ ಅವರ ತಾಯಂದಿರು, ಅಕ್ಕ ತಂಗಿಯರು, ಕುಟುಂಬದ ಇತರ ಸ್ತ್ರೀಯರು ಮುಂತಾದವರಲ್ಲಿ ನಮ್ಮ ವಿಚಾರಗಳನ್ನು ಪ್ರಚಾರ ಮಾಡಲು ಪ್ರಯತ್ನಿಸಬೇಕು. ತಮ್ಮ ಗುಣನಡತೆ ಮತ್ತು ಸದಾಚಾರ ನಿಷ್ಠೆಗಳಿಂದ ಅವರನ್ನು ಆಕರ್ಷಿಸಬೇಕು. ವಿದ್ಯಾವಂತರಿಗೆ ನಮ್ಮ ಸಾಹಿತ್ಯಗಳನ್ನು ನೀಡಬೇಕು. ವಿದ್ಯೆಯಿಲ್ಲದವರಿಗೆ ಕಲಿಸಬೇಕು- ಹೀಗೆ ಕೆಲವು ಕಾಲ ನಿರಂತರವಾಗಿ ಪ್ರಯತ್ನಿಸುತ್ತಲಿದ್ದರೆ, ಕ್ರಮೇಣ ಸ್ತ್ರೀಯರ ಒಂದು ಗಣನೀಯ ಸಂಖ್ಯೆಯು ಸಂಘಟನೆಯತ್ತ ಆಕರ್ಷಿಸಲ್ಪಡುವುದು. ಆ ಬಳಿಕ ಇತರ ಮನೆಗಳಲ್ಲಿಯೂ ನಮ್ಮ ವಿಚಾರ ಮತ್ತು ನೈತಿಕ ಪ್ರಭಾವ ಬೀರಬಲ್ಲಂತಹ ಅರ್ಹ ಸ್ತ್ರೀಯರು ದೊರೆಯಬಲ್ಲರು. ಆದರೆ ಇಲ್ಲಿ ಒಂದು ವಿಷಯವನ್ನು ಗಮನದಲ್ಲಿಡಬೇಕು. ಜಮಾಅತ್‌ನ ಸದಸ್ಯರು ತಮ್ಮ ಪತ್ನಿಯರನ್ನು ಕೇವಲ ಪತ್ನಿಯರೆಂಬ ಕಾರಣಕ್ಕಾಗಿ ಜಮಾಅತ್‌ನಲ್ಲಿ ಸೇರಿಸಬಾರದು. ಸಂಘಟನೆಯ ವಿಷಯದಲ್ಲಿ ಪತಿಯೆಂಬ ಅಧಿಕಾರ ಚಲಾವಣೆ ಎಂದಿಗೂ ಸಮಂಜಸವಲ್ಲ. ಯಾಕೆಂದರೆ, ಅದೆಷ್ಟೋ ಪತ್ನಿಯರು, ವಿಶ್ವಾಸ ವಿಚಾರಧಾರೆ ಅಥವಾ ಜೀವನ ವಿಧಾನದಲ್ಲಿ ಯಾವ ಸುಧಾರಣೆಯೂ ಇಲ್ಲದೆ ಪತಿಯನ್ನು ಅಂಧವಾಗಿ ಅನುಕರಿಸಿ ಜಮಾಅತನ್ನು ಸೇರಬಹುದು. ಹೊರಗಿನಂತೆಯೇ ಸ್ವಗೃಹದಲ್ಲಿಯೂ ನೀವು ಧರ್ಮ ಪ್ರಚಾರ ನಡೆಸಬೇಕು. ಪತ್ನಿಯರ ಹಾಗೂ

ಕುಟುಂಬದ ಇತರ ಸ್ತ್ರೀಯರ ಆಚಾರ-ವಿಚಾರ, ನೀತಿ ನಡವಳಿಕೆ, ಗುಣ ಸ್ವಭಾವ ಮತ್ತು ಜೀವನ ವಿಧಾನಗಳಲ್ಲಿ ಜಮಾಅತ್‌ನ ಸೇವೆ ಸಲ್ಲಿಸಲಿಕ್ಕೆ ಅಗತ್ಯವಿರುವ ಬದಲಾವಣೆ ಬರುವ ತನಕ ತಾಳ್ಮೆಯಿಂದ ನಿರಂತರ ಪ್ರಯತ್ನಿಸಿರಿ. ಇಂತಹ ಪಕ್ವತೆ ಅಭಿವ್ಯಕ್ತವಾಗುವ ವರೆಗೆ ಪುರುಷರಂತೆಯೇ ಸ್ತ್ರೀಯರನ್ನೂ ಜಮಾಅತ್‌ಗೆ ಸೇರಿಸಬಾರದು."

## ಜೀವನೋಪಾಯಕ್ಕೆ ನೆರವು

ಇಸ್ಲಾಮೇತರ ಸರಕಾರದ ಹುದ್ದೆಗಳನ್ನೂ, ಜೀವನೋಪಾಧಿಗಳನ್ನೂ ತೊರೆದು ಬರುವ ಬಾಂಧವರ ನೆರವಿಗಾಗಿ ಜಮಾಅತ್ ಏನಾದರೂ ವ್ಯವಸ್ಥೆ ಮಾಡಬೇಕೆಂದು ಒಂದು ಸಲಹೆಯಾಗಿತ್ತು. ಆ ಬಗ್ಗೆ ಅಮೀರ್ ಹೀಗೆಂದರು:

"ನಮ್ಮ ವಿಶ್ವಾಸ ಧ್ಯೇಯಗಳನ್ನು ಅಂಗೀಕರಿಸಿ ಇಸ್ಲಾಮೇತರ ಜೀವನೋಪಾಧಿಗಳನ್ನು ತೊರೆಯುವವರಿಗೆ ಸೂಕ್ತವಾದ ಇತರ ಜೀವನೋಪಾಯವನ್ನು ಒದಗಿಸುವ ನಿಟ್ಟಿನಲ್ಲಿ ನಿಸ್ಸಂದೇಹವಾಗಿ ಸಾಧ್ಯವಿದ್ದಷ್ಟು ನೆರವಾಗಬೇಕು. ಆದರೆ ಈ ನೆರವು ವೈಯಕ್ತಿಕವಾಗಿದ್ದು, ನೈತಿಕ ಕರ್ತವ್ಯವಾಗಿದೆ. ಆದ್ದರಿಂದ ಅದನ್ನು ಸಂಘಟನೆಯ ಮಟ್ಟದಲ್ಲಿಯೇ ಅಂಗೀಕರಿಸಿ, ಅದಕ್ಕಾಗಿ ಪ್ರತ್ಯೇಕ ವ್ಯವಸ್ಥೆ ಮಾಡುವ ಹೊರೆಯನ್ನು ಜಮಾಅತ್‌ನ ಮೇಲೆ ಹೇರಿ ಕಡ್ಡಾಯ ಕರ್ತವ್ಯವನ್ನಾಗಿ ಮಾಡುವುದು ಸರಿಯಲ್ಲ. ಜನರ ಮುಂದೆ ಸತ್ಯಾಸತ್ಯಗಳನ್ನು ಸ್ಪಷ್ಟಗೊಳಿಸಿ ಹರಾಮ್ ಮತ್ತು ಹಲಾಲ್‌ಗಳ ಪರಸ್ಪರ ವಿವೇಚನೆಯನ್ನು ಅವರಲ್ಲಿ ಮೂಡಿಸುವ ಹೊರತು ಜಮಾಅತ್‌ಗೂ ಬೇರೇನೂ ಸಾಧ್ಯವಿಲ್ಲ. ತರುವಾಯ ಸತ್ಯವನ್ನು ಒಪ್ಪಿ ಕೆಡುಕಿನಿಂದ ದೂರ ಇರಬಯಸುವ ಹಾಗೂ ಹರಾಮನ್ನು ತ್ಯಜಿಸಿ ಹಲಾಲನ್ನು ಸ್ವೀಕರಿಸುವ ಜನರು ಸ್ವಯಂ ಧರ್ಮಬದ್ಧ ಜೀವನ ವೃತ್ತಿಗಳನ್ನು ಹುಡುಕಿ, ಇಸ್ಲಾಮೇತರ ಮಾಲಿನ್ಯಗಳಿಂದ ಜೀವನವನ್ನು ಪರಿಶುದ್ಧಗೊಳಿಸಬೇಕು. ಅದು ಅವರದೇ ಹೊಣೆಯಾಗಿದೆ. ಸದಾಚಾರ-ಸದ್ಗುಣಗಳನ್ನು ಬೋಧಿಸುವ ಒಂದು ಪಕ್ಷವು ವೇಶ್ಯಾವೃತ್ತಿಯನ್ನು ತೊರೆದು ವಿವಾಹ ಸಂಬಂಧ ಮಾಡಿಕೊಳ್ಳಬೇಕೆಂದು ಉಪದೇಶಿಸುತ್ತಲಿದ್ದರೆ, ಅದರೊಂದಿಗೆ ಒಂದು ವಿವಾಹ ಕೇಂದ್ರವನ್ನು ಸ್ಥಾಪಿಸುವ ಹೊಣೆ ಆ ಪಕ್ಷದ ಮೇಲಿರುವುದಿಲ್ಲ. ಹಾಗೆಯೇ ಸದ್ಧರ್ಮವನ್ನು ಬೋಧಿಸುವ ಪಕ್ಷವು ಕಾನೂನು ಬಾಹಿರ ಮಾರ್ಗಗಳನ್ನು ತೊರೆದು ಶಿಷ್ಟ ಮಾರ್ಗವನ್ನವಲಂಬಿಸುವಂತೆ ಉಪದೇಶಿಸಿದ ಮಾತ್ರಕ್ಕೆ ಸೂಕ್ತ ಜೀವನೋಪಾಧಿಗಳನ್ನು ವ್ಯವಸ್ಥೆಗೊಳಿಸುವ ಹೊಣೆಯು ಅದರ ಮೇಲಿಲ್ಲ. ಆದರೆ ಇದು ಅಂತಹ ಪಕ್ಷದಲ್ಲಿರುವವರ ನೈತಿಕ ಹೊಣೆಯೆಂಬುದರಲ್ಲಿ ಸಂದೇಹವಿಲ್ಲ. ನಿಷಿದ್ಧ ಮಾರ್ಗಗಳಿಂದ ಪಾರಾಗಿ ಧರ್ಮಸಮ್ಮತ ಮಾರ್ಗಗಳನ್ನು ಹುಡುಕುವುದರೊಂದಿಗೆ, ಅದಕ್ಕಾಗಿ ಪೇಚಾಡುತ್ತಿರುವ ಸಹೋದರರಿಗೂ ನೆರವಾಗಬೇಕಾದುದು ಅವರ ನೈತಿಕ ಹೊಣೆಯಾಗಿದೆ. ಈ ನಿಟ್ಟಿನಲ್ಲಿ ಸಣ್ಣ ಸಣ್ಣ ಉದ್ದಿಮೆ ಮತ್ತು ವ್ಯಾಪಾರಗಳ ಕುರಿತು ನಮ್ಮಲ್ಲಿ ಲಭ್ಯವಿರುವ ಮಾಹಿತಿಗಳನ್ನು ಅಗತ್ಯವಿರುವವರಿಗೆ ನೀಡುವುದು, ಜಂಟಿಯಾಗಿ ಕೈಗಾರಿಕೆ ಅಥವಾ ವ್ಯಾಪಾರ ಯೋಜನೆಗಳನ್ನು ನಡೆಸ ಬಯಸುವವರನ್ನು ಅವರಿಗೆ ಪರಿಚಯಗೊಳಿಸುವುದು ಇತ್ಯಾದಿ ಕೆಲಸಗಳನ್ನಷ್ಟೇ ಪಕ್ಷದ ನೆಲೆಯಲ್ಲಿ ಮಾಡಲು ಸಾಧ್ಯ."

ಎಲ್ಲಾ ಸದಸ್ಯರೂ ಒಂದು ನಿರ್ದಿಷ್ಟ ಮೊತ್ತವನ್ನು ಬೈತುಲ್ ಮಾಲ್‌ಗೆ ನೀಡಬೇಕೆಂಬ

ಸಲಹೆಯ ಕುರಿತು ಅಮೀರ್ ಹೀಗೆಂದರು: "ಇಸ್ಲಾಮಿನ ದೃಷ್ಟಿಯಲ್ಲಿ ಇಂತಹ ನಿಬಂಧನೆಗಳನ್ನು ವಿಧಿಸಲು ನಮಗೆ ಹಕ್ಕಿಲ್ಲ. ಪ್ರವಾದಿವರ್ಯರ(ಸ) ಕಾಲದಲ್ಲಿ ಝಕಾತ್ (ಕಡ್ಡಾಯದಾನ)ನ ವಿನಾ ಇನ್ನಾವ ರೀತಿಯ ದಾನವನ್ನೂ ಕಡ್ಡಾಯಗೊಳಿಸಿರಲಿಲ್ಲ. ಆದ್ದರಿಂದ ನಾವೂ ಅದರ ಹೊರತು ಹೊಸತೊಂದು ದಾನವನ್ನು ಜಮಾಅತ್‌ನ ಮೇಲೆ ಹೇರಬಾರದು. ಒಂದು ವೇಳೆ ದಾನವನ್ನು ಕಡ್ಡಾಯಗೊಳಿಸಿದರೆ, ಅಲ್ಲಾಹನ ಮಾರ್ಗದಲ್ಲಿ ಹಣ ವ್ಯಯಿಸುವುದುರ ನೈಜ ಫಲವೇ ನಷ್ಟವಾಗಬಹುದು. ಸಾಮಾಜಿಕ ಆವಶ್ಯಕತೆಗಳಿಗೆ ಅಗತ್ಯವಿರುವಷ್ಟು ಪ್ರಮಾಣದಲ್ಲಿ ಅಲ್ಲಾಹನು ಪ್ರತಿಯೊಬ್ಬ ಶ್ರೀಮಂತನ ಮೇಲೆ ದಾನವನ್ನು ಕಡ್ಡಾಯ ಮಾಡಿದ್ದಾನೆ. ತರುವಾಯ ಪ್ರತಿಯೋರ್ವರ ತ್ಯಾಗವನ್ನು ಅವರಿಗೆ ಅಲ್ಲಾಹನೊಂದಿಗಿರುವ ಸಂಬಂಧ, ಒಳಿತಿನಲ್ಲಿ ಅವರ ಆಸಕ್ತಿ, ಸತ್ಯಧರ್ಮದೊಂದಿಗಿನ ಹಾರ್ದಿಕ ಸಂಬಂಧಕ್ಕನುಸಾರವಾಗಿ ಅವರ ಸ್ವಇಚ್ಛೆಗೆ ಬಿಡಲಾಗಿದೆ. ಈ ವಿಷಯಗಳಲ್ಲಿ ವ್ಯಕ್ತಿಯು ಪ್ರಬಲನಾದಂತೆಯೇ ಆತನಲ್ಲಿ ಅಲ್ಲಾಹನ ಮಾರ್ಗದಲ್ಲಿ ವ್ಯಯಿಸುವ ಭಾವನೆಯು ಪ್ರಜ್ವಲಿಸುತ್ತದೆ. ದುರ್ಬಲರಾಗಿರುವವರು ಅಲ್ಲಾಹನ ಮಾರ್ಗದಲ್ಲಿ ವ್ಯಯಿಸುವುದರಲ್ಲಿ ಹಿಂದಿನ ಪಂಕ್ತಿಯಲ್ಲಿರುತ್ತಾರೆ. ಕೆಲವೇ ಸತ್ಕರ್ಮಗಳನ್ನು ಕಾನೂನಿನ ಅಗತ್ಯಕ್ಕೊಳಪಡಿಸಿ ಉಳಿದ ಸತ್ಕರ್ಮಗಳನ್ನು ಕಾನೂನಿನ ಅಗತ್ಯಗಳಿಂದ ಹೊರತು ಪಡಿಸುವುದು ಇಸ್ಲಾಮಿನ ವಿಶೇಷ ಸಿದ್ಧಾಂತವಾಗಿದೆ. ಮಾನವನು ಸ್ವನಿರ್ಧಾರದಿಂದ ಮತ್ತು ಸಂತೃಪ್ತಿಯಿಂದ ಸತ್ಕರ್ಮಗಳಿಗಾಗಿ ಪೈಪೋಟಿ ನಡೆಸಬೇಕೆಂಬುದೇ ಇದರ ಉದ್ದೇಶ. ಸ್ವಯಂ ಪ್ರೇರಿತ ಸತ್ಕರ್ಮಗಳನ್ನು ಅವಲಂಬಿಸಿಯೇ ಮಾನವನಿಗೆ ಇಹದಲ್ಲಿ ನೈತಿಕ ಮತ್ತು ಆಧ್ಯಾತ್ಮಿಕ ಪ್ರಗತಿಯೂ ಪರಲೋಕದಲ್ಲಿ ಅಲ್ಲಾಹನ ಬಳಿ ಉನ್ನತ ಸ್ಥಾನಮಾನವೂ ಲಭಿಸುವುದು. ನೀವು ಈ ತತ್ವವನ್ನು ಅರ್ಥಮಾಡಿ ಕೊಂಡಿದ್ದರೆ, ದಾನ ಕಡ್ಡಾಯಗೊಳಿಸುವ ಹಾದಿಯನ್ನು ಹುಡುಕುವ ಬದಲಾಗಿ ಮಾನವನು ಸ್ವಇಚ್ಛೆಯಿಂದ ಅಲ್ಲಾಹನ ಮತ್ತು ಆತನ ಧರ್ಮಕ್ಕಾಗಿ ಸಮಯ, ಸಂಪತ್ತು ಮತ್ತು ಸಾಮರ್ಥ್ಯಗಳನ್ನು ತ್ಯಾಗಮಾಡುವ ಮನೋಭಾವವನ್ನು ಜನರಲ್ಲಿ ಬೆಳೆಸಲು ಪ್ರಯತ್ನಿಸಿರಿ."

ಸಲಹೆಗಳ ಬಳಿಕ ವರದಿಗಳ ಕುರಿತು ಸಾಮಾನ್ಯ ವಿಮರ್ಶೆ ನಡೆಸಿ ಸದಸ್ಯರಿಗೆ ಉಪದೇಶ ನೀಡುವಂತೆ ಅಮೀರ್‌ರು ಮೌಲಾನಾ ಅಮೀನ್ ಅಹ್ಸನ್ ಇಸ್ಲಾಹಿಯವರನ್ನು ಕೇಳಿಕೊಂಡರು.

## ವರದಿಗಳ ವಿಮರ್ಶೆ

ಮೌ| ಅಮೀನ್ ಅಹ್ಸನ್ ಇಸ್ಲಾಹೀಯವರಿಂದ-

ಮಾನ್ಯರೆ,

ನಮ್ಮ ಈ ಸಮ್ಮೇಳನದಲ್ಲಿ ಸ್ವಲ್ಪ ಜಟಿಲವಾದ ಕರ್ತವ್ಯವನ್ನೇ ನನಗೆ ನಿರ್ವಹಿಸಬೇಕಾಗಿದೆ. ನೀವು ಸಲ್ಲಿಸಿರುವ ವರದಿಗಳ ವಿಮರ್ಶೆ ಮತ್ತು ಅವುಗಳ ಕುಂದು ಕೊರತೆಗಳನ್ನು ಎತ್ತಿ ತೋರಿಸುವುದು ಹಾಗೂ ಇನ್ನು ಮುಂದೆ ಅಂತಹ ತಪ್ಪುಗಳಾಗದಂತೆ ಎಚ್ಚರಿಕೆ ನೀಡುವ ಕರ್ತವ್ಯವನ್ನು ನಾನು ನಿರ್ವಹಿಸಬೇಕಾಗಿದೆ. ನಿಮ್ಮ ವರದಿಗಳಲ್ಲಿರುವ ಉತ್ತಮ ಅಂಶಗಳನ್ನು ಸದ್ಯ ಬದಿಗಿಟ್ಟು ಅದರಲ್ಲಿರುವ ಕುಂದುಕೊರತೆಗಳನ್ನು ನಾನು ಹೇಳಬೇಕಾಗಿದೆ. ಈ ರೀತಿ ಕುಂದು ಕೊರತೆಗಳನ್ನು ಎತ್ತಿ ತೋರಿಸುವುದರಿಂದ ಕೆಲವರಿಗೆ

ಅಸಂತೃಪ್ತಿಯಾಗಬಹುದು, ಆದರೆ ಈ ಕರ್ತವ್ಯವನ್ನು ನಾನು ನಿರ್ವಹಿಸಲೇಬೇಕಾಗಿದೆ. ನಿಮ್ಮ ಚಟುವಟಿಕೆಗಳನ್ನಂತು ಜಮಾಅತ್ ಅಮೀರರು ಸಂದರ್ಭೋಚಿತವಾಗಿ ವಿಮರ್ಶಿಸಿ, ಸೂಕ್ತ ಸಲಹೆಯನ್ನು ನೀಡಿರುವುದು ಸಂತೋಷಕರ. ಆದರಿಂದಾಗಿ ನನ್ನ ಕರ್ತವ್ಯವು ತುಂಬಾ ಹಗುರವಾಗಿದೆ. ಆದರೂ ಕೆಲವು ವಿಷಯಗಳನ್ನು ನಿಮ್ಮ ಗಮನಕ್ಕೆ ತರಬಯಸುತ್ತೇನೆ.

## ವರದಿಯ ಕ್ರಮ

ಪ್ರಥಮವಾಗಿ ವರದಿಗಳನ್ನು ಕ್ರಮಬದ್ಧವಾಗಿ ಕ್ರೋಢೀಕರಿಸುವ ಕುರಿತು ನಿಮ್ಮ ಗಮನ ಸೆಳೆಯ ಬಯಸುತ್ತೇನೆ-

ವರದಿಗಳಲ್ಲಿ ಅನಗತ್ಯ ವಿಷಯಗಳನ್ನು ಸೇರಿಸಲೇಬಾರದು. ವರದಿಯ ಅಗತ್ಯವನ್ನು ಅದರ ಕ್ರೋಢೀಕರಣದ ವೇಳೆ ಗಮನದಲ್ಲಿಟ್ಟುಕೊಳ್ಳಬೇಕು. ನಿಮ್ಮ ಸ್ಥಳಯಾವುದು? ಅಲ್ಲಿನ ಸ್ಥಿತಿಗತಿಗಳೇನು? ಜಮಾಅತ್‌ನ ಸಂದೇಶ ಪ್ರಚಾರಕ್ಕೆ ಅಲ್ಲಿ ಎಷ್ಟರ ಮಟ್ಟಿಗೆ ಅವಕಾಶವಿದೆ? ಈ ತನಕ ನೀವು ಯಾವೆಲ್ಲಾ ಕೆಲಸ ನಿರ್ವಹಿಸಿದ್ದೀರಿ? ಮುಂದೆ ನೀವು ನಿರ್ವಹಿಸ ಬಯಸುವ ಕಾರ್ಯಗಳಾವುವು? ಕಾರ್ಯಕರ್ತರ ಸ್ಥಿತಿ ಹೇಗಿದೆ? ಹಿತೈಷಿಗಳ ನಿಲುಮೆ ಹೇಗಿದೆ? ವಿರೋಧ ಮತ್ತು ಅಡೆತಡೆಗಳ ಸ್ವರೂಪ ಹೇಗಿದೆ?- ಮುಂತಾದ ವಿವರಗಳು ವರದಿಗಳಿಂದ ತಿಳಿಯಬೇಕು. ನೀವು ಈ ಬಗ್ಗೆ ತೀವ್ರ ಗಮನ ಹರಿಸಬೇಕು. ಜಮಾಅತ್ ಕೇಂದ್ರವು ಈ ಎಲ್ಲಾ ವಿಷಯಗಳನ್ನು ನಿಮ್ಮಿಂದ ತಿಳಿಯ ಬಯಸುತ್ತದೆ. ಜಮಾಅತ್ ಸದಸ್ಯರಿಗೂ ಅದು ತಿಳಿದಿರಬೇಕಾಗಿದೆ. ಇದರ ಹೊರತಾಗಿ, ಅಪ್ರಸ್ತುತ ಸಮಸ್ಯೆಗಳನ್ನು ವರದಿಗಳಲ್ಲಿ ಸೇರಿಸುವುದರಿಂದ ಸಮಯ ವ್ಯರ್ಥವಾಗುವುದಲ್ಲದೇ ಅನೇಕ ಉತ್ತಮ ಹಿತಾಸಕ್ತಿಗಳಿಗೂ ಧಕ್ಕೆಯೊದಗುವುದು. ಖಾಸಗೀ ಪರಿಸ್ಥಿತಿ, ವೈಯಕ್ತಿಕ ಹೊಗಳಿಕೆ ಅಥವಾ ಆರೋಪಗಳ ನೆರಳು ಕೂಡಾ ವರದಿಗಳಲ್ಲಿ ಕಂಡು ಬರಬಾರದೆಂದು ಪ್ರತ್ಯೇಕವಾಗಿ ಎಚ್ಚರಿಸುತ್ತೇನೆ. ಈ ರೀತಿ ಅನಗತ್ಯಗಳನ್ನು ಕೈಬಿಟ್ಟು ಅಗತ್ಯವಾದುದನ್ನು ಸೇರಿಸಿ ವರದಿಯನ್ನು ಕ್ರೋಢೀಕರಿಸುವ ಕಾರ್ಯವು ಸುಲಭ ಸಾಧ್ಯವಲ್ಲ ವೆಂಬುದು ಖಚಿತ. ಅದಕ್ಕೆ ಉತ್ತಮ ಅನುಭವ ಮತ್ತು ಸಾಮರ್ಥ್ಯಬೇಕು. ಈ ರೀತಿ ಕರ್ತವ್ಯ ಪ್ರಜ್ಞೆಯನ್ನು ನೆನಪಿನಲ್ಲಿಟ್ಟು, ಆತ್ಮ ಪ್ರಶಂಸೆ, ಪರನಿಂದೆ, ಉತ್ಪ್ರೇಕ್ಷೆ, ದುರ್ಭಾವನೆಗಳಿಂದ ನಮ್ಮ ಹೃದಯವನ್ನು ನಿರ್ಮಲಗೊಳಿಸಿದರೆ ನಮ್ಮ ಕೆಲಸವು ಬಹಳಷ್ಟು ಸುಲಭವಾಗುವುದು. ವರದಿಗಳ ಉದ್ದೇಶವೂ ಸಫಲವಾಗುವುದು.

## ತಪ್ಪೊಪ್ಪಿಗೆಯ ವಿಪತ್ತು

ತಪ್ಪೊಪ್ಪಿಗೆಯ ಮನೋಭಾವವು ನಿಮ್ಮಲ್ಲಿ ಹೆಚ್ಚಾಗಿದೆಯೆಂಬುದನ್ನು ಈ ಬಾರಿಯ ನಿಮ್ಮ ವರದಿಗಳಲ್ಲಿ ನಾನು ವಿಶೇಷವಾಗಿ ಗಮನಿಸಿದ್ದೇನೆ. ಓರ್ವನು ತನ್ನ ಕುಂದುಕೊರತೆಗಳನ್ನು ನಿಷ್ಕಪಟವಾಗಿ ಒಪ್ಪಿಕೊಳ್ಳುವ ಸಂಪ್ರದಾಯವು ಮೆಚ್ಚತಕ್ಕದ್ದೇ ಆಗಿದೆ. ಆದರೆ, ಅಪಾಯಕಾರಿಯಾಗಿರುವ ಅದರ ಇನ್ನೊಂದು ಅಂಶದ ಬಗ್ಗೆ ಬಹಳ ಜಾಗರೂಕರಾಗಿರಬೇಕಾಗಿದೆ. ಈ ತಪ್ಪೊಪ್ಪಿಗೆಯ ಕ್ರಮವೇ ನಿಮ್ಮ ಹವ್ಯಾಸವಾಗಿ ಬಿಟ್ಟರೆ, ಅದರ ತೆರೆಮರೆಯಲ್ಲಿ ನಿಮ್ಮ ಕರ್ತವ್ಯ ಪ್ರಜ್ಞೆಯೂ ದಮನವಾಗುವ ಭೀತಿಯಿದೆ. ತಪ್ಪೊಪ್ಪಿಗೆಯಿಂದ ಹುಟ್ಟಿ ಬರಬಹುದಾದ ಅಹಂಕಾರವೂ ಭೀಕರವಾಗಿದೆ. ಅಲ್ಲಾಹನು ಇದರಿಂದ ಪ್ರತಿಯೊಬ್ಬ ಮುಸ್ಲಿಮನನ್ನೂ

ರಕ್ಷಿಸಲೆಂದು ನಾನು ಹೃತ್ಪೂರ್ವಕವಾಗಿ ಪ್ರಾರ್ಥಿಸುತ್ತೇನೆ. ಓರ್ವನು ಒಂದು ವಿಷಯವನ್ನು ಸತ್ಯವೆಂದು ಅಂಗೀಕರಿಸಿದ ಬಳಿಕ ಅದಕ್ಕಾಗಿ ನಾನಾ ರೀತಿಯ ಕಷ್ಟನಷ್ಟಗಳನ್ನು ಅನುಭವಿಸಬೇಕಾದುದು ಆತನ ಕರ್ತವ್ಯ ಮಾತ್ರವಾಗಿದೆ. ಸತ್ಯವು ನಿಷ್ಕರುಣೆಯಿಂದ ದಮನಿಸಲ್ಪಡುವಾಗ ಪರಿತಪಿಸದ ಮಂದಿಯೂ ಎರಡರಲ್ಲೊಂದು ಸ್ಥಿತಿಯಿಂದ ಮುಕ್ತರಲ್ಲ. ಪ್ರಾಯಶಃ ಅವರು ಸತ್ಯದ ನೈಜ ಬೆಲೆಯನ್ನು ಅರಿತುಕೊಂಡಿಲ್ಲ- ಇದಕ್ಕೆ ತಿಳುವಳಿಕೆಯ ಕೊರತೆ ಕಾರಣವಾಗಿದೆ. ಹಾಗಲ್ಲದಿದ್ದರೆ ಅವರು ಅಸತ್ಯವನ್ನು ನೋಡಿ ಹೆದರಿ ಬಿಟ್ಟಿದ್ದಾರೆ. ಇದು ಹೃದಯದ ದೌರ್ಬಲ್ಯ. ಸತ್ಯವು ದಮನಿಸಲ್ಪಡುವಾಗ ವಿವೇಕವಂತ ಸಜ್ಜನರು ಎಂದಿಗೂ ಸಂತೃಪ್ತಿಯಿಂದ ಕುಳಿತಿರಲಾರರು. ಸತ್ಯದ ದಮನದ ವೇಳೆ ಮೌನಿಯಾಗಿರುವ ವ್ಯಕ್ತಿಯಲ್ಲಿ ಮಾನವೀಯತೆಯಿಲ್ಲ. ಮಾನವೀಯತೆ ಇಲ್ಲದೇ ಯಾರಾದರೂ ಹುಟ್ಟಿದರೆ ಅದು ಖೇದಕರವಾಗಿದೆ. ಆತ ಬದುಕುವುದು ಇನ್ನಷ್ಟು ಖೇದಕರ. ನಿಮಗೆ ಜ್ಞಾನದ ಕೊರತೆಯಿದ್ದರೆ ಅದನ್ನು ಅಲ್ಲಾಹನ ಗ್ರಂಥದ ಮೂಲಕ ಹೆಚ್ಚಿಸಿಕೊಳ್ಳಲು ಪ್ರಯತ್ನಿಸಿರಿ. ಧೈರ್ಯ ಕಡಿಮೆಯಿದ್ದರೆ ಸರ್ವಶಕ್ತನಾದ ಅಲ್ಲಾಹನೊಡನೆ ಹೃತ್ಪೂರ್ವಕವಾಗಿ ಪ್ರಾರ್ಥಿಸಿರಿ. "ಪ್ರಭೂ! ನಮ್ಮನ್ನು ಕರ್ಮವೀರರನ್ನಾಗಿ ಮಾಡು, ಅಧೈರ್ಯ ಮತ್ತು ಹೇಡಿತನದ ರೋಗದಿಂದ ನಮ್ಮನ್ನು ರಕ್ಷಿಸು."

ನಮ್ಮ ಜ್ಞಾನವು ಸರಿಯಾಗದಿದ್ದರೆ, ನಮ್ಮ ಹೃದಯದಲ್ಲಿ ಹೇಡಿತನದ ಪಿಶಾಚಿಯು ನೆಲೆಯೂರಿದರೆ, ನಾವು ತಪ್ಪೊಪ್ಪಿಗೆಯ ತೆರೆ ಮರೆಯಲ್ಲಿ ನಮ್ಮ ದೌರ್ಬಲ್ಯಗಳನ್ನು ಅಡಗಿಸಿದರೆ ಜಮಾಅತೆ ಇಸ್ಲಾಮಿಯ ಸ್ಥಾಪನೋದ್ದೇಶವೇ ನಿರರ್ಥಕವಾಗಬಹುದು. ನಾವು ಜನರಿಗೆ ವಾಸ್ತವಿಕತೆಯನ್ನು ತಿಳಿಯಪಡಿಸಲಿಕ್ಕಾಗಿ ಗ್ರಂಥಗಳನ್ನು ಪ್ರಕಟಿಸುತ್ತಿದ್ದೇವೆ. ಒಬ್ಬನ ಬಲವು ಇನ್ನೊಬ್ಬನ ದೌರ್ಬಲ್ಯದ ನಿವಾರಣೆಗಾಗಿಯೂ ಸತ್ಯಸೇವೆಗೆ ಅಗತ್ಯವಿರುವ ತ್ಯಾಗ-ಪ್ರಯತ್ನಗಳನ್ನು ಪರಸ್ಪರ ಸಹಾಯದಿಂದ ಸಾಧಿಸಲಿಕ್ಕಾಗಿಯೂ ನಾವು ಸಂಘಟಿತ ಜೀವನ ವಿಧಾನವನ್ನು ಕೈಗೊಂಡಿದ್ದೇವೆ. ಆದ್ದರಿಂದ ಜ್ಞಾನಗಳಿಕೆ ಮತ್ತು ಸಾಮಾಜಿಕ ಜೀವನದ ಸತ್ಫಲಗಳಿಗಾಗಿ ಪ್ರಯತ್ನಿಸಬೇಕಾದುದು ನಿಮ್ಮ ಕೆಲಸವಾಗಿದೆ. ಆದರೆ ಕೆಲವರು ತಮ್ಮ ಕರ್ತವ್ಯಗಳನ್ನು ಕೇಂದ್ರವೇ ವಹಿಸಿಕೊಳ್ಳಬೇಕೆಂದು ಬಯಸುತ್ತಿರುವುದನ್ನು ನೋಡುವಾಗ ಆಶ್ಚರ್ಯವಾಗುತ್ತಿದೆ! ಸಾಹಿತ್ಯ ಪ್ರಕಾಶನಗಳ ಮೂಲಕ ಕೇಂದ್ರವೇ ಜ್ಞಾನ ಹೆಚ್ಚಿಸಬೇಕು, ಅವರ ಸ್ವಂತ ಹೊಣೆಯನ್ನು ಕೇಂದ್ರವೇ ವಹಿಸಬೇಕು! ಇಂತಹ ಅಭಿಲಾಶೆ ಇರುವವರು ತಮ್ಮ ಕರ್ತವ್ಯವನ್ನು ತಾವೇ ನಿರ್ವಹಿಸಬೇಕೆಂಬುದನ್ನು ಮೊದಲು ಅರಿತುಕೊಳ್ಳಬೇಕು. ಕರ್ಮವಿಲ್ಲದೆ ಕೇವಲ ಅಭಿಲಾಷೆಯಿಂದ ಅದು ಸಾಧ್ಯವೂ ಇಲ್ಲ. ಇಲ್ಲಿ ಕುಳಿತಲ್ಲಿಂದಲೇ ಎಲ್ಲವನ್ನೂ ಸಾಧಿಸುವ ಜಪತಪಗಳನ್ನೇನೂ ನಾವು ಕಲಿತಿಲ್ಲ. ಸತ್ಯವನ್ನು ಬಹಿರಂಗಗೊಳಿಸಲೂ, ಸತ್ಯಸೇವೆಯಲ್ಲಿ ಗಣನೀಯ ಪಾತ್ರವಹಿಸಲೂ ನಮಗೆ ಸಾಧ್ಯವಿದೆ. ಆದರೆ ಇತರರಲ್ಲಿ ಸತ್ಯ ಸೇವೆಯ ಧೃಡ ನಿರ್ಧಾರವನ್ನು ಹುಟ್ಟಿಸಲು ನಮ್ಮಿಂದ ಸಾಧ್ಯವಿಲ್ಲ.

ಜಮಾಅತೆ ಇಸ್ಲಾಮಿಯ ನಡಿಗೆಯ ವೇಗವನ್ನು ತೀವ್ರಗೊಳಿಸಬೇಕೆಂದು ಕೆಲವರು ಬಯಸುತ್ತಾರೆ. ಶೀಘ್ರಗತಿಯಲ್ಲಿ ಸಾಗುತ್ತಿರುವ ಯಾವುದಾದರೂ ಪಕ್ಷದೊಂದಿಗೆ- ಅವರು ಶೀಘ್ರಗತಿಯಿಂದ ಎಲ್ಲಿಗೆ ಬೇಕಿದ್ದರೂ ಚಲಿಸುತ್ತಿರಲಿ-ಸಹಕರಿಸಬೇಕೆಂದೂ ಹೇಳುತ್ತಾರೆ. ಈ ರೀತಿಯಿಂದ ಆಲೋಚಿಸುವವರು, ವಾಸ್ತವದಲ್ಲಿ ಜಮಾಅತೆ ಇಸ್ಲಾಮಿಯ ಸ್ವಭಾವದಿಂದ

ಇನ್ನೂ ಬಹುದೂರವಿದ್ದಾರೆ. ಅಂಥವರು ತಮ್ಮ ವೈಚಾರಿಕ ಗೊಂದಲದ ನಿವಾರಣೆಗಾಗಿ ಜಮಾಅತ್‌ನ ಸಾಹಿತ್ಯಗಳನ್ನು ಗಮನವಿಟ್ಟು ಓದಲಿ. ನಮ್ಮ ಉದ್ದೇಶವು ಬರೇ ನಾಗಾಲೋಟವಾಗಿರದೆ ಸರಿಯಾದ ದಿಕ್ಕಿಗೆ ವೇಗವಾಗಿ ಸಾಗುವುದಾಗಿದೆ. ನಮ್ಮ ದೃಷ್ಟಿಯಲ್ಲಿ ದುರ್ಮಾರ್ಗದೆಡೆಗೆ ಧಾವಿಸುವುದಕ್ಕಿಂತ ಸನ್ಮಾರ್ಗದೆಡೆಗೆ ಮುಖ ಮಾಡಿ ನಿಂತುಕೊಳ್ಳುವುದೂ ಉತ್ತಮ. ತಪ್ಪು ಹಾದಿಯಲ್ಲಿ ಓಡುವವರನ್ನು ನೋಡಿ ಅಸೂಯೆ ಪಡುವುದು ಮೂಢತನ. ಅದನ್ನು ಅನುಕರಿಸಬೇಕೆಂಬ ಭಾವನೆಯು ಅಪಾಯಕಾರಿಯಾಗಿದೆ. ಇಂತಹ ವಿಚಾರಧಾರೆ ತಲೆಗೇರಿರುವವರು ಜಮಾಅತೆ ಇಸ್ಲಾಮಿಯನ್ನು ಸೇರುವುದಕ್ಕಿಂತ ಕ್ಷಿಪ್ರಗತಿಯ ಪಕ್ಷಗಳೊಂದಿಗೆ ಸೇರಿ ಅವರ ನಾಗಾಲೋಟವನ್ನು ಇನ್ನೂ ಸ್ವಲ್ಪ ಕಾಲ ಪರೀಕ್ಷಿಸುವುದು ಉತ್ತಮ. ಆ ಬಳಿಕ ಅವರು ಜಮಾಅತ್‌ಗೆ ಬರುವುದಿದ್ದರೆ ನಮಗೇನೂ ಆಕ್ಷೇಪವಿರಲಾರದು.

## ವಿರೋಧಗಳಿಗೆ ಸ್ವಾಗತ

ನಮ್ಮ ಸದಸ್ಯರಲ್ಲಿ ವಿರೋಧಗಳ ಬಗ್ಗೆ ಭೀತಿಭಾವನೆ ಕಡಿಮೆಯಾಗುತ್ತಿರುವುದು ಸಂತೋಷಕರ. ವಿರೋಧ ಮತ್ತು ಅಡೆತಡೆಗಳನ್ನು ಎದುರಿಸಿ ಮುನ್ನಡೆಯುವ ಮನೋಸ್ಥೈರ್ಯವು ಈಗ ಜನರಲ್ಲಿ ಉಂಟಾಗಲಾರಂಭಿಸಿದೆ. ಇದು ಸಂಘಟಿತ ಜೀವನದ ವರದಾನವಾಗಿದೆ. ಇದು ನಮ್ಮ ಸಂಘಟಿತ ಜೀವನದ ಪ್ರಗತಿಯು ಸರಿಯಾದ ಹಾದಿಯಲ್ಲಿ ಮುಂದೆ ಸಾಗುತ್ತಿರುವುದರ ಪ್ರತ್ಯಕ್ಷ ಸಾಕ್ಷಿಯಾಗಿದೆ. ಆದರೆ ಈ ಸಂದರ್ಭದಲ್ಲಿ ನಾವು ಒಂದು ವಿಷಯವನ್ನು ನೆನಪಿನಲ್ಲಿಡಬೇಕು. ನಾವು ಯಾವ ಮಾರ್ಗದಲ್ಲಿ ನಡೆಯಲಿಕ್ಕಾಗಿ ಸನ್ನದ್ಧರಾಗಿ ಹೊರಟಿದ್ದೇವೆಯೋ ಆ ಮಾರ್ಗದಲ್ಲಿರುವ ವಿರೋಧಗಳ ಬಗೆಗಿನ ಭಯಭೀತ ಮನೋಭಾವ ದೂರವಾದರೆ ಮಾತ್ರ ಸಾಲದು, ಅದು ಈ ಮಾರ್ಗದ ಪ್ರಾಥಮಿಕ ಅಗತ್ಯವಾಗಿದೆ. ಅದರ ಹೊರತು ಈ ಮಾರ್ಗದಲ್ಲಿ ಒಂದು ಹೆಜ್ಜೆಯಿರಿಸಲೂ ಸಾಧ್ಯವಿಲ್ಲ. ಆದರೆ ಅದು ಈ ಮಾರ್ಗದ ನೈಜ ಅಗತ್ಯವಲ್ಲ. ಅದಕ್ಕಿಂತಲೂ ಹಿರಿದಾದ ಅಗತ್ಯವೊಂದಿದೆ. ವಿರೋಧ ಮತ್ತು ಅಡೆತಡೆಗಳನ್ನು ಸ್ವಾಗತಿಸುವ ಭಾವನೆಯು ಹೃದಯದಲ್ಲಿ ಬೆಳೆದು ಬರಬೇಕು. ಮಾನವನು ಯಾವುದೇ ಮಾರ್ಗವನ್ನವಲಂಬಿಸಿದರೂ ಅದು ಸತ್ಯಮಾರ್ಗವಾಗಿರಲಿ- ಕೆಟ್ಟ ಮಾರ್ಗವಾಗಿರಲಿ- ಅದರಲ್ಲಿ ಆತನು ಪರೀಕ್ಷಿಸಲ್ಪಡುವನೆಂಬುದು ಅಲ್ಲಾಹನ ಶಾಶ್ವತ ನಿಯಮವಾಗಿದೆ. ಸತ್ಯಮಾರ್ಗದ ಬಗ್ಗೆ ಹೇಳುವುದಿದ್ದರೆ ಅದು ಸಾದ್ಯಂತ ಪರೀಕ್ಷೆಯಿಂದ ಕೂಡಿರುವುದೇ ಅದರ ವೈಶಿಷ್ಟ್ಯ. ಗಣಿತಶಾಸ್ತ್ರ ಪ್ರವೀಣನಾದ ಓರ್ವ ವಿದ್ಯಾರ್ಥಿಯೊಡನೆ ಬಹಳ ಕಠಿಣ ಪ್ರಶ್ನೆಯೊಂದನ್ನು ಕೇಳಿದರೆ ಆತನು ತನ್ನ ಬುದ್ಧಿ ಸಾಮರ್ಥ್ಯವನ್ನು ಒರೆಗೆ ಹಚ್ಚುವ ಉತ್ತಮ ಅವಕಾಶ ದೊರೆಯಿತೆಂದು ಸ್ವಾಭಾವಿಕವಾಗಿ ಸಂತೋಷ ಪಡುತ್ತಾನೆ. ಹಾಗೆಯೇ ನಿಷ್ಕಳಂಕ ಮತ್ತು ದೃಢಚಿತ್ತನಾದ ಓರ್ವ ಮೂಮಿನನು ಪ್ರತಿಯೊಂದು ಹೊಸ ಪರೀಕ್ಷಾ ಘಟ್ಟವನ್ನು ಎದುರಿಸುವಾಗಲೂ ತನ್ನ ಸತ್ಯನಿಷ್ಠೆ ಮತ್ತು ದೇವಭಕ್ತಿಯನ್ನು ಸಾಬೀತುಪಡಿಸುವ ಸುವರ್ಣಾವಕಾಶ ದೊರೆತುದಕ್ಕಾಗಿ ಅತ್ಯಂತ ಸಂತೋಷ ಪಡುತ್ತಾನೆ. ಮಂದಾಗುತ್ತಲಿರುವ ದೀಪದ ಬೆಳಕು ಗಾಳಿಯ ಸಣ್ಣ ಅಲೆಯಿಂದ ನಂದಿ ಬಿಡಬಹುದಾದರೂ ಉರಿಯುತ್ತಿರುವ ಬೆಂಕಿಯು ಅದೇ ಗಾಳಿಯಿಂದ ಇನ್ನಷ್ಟು ಪ್ರಬಲವಾಗಿ ಪ್ರಜ್ವಲಿಸುತ್ತದಲ್ಲವೇ. ತೀಕ್ಷ್ಣವಾಗಿ ಉರಿಯುವ ಬೆಂಕಿಯು ಒದ್ದೆ ಸೌದೆಗಳಿಂದ

ನಂದಿ ಹೋಗುವ ಬದಲಾಗಿ ಅವುಗಳನ್ನೇ ಉರಿಸಿ ಬಿಡುತ್ತವೆ. ಹಾಗೆಯೇ ವಿರೋಧಿಗಳಿಗೆ ಹೆದರಿ ಹೇಡಿಗಳಂತೆ ಹಿಂಜರಿಯುವ ಬದಲಾಗಿ ಅವುಗಳಿಂದ ಇನ್ನಷ್ಟು ಶಕ್ತಿ ಗಳಿಸಲು ಪ್ರಯತ್ನಿಸಬೇಕು. ಈ ಸಾಮರ್ಥ್ಯವು ನಮ್ಮಲ್ಲಿ ಬೆಳೆಯದೆ ಅಲ್ಲಾಹನ ಧರ್ಮಕ್ಕೆ ಉತ್ತಮ ರೀತಿಯ ಯಾವುದೇ ಸೇವೆ ಸಲ್ಲಿಸಲು ಸಾಧ್ಯವಿದೆಯೆಂದು ನಿರೀಕ್ಷಿಸುವಂತಿಲ್ಲ.

ವರದಿಗಳಲ್ಲಿ ನೀವು ಹೇಳಿರುವ ವಿರೋಧಗಳ ಸ್ವಭಾವವು ವಿವಿಧ ರೀತಿಯಲ್ಲಿದೆಯಾದರೂ ಅವುಗಳಲ್ಲಿ ಭಯಪಡುವಂಥದ್ದೇನೂ ಇಲ್ಲ. ಈ ಲೋಕದಲ್ಲಿ ಸತ್ಯದ ಸೇವೆಗಾಗಿ ಪ್ರಯತ್ನ ನಡೆದಾಗಲೆಲ್ಲಾ ಅದರೊಂದಿಗೆ ಈ ವಿರೋಧಗಳೂ ಹುಟ್ಟಿ ಕೊಂಡಿದ್ದವು. ಅಲ್ಲಾಹನ ಅತಿ ಶ್ರೇಷ್ಠವಾದ ಒಂದು ಯುಕ್ತಿಯ ಅನುಸಾರವಾಗಿಯೇ ಈ ರೀತಿ ಸಂಭವಿಸುತ್ತಿದೆಯೆಂದು ಕುರ್‌ಆನ್ ನಮಗೆ ತಿಳಿಯ ಪಡಿಸುತ್ತದೆ. ಈ ವಿರೋಧಗಳೇ ವಾಸ್ತವದಲ್ಲಿ ಓರ್ವ ನಿಷ್ಕಳಂಕ ಸತ್ಯವಿಶ್ವಾಸಿಯನ್ನೂ ಸಂದರ್ಭ ಸಾಧಕನನ್ನೂ ಬೇರ್ಪಡಿಸಿ ತೋರಿಸುವ ಒರೆಗಲ್ಲಾಗಿದೆ. ಆ ಮೂಲಕ ಮಾನವನಿಗೆ ನೀಡಲ್ಪಟ್ಟ ಅಧಿಕಾರ ಸ್ವಾತಂತ್ರ್ಯವು ಪರೀಕ್ಷಿಸಲ್ಪಡುತ್ತದೆ. ಆದ್ದರಿಂದ ಈ ವಿರೋಧಗಳ ಬಗ್ಗೆ ಹೆದರಬೇಕಾದ ಯಾವ ಅಗತ್ಯವೂ ಇಲ್ಲ. ಆದರೆ ಪ್ರತಿಯೊಂದು ಹಂತದಲ್ಲಿಯೂ ಪಾದಗಳಿಗೆ ಸ್ಥಿರತೆಯನ್ನು ನೀಡಲು ಹಾಗೂ ಈಮಾನ್ ಮತ್ತು ಧೈರ್ಯ ಸ್ಥೈರ್ಯಗಳನ್ನು ಸುರಕ್ಷಿತಗೊಳಿಸಲು ನಾವು ಅಲ್ಲಾಹನೊಡನೆ ಪ್ರಾರ್ಥಿಸಬೇಕು.

## ಒಂದು ಪ್ರಶ್ನೆಯ ಉತ್ತರ

ಜಮಾಅತೆ ಇಸ್ಲಾಮಿಯ ಸಂದೇಶವನ್ನು ಸಂಪೂರ್ಣವಾಗಿ ಅಲ್ಲಾಹನ ಗ್ರಂಥ ಮತ್ತು ಪ್ರವಾದಿಯ ಸುನ್ನತ್‌ನಿಂದ ತೆಗೆದುಕೊಳ್ಳಲಾಗಿದೆ; ಮಾತ್ರವಲ್ಲ ಅದು ಕುರ್‌ಆನ್ ಮತ್ತು ಸುನ್ನತ್‌ನ ಬೋಧನೆಯೇ ಆಗಿದೆ. ವಿರೋಧಿಗಳು ತೀವ್ರವಾಗಿ ಪ್ರಯತ್ನಿಸಿದ್ದರೂ ಜಮಾಅತ್‌ನ ಒಂದೇ ಒಂದು ಸಿದ್ಧಾಂತವಾದರೂ ಕುರ್‌ಆನ್ ಮತ್ತು ಸುನ್ನತ್‌ಗೆ ವಿರುದ್ಧವಾಗಿದೆಯೆಂದು ಸಾಬೀತು ಪಡಿಸಲು ಅವರಿಂದಾಗಲಿಲ್ಲ. ಹೀಗಿರುತ್ತಾ ಮುಸ್ಲಿಮರು ಈ ಧರ್ಮಸೇವೆಯನ್ನು ಸ್ವೀಕರಿಸಲು ತಡಮಾಡುತ್ತಿರುವುದು ಏಕೆ? ಇದು ಜಮಾಅತ್ ಸದಸ್ಯರಲ್ಲಿ ಸಾಮಾನ್ಯವಾಗಿ ಏಳುವ ಪ್ರಶ್ನೆ. ಈ ಪ್ರಶ್ನೆಯು ನಮ್ಮಲ್ಲಿ ಅನೇಕರನ್ನು ಅಚ್ಚರಿಗೊಳಿಸಿದೆ. ಇತರ ಈ ನಿರ್ಲಕ್ಷ್ಯದಿಂದಾಗಿ ನಮ್ಮ ಪೈಕಿಯೇ ಕೆಲವರ ದೃಷ್ಟಿಯಲ್ಲಿ ಸುಸ್ಪಷ್ಟಗೊಂಡಿರುವ ಸತ್ಯದ ಬೆಲೆ ಮತ್ತು ಸ್ಥಾನಮಾನಗಳು ಕಡಿಮೆಯಾಗುತ್ತದೆ. ಆದ್ದರಿಂದ ಈ ಪ್ರಶ್ನೆಯ ಕುರಿತು ಗಂಭೀರವಾಗಿ ಆಲೋಚಿಸುವ ಅಗತ್ಯವಿದೆ. ಈ ಬಗ್ಗೆ ನಾನು ಆಲೋಚಿಸಿ ತಿಳಿದಿರುವ ಮಟ್ಟಿಗೆ ಹೇಳುವುದಿದ್ದರೆ, ನಿಷ್ಕಳಂಕವಾದ ಈ ಇಸ್ಲಾಮಿ ಪ್ರಚಾರದಿಂದ ಮುಸ್ಲಿಮರು ಮುಖ ತಿರುಗಿಸುವುದಕ್ಕೆ ಆಳವಾಗಿ ಬೇರು ಬಿಟ್ಟಿರುವ ಕೆಲವು ಕಾರಣಗಳಿವೆ. ಮುಸ್ಲಿಮರು ಇಂದಿನ ಈ ಶೋಚನೀಯ ಅವಸ್ಥೆಗೆ ಒಂದೆರಡು ದಿನಗಳಲ್ಲಿ ತಲುಪಿದ್ದಲ್ಲ. ಹಲವು ಕಾಲದಿಂದ ಹಂತ ಹಂತವಾಗಿ ಅವರನ್ನು ಈ ಶೋಚನೀಯಾವಸ್ಥೆಗೆ ದೂಡಲಾಗಿದೆ. ಅದರ ಪ್ರತಿಯೊಂದು ಹಂತದಲ್ಲಿಯೂ ಅವರನ್ನು ಕುರ್‌ಆನ್ ಮತ್ತು ಸುನ್ನತ್‌ನ ಮೂಲಕವೇ ಸಾಂತ್ವನಗೊಳಿಸುವ ಪ್ರಯತ್ನಗಳು ನಡೆದಿವೆ. ಹೌದು, ಅವರ ಈ ಅವಸ್ಥೆಯು ಕುರ್‌ಆನ್ ಮತ್ತು ಸುನ್ನತ್‌ಗೆ ಅನುಗುಣವಾಗಿದೆಯೆಂದು ಬಿಂಬಿಸಲು ತೀವ್ರವಾಗಿ ಪ್ರಯತ್ನಿಸಲಾಗಿತ್ತು. ಅವರು ಸತ್ಯದಿಂದ ವಿಮುಖವಾಗಿ ದೀರ್ಘಕಾಲ

ಕಳೆದಿದೆ. ದುರ್ಮಾರ್ಗದೆಡೆಗಿನ ಪ್ರತಿಯೊಂದು ಹೆಜ್ಜೆಯಲ್ಲಿಯೂ ಅದು ಧರ್ಮ ಮತ್ತು ಕರ್ಮಶಾಸ್ತ್ರಕ್ಕೆ ಅನುಗುಣವಾದ ಸನ್ಮಾರ್ಗವೆಂಬ ಭ್ರಮೆಯಿಂದ ಹಲವು ಕಾಲ ಅವರು ಅದರಲ್ಲಿ ನಿಂತಿದ್ದರು. ಅವರ ಈ ತಪ್ಪು ತಿಳುವಳಿಕೆಗಳನ್ನು ದೃಢಗೊಳಿಸುವಲ್ಲಿ ಧರ್ಮದ ಗುತ್ತಿಗೆದಾರರೆಂದು ವಾದಿಸುವವರು ಗಣನೀಯ ಪಾತ್ರ ವಹಿಸಿದರು. ಅವರ ಸತ್ಯಭ್ರಷ್ಟತೆಯ ಸಮರ್ಥನೆಗಾಗಿ ಮಾತ್ರವಲ್ಲ, ಅದುವೇ ಉತ್ತಮವೆಂದು ಸಾಬೀತುಪಡಿಸಲಿಕ್ಕಾಗಿ ಬೃಹತ್ ಗ್ರಂಥಗಳನ್ನು ರಚಿಸಲಾಯಿತು. ಈ ರೀತಿ ಅವರು ತಾವು ಇರಿಸುವ ಪ್ರತಿಯೊಂದು ಹೆಜ್ಜೆಯೂ ಧರ್ಮದ ಮಿತಿಗಳೊಳಗೆಯೇ ಇದೆಯೆಂದು ನಂಬಿದರು. ಇಂದು ಅವರು ನೆಲೆ ನಿಂತಿರುವ ಸ್ಥಾನವು ಧರ್ಮದಲ್ಲಿ ಅನುಮತಿಸಲ್ಪಟ್ಟ ಸ್ಥಾನವೆಂದೇ ಅವರು ಲೆಕ್ಕ ಹಾಕುತ್ತಾರೆ. ಯಾವ ಜನ ವಿಭಾಗವನ್ನು ಹಂತಹಂತವಾಗಿ ತಮಗರಿವಿಲ್ಲದಂತೆಯೇ ಅಧಃಪತನಕ್ಕೀಡು ಮಾಡಲಾಗಿದೆಯೋ ಅದರ ಚರಿತ್ರೆಯು ತುಂಬಾ ದೀರ್ಘವಾಗಿದೆ. ಅದಕ್ಕೆ ತಾವು ಪತನ ಗೊಂಡಿಲ್ಲ. ಬದಲಾಗಿ ಕುಪ್ಪಳಿಸುತ್ತಿದ್ದೇವೆಂದು ನಂಬಿಸಲಾಗಿದೆ. ಅವರು ತಮ್ಮ ಹಿಂದಿನ ಸ್ಥಿತಿಯು ಶರೀಅತ್‌ನಿಂದ ಬೇರ್ಪಟ್ಟಿರದೆ ಅದಕ್ಕನುಗುಣವಾಗಿಯೇ ಇದೆಯೆಂಬ ತಪ್ಪು ಗ್ರಹಿಕೆಗೆ ಒಳಗಾಗಿರುವ ಅವರು ನಿಮ್ಮ ಸಂದೇಶವನ್ನು ಸುಲಭದಲ್ಲಿ ಸ್ವೀಕರಿಸಬಹುದೇ ನಿಮ್ಮ ಕರೆಯೂ ಅವರಲ್ಲಿ ಆಂಶಿಕವಾದ ಯಾವುದಾದರೂ ಬದಲಾವಣೆಯನ್ನಾಗಲೀ ಸುಧಾರಣೆಯನ್ನಾಗಲೀ ಬಯಸುವುದಿಲ್ಲ. ಬದಲಾಗಿ ಅದು ನೈಜ ಪಶ್ಚಾತ್ತಾಪ, ಆಮೂಲಾಗ್ರ ಬದಲಾವಣೆ ಮತ್ತು ಸುಧಾರಣೆಯನ್ನು ಬಯಸುತ್ತದೆ. ಸತ್ಯವಿಶ್ವಾಸಿಗಳೆಂದು ಪ್ರತಿಪಾದಿಸುವವರು ನೈಜ 'ಮುಅ್‌ಮಿನ್'ಗಳಾಗಬೇಕೆಂದು ವಿನಂತಿಸುವ ಮೂಲಕ ನೀವು ಅವರ ವಿಶ್ವಾಸ, ಆಚಾರ, ಕರ್ಮಾದಿಗಳೂ ಸೇರಿರುವಂತೆ ಜೀವನದ ಎಲ್ಲಾ ರಂಗಗಳಲ್ಲಿರುವ ಕುಂದು ಕೊರತೆಗಳನ್ನು ಬೊಟ್ಟು ಮಾಡಿ ತೋರಿಸುವಾಗ ಅವರ ಹೃದಯಕ್ಕೆ ನೋವಾಗುವುದು ಸ್ವಾಭಾವಿಕ. ತಾವು ಧರ್ಮಭಕ್ತರು ಮತ್ತು ಧರ್ಮಾವಲಂಬಿಗಳೆಂಬ ಅವರ ದೀರ್ಘ ಕಾಲೀನ ಅಭಿಮಾನಕ್ಕೆ ಧಕ್ಕೆಯುಂಟಾಗುತ್ತದೆ. ಆದ್ದರಿಂದ ಈ ತನಕ ತಪ್ಪು ಹಾದಿಯಲ್ಲಿ ನಡೆಯುತ್ತಿದ್ದೇವೆಂಬುದನ್ನು ಒಪ್ಪಿಕೊಳ್ಳಲು ಅವರು ಅಷ್ಟು ಬೇಗ ಸಿದ್ಧರಾಗಲಾರರು. ತನ್ನೊಂದಿಗೆ ಅತ್ಯಧಿಕ ರಿಯಾಯಿತಿ, ಔದಾರ್ಯ ತೋರಬೇಕೆಂದು ಬಯಸುವುದು ಮಾನವನ ಸ್ವಭಾವವಾಗಿದೆ. ಮಾತ್ರವಲ್ಲ ಇಸ್ಲಾಮ್ ಧರ್ಮವನ್ನು ಯಾವ ಪರಿಸ್ಥಿತಿಗೂ ಹೊಂದಿಸಿಕೊಳ್ಳಬಹುದಾದಂತಹ ಒಂದು ಸುಲಭ ಧರ್ಮವೆಂದು ಅವರು ಬಗೆದಿದ್ದಾರೆ. ಆದ್ದರಿಂದ ನಾವು ಅವರ ಮುಂದಿಡುವ ಕ್ಲಿಷ್ಟಕರವಾದ ಈ ಇಕ್ಕಟ್ಟಿನ ಮಾರ್ಗಕ್ಕೆ ಬರಲು ಅವರು ಹೆದರುತ್ತಾರೆ. ತಾವು ಇಂದು ತಾಳಿರುವ ನಿಲುಮೆಯು ಧರ್ಮಕ್ಕೆ ವಿರುದ್ಧವಲ್ಲದಿರುವಾಗ ಜೀವನವನ್ನು ಸುಮ್ಮನೆ ಬಂಧನಕ್ಕೊಳಪಡಿಸುವ ಅಗತ್ಯವಿಲ್ಲವೆಂದು ಅವರು ಭಾವಿಸುತ್ತಾರೆ. ಆದ್ದರಿಂದ ಅವರ ಇಂದಿನ ಜೀವನಕ್ಕೆ ಇಸ್ಲಾಮಿನೊಂದಿಗೆ ಯಾವ ಸಂಬಂಧವೂ ಇಲ್ಲವೆಂಬ ಸತ್ಯವನ್ನು ಅವರಿಗೆ ಮನದಟ್ಟು ಮಾಡಿಸಿ, ಆ ಸತ್ಯದ ಅಂಗೀಕಾರಕ್ಕಾಗಿ ಧ್ಯೇಯ ಮತ್ತು ಸಾಕ್ಷ್ಯಾಧಾರಗಳಿಂದ ಅವರ ಹೃದಯಗಳನ್ನು ನಾವು ತಟ್ಟದಿರುವ ತನಕ ಅವರು ನಮ್ಮ ಕರೆಯನ್ನು ಸ್ವೀಕರಿಸಲಾರರು. ಆದರೆ ಈ ಕೆಲಸ ಅಷ್ಟು ಸುಲಭವಲ್ಲ. ಹಾಗೆಯೇ ಅದನ್ನು ಎಲ್ಲರಿಂದ ನಿರ್ವಹಿಸಲು ಸಾಧ್ಯವೂ ಇಲ್ಲ. ನಮ್ಮ ಧರ್ಮ ಪ್ರಚಾರದ ಈ ಅಂಶವನ್ನು ನೋಡಿಯೇ ಜನರು ಹೆದರುತ್ತಾರೆ.

ಆದರಿಂದಾಗಿಯೇ ತಪ್ಪು ತಿಳುವಳಿಕೆ ಹುಟ್ಟಿಕೊಂಡು ನಮ್ಮ ವಿರುದ್ಧ ಜನರನ್ನು ಎತ್ತಿ ಕಟ್ಟಲು ಎದುರಾಳಿಗಳಿಗೆ ಸಂದರ್ಭವೂ ದೊರೆಯುತ್ತದೆ. ಆದ್ದರಿಂದ ಜಮಾಅತಿನ ಹೊಣೆಗಾರ ವ್ಯಕ್ತಿಗಳಾದರೂ ಧರ್ಮ ಪ್ರಚಾರದ ಈ ಅಂಶವನ್ನು ಚೆನ್ನಾಗಿ ತಿಳಿದಿರಬೇಕು. ಆ ಬಗ್ಗೆ ಸರಿಯಾಗಿ ತಿಳಿದು ಕೊಂಡವರು ಜನರೊಂದಿಗೆ ಮಾತನಾಡುವ ಬಗ್ಗೆ ಜಾಗ್ರತೆ ವಹಿಸಬೇಕು. ಹಾಗಲ್ಲದಿದ್ದರೆ ನಮ್ಮ ಕಾರ್ಯಭಾರಕ್ಕೆ ಅಡ್ಡಿಯುಂಟಾಗಬಹುದು.

## ವಿದ್ವಾಂಸರ ನಿರ್ಲಕ್ಷ್ಯ ನೀತಿ

ನಮ್ಮ ಧರ್ಮ ಪ್ರಚಾರ ಚಟುವಟಿಕೆಗಳ ಬಗ್ಗೆ ಮುಸ್ಲಿಮ್ ಜನಸಾಮಾನ್ಯರ ನಿರ್ಲಕ್ಷ್ಯವನ್ನು ಈ ಹಿಂದೆ ಪ್ರಸ್ತಾಪಿಸಿದ್ದೇನೆ. ಇನ್ನು ವಿದ್ವಾಂಸರ ಸ್ಥಿತಿಯನ್ನು ನೋಡೋಣ. ವಾಸ್ತವದಲ್ಲಿ ಮುಸ್ಲಿಮರ ಇಂದಿನ ಶೋಚನೀಯಾವಸ್ಥೆಗೆ ವಿದ್ವಾಂಸರೇ ಕಾರಣಕರ್ತರಾಗಿರುವರೆಂಬುದು ಎಲ್ಲರಿಗೂ ತಿಳಿದಿದೆ. ಧರ್ಮಭಕ್ತಿ, ತಕ್ವಾ, ಇಸ್ಲಾಮ್, ಈಮಾನ್, ತೌಹೀದ್, ರಿಸಾಲತ್ ಮುಂತಾದವುಗಳ ಕುರಿತು ಜನಮನದಲ್ಲಿ ಮೂಡಿರುವ ಇಂದಿನ ಸಂಕುಚಿತ ಕಲ್ಪನೆಗಳೆಲ್ಲವೂ ಅಂತಹ ವಿದ್ವಾಂಸರ ಕೊಡುಗೆಯಾಗಿದೆ. ಆದರೂ ಇಸ್ಲಾಮನ್ನು ಎಲ್ಲಾ ವಿಧ ಆಪತ್ತುಗಳಿಂದಲೂ ಪ್ರತಿಕೂಲ ಪರಿಸ್ಥಿತಿಯಿಂದಲೂ ತಾವೇ ರಕ್ಷಿಸಿದ್ದೇವೆಂದೂ ಈಗಲೂ ರಕ್ಷಿಸುತ್ತಿರುವೆವೆಂದೂ ಅವರು ವಾದಿಸುತ್ತಾರೆ. ಅದು ತಮ್ಮಿಂದಲೇ ಸಾಧ್ಯವೆಂದೂ ಅವರು ಭಾವಿಸುತ್ತಾರೆ. ಇಂತಹ ಘೋರ ತಪ್ಪು ತಿಳುವಳಿಕೆ ಮತ್ತು ಭ್ರಮೆಗೊಳಗಾಗಿರುವ ಜನರು, ತಾವು ಈ ತನಕ ಅನುಸರಿಸುತ್ತಿರುವ ನಾಯಕತ್ವವು ದೋಷಪೂರ್ಣವಾಗಿದ್ದು, ಇಂತಿಂತಹ ಸಂಘಟನೆಯು ಆಹ್ವಾನಿಸುತ್ತಿರುವ ಮಾರ್ಗವೇ ಸರಿಯೆಂದು ಹೃತ್ಪೂರ್ವಕವಾಗಿ ಒಂದೇ ಬಾರಿಗೆ ಒಪ್ಪಿಕೊಳ್ಳುವರೆಂದು ನಿರೀಕ್ಷಿಸಲು ಸಾಧ್ಯವಿದೆಯೇ? ಸ್ಪಷ್ಟವಾದ ಸತ್ಯವನ್ನು ಬಹಿರಂಗವಾಗಿ ಒಪ್ಪಿಕೊಳ್ಳುವ ವಿಷಯದಲ್ಲಿ ಸಂಕೋಚ ಪಡದಿರುವುದೇ ಸತ್ಯನಿಷ್ಠೆಯಾಗಿದೆ. ಸತ್ಯವನ್ನು ಒಪ್ಪಿಕೊಂಡು ಅದನ್ನು ಬಹಿರಂಗ ಪಡಿಸುವುದರಲ್ಲಿ ನಿಂದಕರ ನಿಂದೆಗಳನ್ನು ಲೆಕ್ಕಿಸದಿರುವುದೇ ಓರ್ವ ಸತ್ಯನಿಷ್ಠನ ಉತ್ಕೃಷ್ಟಗುಣವೆಂದು ಕುರ್‌ಆನ್ ಎತ್ತಿ ಹೇಳಿದೆ. ಆದರೆ ಮಾನವ ಸಹಜವಾಗಿರುವ ನ್ಯೂನ್ಯತೆಗಳು ಜನಸಾಮಾನ್ಯರಲ್ಲಿ ಕಂಡು ಬರುವಂತೆ ಗಣ್ಯರಲ್ಲಿಯೂ ಇವೆ. ಧರ್ಮನಿಷ್ಠರೆಂಬ ಜನಸಾಮಾನ್ಯರ ಅಹಂಕಾರವು ಈಮಾನನ್ನು ನವೀಕರಿಸುವ ಅಪಮಾನವನ್ನು ಸಹಿಸಲು ಅವರನ್ನು ಬಿಡದಂತೆಯೇ ತಮ್ಮ ದೋಷಪೂರ್ಣ ಮಾರ್ಗದರ್ಶನವನ್ನು ಸ್ವಂತ ನಾಲಗೆಯಿಂದ ಒಪ್ಪಿಕೊಳ್ಳಲು ಅವರ ನಾಯಕರ ಅಹಂಕಾರವು ಬಿಡುವುದಿಲ್ಲ. ಅವರು ದೋಷಪೂರ್ಣ ಮಾರ್ಗದಲ್ಲಿ ತುಂಬಾ ದೂರ ಸಾಗಿದ್ದಾರೆ. ಅಲ್ಲಿಂದ ಮರಳುವುದು ಅವರಿಗೆ ತುಂಬಾ ಕಷ್ಟದ ಕೆಲಸ. ಧರ್ಮಭಕ್ತಿಯ ಬಗ್ಗೆ ಅವರ ಅಹಂಕಾರವು ಲೌಕಿಕ ಅಹಂಕಾರಕ್ಕಿಂತ ಆಪತ್ಕಾರಿಯೆಂಬ ಸತ್ಯವನ್ನು ನೀವು ಮರೆಯಬಾರದು. ಸ್ವೇಚ್ಛೆಯ ಗುಲಾಮರಾಗಿ ಲೌಕಿಕಾನಂದಗಳಲ್ಲಿ ಮುಳುಗಿರುವವರ ಹೃದಯದಲ್ಲಿ ಪ್ರಾಯಶಃ ಸತ್ಯದ ಪ್ರಕಾಶವು ಎಂದಾದರೂ ಪ್ರವೇಶಿಸಿದರೆ ಅವರಿಗೆ ಪ್ರಜ್ಞೆ ಬಂದು ಎದ್ದು ನಿಲ್ಲಬಹುದು. ಅವರ ಕಣ್ಣುಗಳು ತೆರೆದು ಅವರು ಸನ್ಮಾರ್ಗವನ್ನು ಕಾಣಲಾರಂಭಿಸಬಹುದು. ಈ ಮಾರ್ಗದಲ್ಲಿ ಅಸಡ್ಡೆ, ನಿರ್ಲಕ್ಷ್ಯ ಅಥವಾ ಹೇಡಿತನವಷ್ಟೆ ಅವರಿಗೆ ಅಡ್ಡಿಯಾಗಬಹುದು. ಹೃದಯದ ಅತೀ ತುಚ್ಛ ಬದಲಾವಣೆಗಳಿಂದಲೇ

ಅವುಗಳನ್ನು ತೊಲಗಿಸಲು ಸಾಧ್ಯವಿದೆ. ಆದರೆ ತಮ್ಮ ತಪ್ಪುಗಳನ್ನು ಧರ್ಮ ಮತ್ತು ದೇವಭಕ್ತಿಯೆಂದು ನಂಬಿ, ಇತರರನ್ನು ನಂಬಿಸುವವರು ತಮಗೆ ಪ್ರಿಯವಾದ ಮೂರ್ತಿಗಳನ್ನು ತಾವೇ ನುಚ್ಚುನೂರು ಗೊಳಿಸಿ ಒಂದು ಹೊಸ ಧರ್ಮವನ್ನು ಸ್ವೀಕರಿಸುವುದು ತುಂಬಾ ಕಷ್ಟದ ಕೆಲಸ.

ಅದೊಂದು ದೊಡ್ಡ ಸಂಘರ್ಷ. ಕೆಲವೇ ಮಂದಿ ಅದಕ್ಕೆ ಬೇಕಾದ ಯೋಗ್ಯತೆಯನ್ನು ಪ್ರದರ್ಶಿಸುತ್ತಾರೆ. ಈ ದೋಷವು ತಮ್ಮ ಪಂಡಿತರಿಗೆ ತಟ್ಟಿರುವುದರಲ್ಲಿ ಏನೂ ಆಶ್ಚರ್ಯವಿಲ್ಲ. ಅಲ್ಲಾಹನು ಪ್ರತಿಯೊಬ್ಬರಿಗೂ ಅವರವರ ಸ್ಥಿತಿಗತಿಗಳಿಗೆ ತಕ್ಕಂತಹ ಪರೀಕ್ಷೆಗಳನ್ನು ಇಟ್ಟಿದ್ದಾನೆ. ಯಾರ ದೃಷ್ಟಿಯು ಎಷ್ಟು ಪ್ರಬಲವಾಗಿರುವುದೋ ಅವರ ಮಟ್ಟಿಗೆ ಪರೀಕ್ಷೆಯೂ ಅಷ್ಟೇ ಜಟಿಲವಾಗಿರುವುದು.

"ನಮ್ಮ ಧರ್ಮ ಪ್ರಚಾರದಲ್ಲಿರುವ ತಪ್ಪೇನೆಂಬುದನ್ನು ಎತ್ತಿ ತೋರಿಸಲು ಪ್ರಸ್ತುತ ವಿಭಾಗದಲ್ಲಿ ಯಾರಿಗೂ ಈ ತನಕ ಸಾಧ್ಯವಾಗಿಲ್ಲ. ಆದರೆ ನಮ್ಮ ಚಟುವಟಿಕೆಗಳೇ ಇಸ್ಲಾಮಿನ ನೈಜ ಬೇಡಿಕೆಯೆಂದು ಅವರೇ ಒಪ್ಪುತ್ತಾರೆ. ಆದರೆ ಅವರ ಹೃದಯವು ಅದನ್ನು ಒಪ್ಪಿಕೊಳ್ಳಲು ಸಿದ್ಧವಿಲ್ಲ. ಆದ್ದರಿಂದಲೇ ಅದರ ವಿರುದ್ಧ ಏನಾದರೂ ಹೇಳಿ ಬಿಡುತ್ತಾರೆ. ವಿದ್ಯಾವಂತ ಜನರು ಸೂರ್ಯನಿಗಿಂತ ಸ್ಪಷ್ಟವಾದ ಸತ್ಯದ ವಿರುದ್ಧ ಏನಾದರೂ ಹೇಳಲು ಹೊರಟರೆ ಅವುಗಳಲ್ಲಿ ಲೋಪವನ್ನು ಗುರುತಿಸಲು ಸಾಧ್ಯವಿದೆ. ಹಾಗೆಯೇ ಈ ವಿಭಾಗವು ಕೆಲವು ಲೋಪಗಳನ್ನು ಸೃಷ್ಟಿಸಿಕೊಂಡಿವೆ. ನೈಜ ಧರ್ಮ ಪ್ರಚಾರ ಚಟುವಟಿಕೆಗಳ ವಿರುದ್ಧ ಆರೋಪಿಸಲು ಅವರಿಗೆ ಏನೂ ದೊರೆಯದ ಕಾರಣ ಪ್ರಚಾರಕನ ಅಂತರಾಳದಿಂದಲಾದರೂ ಕೆಲವು ಲೋಪದೋಷಗಳನ್ನು ಹುಡುಕಿ ಹೊರ ತೆಗೆಯುತ್ತಾರೆ. ಉದಾಹರಣೆಗಾಗಿ, ಈ ಧರ್ಮ ಪ್ರಚಾರವು ಕುರ್‌ಆನ್ ಮತ್ತು ಸುನ್ನತ್‌ಗೆ ಅನುಗುಣವಾಗಿದ್ದರೂ ಅದನ್ನು ನಿರ್ವಹಿಸುತ್ತಿರುವ ಜನರು ನಂಬಿಗಸ್ತರಲ್ಲ. ಆದ್ದರಿಂದ ಅವರನ್ನು ನಾವು ಹಿಂಬಾಲಿಸುವ ಬದಲಾಗಿ ಬೇರೆ ಇಂತಿಂಥವರ ಹಿಂದೆ ಹೋಗುತ್ತಿದ್ದೇವೆ, ಅವರ ಪ್ರಚಾರ ಕಾರ್ಯವು ದೋಷಪೂರ್ಣವಾಗಿದ್ದರೂ ಸ್ವಂತ ನೆಲೆಯಲ್ಲಿ ಅವರು ಮುತ್ತಕೀಗಳು ಮತ್ತು ನಂಬಿಗಸ್ತರಾಗಿದ್ದಾರೆ. ಇದು ಎಷ್ಟೊಂದು ವಿಚಿತ್ರ ಮತ್ತು ಅಸಹ್ಯ ಮಾತು. ಈ ಜನರು ಸತ್ಯದ ಸ್ಥಾನವನ್ನು ವ್ಯಕ್ತಿಗೆ ನೀಡುತ್ತಾರೆ. ತಾವೆಲ್ಲಿ ಹೋದರೂ ಸತ್ಯವು ತಮ್ಮನ್ನು ಹಿಂಬಾಲಿಸುತ್ತದೆಯೆಂಬುದು ಅವರ ಭಾವನೆಯಾಗಿದೆ. ಅವಿವೇಕ ಪೂರ್ಣ ಅಜ್ಞಾನ, ಜನ್ಯ ಪಕ್ಷಪಾತಕ್ಕೆ ಇದಕ್ಕಿಂತ ದೊಡ್ಡ ಉದಾಹರಣೆ ಇರಬಹುದೆ? ನಾವು ಹೇಳುವುದು ವಾಸ್ತವದಲ್ಲಿ ಸತ್ಯವಾಗಿದೆಯೆಂದಾದರೆ ಅದನ್ನು ಸ್ವೀಕರಿಸುವ ವಿಷಯದಲ್ಲಿ ನಮ್ಮ ಲೋಪಗಳು ತಡೆಯಾಗಬಾರದು. ನಾವು ಅಸಮರ್ಥರಾಗಿದ್ದರೆ ಅವರೇ ಸ್ವಯಂ ಮುಂದೆ ಬಂದು ಧರ್ಮ ಪ್ರಚಾರ ಕಾರ್ಯವನ್ನು ವಹಿಸಿಕೊಂಡು ಮುನ್ನಡೆಯಬೇಕು. ಅವರ ಹಿಂದೆ ನಡೆಯುವುದನ್ನು ನಾವು ಅಪಮಾನವೆಂದು ಭಾವಿಸುವುದಿಲ್ಲ. ಆದರೆ ತಮ್ಮ ಅಭಿಪ್ರಾಯದಂತೆ ಧರ್ಮ ಪ್ರಚಾರಕನು ದೇವಭಕ್ತನಾಗಿದ್ದರೆ ಆತನ ಹಿಂದೆ ಯಾವ ದುರ್ಮಾರ್ಗದಲ್ಲಿಯೂ ಚಲಿಸುವ ಹಾಗೂ ಸತ್ಯವೆಂದು ಸ್ವಯಂ ಒಪ್ಪಿಕೊಳ್ಳುವ ಮಾರ್ಗದ ಪ್ರಬೋಧಕನು ತಮ್ಮ ಸಾಂಕೇತಿಕ ಧರ್ಮ ಭಕ್ತಿಯ ಬಿಲ್ಲೆಯನ್ನು ಅಂಟಿಸಿಲ್ಲವೆಂಬ ಕಾರಣಕ್ಕಾಗಿ ಆ ಮಾರ್ಗವನ್ನು ತಿರಸ್ಕರಿಸುವ ಔಚಿತ್ಯ ನಮಗೆ ಅರ್ಥವಾಗುವುದಿಲ್ಲ. ತಮ್ಮ ಈ ನೀತಿಯಿಂದ ಅವರೇ ಸಂತೃಪ್ತರಾಗಿಲ್ಲವೆಂದು

ನಮಗೆ ಖಚಿತವಿದೆ. ಹೆಚ್ಚು ತಡ ಮಾಡದೆ ಅವರ ಲೋಪ ದೋಷಗಳನ್ನು ಅವರಿಗೆ ಸ್ಪಷ್ಟ ಪಡಿಸಲಾಗುವುದು. ಇಂದಲ್ಲದಿದ್ದರೆ ನಾಳೆ ಸತ್ಯವು ಪಕ್ಷ ಅಥವಾ ವೈಯಕ್ತಿಕ ಪಕ್ಷಪಾತಕ್ಕಿಂತ ಉನ್ನತವಾದುದೆಂದು ಅವರು ಕಂಡುಕೊಳ್ಳುವರು. ಸತ್ಯದ ಬದಲಾಗಿ ವ್ಯಕ್ತಿಗಳನ್ನು 'ಕಿಬ್ಲಾ' ಮತ್ತು 'ಕಅಬಾ'ವನ್ನಾಗಿ ಮಾಡಿಕೊಳ್ಳುವ ಜನರು ವಾಸ್ತವದಲ್ಲಿ ಸತ್ಯಕ್ಕಲ್ಲ, ತಮಗೇ ನಷ್ಟವನ್ನು ತಂದು ಕೊಳ್ಳುತ್ತಾರೆ."

## ಇಸ್ಲಾಮೀ ಆಡಳಿತದ ಕುರಿತು ತಪ್ಪು ತಿಳುವಳಿಕೆ

ಜಮಾಅತೆ ಇಸ್ಲಾಮೀಯ ಮುಂದಿರುವ ಧ್ಯೇಯವನ್ನು ಅತ್ಯುತ್ತಮ ವ್ಯಕ್ತಿಗಳಿಂದಲೂ 30 ವರುಷಗಳಿಗಿಂತ ಹೆಚ್ಚು ಕಾಲ ಉಳಿಸಿಕೊಳ್ಳಲಾಗಿಲ್ಲ. ಹೀಗಿರುತ್ತಾ ಇಂದು ಆ ವ್ಯವಸ್ಥೆಯನ್ನು ಸ್ಥಾಪಿಸಿ ಮುನ್ನಡೆಸುವ ಜನ ಹೇಗೆ ದೊರೆತಾರು? ಅದು ಅವರ ಕೈಗಳಲ್ಲಿ ದೀರ್ಘ ಕಾಲ ಉಳಿಯಬಹುದೆಂಬ ಭರವಸೆಯೇನು? ಇತ್ಯಾದಿ ಪ್ರಶ್ನೆಗಳು ಕೆಲವು ವಲಯಗಳಿಂದ ಕೇಳಿ ಬರುತ್ತಿವೆ. ಇಂದು ಅನೇಕ ಮಂದಿ ಈ ಸಂದೇಹವನ್ನು ಹೊಂದಿದ್ದಾರೆ. ನೈಜ ಇಸ್ಲಾಮೀ ವ್ಯವಸ್ಥೆಯ ಸ್ಥಾಪನೆ ಅಸಾಧ್ಯ ಅಥವಾ ಒಂದು ವೇಳೆ ಸಾಧ್ಯವಿದ್ದರೂ ಅದೊಂದು ನಿರರ್ಥಕ ಪ್ರಯತ್ನವೆಂದು ಅವರು ಭಾವಿಸುತ್ತಾರೆ. ಯಾಕೆಂದರೆ ಶ್ರೇಷ್ಠ ಜನರಿಂದಲೇ ಅದನ್ನು ಹೆಚ್ಚು ಕಾಲ ಉಳಿಸಿಕೊಳ್ಳಲಾಗಿಲ್ಲವೆಂದ ಮೇಲೆ ಇಂದು ಅದು ಉಳಿಯುವ ಭರವಸೆಯೇನು?

ವಿದ್ವಾಂಸರೆಂದು ಹೆಮ್ಮೆ ಪಡುತ್ತಿರುವ ಮಂದಿಯೂ ಇಂದು ಇಂತಹ ಸಂದೇಹವನ್ನು ವ್ಯಕ್ತಪಡಿಸುತ್ತಿರುವುದು ದುರದೃಷ್ಟಕರ. ಪ್ರಾಯಶಃ ಈ ವಾದವು ಇಸ್ಲಾಮಿನ ವಿರುದ್ಧ ಮತಹಾಕುತ್ತದೆಂದು ಅವರು ತಿಳಿದಿರಲಾರರು. ಅತ್ಯುತ್ಕೃಷ್ಟ ಹಾಗೂ ಸಮರ್ಥ ಜನರಿಂದಲೇ ಕೆಲವು ದಿನಗಳಿಗಿಂತ ಹೆಚ್ಚು ಅದನ್ನು ಉಳಿಸಿಕೊಳ್ಳಲಾಗದಂತಹ ನ್ಯೂನ್ಯತೆಯು ಇಸ್ಲಾಮೀ ವ್ಯವಸ್ಥೆಯಲ್ಲಿಯೇ ಇದೆಯೆಂದಾದರೆ ಆ ಕಲ್ಪನೆಗೆ ತಿಲಾಂಜಲಿಯಿಟ್ಟು, ಇಸ್ಲಾಮಿನ ಬಗ್ಗೆಯೇ ನಿರಾಶರಾಗಬೇಕಾಗಿದೆ. ಯಾಕೆಂದರೆ ಇಸ್ಲಾಮೀ ಜೀವನವನ್ನು ಅದರ ಆಡಳಿತ ವ್ಯವಸ್ಥೆಯಿಂದ ಬೇರ್ಪಡಿಸಿ ನೋಡಲು ಸಾಧ್ಯವಿಲ್ಲ. ಆದ್ದರಿಂದ ಪರಿಪಕ್ವ ವಿಶ್ವಾಸ ಮತ್ತು ನಿಷ್ಕಳಂಕನಾಗಿರುವ ಓರ್ವಮುಸ್ಲಿಮನ ಹೃದಯದಲ್ಲಿ ಇಂತಹ ಸಂದೇಹ ಮೂಡಲು ಸಾಧ್ಯವೇ ಇಲ್ಲ. ಆದರೆ, ಇಂತಹ ಸಂದೇಹವು ಇಂದು ಜನಸಾಮಾನ್ಯರಲ್ಲಿ ವ್ಯಾಪಕವಾಗಿರುವುದರಿಂದ ಇಸ್ಲಾಮೀ ವ್ಯವಸ್ಥೆಯ ಸಂಸ್ಥಾಪನೆಯ ಬಗ್ಗೆ ಸಾಮಾನ್ಯವಾಗಿ ಒಂದು ರೀತಿಯ ನಿರಾಶೆ ಕಂಡು ಬರುತ್ತಿದೆ. ಆದ್ದರಿಂದ ಈ ಸಂದೇಹವನ್ನು ನಿವಾರಿಸುವುದು ಈ ಸಂದರ್ಭದಲ್ಲಿ ಅತ್ಯಗತ್ಯವಾಗಿದೆ.

ಮಾನ್ಯರೇ! ಅಲ್ಲಾಹನು ನಮ್ಮಿಂದ ಅಬೂಬಕರ್ ಸಿದ್ದೀಕ್ ಅಥವಾ ಉಮರ್ ಫಾರೂಕ್‌ರಂತಹ(ರ) ಆಡಳಿತದ ಸಂಸ್ಥಾಪನೆಯನ್ನು ಬಯಸಿಲ್ಲ. ನಮಗೆ ಅದು ಸಾಧ್ಯವೂ ಇಲ್ಲ. ಅದಕ್ಕಾಗಿ ಅಲ್ಲಾಹನು ನಮಗದನ್ನು ಕಡ್ಡಾಯ ಗೊಳಿಸಿಲ್ಲ. 'ಇಕಾಮತುದ್ದೀನ್' (ಧರ್ಮದ ಸಂಸ್ಥಾಪನೆ)ಗಾಗಿ ಪ್ರಯತ್ನಿಸುವುದನ್ನು ಆತನು ನಮ್ಮಿಂದ ನಿರೀಕ್ಷಿಸುತ್ತಾನೆ. ಅದಕ್ಕಾಗಿ ನಾವು ನಮ್ಮ ಜೀವನವನ್ನು, ಪ್ರಾಣ, ಸಂಪತ್ತು ಹಾಗೂ ಇತರೆಲ್ಲಾ ಸುಖಾನಂದಗಳನ್ನು ಅರ್ಪಿಸಬೇಕು. ಧರ್ಮ (ದೀನ್) ಎಂಬುದರ ತಾತ್ಪರ್ಯವು ಅದರ ಯಾವುದಾದರೊಂದು ಅಂಶಕ್ಕೆ ಸೀಮಿತವಲ್ಲ. ಧರ್ಮವು ಸಮಗ್ರವಾಗಿದೆ. ಮೂಲ ಸಿದ್ಧಾಂತ ಮತ್ತು ಶಾಖೆಗಳಾಗಿವೆ.

ವಿಶ್ವಾಸ ಮತ್ತು ಕರ್ಮಗಳಾಗಿವೆ. ಈ ಪ್ರಯತ್ನವನ್ನು ನಾವು ಸಂಪೂರ್ಣ ಸ್ಫೂರ್ತಿ ಮತ್ತು ಉತ್ಸಾಹದಿಂದ ನಿರ್ವಹಿಸಬೇಕು. ಈ ವಿಷಯವೇ ಅಲ್ಲಾಹನ ಬಳಿ ನಮ್ಮ 'ಈಮಾನ್'(ವಿಶ್ವಾಸ) ಮತ್ತು 'ನಿಫಾಕ್' (ಕಪಟತೆ)ಗಳನ್ನು ತಿಕ್ಕಿ ನೋಡುವ ಒರೆಗಲ್ಲಾಗಿದೆ. ಈ ಸ್ಫೂರ್ತಿಯನ್ನು ಹೊಂದಿರದ ಹೃದಯವು ದೇವವಿಶ್ವಾಸದ ತಾಣವಾಗಲಾರದು. ಎಷ್ಟೇ 'ತಸ್ಬೀಹ್' ಮತ್ತು ಜಪಗಳನ್ನು ಹೇಳಿದರೂ ಅದು ಈ ಸ್ಫೂರ್ತಿಗೆ ಸಾಟಿಯಾಗಲಾರದು. ಅದು ಧರ್ಮ ಭಕ್ತಿಯ ತಿರುಳಾಗಿದೆ. ಅಲ್ಲಾಹನು ನಮ್ಮ ಹೃದಯಗಳಲ್ಲಿ ಪ್ರಥಮವಾಗಿ ಆ ಸ್ಫೂರ್ತಿ, ಉತ್ಸಾಹಗಳನ್ನು ಹುಡುಕುತ್ತಾನೆ. ಅದಲ್ಲದೆ ಈ ಪ್ರಯತ್ನವು ಸಂಘಟಿತ ರೂಪದಲ್ಲಿ ನಡೆಸಲ್ಪಡಬೇಕೇ ವಿನಾ ವೈಯಕ್ತಿಕವಾಗಿಯಲ್ಲ. ಪ್ರಥಮವಾಗಿ ಆ ಸ್ಫೂರ್ತಿಯ ಕಿಡಿಯನ್ನು ತಮ್ಮ ತಮ್ಮ ಹೃದಯಗಳಲ್ಲಿಯೇ ಹುಟ್ಟಿಸಿ ಅನಂತರ ಅದರಿಂದ ಇತರೆಲ್ಲರ ಹೃದಯಗಳನ್ನು ಬೆಳಗಿಸಲು ಪ್ರಯತ್ನಿಸಬೇಕಾದುದು ಪ್ರತಿಯೊಬ್ಬ ಸತ್ಯನಿಷ್ಠನ ಕರ್ತವ್ಯವಾಗಿದೆ. ಈ ಪ್ರಯತ್ನದ ಪರಿಣಾಮವೇನೆಂಬ ಪ್ರಶ್ನೆಯೇ ಅಪ್ರಸ್ತುತ. ಪ್ರಾಯಶಃ ಆ ಮಾರ್ಗದಲ್ಲಿ ನಾವು ಗರಗಸದಿಂದ ಸೀಳಲ್ಪಡಬಹುದು, ಬೀದಿಪಾಲಾಗಬಹುದು, ಬೆಂಕಿಯ ಮೇಲೆ ಮಲಗಿಸಲ್ಪಡಬಹುದು, ನಮ್ಮ ದೇಹವನ್ನು ಕಾಗೆ ಮತ್ತು ರಣಹದ್ದುಗಳು ಕುಕ್ಕಿ ತಿನ್ನಬಹುದು. ಇದೆಲ್ಲವನ್ನು ಅನುಭವಿಸಿಯೂ ಇಂದಿನ ದುಷ್ಟ ವ್ಯವಸ್ಥೆಯನ್ನು ಸತ್ಯ ವ್ಯವಸ್ಥೆಯಾಗಿ ಬದಲಾಯಿಸಲು ನಮ್ಮಿಂದ ಸಾಧ್ಯವಾಗದಿರಬಹುದು. ಆದರೆ ಈ ಸೋಲು ನಿಜವಾದ ಸೋಲಲ್ಲ. ಸೋಲಿನ ಬಗೆಗಿನ ಭೀತಿಯ ಮಾತಂತಿರಲಿ, ಅದು ಸೋಲು ಖಚಿತವೆಂದು ಭಾಸವಾದರೂ 'ಇಕಾಮತುದ್ದೀನ್'ನ ಕರ್ತವ್ಯದಿಂದ ನಾವು ಮುಕ್ತರಾಗುವುದಿಲ್ಲ. ಇದು ಅನಿವಾರ್ಯ ಕರ್ತವ್ಯ. ಯಾವ ಬೆಲೆ ತೆತ್ತಾದರೂ ಯಾವ ಪರಿಸ್ಥಿತಿಯಲ್ಲಿಯೂ ನಾವು ಅದನ್ನು ನಿರ್ವಹಿಸಲೇ ಬೇಕಾಗಿದೆ.

ಇಂತಿಂತಹ 'ದಿಕ್ರ್' ಮತ್ತು 'ಔರಾದ್'ಗಳನ್ನು ಹೇಳಿದರೆ, ನೀವು ಆ ಕರ್ತವ್ಯದಿಂದ ಮುಕ್ತರಾಗುವಿರೆಂದು ಭಾರತದಲ್ಲಿರುವ ಎಲ್ಲಾ ಮದ್ರಸಾ ಮತ್ತು ಧಾರ್ಮಿಕ ಕೇಂದ್ರಗಳು ನಿಮ್ಮನ್ನು ನಂಬಿಸಿದರೂ ಅದೆಲ್ಲವೂ ವಂಚನೆಯೆಂದು ನಾನು ಖಚಿತವಾಗಿ ಹೇಳುತ್ತೇನೆ. ಅಲ್ಲಾಹನ ಧರ್ಮವೆಂಬ ಕಟ್ಟಡದ ಒಂದು ಇಟ್ಟಿಗೆಯಾದರೂ ಸ್ಥಾನಪಲ್ಲಟವಾಗಿರುವುದನ್ನು, ಅಲ್ಲಾಹನ ಭೂಮಿಯ ಒಂದು ಸಣ್ಣ ತುಣುಕಾದರೂ ದೇವೇತರರ ಅನುಸರಣೆಗೆ ಸಿಲುಕಿರುವುದನ್ನು ನೋಡುತ್ತಾ ನೆಮ್ಮದಿಯಿಂದಿರಲು ನಮ್ಮ ರುಂಡವು ಮುಂಡದೊಂದಿಗೆ ಇರುವ ತನಕ ನಮ್ಮಿಂದ ಸಾಧ್ಯವಿಲ್ಲ.

ಈ ಪ್ರಯತ್ನದ ಪರಿಣಾಮದ ಬಗ್ಗೆ ನಮಗೆ ಭವಿಷ್ಯ ನುಡಿಯಲು ಸಾಧ್ಯವಿಲ್ಲ. ಅದನ್ನು ದೇವನೇ ಬಲ್ಲ. ಈ ಪ್ರಯತ್ನದಿಂದಾಗಿ ಒಂದು ಸತ್ಯ ವ್ಯವಸ್ಥೆಯನ್ನು ಸಂಸ್ಥಾಪಿಸುವ ಕಾರ್ಯದಲ್ಲಿ ನಾವು ಯಶಸ್ವಿಯಾದರೆ ಅದು ಕೇವಲ ಅಲ್ಲಾಹನ ಉಡುಗೊರೆಯಾಗಿದೆ. ಒಂದು ಸರಕಾರದ ಸಂಸ್ಥಾಪನೆ ಮಾತ್ರ ನಮ್ಮ ಉದ್ದೇಶವಾಗಿದೆಯೇ ವಿನಾ ಧರ್ಮದ ಸಾರ ಸಂಪೂರ್ಣವಾಗಿರುವ ಅಲ್ಲಾಹನ ಸಂಪ್ರೀತಿಯ ಗಳಿಕೆ ನಮ್ಮ ಉದ್ದೇಶವಾಗಿಲ್ಲವೆಂದು ಕೆಲವರು ನಮ್ಮನ್ನು ಚುಚ್ಚಿ ಮಾತಾಡುತ್ತಿದ್ದಾರೆ. ನಮ್ಮ ಸಂಪೂರ್ಣ ಪ್ರಯತ್ನವು ಅಲ್ಲಾಹನ ಧರ್ಮ ಮತ್ತು ದೈವಿಕ ವ್ಯವಸ್ಥೆಯ ಸಂಸ್ಥಾಪನೆಗಾಗಿಯೇ ಮುಡಿಪಾಗಿದೆ. ಇದು ನಾವು ನಾಚಿಕೆ ಪಡುವಂತಹ ಅಪರಾಧವೇನಲ್ಲ. ನಾವು ಎಂದಾದರೂ ದೇವಾಡಳಿತವೆಂದು ಹೇಳುವುದಿದ್ದರೆ,

ಕೇವಲ ಈ ಪದ್ಧತಿಯೇ ಅದರ ಉದ್ದೇಶವಾಗಿದೆ. ಇಸ್ಲಾಮಿ ವ್ಯವಸ್ಥೆಯ ಧ್ಯೇಯ ಧೋರಣೆಯಲ್ಲಿ ಯಾವ ಅಂಶವು ಚರ್ಚಾಸ್ಪದವಾಗಿದೆಯೆಂದು ನನಗೆ ಅರ್ಥವಾಗುವುದಿಲ್ಲ. ಇದು ಅಲ್ಲಾಹನ ಸಂಪ್ರೀತಿಯ ಗಳಿಕೆಗಿಂತ ಭಿನ್ನವಾದ ವಿಷಯವಾಗುವುದು ಹೇಗೆ? ಅಲ್ಲಾಹನ ಭೂಮಿಯಲ್ಲಿ ಆತನ ನೀತಿ ನಿಯಮಗಳು ನಡೆಯುವುದಕ್ಕಿಂತ ಹೆಚ್ಚಿನ ಮೆಚ್ಚುಗೆ ಆತನಿಗೆ ಇನ್ನಾವುದರಲ್ಲಿದ್ದೀತು? ಅಲ್ಲಾಹನ ಭೂಮಿಯಲ್ಲಿ ಆತನ ನಿಯಮಗಳ ಸಂಸ್ಥಾಪನೆಗಾಗಿ ಯಾವುದೇ ಅಡ್ಡಿ ಆತಂಕವನ್ನು ಲೆಕ್ಕಿಸದೆ ತ್ಯಾಗ ಸನ್ನದ್ಧರಾಗಿ ಹೊರಟಿರುವ ಮಂದಿಗಿಂತ ಅಲ್ಲಾಹನಿಗೆ ಇನ್ನಾರು ಹೆಚ್ಚು ಪ್ರೀತಿ ಪಾತ್ರರಾಗಬಹುದು? ಈ ತ್ಯಾಗ ಪರಿಶ್ರಮಗಳು ಲೌಕಿಕವೆಂದಾದರೆ ರಾತ್ರಿ ನಿದ್ದೆಗೆಟ್ಟು ಜಪ ಮಾಡುತ್ತಾ ಹಗಲು ಅಲ್ಲಾಹನ ಭೂಮಿಯಲ್ಲಿ ಪಿಶಾಚಿಯ ಪೀಠವನ್ನು ಭದ್ರಪಡಿಸಲಿಕ್ಕಾಗಿ ಪ್ರಯತ್ನಿಸುವುದು ಧರ್ಮ ಭಕ್ತಿಯೇ? ಈ ರೀತಿ ಮಾತಾಡುವವರ ಹೃದಯದಲ್ಲಿ ಧರ್ಮದ ಬಗ್ಗೆ ಅರ್ಧಂಬರ್ಧ ತಿಳುವಳಿಕೆ ಮಾತ್ರವಿದೆ. ಧರ್ಮದ ನೈಜತೆಯನ್ನು ತಿಳಿಯಲು ಅಂತಹ ಮಂದಿಗೆ ಇನ್ನೂ ಸ್ವಲ್ಪ ಕಾಲಾವಕಾಶ ನೀಡುವುದೇ ಉತ್ತಮ.

ನಿಜವಾದ ಇಸ್ಲಾಮಿ ವ್ಯವಸ್ಥೆಯು ಕೇವಲ 30 ವರ್ಷ ಉಳಿದಿತ್ತೆಂದು ಹೇಳಿದರೂ ಅದರ ಸಂಸ್ಥಾಪನೆಗಾಗಿ ನಾವು ನಮ್ಮ ಸಂಪೂರ್ಣ ಜೀವನವನ್ನು ವ್ಯವಹರಿಸಿದರೂ ಅದು ಹೆಚ್ಚಾಗಲಾರದು. ಅಲ್ಲಾಹನ ದಾಸರಿಗೆ ಕೇವಲ ಅಲ್ಲಾಹನ ದಾಸರಾಗಿ ಬಾಳುವ ಒಂದೇ ಒಂದು ರಾತ್ರಿಯು ಅನ್ಯರ ದಾಸರಾಗಿ ಬಾಳುವ ಸಾವಿರಗಟ್ಟಲೆ ವರ್ಷಗಳಿಗಿಂತಲೂ ಶ್ರೇಷ್ಠವಾಗಿದೆ. ನೀವು 30 ವರ್ಷ ಅಂತ ಹೇಳುತ್ತೀರಿ, ಆದರೆ ಅಂತಹ 30 ನಿಮಿಷವೂ ಅತ್ಯಂತ ಉತ್ಕೃಷ್ಟವೆಂದು ನಾನು ಭಾವಿಸುತ್ತೇನೆ. ನಮ್ಮ ಲಕ್ಷ ಗಟ್ಟಲೆ ಜೀವನವೂ ಅದರ ಬೆಲೆಯಾಗಲಾರದು. ನೀವೊಮ್ಮೆ ಆಲೋಚಿಸಿ ನೋಡಿರಿ, ಲೋಕದ ಎಲ್ಲಾ ರಾಜಕೀಯ ವ್ಯವಸ್ಥೆಗಳ ಪೈಕಿ ಪ್ರಜಾಸತ್ತೆಯೇ ಅತ್ಯುತ್ತಮವೆಂದು ಭಾವಿಸಲಾಗುತ್ತಿದೆ. ಆದರೆ ವೈಚಾರಿಕವಾಗಿ ಅದು ಅಸಾಧ್ಯವೆಂದು ನಾವು ಖಚಿತವಾಗಿ ಹೇಳಬಹುದು. ಅದು ಇಂದಿನ ತನಕ ಒಂದು ಕ್ಷಣವೂ ಅಸ್ತಿತ್ವಕ್ಕೆ ಬಂದಿಲ್ಲ, ಹಾಗಾದೀತೆಂದು ಊಹಿಸಲೂ ಸಾಧ್ಯವಿಲ್ಲ. ಆದರೆ ಕೇವಲ ಒಂದು ಭ್ರಮೆಯ ಆದಾರದಲ್ಲಿ ಲೋಕವು ಅದಕ್ಕೆ ಎಷ್ಟೊಂದು ಉಜ್ವಲ ತ್ಯಾಗಗಳನ್ನು ನೀಡುತ್ತಿದೆ? ಮೂವತ್ತು ವರ್ಷ ಕಾರ್ಯರೂಪದಲ್ಲಿದ್ದಿತೆಂದು ವೈರಿಗಳೇ ಒಪ್ಪುವಂತಹ ಒಂದು ಪದ್ಧತಿಯ ಪುನರುತ್ಥಾನದ ಬಗ್ಗೆ ನಾವೇಕೆ ನಿರಾಶರಾಗಬೇಕು? ಅದರ ನ್ಯಾಯ, ನೀತಿ, ಶಾಂತಿ, ನೆಮ್ಮದಿ, ಅನುಗ್ರಹಗಳಿಗೆ ಅದರ ಬೆಂಬಲಿಗರೂ ವಿರೋಧಿಗಳೂ ಸಮಾನ ಸಾಕ್ಷಿಗಳಾಗಿದ್ದಾರೆ.

ಆದರೆ, ನಿಜವಾದ ವ್ಯವಸ್ಥೆ ಪದ್ಧತಿಯು ಕೇವಲ 30 ವರ್ಷ ಅಸ್ತಿತ್ವದಲ್ಲಿತ್ತೆಂಬ ಭಾವನೆಯು ಇತಿಹಾಸದ ಅಪೂರ್ಣ ಅಧ್ಯಯನದ ಫಲವಾಗಿದೆ. ರಾಜಕೀಯ ನೈಪುಣ್ಯ ಮತ್ತು ದೂರದೃಷ್ಟಿಯ ಕೊರತೆಯಿಂದ ಜನರು ವೈಯಕ್ತಿಕ ಬದಲಾವಣೆ ಮತ್ತು ಆಡಳಿತ ವ್ಯವಸ್ಥೆಯ ಬದಲಾವಣೆಗಳನ್ನು ಪ್ರತ್ಯೇಕಿಸಿ ತಿಳಿಯುವುದಿಲ್ಲ. ಆದರೆ ವಾಸ್ತವದಲ್ಲಿ ಅವೆರೆಡರ ನಡುವೆ ಆಕಾಶ ಭೂಮಿಗಳ ಅಂತರವಿದೆ. 'ಖಿಲಾಫತುರ್ರಾಶಿದಾ' ನಾಲ್ವರು ಸತ್ಯಸಂಧ ಖಲೀಫರುಗಳ ಆಡಳಿತ ಕೊನೆಗೊಂಡ ಬಳಿಕ ನಡೆದ ಬದಲಾವಣೆಯು ಸಾಂವಿಧಾನಿಕವಾಗಿರದೆ ಕೇವಲ ವೈಯಕ್ತಿಕ ಬದಲಾವಣೆಯಾಗಿತ್ತು. ದೇಶದ ಕಾನೂನು, ಸಂವಿಧಾನ, ಸಿವಿಲ್, ಕ್ರಿಮಿನಲ್

ಕಾನೂನುಗಳೆಲ್ಲವೂ ಇಸ್ಲಾಮಿಯಾಗಿದ್ದುವು. ಅಲ್ಲಾಹನು ವಿಧಿಸಿದ ಮಿತಿಮೇರೆಗಳನ್ನು ಪಾಲಿಸಲಾಗುತ್ತಿತ್ತು. ಸೊತ್ತನ್ನು ಕುರ್‌ಆನ್ ನಿರ್ದೇಶಿಸಿದ ಕಾನೂನಿನಂತೆ ವಿಭಜಿಸಲಾಗುತ್ತಿತ್ತು. ಆ ವ್ಯವಸ್ಥೆಯನ್ನು ಕಾರ್ಯಗತಗೊಳಿಸುವ ವ್ಯಕ್ತಿಗಳಲ್ಲಷ್ಟೇ ಬದಲಾವಣೆಯಾಗಿತ್ತು. ಅವರು ಅಬೂಬಕರ್ ಸಿದ್ದೀಕ್ ಅಥವಾ ಉಮರ್ ಫಾರೂಕ್(ರ) ರಂತೆ ದೇವಭಕ್ತ ಮತ್ತು ತ್ಯಾಗಶೀಲರಾಗಿರಲಿಲ್ಲ. ಆದರೂ ಅಲ್ಲಾಹನ ಕಾನೂನುಗಳ ಬದಲಿಗೆ ಸ್ವಂತ ಕಾನೂನುಗಳನ್ನು ಜಾರಿಗೊಳಿಸಲು ಅವರಿಗೆ ಸಾಧ್ಯವಾಗಲಿಲ್ಲ. ಅವರು ಅಲ್ಲಾಹನ ಯಾವುದಾದರೂ ವಿಧಿ ನಿಯಮಗಳಿಂದ ಜಾರಿಕೊಳ್ಳಬಯಸುವಾಗ ಅವರಿಗೆ ಧಾರ್ಮಿಕವಾದ ಹಲವು ಕುತಂತ್ರ ಮತ್ತು ದುರ್ವ್ಯಾಖ್ಯಾನಗಳನ್ನು ಮಾಡಬೇಕಾಗುತ್ತಿತ್ತು. ಅಲ್ಲಾಹನ ವಿರುದ್ಧ ಬಹಿರಂಗವಾಗಿ ಅವರ ಪೈಕಿ ಅತ್ಯಂತ ನೀಚ ವ್ಯಕ್ತಿಗೂ ಧೈರ್ಯವಿರಲಿಲ್ಲ. ಆದ್ದರಿಂದಲೇ ದೇವ ಭಕ್ತ ಹಾಗೂ ಸತ್ಯನಿಷ್ಠನಾದ ಓರ್ವನು ಅಧಿಕಾರಕ್ಕೇರಿದೊಡನೆಯೇ 'ಖಿಲಫಾವುರ್ರಾಶಿದ'ದಂತಹ ಬದಲಾವಣೆ- ಆಡಳಿತ ವ್ಯವಸ್ಥೆಯಲ್ಲಿ ಯಾವ ಲೋಪವೂ ಆಗಿಲ್ಲವೆಂದು ತೋರಿಸುವಂತಹ ಬದಲಾವಣೆ- ಅನಂತರ ಕಾಲಗಳಲ್ಲಿಯೂ ಆಕಸ್ಮಿಕವಾಗಿ ನಡೆದಿರುವುದನ್ನು ನಾವು ಕಾಣುತ್ತೇವೆ. ವ್ಯವಸ್ಥೆಗೆ ಮೂಲಭೂತವಾದ ಯಾವುದೇ ದೋಷವೂ ತಟ್ಟಿರಲಿಲ್ಲ. ಕೆಲವು ಬಾಹ್ಯ ದೋಷಗಳಷ್ಟೇ ಸಂಭವಿಸಿದ್ದುವು. ಇಂತಹ ಸುಧಾರಣಾ ಹಂತಗಳು ಇಸ್ಲಾಮಿ ಖಿಲಾಫತ್‌ನಲ್ಲಿ ಆಗಾಗ ಬಂದಿವೆ. ಅದರ ಬುನಾದಿಗೆ ಧಕ್ಕೆಯಾಗುವ ಮತ್ತು ದೇವಾಡಳಿತದ ಸ್ಥಾನದಲ್ಲಿ ತಾಗೂತಿನ ಆಡಳಿತವು ಬರುವ ತನಕ ಲೋಕದಲ್ಲಿ 'ಖಿಲಾಫತುರ್ರಾಶಿದಾ'ದ ಅನುಗ್ರಹೀತ ಹಂತಗಳು ಆಗಾಗ ಮರುಕಳಿಸಿದ್ದುವು. ಇಂದು ನಾವು ಅದಕ್ಕಾಗಿ ಪ್ರಯತ್ನಿಸಿದರೆ ಅಲ್ಲಾಹನ ಸಹಾಯ ದೊರೆಯದಿರುವುದಕ್ಕೆ ಯಾವ ಕಾರಣವೂ ಇಲ್ಲ. ಈ ಆಕಾಶದ ಕೆಳಗೆ ಎಲ್ಲಾ ರೀತಿಯ ಪ್ರಯತ್ನಗಳೂ ನಡೆಯುತ್ತಿವೆ. ಪ್ರತಿಯೊಂದು ಕಾರ್ಯಕ್ಕೆ ಅಗತ್ಯವಿರುವ ಪ್ರಯತ್ನಗಳು ನಡೆದಾಗಲೆಲ್ಲಾ ಅವು ಯಶಸ್ವಿಯಾಗುತ್ತಿರುವುದನ್ನೂ ನಾವು ಕಾಣುತ್ತಿದ್ದೇವೆ. ಅದರಲ್ಲಿ ಸತ್ಯ ಮತ್ತು ಅಸತ್ಯವೆಂಬ ವ್ಯತ್ಯಾಸವಿಲ್ಲ. ನಿಷಿದ್ಧವಾದಿಗಳ ತ್ಯಾಗಗಳನ್ನು ಸೃಷ್ಟಿಕರ್ತನು ಇಹಲೋಕದಲ್ಲಿ ವ್ಯರ್ಥಗೊಳಿಸದಿರುವಾಗ ಆತನಿಗೆ ಸತ್ಯದ ಧ್ವಜವಾಹಕರ ತ್ಯಾಗ ಪ್ರಯತ್ನಗಳನ್ನು ವಿಫಲಗೊಳಿಸಬೇಕೆಂಬ ವೈರವೇಕೆ?

## ಕಾರ್ಯ ಸಾಧನೆಯ ಶರತ್ತುಗಳು

ಆದರೆ ಪ್ರತಿಯೊಂದು ಕಾರ್ಯಕ್ಕೂ ವಿಶಿಷ್ಟ ವಿಧಾನವಿರುತ್ತದೆ. ಆ ವಿಧಾನದಂತೆ ಅವುಗಳನ್ನು ನಿರ್ವಹಿಸುವ ಅಗತ್ಯವಿದೆ. ಯಾವುದೇ ಕಾರ್ಯವನ್ನು ತಪ್ಪಾಗಿ ಮಾಡಿದರೆ ನಾವು ಆ ತಪ್ಪನ್ನು ಎಷ್ಟೇ ಸದುದ್ದೇಶದಿಂದ ಮಾಡಿದ್ದರೂ ಅದರ ಅಂತಿಮ ಪರಿಣಾಮವು ಆ ಕಾರ್ಯದ ವೈಫಲ್ಯದ ರೂಪದಲ್ಲಿ ನಮ್ಮ ಮುಂದೆ ಬರುವುದು. ಅಲ್ಲಾಹನು ನಿರ್ಮಿಸಿದ ನಿಯಮವು ನಿಷ್ಕಳಂಕ ಮತ್ತು ನಿಷ್ಪಕ್ಷವಾಗಿದೆ. ಎಷ್ಟೇ ಒಳ್ಳೆಯ ಮನುಷ್ಯರಾಗಿರಲಿ, ಜೇನಿನ ಬದಲಿಗೆ ಹಾಗಲ ಉಪಯೋಗಿಸಿದರೆ ಆತ ಒಳ್ಳೆಯವನೆಂಬ ಕಾರಣಕ್ಕಾಗಿ ಹಾಗಲದಿಂದ ಜೇನಿನ ರುಚಿ ಬರಲಾರದಷ್ಟೆ. ಇದೇ ರೀತಿಯಲ್ಲಿ ಮುಸ್ಲಿಮರು ಯಾವುದಾದರೊಂದು ಕಾರ್ಯವನ್ನು ತಪ್ಪು ಹಾದಿಯಲ್ಲಿ ನಿರ್ವಹಿಸಿದರೆ, ನಾವು ಮುಸ್ಲಿಮರು ಮತ್ತು ಅಲ್ಲಾಹನ ಬಳಿ ಭಾರೀ

ಸ್ಥಾನಮಾನವಿರುವವರೆಂದು ಭಾವಿಸುವುದರಿಂದ ಮಾತ್ರ ಆ ಕಾರ್ಯವು ಸರಿಯಾಗಲಾರದು. ಇನ್ನು, ಓರ್ವ ಮುಸ್ಲಿಮೇತರನು ಸರಿಯಾದ ಮಾರ್ಗದಲ್ಲಿಯೇ ಒಂದು ಕಾರ್ಯ ಸಾಧನೆಗೆ ನಿರತನಾಗಿದ್ದರೆ, ಕೇವಲ ಆತ ಮುಸ್ಲಿಮೇತರನೆಂಬ ಕಾರಣದಿಂದ ಆ ಸರಿಯಾದ ಪ್ರಯತ್ನದ ಫಲವು ಅವನಿಗೆ ದೊರೆಯದಿರುವುದಿಲ್ಲ. ಮುಸ್ಲಿಮರೆಂಬ ನೆಲೆಯಲ್ಲಿ ಅಲ್ಲಾಹನ ಅನುಗ್ರಹಗಳ ನೈಜ ವಾರೀಸುದಾರರು ತಾವೆಂಬ ಭಾವನೆ ಮುಸ್ಲಿಮರಲ್ಲಿ ಕಂಡು ಬರುತ್ತಿದೆ. ಈ ಭಾವನೆಯಿಂದ ನಮ್ಮ ಇಂದಿನ ಸ್ಥಿತಿಯನ್ನು ಅವಲೋಕಿಸಿದಾಗ ಕುರ್‌ಆನಿನ ವಾಗ್ದಾನಗಳ ಬಗ್ಗೆ ಮಾತ್ರವಲ್ಲ ಅಲ್ಲಾಹನ ಕುರಿತೇ ಅವರಿಗೆ ನಿರಾಶೆ ತೋರುತ್ತದೆ. ನಾವು ಮುಸ್ಲಿಮರಾಗಿರುತ್ತಾ ಭೂಮಿಯ ವಾರೀಸು ಹಕ್ಕು ನಮಗೇ ದೊರೆಯಬೇಕಾಗಿತ್ತು. ಅಥವಾ ಅದು ಇಂದು ನಮಗೆ ಲಭ್ಯವಿಲ್ಲದಿದ್ದರೆ ಅದು ನಮ್ಮ ಯಾವುದೇ ದೋಷದ ಕಾರಣದಿಂದಾಗಿರದೆ, ವಾಗ್ದಾನ ಮಾಡಿರುವವನ ನಿರ್ಲಕ್ಷ್ಯದಿಂದಲೇ ಆಗಿದೆಯೆಂದು ಅವರು ಭಾವಿಸುತ್ತಾರೆ. ಆದರೆ ಈ ಭಾವನೆ ಸಂಪೂರ್ಣ ತಪ್ಪು. ವೈಯಕ್ತಿಕ ಪ್ರಯತ್ನಗಳಿಗೆ ಪ್ರತಿಫಲವನ್ನು ಆತನು ದಯಪಾಲಿಸುತ್ತಾನೆ. ಆದರೆ ಆತನು ಸಂಘಟನೆಗಳಿಗೆ ನೀಡಿರುವ ವಾಗ್ದಾನಗಳು ಈಡೇರಬೇಕಾದರೆ ಅದಕ್ಕಾಗಿ ಸಂಘಟಿತ ಪ್ರಯತ್ನವನ್ನು ಸಾಕ್ಷಾತ್ಕರಿಸಬೇಕಾದುದು ಅಗತ್ಯವಿದೆ. ಅಂತಹ ಸಂಘಟಿತ ಪ್ರಯತ್ನ ನಡೆಯದಿರುವಾಗ ವೈಯಕ್ತಿಕ ದೇವಭಕ್ತಿ ಮತ್ತು ಸತ್ಕರ್ಮಗಳಲ್ಲಿ ನಾವು ಎಷ್ಟೇ ಪ್ರಗತಿ ಸಾಧಿಸಿದರೂ ನಮ್ಮಲ್ಲಿ ಜುನೈದ್, ಶಿಬ್ಲಿ, ಸಲ್ಮಾನ್, ಅಬೂದರ್ ಮುಂತಾದವರ ಮಟ್ಟಕ್ಕೇರಿದ ವ್ಯಕ್ತಿಗಳಿದ್ದರೂ ಅವರ ವೈಯಕ್ತಿಕ ಒಳಿತಿನ ಪ್ರತಿಫಲವಾಗಿ ಸಂಘಟನಾತ್ಮಕ ಒಳಿತುಗಳಿಗೆ ಮಾತ್ರ ನೀಡಲ್ಪಡುವ ಅಲ್ಲಾಹನ ಪ್ರತಿಫಲಗಳು ಲಭ್ಯವಾಗಲು ಸಾಧ್ಯವೇ ಇಲ್ಲ. ಮುಸ್ಲಿಮರಲ್ಲಿ ಇಂದಿಗೂ ಅತ್ಯುತ್ತಮ ಸಜ್ಜನ ಭಕ್ತರಿದ್ದಾರೆಂಬುದನ್ನು ನಿರಾಕರಿಸುವಂತಿಲ್ಲ. ಆದರೆ ಅಂತಹ ಸಜ್ಜನರು ಒಂದು ಉತ್ತಮ ವ್ಯವಸ್ಥೆಯ ಸ್ಥಾಪನೆಗಾಗಿ ಸಂಘಟಿತವಾಗಿ ಪ್ರಯತ್ನಿಸುತ್ತಿಲ್ಲ. ಬದಲಾಗಿ ತಮ್ಮ ವೈಯಕ್ತಿಕ ಒಳಿತುಗಳಲ್ಲಿ ಸಂತೃಪ್ತರಾಗಿ ಅಲ್ಲಾಹನು ತಮಗೆ ನೀಡಿರುವ ವಾಗ್ದಾನವನ್ನು ಪೂರೈಸಿಲ್ಲವೆಂದು ದೂರುತ್ತಿದ್ದಾರೆ. ಅಲ್ಲಾಹನು ಸಂಘಟಿತ ಪ್ರಯತ್ನಗಳಿಗೆ ನೀಡಿರುವ ಪ್ರತಿಫಲಗಳ ವಾಗ್ದಾನವು ಸ್ಥಿರವಾಗಿದೆ. ದೇವ ನಿಷೇಧದಿಂದಲಾದರೂ ಆ ಸಂಘಟನಾತ್ಮಕ ಒಳಿತುಗಳು ಯಾವುದಾದರೂ ಪಕ್ಷದಲ್ಲಿ ಕಂಡು ಬಂದರೆ ಅವರಿಗೆ ಆ ಪ್ರತಿಫಲ ಖಂಡಿತ ದೊರೆಯದಿರಲಾರದು. ಹೀಗಿರುತ್ತಾ ಈಮಾನ್ ಮತ್ತು ಇಸ್ಲಾಮಿನ ಅನುಗ್ರಹಗಳಿಂದ ಪುನೀತರಾಗಿ ಒಂದು ಉತ್ತಮ ವ್ಯವಸ್ಥೆಗಾಗಿ ಯಾವುದಾದರೊಂದು ಪಕ್ಷವು ಪ್ರಯತ್ನಿಸಿದರೆ ಅಲ್ಲಾಹನು ತನ್ನ ವಾಗ್ದಾನಗಳನ್ನು ಅವರಿಗೆ ತಡೆಹಿಡಿಯುವ ಪ್ರಮೇಯವೇ ಇಲ್ಲ.

"ಜಮಾಅತೆ ಇಸ್ಲಾಮಿಯು ಮುಸ್ಲಿಮರ ತಪ್ಪು ತಿಳುವಳಿಕೆಯನ್ನು ತೊಲಗಿಸುತ್ತಿದೆ. ಸಮುದಾಯದ ಎಲ್ಲಾ ಸಜ್ಜನರನ್ನು ಸಂಘಟಿಸಿ ಒಂದು ಸರಿಯಾದ ವ್ಯವಸ್ಥೆಯ ಸ್ಥಾಪನಾಕಾರ್ಯದಲ್ಲಿ ಅವರನ್ನು ನಿರತಗೊಳಿಸಬೇಕೆಂದು ಅದು ಬಯಸುತ್ತದೆ. ಈ ಕಾರ್ಯವನ್ನು ಅದರದೇ ಆದ ಉತ್ತಮ ಮಾರ್ಗಗಳಿಂದ ಈಡೇರಿಸಬೇಕೆಂದು ಜಮಾಅತ್ ಇಚ್ಛಿಸಿದೆ. ಅದರ ಪರಿಣಾಮವು ಸಂಪೂರ್ಣವಾಗಿ ಅಲ್ಲಾಹನ ಹಸ್ತಗಳಲ್ಲಿವೆ. ಆದರೆ ನಮ್ಮ ಪ್ರಯತ್ನವು ಸಫಲವಾಗುವುದು ಹಾಗೂ ನಾವು ನಿರ್ದಿಷ್ಟ ಗುರಿಯನ್ನು ತಲಪಿಯೇ ತೀರುವೆವೆಂದು ಅಲ್ಲಾಹನಿಂದ ನಿರೀಕ್ಷಿಸುತ್ತೇವೆ. ಆದರೆ ದೀರ್ಘ ಕಾಲದಿಂದ ಸಂಘಟಿತ ಜೀವನವನ್ನು ನಾವು

ತೊರೆದಿರುವುದರಿಂದ ಅದರ ವೈಶಿಷ್ಟ್ಯ ಮತ್ತು ಹೊಣೆಗಾರಿಕೆಗಳ ಬಗ್ಗೆ ನಾವು ಸಂಪೂರ್ಣ ಅಜ್ಞರಾಗಿ ಹೋಗಿದ್ದೇವೆ. ಆದರೆ ಇಂದು ನಾವು ಸಂಘಟಿತ ಜೀವನವನ್ನು ಬಯಸುತ್ತಿರುವ ಹಿನ್ನಲೆಯಲ್ಲಿ ಅದರ ಹೊಣೆಗಾರಿಕೆಗಳನ್ನು ಚೆನ್ನಾಗಿ ತಿಳಿದುಕೊಂಡು ಅದನ್ನು ಶಿಸ್ತುಬದ್ಧವಾಗಿ ನೆರವೇರಿಸಲು ಸಿದ್ಧರಾಗುವ ಅಗತ್ಯವಿದೆ."

## ಸಂಘಟಿತ ಜೀವನದ ವೈಶಿಷ್ಟ್ಯ

ಶಿಸ್ತು ಮತ್ತು ಸಂಘಟನಾ ವ್ಯವಸ್ಥೆಯ ಪಾಲನೆಯು ಸಂಘಟಿತ ಜೀವನದ ಮುಖ್ಯ ವೈಶಿಷ್ಟ್ಯವಾಗಿದೆ. ಪ್ರತಿಯೊಂದು ಸಂಘಟನೆಯೂ ಶಿಸ್ತನ್ನು ಪಾಲಿಸುವ ಉದ್ದೇಶದಿಂದ ಅಸ್ತಿತ್ವಕ್ಕೆ ಬರುತ್ತದೆ. ಈ ಬಗ್ಗೆ ಕ್ಷುಲ್ಲಕವಾದ ನಿರ್ಲಕ್ಷ್ಯ ಕೂಡಾ ಸಂಘಟನೆಗೆ ಮಾರಣಾಂತಿಕವಾಗುತ್ತದೆ. ಸಂಘಟನಾ ವ್ಯವಸ್ಥೆಯ ಬದುಕಿಗಾಗಿ ಅದರಲ್ಲಿರುವ ಜನರು ತಮ್ಮ ಸ್ವಂತ ಆಸೆ ಮತ್ತು ವೈಯಕ್ತಿಕ ಅಭಿಪ್ರಾಯಗಳನ್ನು ಬಲಿ ನೀಡಬೇಕಾಗುವುದು.

ಸಂಘಟನಾ ಜೀವನದಲ್ಲಿ ಸಹಿಷ್ಣುತೆ ಮತ್ತು ಉದಾರತೆಗಳು ಅನಿವಾರ್ಯ ಉಪಾಧಿಗಳಾಗಿವೆ. ಜನರು ಹರಡಿಕೊಂಡಿರುವ ಇಟ್ಟಿಗೆಗಳಂತೆ, ಅವುಗಳಿಗೆ ಒಂದು ಕಟ್ಟಡದ ರೂಪ ಬರಬೇಕಾದರೆ ಕಿಂಚಿತ್ ತುಂಡರಿಸುವಿಕೆ ಹಾಗೂ ಪೆಟ್ಟನ್ನು ಸಹಿಸಬೇಕಾಗುವುದು. ಇದಕ್ಕೆ ಅವು ಸಿದ್ಧವಿಲ್ಲದಿದ್ದರೆ ಕಟ್ಟಡದ ನಿರ್ಮಾಣವಾಗದು. ಇದೇ ಪ್ರಕಾರ ನಿಮ್ಮಲ್ಲಿ ಪ್ರತಿಯೊಬ್ಬರೂ ಸ್ವಂತ ಅಭಿಪ್ರಾಯಗಳಿಗೆ ಕಟ್ಟು ಬಿದ್ದು, ವ್ಯಕ್ತಿ ಸ್ವಾತಂತ್ರ್ಯದಲ್ಲಿ ಯಾವ ಹಸ್ತಕ್ಷೇಪವನ್ನೂ ಸಹಿಸಲು ಸಿದ್ಧವಿಲ್ಲವೆಂದಾದರೆ ಸಂಘಟನೆಯೇ ರೂಪು ತಾಳದು. ಒಂದು ವೇಳೆ ರೂಪಿತವಾದರೂ ಅದು ಹೆಚ್ಚು ಕಾಲ ಬಾಳಲಾರದು. ಇದರಿಂದಾಗಿ ಸಂಘಟನಾ ಜೀವನ ಅಭಿಪ್ರಾಯ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವ ವಿಚಾರವೆಂದು ನೀವು ತಪ್ಪು ತಿಳಿಯಬೇಡಿರಿ. ಅದಕ್ಕಾಗಿ ಮಾನವನು ತನ್ನ ಸ್ವಾತಂತ್ರ್ಯದ ಒಂದು ಸಣ್ಣ ಅಂಶವನ್ನು ಬಲಿ ನೀಡಬೇಕಾಗಿದ್ದರೂ ತನ್ಮೂಲಕ ಆತನು ತನ್ನ ಸಂಪೂರ್ಣ ಸ್ವಾತಂತ್ರ್ಯವನ್ನು ಕಳೆದುಕೊಳ್ಳಬೇಕಾಗುವುದು. ಹಣದ ಖಜಾನೆಯಿರುವ ಓರ್ವ ಮಾಲಿಕನು ಅದರ ಒಂದು ಸಣ್ಣ ಅಂಶವನ್ನು ಕಾವಲುಗಾರರಿಗೂ ರಕ್ಷಕ ಭಟರಿಗೂ ನೀಡದಿದ್ದರೆ ಆತನ ಸಂಪೂರ್ಣ ಬೊಕ್ಕಸವು ಗಂಡಾಂತರಕ್ಕೆ ಸಿಲುಕುವುದು. ಹೀಗೆಯೇ ಜನರು ತಮ್ಮ ಅಭಿಪ್ರಾಯ ಸ್ವಾತಂತ್ರ್ಯದ ಸ್ವಲ್ಪಂಶ ಸಂಘಟನೆಗಾಗಿ ತ್ಯಜಿಸಲು ಸಿದ್ಧವಿಲ್ಲದಿದ್ದರೆ ಅವರ ಸಂಪೂರ್ಣ ತ್ಯಾಗವು ಗಂಡಾಂತರಕ್ಕೆ ಸಿಲುಕುವುದು. ಈ ಪ್ರಜ್ಞೆಯ ಮಟ್ಟಿಗೆ ಹೇಳುವುದಿದ್ದರೆ ನಾವು ಸುಧಾರಿಸಬೇಕಾಗಿದೆಯೆಂದು ವರದಿಗಳಿಂದ ತಿಳಿಯುತ್ತದೆ. ಜನರಲ್ಲಿ ಈ ಪ್ರಜ್ಞೆಯನ್ನು ಮೂಡಿಸಲು ನಾವು ಅತ್ಯಧಿಕ ಪ್ರಯತ್ನಿಸಬೇಕಾಗಿದೆ. ಅದು ನೈತಿಕ ಮೇಲ್ಮೆಯಾಗಿರುವಂತೆಯೇ ಇಸ್ಲಾಮಿನ ಒಂದು ಪ್ರಾಮುಖ್ಯ ಬೇಡಿಕೆಯೂ ಹೌದು. ಈ ಪ್ರಜ್ಞೆ ಕಡಿಮೆಯಿರುವ ಜನತೆಯು ಅದನ್ನು ತುಂಬಿಸಿಕೊಂಡರೆ ಮಾತ್ರವೇ ಈ ಕೊರತೆ ನೀಗಬಹುದು. ಐಚ್ಛಿಕ ಆರಾಧನೆಗಳ ತೂಕವು ಅದಕ್ಕೆ ಪರಿಹಾರವಲ್ಲ. ಆದ್ದರಿಂದಲೇ ಸಂಘಟನಾ ವ್ಯವಸ್ಥೆಯಲ್ಲಿ ಗೊಂದಲ ನಿರ್ಮಿಸುವವರಿಗೆ ಇಸ್ಲಾಮಿನಲ್ಲಿ ಕಠಿಣ ಶಿಕ್ಷೆ ನಿರ್ಣಯಿಸಲ್ಪಟ್ಟಿದೆ. ಈ ವಿಷಯದಲ್ಲಿ ಏನಾದರೂ ಹಾಳುಗೆಡಹುವವರು ವಾಸ್ತವದಲ್ಲಿ ತಮ್ಮೆಲ್ಲಾ ಒಳಿತುಗಳ ಪುಣ್ಯವನ್ನು ಕಳೆದುಕೊಳ್ಳುತ್ತಾರೆ. ಆದ್ದರಿಂದ ಈ ಬಗ್ಗೆ ಜಮಾಅತ್ ಸದಸ್ಯರು ಸ್ವಲ್ಪವೂ ಅಸಡ್ಡೆಗೆ ಅವಕಾಶ

ನೀಡಬಾರದೆಂದು ನಾನು ಒತ್ತಿ ಹೇಳುತ್ತಿದ್ದೇನೆ. ಹಿಂದೆ ಹೇಳಿರುವಂತೆ, ಅಲ್ಲಾಹನು ಸಂಘಟನೆಗೆ ನೀಡಿರುವ ವಾಗ್ದಾನವು ಕೇವಲ ವ್ಯಕ್ತಿಗಳಿಗೆ ದೊರೆಯದೆಂದು ನಾನು ಪುನಃ ಎಚ್ಚರಿಸುತ್ತೇನೆ. ಇಸ್ಲಾಮಿನ ಬೇಡಿಕೆಗಳು ಕೇವಲ ವೈಯಕ್ತಿಕ ಜೀವನದಿಂದ ಪೂರ್ಣಗೊಳ್ಳುವಂಥದ್ದಲ್ಲ.

ಇದರಿಂದ ಗಮನಿಸಬೇಕಾದ ಇನ್ನೊಂದು ವಿಚಾರವಿದೆ. ಧರ್ಮದ ಕೆಲವು ಆಂಶಿಕ ವಿಷಯಗಳ ಕುರಿತು ಮುಸ್ಲಿಮರ ಕೆಲವು ವಿಭಾಗಗಳಲ್ಲಿ ಏನೋ ಅತಿಶಯೋಕ್ತ ರೀತಿಯ ಪಕ್ಷಪಾತ ಆಕ್ರಮಿಸಿಕೊಂಡಿದೆ, ಅದರ ಉಗ್ರತೆಯು ಮೇರೆ ಮೀರಿದೆ. ಅಂತಹ ಆಂಶಿಕ ವಿಷಯಗಳಿಗಾಗಿ ಜನರು ಕೊಲೆಗೂ ಸಾವಿಗೂ ಸಿದ್ಧರಾಗುತ್ತಾರೆ. ನೈಜ ಧರ್ಮದ ಸಕಲ ಬೇಡಿಕೆಗಳೂ ಅದರ ಮಧ್ಯದಲ್ಲಿ ಜಜ್ಜಿ ಹೋಗಿವೆ. ಕೆಲವು ಜಮಾಅತ್ ಬಾಂಧವರಲ್ಲಿಯೂ ಈ ಹಳೆಯ ಚಾಳಿ ಇನ್ನೂ ಉಳಿದುಕೊಂಡಿದೆ. ತನ್ಮೂಲಕ ಜಮಾಅತ್ ವ್ಯವಸ್ಥೆಗೆ ಧಕ್ಕೆಯಾದೀತೆಂದು ಭಯಪಡಬೇಕಾಗುತ್ತದೆ. ಮೂಲ ಮತ್ತು ಆಂಶಿಕಗಳ ಪರಸ್ಪರ ವ್ಯತ್ಯಾಸವನ್ನು ನಾವು ಸ್ಪಷ್ಟವಾಗಿ ಮನಗಾಣಬೇಕು. ಮರದ ಮೂಲ ಬೇರು ಒಣಗುವಷ್ಟರ ಮಟ್ಟಿಗೆ ನಾವು ರೆಂಬೆಗಳಿಗೆ ಮಾತ್ರ ನೀರು ಹೊಯ್ಯುವುದರಲ್ಲಿ ತಲ್ಲೀನರಾಗಬಾರದು. ಜೀವನದ ಸಮತೋಲನವನ್ನು ಉಳಿಸಿಕೊಂಡು ಪ್ರತಿಯೊಂದು ವಸ್ತುವಿಗೂ ಅದರ ನೈಜ ಸ್ಥಾನವನ್ನು ನೀಡುವಷ್ಟರ ಮಟ್ಟಿಗೆ ಧಾರ್ಮಿಕ ಪ್ರಜ್ಞೆ ನಮ್ಮಲ್ಲಿರಬೇಕಾದುದು ಅತ್ಯಗತ್ಯವಾಗಿದೆ. ಹಾಗಲ್ಲದಿದ್ದರೆ ಯಾವುದಾದರೊಂದು ಅಂಶವನ್ನು ಬುನಾದಿಯೆಂದೆನಿಸಿ ಅದಕ್ಕಾಗಿ ಸಂಪೂರ್ಣ ಜಮಾಅತ್ ಮತ್ತು ಧರ್ಮವನ್ನು ಗಂಡಾಂತರಕ್ಕೆ ಸಿಲುಕಿಸಲು ಅದು ಎಡೆಗೊಟ್ಟೀತು.

ಈ ಬಗ್ಗೆ ಇನ್ನೊಂದು ವಿಚಾರವನ್ನು ತಿಳಿಸುವುದು ಅತ್ಯಗತ್ಯವಾಗಿದೆ. ಅರ್ಥಾತ್ ಇಂದು ಜನಮನಗಳಲ್ಲಿ ಧರ್ಮ ಭಕ್ತಿಯ ಕುರಿತು ಕೆಲವು ತಪ್ಪು ತಿಳುವಳಿಕೆಗಳು ನೆಲೆಸಿವೆ. ಇಂದು ಯಾರಾದರೂ ಧಾರ್ಮಿಕ ಸೇವೆಗಳನ್ನು ಮಾಡಲಿಚ್ಛಿಸಿದರೆ ಧರ್ಮದಲ್ಲಿ ಯಾವುದೇ ಬುನಾದಿಯಿಲ್ಲದ ವಿಷಯಗಳನ್ನೇ ಅವರು ಜನರಲ್ಲಿ ಹುಡುಕುತ್ತಾರೆ. ಅಂತಹ ವಿಷಯಗಳು ಆ ಕಾರ್ಯಕರ್ತರಲ್ಲಿ ಗೋಚರಿಸದಾಗ ಅದು ಅವರ ದೃಷ್ಟಿಯಲ್ಲಿ ಒಂದು ಧರ್ಮ ನಿರಪೇಕ್ಷ ಅಥವಾ ಒಂದು ವಿನಾಶಕಾರೀ ಸಂಘಟನೆಯಾಗಿ ಪರಿಣಮಿಸುವುದು. ವಿಶ್ವಾಸ- ಧ್ಯೇಯಗಳ ಬಗ್ಗೆ ಹೇಳುವುದಿದ್ದರೆ ಜಮಾಅತೆ ಇಸ್ಲಾಮಿಯು ಅತ್ಯುತ್ತಮ ಮತ್ತು ಉತ್ಕೃಷ್ಟವಾದ ಒಂದು ಸಂಘಟನೆಯಾಗಿದ್ದರೂ ಅದರ ನಾಯಕರಲ್ಲಿ ದೇವಭಕ್ತಿ (ತಕ್ವಾ) ಯಿಲ್ಲವೆಂದು ಎಷ್ಟೋ ಜನರು ಹೇಳುತ್ತಿರುವುದಕ್ಕೆ ಇದೇ ಕಾರಣವಾಗಿದೆ. ಈ ಅಪಪ್ರಚಾರವು ಒಂದಲ್ಲೊಂದು ರೀತಿಯಲ್ಲಿ ನಮ್ಮ ಸದಸ್ಯರ ಮೇಲೆ ಪ್ರಭಾವ ಬೀರಬಹುದು. ಆದ್ದರಿಂದ ಈ ಬಗ್ಗೆಯೂ ನೀವು ಕೆಲವು ವಿಚಾರಗಳನ್ನು ತಿಳಿದಿರುವ ಅಗತ್ಯವಿದೆ. ಇದರಿಂದ ಜಮಾಅತ್ ಸದಸ್ಯರನ್ನು ಪರಿಶುದ್ಧರೆಂದು ಸಾರುವುದು ಅಥವಾ ಅವರೆಲ್ಲ ಪುಣ್ಯವಂತರೆಂದು ಸಮರ್ಥಿಸುವುದು ನನ್ನ ಉದ್ದೇಶವಲ್ಲ. ಬದಲಾಗಿ ವಸ್ತುಸ್ಥಿತಿಯನ್ನು ಅದರ ನೈಜರೂಪದಲ್ಲಿ ಸ್ಪಷ್ಟಪಡಿಸುವುದಾಗಿದೆ. "ಈ ಸಂಘಟನೆಯ ನಾಯಕರಲ್ಲಿ ಯಾರಿಗೂ ನಾವು ದೊಡ್ಡ ಮುತ್ತಕೀ (ದೇವಭಕ್ತ) ಗಳೆಂಬ ವಾದವಿಲ್ಲ. ಆದರೆ ಜಮಾಅತ್‌ನ ಚಟುವಟಿಕೆಗಳು ಸರಿಯೆಂದು ಭಾವಿಸುತ್ತಾ ಅದೇ ಸಂದರ್ಭದಲ್ಲಿ ತಕ್ವಾ-ಕಡಿಮೆಯಿದೆಯೆಂಬ ನೆಪವೊಡ್ಡಿ ಜಮಾಅತ್‌ನೊಂದಿಗೆ ಅಸಹಕಾರ ತೋರುವಂತೆ ಜನರಿಗೆ

ಉಪದೇಶ ಮಾಡುತ್ತಾ ಬೇರೊಂದು ವಿಭಾಗವು ತಪ್ಪು ಮಾರ್ಗದಲ್ಲಿ ಚಲಿಸುತ್ತಲಿದ್ದರೂ ಅವರನ್ನು ಮುತ್ತಕೀಗಳೆಂದು ಬಣ್ಣಿಸಿ ಅವರೊಂದಿಗೆ ಸಹಕರಿಸುವಂತೆ ಪ್ರೇರೇಪಿಸುವವರ 'ತಕ್ವಾ'ದ ಕುರಿತು ನಮಗೆ ನಿಜಕ್ಕೂ ಅಚ್ಚರಿಯಾಗುತ್ತಿದೆ. ಅಲ್ಲಾಹನನ್ನು ಮುಂದಿಟ್ಟು ನಾವು ಅವರ ಕರ್ತವ್ಯಗಳನ್ನು ಜ್ಞಾಪಿಸಿಕೊಡುತ್ತಿದ್ದೇವೆ; ಅವರಿಗೆ ಸತ್ಯಮಾರ್ಗ ಸ್ಪಷ್ಟಗೊಂಡಿದ್ದರೆ ಅದರೊಂದಿಗೆ ಅವರಲ್ಲಿ ತಕ್ವಾ ಮೈಗೂಡಿದ್ದರೆ ಅವರು ತಾವೇ ಮುಂದೆ ಬಂದು ನಾಯಕತ್ವವನ್ನು ವಹಿಸಿಕೊಳ್ಳಬೇಕಾಗಿತ್ತು. ಅದರ ಬದಲಾಗಿ ಮುಸ್ಲಿಮರನ್ನು ದುರ್ಮಾರ್ಗದಲ್ಲಿ ನಡೆಯಲು ಮನಃಪೂರ್ವಕವಾಗಿ ಉಪದೇಶಿಸುವುದು ಯಾವ ವಿಧದಿಂದಲೂ ತರವಲ್ಲ. ಈ 'ತಕ್ವಾ'ದ ಕುರಿತು ಅದೊಂದು ದಿನ ತಾವು ವಿಚಾರಣೆ ಎದುರಿಸಬೇಕಾದೀತೆಂಬುದನ್ನು ಅವರು ಚೆನ್ನಾಗಿ ನೆನಪಿನಲ್ಲಿಡಲಿ. ಮುಸ್ಲಿಮರನ್ನು ದುರ್ಮಾರ್ಗಕ್ಕೆ ಅಟ್ಟಿಬಿಟ್ಟ ಬಗ್ಗೆ ಅವರು ಅಂದು ಪ್ರಶ್ನಿಸಲ್ಪಡುವರು. ಆದರೆ ಅಂದು ಅವರಿಗೆ ನಾವು ಮುಸ್ಲಿಮರಿಗೆ ಮುತ್ತಕೀ ಹಾಗೂ ಸನ್ಮಾರ್ಗಿಗಳಾದ ಜನರ ಹಿಂದೆ ಹೋಗಲು ಉಪದೇಶಿಸಿದ್ದೇವೆಂದು ಹೇಳಿ ಜಾರಿಕೊಳ್ಳಲು ಸಾಧ್ಯವಿಲ್ಲ.

ಇಂದು ತಕ್ವಾದ ಕಡ್ಡಾಯ ಉಪಾಧಿಯೆಂದು ಪರಿಗಣಿಸಲಾಗುತ್ತಿರುವ ಅನೇಕ ವಿಷಯಗಳು ಇಸ್ಲಾಮಿನ ಉತ್ತಮ ಕಾಲದಲ್ಲಿ (ಸಹಾಬಿಗಳ ಕಾಲ)ಇರಲೇ ಇಲ್ಲವೆಂಬುದನ್ನು ಈ ಸಂದರ್ಭದಲ್ಲಿ ಬಹಿರಂಗವಾಗಿ ಘೋಷಿಸಲು ನಾನು ಅಂಜುವುದಿಲ್ಲ. ಇಂದು ಮಾನವನು ನಿಷಿದ್ಧವನ್ನು ನಿಷಿದ್ಧವೆಂದು ತ್ಯಜಿಸಿದರೆ ಸಾಲದು, ಆತನು ಮುತ್ತಕೀಯೆಂದು ಪರಿಗಣಿಸಲ್ಪಡಬೇಕಾದರೆ ಅಲ್ಲಾಹನು ಅನುಮತಿಸಿರುವ ಕೆಲವನ್ನೂ ವರ್ಜಿಸಬೇಕು! ಇಂದು ಕೆಲವು ಧರ್ಮ ಸಮ್ಮತ ವಿಷಯಗಳನ್ನು ಕೈ ಬಿಡುವುದರಲ್ಲಿ ಎಷ್ಟೊಂದು ಆಸಕ್ತಿ ತೋರಲಾಗುತ್ತಿದೆಯೆಂದರೆ ಅದರಲ್ಲಿ ಏನಾದರೂ ಕಲಬೆರಕೆ ಮಾನವನಲ್ಲಿ ಕಂಡರೆ ಆತನನ್ನು ದೇವಭಕ್ತಿಯಿಲ್ಲದವನೆಂದು ಪ್ರಚಾರ ಮಾಡಲಾಗುತ್ತಿದೆ. ಆದರೆ ಈ ಕುಪ್ರಚಾರವನ್ನು ನಡೆಸುತ್ತಿರುವ ಮಹನೀಯರೇ ಇಂದು ದೊಡ್ಡ ದೊಡ್ಡ ನಿಷಿದ್ಧಗಳಲ್ಲಿ ಸಿಲುಕಿದ್ದಾರೆ. ಆ ಬಗ್ಗೆ ಅವರಿಗೆ ಯಾವ ಕಳವಳವೂ ಇಲ್ಲ. ಯಾವನಾದರೂ ಸುಧಾರಿತ ರೀತಿಯಲ್ಲಿ ಜೀವಿಸಲಾರಂಭಿಸಿದರೆ ಆತನು ಅವರ 'ವಿಲಾಯತ್' ವಲಯದಿಂದ ಭ್ರಷ್ಟನಾಗುತ್ತಾನೆ. ಆದರೆ ದೇವೇತರ ಶಕ್ತಿಗಳ ಪರವಾಗಿ ತಮ್ಮ ಸಾಮರ್ಥ್ಯಗಳೆಲ್ಲವನ್ನೂ ಅರ್ಪಿಸುತ್ತಿರುವವರಿಗೆ ಕೆಲವು ಆಚಾರ ಕರ್ಮಗಳನ್ನು ಆಚರಿಸಿದ ಮಾತ್ರಕ್ಕೆ ದೇವಸಾಮಿಪ್ಯದ ಶ್ರೇಷ್ಠ ಪದವಿಗಳು ನಿತ್ಯ ಲಭ್ಯವಾಗುವುದೆಂಬುದು ಅವರ ಭಾವನೆಯಾಗಿದೆ. ಪ್ರಗತಿಯ ಹಾದಿಯಲ್ಲಿ ಅವರಲ್ಲಿ ಯಾವೊಂದು ತಡೆಯೂ ಇಲ್ಲ. ಪ್ರಾಯಶಃ ಇಂತಹ ತ್ಯಾಗದ ಕುರಿತೇ ಹ.ಈಸಾ(ಅ) ಅವರು "ಸೊಳ್ಳೆಯನ್ನು ಹೆಕ್ಕಿ ತೆಗೆಯುತ್ತಾರೆ ಮತ್ತು ಒಂಟೆಯನ್ನು ಇಡಿಯಾಗಿ ನುಂಗುತ್ತಾರೆ" ಎಂದು ವ್ಯಾಖ್ಯಾನಿಸಿರಬೇಕು. ಗಡ್ಡ-ಮೀಸೆಗಳ ಕಿಂಚಿತ್ ಲೋಪ ದೋಷಗಳನ್ನು ಸಹಿಸದೆ ಅದೇ ವೇಳೆ ಅಲ್ಲಾಹನ ಶರೀಅತ್ ನಾಶವಾಗುವುದರ ಕುರಿತು ಹೃದಯ ತಲ್ಲಣಿಸದಂತಹ ತಕ್ವಾಗಳಿಗೆ ಆ ವ್ಯಾಖ್ಯಾನ ಅನ್ವರ್ಥವಾಗಿದೆ.

"ಹಾಗೆಯೇ ಇಂದು ತಕ್ವಾದ ಇನ್ನೊಂದು ಕಡ್ಡಾಯ ಶರ್ತವು ಯಾವುದಾದರೊಂದು ಆಶ್ರಮದ ಸರ್ಟಿಫಿಕೇಟು ಇರಬೇಕೆಂಬುದಾಗಿದೆ. ಮಾನವನು ಕುರ್‌ಆನ್ ಮತ್ತು ಸುನ್ನತನ್ನು ಎಷ್ಟೇ ಅನುಸರಿಸುವವನಾಗಿದ್ದರೂ ಅಂತಹ ಸರ್ಟಿಫಿಕೇಟಿಲ್ಲದೇ ತಕ್ವಾದ ಉನ್ನತ ಪದವಿಗೆ

ತಲಪಲು ಸಾಧ್ಯವಿಲ್ಲವೆಂಬ ಸಾಮಾನ್ಯ ಭಾವನೆಯಿದೆ. ವಾಸ್ತವದಲ್ಲಿ ಇದನ್ನು ಧರ್ಮದಲ್ಲಿ ವೃಥಾ ತುರುಕಲಾಗಿದೆ. ಪವಿತ್ರ ಕುರ್‌ಆನಿನಲ್ಲಿ ಪ್ರಶಂಸಿಸಲಾಗಿರುವ ತಕ್ವಾವು ದೇವ ಮಿತಿಯ ಪಾಲನೆ, ಧರ್ಮವನ್ನು ಮೈಗೂಡಿಸಿಕೊಳ್ಳುವುದು ಮತ್ತು ಇತರರಲ್ಲಿಯೂ ಪ್ರಚಾರ ಪಡಿಸುವುದರ ಹೊರತು ಬೇರೇನಲ್ಲ. ಓರ್ವನು ಅಲ್ಲಾಹನ ಮಿತಿಮೇರೆಗಳ ಉಲ್ಲಂಘನೆಗೆ ಭಯಪಟ್ಟು ಆತನು ಶರೀಅತ್ತನ್ನು ಎಚ್ಚರಿಕೆಯಿಂದ ಪಾಲಿಸುತ್ತಾ ನೂತನ ಮತ್ತು ನಿಷಿದ್ಧ ಮಾರ್ಗಗಳನ್ನು ಕೈ ಬಿಟ್ಟಿದ್ದರೆ ಆತನೇ ನಿಜವಾದ ಮುತ್ತಕೀ. ಆತನಿಗೆ ಯಾವುದಾದರೂ ಆಶ್ರಮದೊಂದಿಗೆ ಸಂಬಂಧವಿದೆಯೇ ಎಂಬುದನ್ನು ನೋಡಬೇಕಾಗಿಲ್ಲ. ಕೇವಲ ತೋರಿಕೆಯ ವಿನಯ, ಕೊಳಕು ಬಟ್ಟೆ ಧಾರಣೆ, ಅಸಂಸ್ಕೃತ ಜೀವನ ರೀತಿ, ಧರ್ಮ ಸಂಸ್ಥಾಪನೆಯ ಪರಿಶ್ರಮಗಳ ಬಗ್ಗೆ ನಿರ್ಲಕ್ಷ್ಯ, ಅಂಗೀಕೃತ ಹಾಗೂ ಅನಧಿಕೃತ ದಿಕ್ರ್ -ಔರಾದ್- ವಝೀಫ್‌ಗಳಲ್ಲಿಯೇ ಸದಾ ಮಗ್ನವಾಗಿರುವುದೇ ಮುಂತಾದ ಇಂದಿನ ತಕ್ವಾ ಪ್ರದರ್ಶನವನ್ನು ಈ ಸಂಘಟನೆಯಿಂದ ನಿರೀಕ್ಷಿಸಬಾರದು. ಅಂತಹ ವಿಷಯಗಳನ್ನು ಬಯಸುವವರು ಅದಕ್ಕಾಗಿ ನಮ್ಮನ್ನು ವಿನಂತಿಸುವ ಬದಲಾಗಿ ಯಾವುದಾದರೂ ಖಾಖಾ (ಆಶ್ರಮಕ್ಕೆ) ಹೋಗುವುದು ಉತ್ತಮ. ಅಲ್ಲಾಹನ ಗ್ರಂಥ ಮತ್ತು ಪ್ರವಾದಿಚರ್ಯೆಯ ಬುನಾದಿಯಲ್ಲಿರುವ ವಿಷಯಗಳನ್ನಷ್ಟೇ ನಮ್ಮಿಂದ ಅಪೇಕ್ಷಿಸಬೇಕು. ಅದರ ಹೊರತು ಇನ್ನಾವುದನ್ನೂ ನಮಗೆ ಇದರ ಸಮರ್ಥನೆಯಾಗಿ ತೋರಿಸಬಾರದು. ನಮ್ಮ ಬಗ್ಗೆ ಯಾರೂ ತಪ್ಪು ತಿಳಿಯಬಾರದೆಂಬ ಉದ್ದೇಶದಿಂದ ನಾನು ಈ ವಿಷಯ ಇಷ್ಟೊಂದು ಸ್ಪಷ್ಟವಾಗಿ ಹೇಳಿದ್ದೇನೆ. ನಾವು ಹೇಗಿದ್ದೇವೆಯೋ ಅದಕ್ಕಿಂತ ಒಂದು ಅಣುಗಾತ್ರ ಹೆಚ್ಚಿಸಿ ತೋರಿಸಲು ನಮಗಿಷ್ಟವಿಲ್ಲ."

ಇಂದು ತಕ್ವಾದ ಸುತ್ತಲೂ ಅಂತಹ ಕಲ್ಪಿತ ಉಪಾಧಿಗಳನ್ನು ಹೇರಿರುವುದರ ಕಾರಣವು 'ಇಕಾಮತುದ್ದೀನ್'ನ ನೈಜ ಪ್ರಯತ್ನಗಳ ಮೇಲೆ ಪರದೆಯೆಳೆಯುವುದೆಂಬುದನ್ನು ಬಿಚ್ಚಿ ಹೇಳಲು ನಾನು ಅಂಜುವುದಿಲ್ಲ. ಈ ಜನರಿಗೆ ಧರ್ಮದ ನೈಜ ಬೇಡಿಕೆಗಳು ಜಟಿಲವಾಗಿ ತೋರುತ್ತವೆ. ಧರ್ಮದ ಹಾದಿಯಲ್ಲಿ ಕಠೋರವಾದ ಅನೇಕ ಹಂತವನ್ನು ದಾಟಬೇಕಾಗಿದೆಯೆಂದೂ ಅವರು ಕಂಡಿದ್ದಾರೆ. ಅದಲ್ಲದೇ ಹೇಡಿಗಳು ಅಥವಾ ಅಂಜು ಬುರುಕರೆಂದು ಕರೆಸಲ್ಪಡುವುದನ್ನು ಅವರು ಇಷ್ಟಪಡುವುದಿಲ್ಲ. ಧರ್ಮದ ನೈಜ ಬೇಡಿಕೆಗಳ ಬದಲಿಗೆ ಅವರು ಕೆಲವನ್ನು ಸ್ವಯಂ ಕಂಡು ಹುಡುಕಿದ್ದಾರೆ. ರಣಾಂಗದ ಕೆಲಸವು ಲೋಕದ ಗೊಂದಲವೆಂದು ಅವರು ತೊರೆದರು. ಆಶ್ರಮಗಳನ್ನು ಸೇರಿ ಔರಾದ್ - ವಝೀಫ್ (ಜಪ-ತಪ)ಗಳ ಪ್ರಮಾಣವನ್ನು ಹೆಚ್ಚಿಸಿದರು. ತರುವಾಯ ತಕ್ವಾಕ್ಕೆ ಒಂದು ವಿಶೇಷ ರೂಪವನ್ನೇ ನಿರ್ಧರಿಸಿಕೊಂಡರು. ತಕ್ವಾದ ಜೀವನದ ವಿಶೇಷ ವಿಧಾನವೇ ಅಸ್ತಿತ್ವಕ್ಕೆ ಬಂತು. ಕ್ರಮೇಣ ಪರಿಸ್ಥಿತಿ ಬದಲಾಯಿತು, ಅದು ಇಂದು ಎಲ್ಲಿಯ ತನಕ ತಲಪಿದೆಯೆಂದರೆ. ಅವರ ಇಂದಿನ ತಕ್ವಾದ ಮಾನದಂಡದಿಂದ ಆರಂಭ ಶತಾಬ್ಧದ ಮುಸ್ಲಿಮರನ್ನು ಅಳೆದರೆ ಪ್ರಾಯಶಃ ಅವರೂ ಮುತ್ತಕೀಗಳಲ್ಲವೆಂದಾಗಬಹುದು. ನಾವು ಅಂತಹ ತಕ್ವಾವನ್ನು ನಂಬುವವರಲ್ಲ. ಓರ್ವ ನಿಷ್ಠಾವಂತ ಮುಸ್ಲಿಮನ ಜೀವನವನ್ನು ಯಥಾವತ್ತಾಗಿ ನಿರ್ವಹಿಸಿದರೆ ಸಾಕು. ಅಲ್ಲಾಹನ ಮತ್ತು ಪ್ರವಾದಿಯ ಯಾವೆಲ್ಲಾ ನಿರ್ದೇಶಗಳು ತಿಳಿದಿವೆಯೋ ಅವುಗಳನ್ನು ನಾನು ಹೆಚ್ಚು ಕಡಿಮೆ ಮಾಡುವುದಿಲ್ಲವೆಂದು ಹೇಳಿ ದೃಢವಾಗಿ ನಿಂತು ಜೀವನವನ್ನು ಸದಾ ಅವಲೋಕಿಸುತ್ತಿರಬೇಕು. ನಮ್ಮ ಚಟುವಟಿಕೆಗಳು ಅವರಿಗೆ

ತೋರಿಸಲಿಕ್ಕಾಗಿ ಅಥವಾ ಪ್ರಶಂಶೆಗಳಿಸಲಿಕ್ಕಾಗಿರುವುದಲ್ಲ. ಅಲ್ಲಾಹನ ದಾಸರ ಮೇಲೆ ಅಲ್ಲಾಹನ ಕಾನೂನಿಗೆ ಮಾತ್ರ ಆಧಿಪತ್ಯವಿರುವಂತಾಗಲಿಕ್ಕಾಗಿ ಸದಾಕಾರ್ಯ ಮಗ್ನರಾಗಿರಿ. ಈ ವಿಷಯವನ್ನು ನೀವು ಗಮನವಿಟ್ಟು ಆಲಿಸಬೇಕೆಂದು ಬಯಸುತ್ತೇನೆ. ಕಾಲವು ಭರದಿಂದ ಬದಲಾಗುತ್ತಿದೆ. ಅತಿ ದುಷ್ಕರ ಚಟುವಟಿಕೆಗಳು ನಮ್ಮ ಮುಂದೆ ಬರಲಿದೆ. ಯಾವುದಾದರೂ ಭೀಕರ ಪರೀಕ್ಷೆಯು ಎದುರಾದಾಗ ನಾವು ತಪ್ಪು ತಿಳುವಳಿಕೆಯಲ್ಲಿ ಅಲೆದಾಡುತ್ತಿರುವುದು ಆಪತ್ಕಾರಿಯಾಗಿದೆ. ಕುರ್‌ಆನ್ ಮತ್ತು ಪ್ರವಾದಿಚರ್ಯೆಯ ವಿನಾ ನಮ್ಮ ಕೈಯಲ್ಲಿ ಅನ್ಯಮಾನದಂಡವಿರಬಾರದು. ಅದೇ ಮಾನದಂಡದಿಂದಲೇ ನಾವು ನಮ್ಮ ಜಮಾಅತ್ ಸದಸ್ಯರನ್ನೂ ಅನುಯಾಯಿಗಳನ್ನೂ ಅಳೆಯುತ್ತೇವೆ. ಈ ವಿಮರ್ಶೆಯಲ್ಲಿಯೇ ಜಮಾಅತ್‌ನ ಜೀವ ಅಡಕವಾಗಿದೆ. ಅದರಲ್ಲಿ ಯಾವುದೇ ಔದಾಸೀನ್ಯ ಮತ್ತು ನಿರ್ಲಕ್ಷ್ಯ ಮನೋಭಾವವನ್ನು ತಾಳಬಾರದು. ಬುನಾದಿಯಿಲ್ಲದ ಇತರೆಲ್ಲಾ ವಿಚಾರಗಳನ್ನು ಸಂಪೂರ್ಣ ವರ್ಜಿಸಿರಿ. ಅವು ನಿಮ್ಮೊಂದಿಗೆ ಅಭೇದ್ಯವಾಗಿ ಅಂಟಿಕೊಂಡಿದ್ದರೆ ನೀವು ನಮ್ಮನ್ನು ತೊರೆಯುವುದರಲ್ಲಿ ನಮಗೇನೂ ಬೇಸರವಿಲ್ಲ. ನಾವು ಸ್ವತಃ ಮೋಸ ಹೋಗ ಬಯಸುವುದಿಲ್ಲ. ಇತರರನ್ನು ವಂಚಿಸಲೂ ಬಯಸುವುದಿಲ್ಲ.

## ನಾಯಕತ್ವದ ಕ್ರಾಂತಿ

ಮಗ್ರಿಬ್ ಬಳಿಕ (21 ಎಪ್ರಿಲ್ 1945) ಸಮಾರೋಪ ಸಭೆ ಆರಂಭಗೊಂಡಿತು. ಆ ಸಂದರ್ಭದಲ್ಲಿ ಅಮೀರ್ ಮಾಡಿದ ಭಾಷಣದ ನಿಕ್ಷೇಪ ಹೀಗಿದೆ:

ಹಮ್ದ್ ಮತ್ತು ಸಲಾತ್‌ನ ಬಳಿಕ -

ಮಿತ್ರರೇ! ಬಂಧುಗಳೇ!

ನಮ್ಮ ಈ ಪ್ರಯತ್ನಗಳ ಪರಮ ಗುರಿಯು ನಾಯಕತ್ವದ ಬದಲಾವಣೆಯಾಗಿದೆ. ಅರ್ಥಾತ್ ಇಹಲೋಕದಲ್ಲಿ ನಾವು ತಲಪ ಬಯಸುವ ಕೊನೆಯ ಸ್ಥಾನವು ವಿನಾಶಕಾರಿ, ಕಿಡಿಗೇಡಿ ಮತ್ತು ವಿಧ್ವಂಸಕ ಜನರ ನಾಯಕತ್ವವನ್ನು ಕೊನೆಗೊಳಿಸಿ ಉತ್ತಮ ನಾಯಕತ್ವ ವ್ಯವಸ್ಥೆಯನ್ನು ಸ್ಥಾಪಿಸುವುದಾಗಿದೆ. ಈ ಪ್ರಯತ್ನಗಳನ್ನೇ ಇಹ-ಪರಲೋಕದಲ್ಲಿ ದೇವ ಸಂಪ್ರೀತಿಯನ್ನು ಗಳಿಸುವ ಏಕ ದಾರಿಯೆಂದು ನಾವು ಭಾವಿಸಿದ್ದೇವೆ. ಆದರೆ ನಾವು ಇಂದು ಧ್ಯೇಯವಾಗಿ ಅಂಗೀಕರಿಸಿರುವ ಈ ವಾಸ್ತವಿಕತೆಗಳ ಪ್ರಾಮುಖ್ಯದ ಬಗ್ಗೆ ಮುಸ್ಲಿಮ್ ಮತ್ತು ಮುಸ್ಲಿಮೇತರರು ಅಜ್ಞರಾಗಿರುವುದು ವಿಷಾದನೀಯ. ಮುಸ್ಲಿಮರು ಅದನ್ನು ಕೇವಲ ಒಂದು ರಾಜಕೀಯ ಧ್ಯೇಯವೆಂದು ಪರಿಗಣಿಸುತ್ತಾರೆ. ಧರ್ಮದಲ್ಲಿ ಅದಕ್ಕಿರುವ ಪ್ರಾಮುಖ್ಯವನ್ನು ಅವರು ತಿಳಿದಿಲ್ಲ. ಮುಸ್ಲಿಮೇತರರಿಗಾದರೋ ಹಲವೊಂದು ಪಕ್ಷಪಾತ ಮತ್ತು ಅಜ್ಞಾನದಿಂದಾಗಿ ಈ ವಾಸ್ತವಿಕತೆಯನ್ನು ಗ್ರಹಿಸಲು ಸಾಧ್ಯವಾಗುವುದಿಲ್ಲ. ವಾಸ್ತವದಲ್ಲಿ ವಿನಾಶಕಾರಿಗಳ ಮತ್ತು ದುರಾಚಾರಿಗಳ ನಾಯಕತ್ವವೇ ಮಾನವಕುಲವು ಎದುರಿಸುತ್ತಿರುವ ಎಲ್ಲಾ ವಿಪತ್ತುಗಳ ಮೂಲ ವೆಂಬುದನ್ನೂ ಲೋಕ ನಿಯಂತ್ರಣವು ಸಜ್ಜನರ ಹಸ್ತದಲ್ಲಿ ಬರುವುದೇ ಮಾನವ ಹಿತದ ಏಕ ಹಾದಿಯೆಂಬುದನ್ನೂ ಅವರು ಅರ್ಥಮಾಡಿಕೊಳ್ಳುವುದಿಲ್ಲ. ನಿಜಸ್ಥಿತಿಯನ್ನು ನೋಡುವುದಿದ್ದರೆ ಇಂದು ಲೋಕದಲ್ಲಿ ಭುಗಿಲೇಳುತ್ತಿರುವ ಭೀಕರ ವಿನಾಶಗಳು ಇಲ್ಲಿ ತಾಂಡವವಾಡುತ್ತಿರುವ

ಅನ್ಯಾಯ-ದೌರ್ಜನ್ಯಗಳು, ಸಾರ್ವತ್ರಿಕ ಕೆಡುಕುಗಳು, ಮಾನವನ ನಾಗರಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ಜೀವನ ರಂಗಗಳಲ್ಲಿ ಬೆರೆತಿರುವ ಮಾರಕ ವಿಷಗಳಾಗಿವೆ. ಮಾನವನ ಎಲ್ಲಾ ಉಪಕರಣಗಳೂ ವಿಜ್ಞಾನವೂ ಸಂಶೋಧಿಸಿರುವ ಇತರೆಲ್ಲ ಸಾಮರ್ಥ್ಯಗಳೂ ಆತನ ವಿಜಯ ಸೌಭಾಗ್ಯಗಳ ಬದಲಾಗಿ ಶೋಚನೀಯ ರೀತಿಯಲ್ಲಿ ಬಳಸಲ್ಪಡುತ್ತಿರುವುದರ ಜವಾಬ್ದಾರಿಕೆಯನ್ನು ಪ್ರಸ್ತುತ ವಿಷಯಗಳ ಮೇಲೆಯೇ ಹೋಲಿಸಬೇಕಾಗಿದೆ. ಲೋಕದಲ್ಲಿ ಸಜ್ಜನರ ಕೊರತೆ ಇಲ್ಲವಾದರೂ ಲೋಕ ವ್ಯವಹಾರಗಳ ನಿಯಂತ್ರಣ ಅವರ ಕೈಗಳಲ್ಲಿಲ್ಲ. ಬದಲಾಗಿ ದೇವನಿಂದ ವಿಮುಖರಾದ ಲೌಕಿಕತೆಯಲ್ಲಿಯೂ ಅನೈತಿಕತೆಗಳಲ್ಲಿಯೂ ಮುಳುಗಿರುವ ಜನರ ಹಸ್ತಗಳಲ್ಲಿವೆ. ಈಗ ಯಾರಾದರೂ ಲೋಕದಲ್ಲಿ ಶಾಂತಿ, ಸಮಾಧಾನ ಮತ್ತು ಸುಧಾರಣೆಯನ್ನು ಬಯಸುವುದಿದ್ದರೆ, ನಾಶವನ್ನು ಒಳಿತಿನಿಂದಲೂ ಅವ್ಯವಸ್ಥೆಯನ್ನು ಶಾಂತಿಯಿಂದಲೂ ದುರ್ಗುಣಗಳನ್ನು ಸದ್ಗುಣಗಳಿಂದಲೂ ಕೆಡುಕುಗಳನ್ನು ಒಳಿತಿನಿಂದಲೂ ಬದಲಾಯಿಸ ಬಯಸುವುದಿದ್ದರೆ-ದೇವಭಕ್ತಿ, ಸತ್ಕರ್ಮ ಮತ್ತು ಸದಾಚಾರಗಳ ಕುರಿತು ಉಪದೇಶ ಮಾಡಿದರೆ ಮಾತ್ರ ಸಾಲದು; ಮಾನವ ಸಮಾಜದಲ್ಲಿ ಅವರಿಗೆ ದೊರೆಯುವ ಉತ್ತಮ ವ್ಯಕ್ತಿಗಳೆಲ್ಲರ ಸಂಘಟಿತ ಶಕ್ತಿಯನ್ನು ಒಂದುಗೂಡಿಸುವುದೂ ಅವರ ಕರ್ತವ್ಯವಾಗಿದೆ. ಕೇವಲ ಅದರಿಂದಲೇ ನಾಗರಿಕತೆಯ ಕಡಿವಾಣವನ್ನು ದುರ್ಜನರಿಂದ ಕಿತ್ತು ತೆಗೆದು ನಾಯಕತ್ವ ವ್ಯವಸ್ಥೆಯಲ್ಲಿ ಬದಲಾವಣೆ ಮಾಡಲು ಸಾಧ್ಯ.

ಮಾನವನ ವ್ಯವಹಾರಗಳ ಕಡಿವಾಣವು ಯಾರ ಹಸ್ತಗಳಲ್ಲಿದೆಯೆಂಬ ಪ್ರಶ್ನೆಯಲ್ಲಿ ಮಾನವ ಜೀವನದ ನಿರ್ಮಾಣ ಮತ್ತು ಸಂಹಾರಗಳ ಅಂತಿಮ ತೀರ್ಮಾನ ಅಡಕವಾಗಿದೆಯೆಂಬುದನ್ನು, ಮಾನವನ ಜೀವನ ಸಮಸ್ಯೆಗಳ ಕುರಿತು ಸ್ವಲ್ಪವಾದರೂ ತಿಳುವಳಿಕೆಯಿರುವ ಯಾರೂ ಅರಿಯದಿರಲಾರರು. ವಾಹನವು ಚಾಲಕನು ಬಯಸುವ ದಿಕ್ಕಿಗೆ ಚಲಿಸುತ್ತಿದೆಯಲ್ಲವೇ? ವಾಹನದಲ್ಲಿ ಕುಳಿತಿರುವ ಪಯಣಿಗರು ಮೆಚ್ಚಿದರೂ ಮೆಚ್ಚದಿದ್ದರೂ ಆ ದಿಕ್ಕಿಗೇ ಪಯಣಿಸಬೇಕಾಗುತ್ತದೆ. ಮಾನವ ನಾಗರಿಕತೆ ಎಂಬ ವಾಹನದ ಸ್ಥಿತಿಯೂ ಹೀಗೆಯೇ ಇದೆ. ನಾಗರಿಕತೆಯ ಕಡಿವಾಣ ಕೈಯಲ್ಲಿರುವವರು ಬಯಸುವ ದಿಕ್ಕಿಗೇ ಅದು ಚಲಿಸುತ್ತಿರುವುದು. ಭೂಮಿಯ ಸಕಲ ಸವಲತ್ತುಗಳು ಯಾರ ಹಿಡಿತದಲ್ಲಿರುವುದೋ, ಶಕ್ತಿ-ಅಧಿಕಾರಗಳು ಯಾರ ಕೈಯಲ್ಲಿರುವುದೋ ಜನರ ಜೀವನವು ಯಾರನ್ನು ಅವಲಂಬಿಸಿರುವುದೋ ವಿಚಾರ ಸಿದ್ಧಾಂತಗಳ ನಿರ್ಮಾಣ ನಿರ್ದೇಶನ ಸಾಮರ್ಥ್ಯ ಯಾರಲ್ಲಿರುವುದೋ ವೈಯಕ್ತಿಕ ಚಾರಿತ್ರ್ಯಗಳ ನಿರ್ಮಾಣ, ಸಾಮಾಜಿಕ ವ್ಯವಸ್ಥೆಗಳ ರಚನೆ, ನೈತಿಕ ಮೌಲ್ಯಗಳ ನಿರ್ಣಯವು ಯಾರ ಅಧಿಕಾರದಲ್ಲಿದೆಯೋ ಅವರ ನಾಯಕತ್ವ ಮತ್ತು ಆಧಿಪತ್ಯದ ಕೈ ಕೆಳಗೆ ಬದುಕಿ, ಮಾನವ ಸಮಾಜವನ್ನು ಅವರು ಒಯ್ಯ ಬಯಸುವ ಮಾರ್ಗದಿಂದ ತಪ್ಪಿಸಿಕೊಳ್ಳಲು ಜನತೆಗೆ ಸಾಮಾನ್ಯವಾಗಿ ಯಾವ ರೀತಿಯಿಂದಲೂ ಸಾಧ್ಯವಿಲ್ಲ. ಈ ಆಡಳಿತಗಾರರು ಮತ್ತು ನಾಯಕರು, ದೇವಭಕ್ತರೂ ಸಜ್ಜನರೂ ಆಗಿದ್ದರೆ, ಖಂಡಿತವಾಗಿಯೂ ಜೀವನದ ಎಲ್ಲಾ ರಂಗವೂ ದೇವಭಕ್ತಿ ಮತ್ತು ಒಳಿತಿನ ಹಾದಿಯಲ್ಲಿಯೇ ನಡೆಯುವುದು. ಆಗ ದುರ್ಜನರೂ ಸಜ್ಜನರಾಗಬೇಕಾಗುತ್ತದೆ. ಒಳಿತು ಹೆಚ್ಚಿ ವಿಕಾಸವಾಗುವುದು. ಕೆಡುಕು ಸಂಪೂರ್ಣ ಅಳಿಯುವುದು ಅಥವಾ ಕನಿಷ್ಟ ಅವುಗಳ ಬೆಳವಣಿಗೆ ಕುಂಠಿತವಾಗುವುದು. ತದ್ವಿರುದ್ಧವಾಗಿ ಅಧಿಕಾರವು

ದೇವನನ್ನು ಮರೆತ ದುರ್ಜನರ ಹಸ್ತದಲ್ಲಿದ್ದರೆ ಜೀವನದ ಸರ್ವ ವ್ಯವಸ್ಥೆಗಳೂ ತನ್ನಿಂತಾನೇ ದೇವ ಧಿಕ್ಕಾರ ಮತ್ತು ದುರ್ಗುಣದ ಹಾದಿಗಳಲ್ಲಿಯೇ ಚಲಿಸುವುದು. ವಿಚಾರ ಸಿದ್ಧಾಂತಗಳು, ಆಚಾರಗಳು, ವಿಜ್ಞಾನ, ಸಾಹಿತ್ಯ, ರಾಜಕೀಯ, ಆರ್ಥಿಕತೆ, ಸಂಸ್ಕೃತಿ, ನೈತಿಕತೆ, ಜೀವನದ ವ್ಯವಹಾರ, ಕಾನೂನು, ನ್ಯಾಯಪಾಲನೆ- ಹೀಗೆ ಜೀವನದ ಸರ್ವ ರಂಗಗಳೂ ಅತಿಯಾಗಿ ಕೆಡುವುದು. ಕೆಡುಕು ಸಮೃದ್ಧವಾಗಿ ಬೆಳೆಯುವುದು. ಒಳಿತಿಗೆ ಸಾಕಷ್ಟು ಅವಕಾಶ ಅಥವಾ ಅನುಕೂಲ ವಾತಾವರಣ ದೊರೆಯದೆ ಬೆಳವಣಿಗೆಯಿಲ್ಲದೆ ನಾಶವಾಗುವುದು. ಅಲ್ಲಾಹನ ಭೂಮಿಯು ಅನ್ಯಾಯ ದೌರ್ಜನ್ಯಗಳ ಆಡುಂಬೊಲವಾಗುವುದು. ಅಂತಹ ಸ್ಥಿತಿಯಲ್ಲಿ ದುರ್ಮಾರ್ಗದಲ್ಲಿ ನಡೆಯುವುದು ಸುಲಭವೂ ಒಳಿತಿನ ಮಾರ್ಗದಲ್ಲಿ ನಡೆಯುವ ಮಾತಂತಿರಲಿ ಅದರಲ್ಲಿ ನೆಲೆನಿಲ್ಲುವುದು ಕೂಡಾ ಭಾರೀ ಕಠಿಣವಾಗುವುದು.

ಒಂದು ದೊಡ್ಡ ಜನಸಮೂಹವು ನಡೆಯುತ್ತಿರುವ ದಿಕ್ಕಿಗೆ ಚಲಿಸಲು ಯಾರೂ ಹೆಚ್ಚು ಶ್ರಮಪಡಬೇಕಾಗಿಲ್ಲ. ಜನಸಮೂಹದ ಪ್ರಬಲ ಪ್ರವಾಹದಲ್ಲಿ ಆತ ಸ್ವಯಂ ಕೊಚ್ಚಿಕೊಂಡು ಹೋಗುತ್ತಾನೆ. ಇನ್ನು ಯಾರಾದರೂ ಅದರ ವಿರುದ್ಧ ಚಲಿಸಬಯಸಿದರೆ ತನ್ನೆಲ್ಲಾ ಶಕ್ತಿಯನ್ನು ಉಪಯೋಗಿಸಿದರೂ ಒಂದೆರಡು ಹೆಜ್ಜೆ ಚಲಿಸಲು ಆತ ಭಾರೀ ಹೆಣಗಾಡಬೇಕಾದೀತು.

ಅದಲ್ಲದೇ ಜನಸಮೂಹದ ಪ್ರವಾಹವು ಯಾವ ಕ್ಷಣದಲ್ಲಿಯೂ ಆತನನ್ನು ಥಕ್ಕನೆ ಮೊದಲಿಗಿಂತ ಬಹಳಷ್ಟು ಹಿಂದೆ ತಳ್ಳಿ ಬಿಡಬಹುದು. ಹಾಗೆಯೇ ಸಾಮಾಜಿಕ ವ್ಯವಸ್ಥೆಯು ದುರ್ಜನರ ನಾಯಕತ್ವದಲ್ಲಿ 'ಕುಫ್ರ್' ಮತ್ತು 'ಫಿಸ್ಕ್'ನ ಮಾರ್ಗದಲ್ಲಿ ಚಲಿಸಲಾರಂಭಿಸಿದರೆ ವ್ಯಕ್ತಿ ಮತ್ತು ಸಮಾಜಗಳಿಗೆ ತಪ್ಪು ಹಾದಿಯಲ್ಲಿ ನಡೆಯುವುದು ಅತಿ ಸುಲಭವಾಗುವುದು. ಅದಕ್ಕಾಗಿ ಯಾವ ಶಕ್ತಿಯನ್ನೂ ಬಳಸಬೇಕಾಗಿಲ್ಲ.ಅದರ ವಿರುದ್ಧ ಚಲಿಸ ಬಯಸಿದರೆ ಸಂಪೂರ್ಣ ಶಕ್ತಿಯನ್ನು ಬಳಸಿದರೂ ನಾಲ್ಕಾರು ಹೆಜ್ಜೆ ಸನ್ಮಾರ್ಗದಲ್ಲಿ ಸಾಗಲು ಆತನಿಗೆ ಸಾಧ್ಯವಾಗಲಾರದು.

ಇಂದು ಈ ವಿಷಯಗಳು ಕೇವಲ ವೈಚಾರಿಕ ವಾಸ್ತವಿಕತೆಗಳಾಗಿ ಉಳಿದಿಲ್ಲ. ಇಂದಿನ ಘಟನೆಗಳು ಅದನ್ನು ಕಣ್ಣಿರುವವರೆಲ್ಲರಿಗೂ ನಿಷೇಧಿಸಲಾಗದಂತಹ ಒಂದು ನಗ್ನ ಸತ್ಯವನ್ನಾಗಿ ಮಾಡಿದೆ. ಕಳೆದ ಮೂರು ವರ್ಷಗಳಿಂದ ನಮ್ಮ ಈ ದೇಶದಲ್ಲಿಯೇ ಏನೆಲ್ಲ ನಡೆದಿಲ್ಲ. ದೇಶದ ವಿಚಾರ ಸಿದ್ಧಾಂತಗಳು ಬದಲಾದುವು, ಜನರ ಅಭಿರುಚಿ ಮತ್ತು ಒಲವು ಬದಲಾಯಿತು. ಮಾನವನ ವಿಚಾರ ಶೈಲಿ ಮತ್ತು ದೃಷ್ಟಿಕೋನ ಭಿನ್ನವಾಯಿತು. ಸಂಸ್ಕೃತಿ ಮತ್ತು ನೈತಿಕತೆಯ ಒರೆಗಲ್ಲು ಹಾಗೂ ಮೌಲ್ಯಗಳ ಮಾನದಂಡ ಬದಲಾಯಿತು. ಜೀವನ ವಿಧಾನ ಮತ್ತು ವ್ಯವಹಾರಗಳ ರೀತಿಯೂ ಬದಲಾಯಿತು. ಹೆಚ್ಚೇಕೆ, ಬದಲಾವಣೆಗೊಳ್ಳದ ಯಾವ ವಿಷಯವೂ ಇಲ್ಲ. ಆದರೆ ಈ ಎಲ್ಲಾ ಬದಲಾವಣೆಗಳ ಮೂಲ ಕಾರಣವೇನು? ದೇಶದ ನಾಯಕತ್ವ ಮತ್ತು ಅಧಿಕಾರವನ್ನು ತಮ್ಮ ಕೈಯಲ್ಲಿರಿಸಿಕೊಂಡಿದ್ದ ಜನರು ಪ್ರಸ್ತುತ ಬದಲಾವಣೆಗಳನ್ನು ಬಯಸಿದ್ದರೆಂಬುದಲ್ಲದೆ ಬೇರೇನಾದರೂ ಕಾರಣವಿದೆಯೇ? ಅಧಿಕಾರ ವರ್ಗವು ಬಯಸಿದ್ದ ಈ ಬದಲಾವಣೆಗಳನ್ನು ಎಲ್ಲರೂ ವಿರೋಧಿಸಿದ್ದರು. ಆದರೆ ಹೀಗೆ ವಿರೋಧಿಸಿದವರ ಜಯಾಪಜಯಗಳನ್ನೊಮ್ಮೆ ಹೋಲಿಸಿ ನೋಡಿರಿ! ನಿನ್ನೆ ವಿರೋಧಿ ಚಳುವಳಿಗಳ ನಾಯಕರಾಗಿದ್ದವರ ಸಂತಾನಗಳು ಇಂದು ಅಸ್ತಿತ್ವದಲ್ಲಿರುವ ಶಕ್ತಿಗಳ ಪ್ರವಾಹದಲ್ಲಿ

ಸಾಗುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಅಂದು ಅವರ ಮನೆಯ ಹೊರಗೆ ವ್ಯಾಪಿಸಿದ್ದೆಲ್ಲವೂ ಇಂದು ಅವರ ಮನೆಯೊಳಗೇ ಪ್ರವೇಶಿಸಿದೆ. ಅತ್ಯಂತ ಪರಿಶುದ್ಧವಾಗಿದ್ದ ಧಾರ್ಮಿಕ ನೇತಾರರ ಸಂತಾನಗಳಲ್ಲಿಯೂ ದೇವಾಸ್ತಿತ್ವ ಮತ್ತು ಪ್ರವಾದಿತ್ವದ ಬಗ್ಗೆ ಸಂದೇಹ ವ್ಯಕ್ತಪಡಿಸುವ ತಲೆಮಾರುಗಳು ಹುಟ್ಟಿಕೊಂಡಿಲ್ಲವೇ? ಈ ಅನುಭವಗಳ ಹಿನ್ನೆಲೆಯಲ್ಲಿ ಮಾನವನ ಜೀವನ ಸಮಸ್ಯೆಗಳ ಪೈಕಿ ಮೂಲಭೂತ ಸಮಸ್ಯೆಯು ನಾಯಕತ್ವದ್ದೆಂಬುದನ್ನು ನಿರಾಕರಿಸಲಾದೀತೇ? ಈ ಪ್ರಾಮುಖ್ಯ ಇಂದು ನಿನ್ನೆಯದಲ್ಲ. ಈ ಸಮಸ್ಯೆಗೆ ಸದಾ ಪ್ರಾಮುಖ್ಯವಿತ್ತು. 'ಯಥಾ ರಾಜಾ ತಥಾ ಪ್ರಜಾ' ಎಂಬ ನಾಣ್ಣುಡಿಯಿದೆ. ಈ ಕಾರಣದಿಂದಲೇ ಪ್ರವಾದಿ ವಚನಗಳಲ್ಲಿ ಜನರ ಪ್ರಗತಿ ಮತ್ತು ಅಧಃಪತನದ ಹೊಣೆಗಾರಿಕೆಯನ್ನು ಅದರ ಉಲೆಮಾ ಮತ್ತು ಉಮರಾಗಳ ಮೇಲೆ ಹೊರಿಸಲಾಗಿದೆ. ಯಾಕೆಂದರೆ ನಾಯಕತ್ವವು ಸ್ವಾಭಾವಿಕವಾಗಿ ಅವರ ಹಸ್ತಗಳಲ್ಲಿರುತ್ತದೆ.

ಈ ಸಮಸ್ಯೆಗೆ ಧರ್ಮದಲ್ಲಿ ನೀಡಲಾಗಿರುವ ಪ್ರಾಮುಖ್ಯವನ್ನು ಈ ವಿವರಣೆಗಳಿಂದ ಸುಲಭದಲ್ಲಿ ತಿಳಿಯಬಹುದಾಗಿದೆ. ಅಲ್ಲಾಹನ ಧರ್ಮವು ಜನರು ಸಂಪೂರ್ಣವಾಗಿ ಅಲ್ಲಾಹನ ದಾಸರಾಗಬೇಕು, ಅಲ್ಲಾಹನ ಹೊರತು ಇನ್ನಾರ ದಾಸ್ಯವೂ ಅವರ ಮೇಲಿರಬಾರದೆಂದು ಪ್ರಪ್ರಥಮವಾಗಿ ಬಯಸುತ್ತದೆ. ಅನಂತರ ಜನರ ಜೀವನ ನಿಯಮಗಳು ಕೇವಲ ಅಲ್ಲಾಹನದ್ದಾಗಿರಬೇಕೆಂದು ಅದು ಇಚ್ಛಿಸುತ್ತದೆ. ತರುವಾಯ ಅದು ಭೂ ನಿವಾಸಿಗಳ ಮೇಲೆ ಅಲ್ಲಾಹನ ಕೋಪ ಶಾಪಗಳು ಎರಗುವಂತಹ ಕೆಡುಕು ಮತ್ತು ವಿನಾಶಗಳನ್ನು ಭೂಮಿಯಿಂದ ಮೂಲೋತ್ಪಾಟನೆ ಮಾಡಬೇಕೆಂದೂ ಅಲ್ಲಾಹನು ಮೆಚ್ಚುವ ಒಳಿತುಗಳನ್ನು ಪ್ರಚಾರ ಮಾಡಬೇಕೆಂದೂ ಬಯಸುತ್ತದೆ. ಮಾನವ ಸಮುದಾಯದ ನಾಯಕತ್ವ ಮತ್ತು ಮಾರ್ಗದರ್ಶನ ಹಾಗೂ ಮಾನವನ ವ್ಯವಹಾರಗಳ ಸೂತ್ರವು ದುರ್ಜನರ ಕೈ ಕೆಳಗಿರುತ್ತಾ ಸತ್ಯಧರ್ಮದ ಅನುಯಾಯಿಗಳು ಅವರ ಕೈ ಕೆಳಗೆ ಜೀವಿಸಿ ಅವರು ಔದಾರ್ಯದಿಂದ ನೀಡುವ ವಿನಾಯಿತಿ ಮತ್ತು ಸೌಜನ್ಯಗಳನ್ನು ಬಳಸಿ ದೇವನಾಮವನ್ನು ಜಪಿಸುತ್ತಾ ಕಾಲ ಕಳೆಯುತ್ತಲಿದ್ದರೆ ಈ ಉದ್ದೇಶಗಳಲ್ಲಿ ಒಂದಾದರೂ ಪೂರ್ತಿಯಾಗದು. ಈ ಉದ್ದೇಶಗಳ ಬೇಡಿಕೆಯೇನೆಂದರೆ ಅಲ್ಲಾಹನ ಸಂತೃಪ್ತಿಯನ್ನು ಬಯಸುವ ಸರ್ವ ಸಜ್ಜನರೂ ಸಾಮೂಹಿಕ ಶಕ್ತಿಯನ್ನು ಒಂದುಗೂಡಿಸಿ ನಾಯಕತ್ವ ಮತ್ತು ಅಧಿಕಾರವು ದೇವನಲ್ಲಿ ವಿಶ್ವಾಸವಿರಿಸುವ ಉತ್ತಮರ ಹಸ್ತಗಳಿಗೆ ಬರುವಂತಹ ಸತ್ಯ ವ್ಯವಸ್ಥೆಯನ್ನು ಸ್ಥಾಪಿಸಲು ಪ್ರಯತ್ನಿಸಬೇಕು. ಇದಲ್ಲದೆ ಧರ್ಮದ ನೈಜ ಉದ್ದೇಶವು ಪೂರ್ಣವಾಗದು. ಆದ್ದರಿಂದಲೇ ಧರ್ಮದಲ್ಲಿ ಉತ್ತಮ ನಾಯಕತ್ವ ಮತ್ತು ಸತ್ಯ ವ್ಯವಸ್ಥೆಯ ಸ್ಥಾಪನೆಗೆ ಮೂಲಭೂತ ಮಹತ್ವ ದೊರಕಿದೆ. ಈ ಬಗ್ಗೆ ಅಸಡ್ಡೆ ತೋರಿ ಅಲ್ಲಾಹನ ಸಂತೃಪ್ತಿಯನ್ನು ಗಳಿಸುವ ಬೇರೊಂದು ಕರ್ಮವಿಲ್ಲ. ಆಲೋಚಿಸಿ ನೋಡಿರಿ- ಸಂಘಟಿತರಾಗಿರಲು ಹಾಗೂ ಅನುಸರಣೆ ಮತ್ತು ಶಿಸ್ತುಪಾಲನೆಯ ಕುರಿತು ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ ಈ ರೀತಿ ಒತ್ತಿ ಹೇಳಲು ಕಾರಣವೇನು? ಸಂಘಟನೆಯಿಂದ ವಿಮುಖನಾದ ವ್ಯಕ್ತಿಯು ಪವಿತ್ರ ವಾಕ್ಯವನ್ನು ಒಪ್ಪಿದರೂ ನಮಾಝ್, ಉಪವಾಸ ಮುಂತಾದವುಗಳನ್ನು ಪಾಲಿಸಿದರೂ ಇಸ್ಲಾಮಿನ ದೃಷ್ಟಿಯಲ್ಲಿ ಶಿಕ್ಷಾರ್ಹನಾಗುತ್ತಾನೆ. ಉತ್ತಮ ನಾಯಕತ್ವ ಹಾಗೂ ಸತ್ಯ ವ್ಯವಸ್ಥೆಯ ಸ್ಥಾಪನೆ ಮತ್ತು ಭದ್ರತೆಯು ಧರ್ಮದ ನೈಜ

ಧ್ಯೇಯವಾಗಿರುವುದೇ ಇದಕ್ಕೆ ಕಾರಣವಾಗಿದೆ. ಈ ಧ್ಯೇಯ ಸಾಧನೆಗೆ ಸಂಘಟಿತ ಶಕ್ತಿ ಅಗತ್ಯವಾಗಿದೆ. ಸಂಘಟನಾ ಶಕ್ತಿಯನ್ನು ಹಾಳುಗೆಡಹುವ ವ್ಯಕ್ತಿಯನ್ನು ಇಸ್ಲಾಮ್ ಭೀಕರ ಅಪರಾಧಿಯೆಂದು ಪರಿಗಣಿಸುತ್ತದೆ. ಈ ಅಪರಾಧವನ್ನು ನಮಾಝ್, ಉಪವಾಸಾದಿ ಆರಾಧನೆಗಳಿಂದ ಅಥವಾ ತೌಹೀದ್‌ನ ಕೇವಲ ಒಪ್ಪಿಗೆಯಿಂದ ಪರಿಹರಿಸಲು ಸಾಧ್ಯವಿಲ್ಲ! ಹಾಗೆಯೇ ಧರ್ಮದಲ್ಲಿ 'ಜಿಹಾದ್'ಗೆ ಎಷ್ಟೊಂದು ಮಹತ್ವ ನೀಡಲಾಗಿದೆಯೆಂಬುದನ್ನು ನೋಡಿರಿ- 'ಜಿಹಾದ್'ನಿಂದ ವಿಮುಖರಾಗುವವರು ಅಥವಾ ಅದರಲ್ಲಿ ವೈಮನಸ್ಸು ತೋರುವವರು ಕುರ್‌ಆನಿನ ದೃಷ್ಟಿಯಲ್ಲಿ 'ಮುನಾಫಿಕ'ರಾಗುತ್ತಾರೆ. ಯಾಕೆಂದರೆ 'ಜಿಹಾದ್' ಸತ್ಯವ್ಯವಸ್ಥೆಯ ಸ್ಥಾಪನೆಯ ಇನ್ನೊಂದು ಹೆಸರು. ಈ 'ಜಿಹಾದ'ನ್ನು ಮಾನವನ ಈಮಾನನ್ನು ಪರೀಕ್ಷಿಸುವ ಒರೆಗಲ್ಲಾಗಿ ಕುರ್‌ಆನ್ ನಿರ್ಣಯಿಸಿದೆ. ಅದನ್ನು ಬೇರೆ ಮಾತಿನಲ್ಲಿ ಹೇಳುವುದಿದ್ದರೆ ಹೃದಯದಲ್ಲಿ ವಿಶ್ವಾಸವಿರುವ ಯಾರೂ ನಿಷಿದ್ಧ ವ್ಯವಸ್ಥೆಯ ಅಧಿಪತ್ಯದಿಂದ ಸಂತೃಪ್ತನಾಗಲಾರನು. ಸತ್ಯ ವ್ಯವಸ್ಥೆ ಸ್ಥಾಪನೆಯ ಪ್ರಯತ್ನದಲ್ಲಿ ಸರ್ವಸ್ವವನ್ನೂ ಬಲಿ ನೀಡಲು ಹಿಂಜರಿಯಲಾರನು. ಈ ಬಗ್ಗೆ ದೌರ್ಬಲ್ಯ ತೋರುವವರ ಈಮಾನ್ ಸಂದೇಹಾಸ್ಪದವಾಗಿದೆ. ಹೀಗಿರುತ್ತಾ ಇತರ ಕರ್ಮಗಳು ಅವರಿಗೆ ಫಲಪ್ರದವಾಗುವುದಾದರೂ ಹೇಗೆ?

## ಅಜೇಯ ಮಾನವೀಯ ಮೌಲ್ಯಗಳು

ಈ ಸಮಸ್ಯೆಯನ್ನು ಸಂಪೂರ್ಣವಾಗಿ ವಿವರಿಸಲು ಈಗ ನನಗೆ ಸಮಯವಿಲ್ಲ. ಆದರೂ ಇಸ್ಲಾಮಿನ ದೃಷ್ಟಿಯಲ್ಲಿ ಉತ್ತಮ ನಾಯಕತ್ವದ ಸ್ಥಾಪನೆಯು ಕೇಂದ್ರೀಯ ಮಹತ್ವವಿರುವ ವಾಸ್ತವಿಕತೆಯೆಂಬುದನ್ನು ನೀವು ನನ್ನ ಈ ತನಕದ ಹೇಳಿಕೆಗಳಿಂದ ಮನಗಂಡಿರಬಹುದು. ಇಸ್ಲಾಮ್ ಧರ್ಮದಲ್ಲಿ ವಿಶ್ವಾಸವಿರಿಸುವವನ ಕರ್ತವ್ಯವು ತನ್ನ ಜೀವನವನ್ನು ಸಾಧ್ಯವಿದ್ದಷ್ಟು ಇಸ್ಲಾಮಿ ಅಚ್ಚಿನಲ್ಲಿ ಎರಕ ಹೊಯ್ಯಲು ಪ್ರಯತ್ನಿಸುವುದರಿಂದ ಮಾತ್ರವೇ ಕೊನೆಗೊಳ್ಳುವುದಿಲ್ಲ. ಕಪಟವಿಶ್ವಾಸಿಗಳು ಮತ್ತು ದುರ್ಜನರ ಹಸ್ತಗಳಿಂದ ನಾಯಕತ್ವದ ಸೂತ್ರವು ಸಜ್ಜನರಿಗೆ ಹಸ್ತಾಂತರಿಸಲ್ಪಟ್ಟು ಅಲ್ಲಾಹನ ಸಂತೃಪ್ತಿಗನುಗುಣವಾಗಿ ಸತ್ಯಧರ್ಮವು ಸ್ಥಾಪಿಸಲ್ಪಡಬೇಕೆಂಬ ಧ್ಯೇಯ ಸಾಧನೆಗಾಗಿ ಸಂಪೂರ್ಣ ಸಂಘಟಿತ ಪರಿಶ್ರಮಗಳನ್ನು ನಡೆಸುವುದು ಸತ್ಯವಿಶ್ವಾಸದ ಅನಿವಾರ್ಯ ಬೇಡಿಕೆಯಾಗಿದೆ. ಸಂಘಟಿತ ಪ್ರಯತ್ನವಿಲ್ಲದೇ ಈ ನಿರ್ದಿಷ್ಟ ಧ್ಯೇಯ ಸಾಧನೆ ಸಾಧ್ಯವಿಲ್ಲ. ಆದ್ದರಿಂದ ಸತ್ಯಸಿದ್ಧಾಂತಗಳನ್ನು ಪಾಲಿಸುವ ಸತ್ಯವ್ಯವಸ್ಥೆಯನ್ನು ಸ್ಥಾಪಿಸಿ ಅದನ್ನು ಉಳಿಸಿ ಸರಿಯಾದ ರೀತಿಯಲ್ಲಿ ನಡೆಸುವ ಹೊರತು ಲೋಕದಲ್ಲಿ ಬೇರೆ ಯಾವ ಧ್ಯೇಯವೂ ಇಲ್ಲದ ಉತ್ತಮ ಸಂಘಟನೆಯೊಂದು ಸ್ಥಾಪಿಸಲ್ಪಡಬೇಕಾದ ಅಗತ್ಯವಿದೆ. ಇಡೀ ಭೂಮಿಯಲ್ಲಿ ಮೂಮಿನ್ ಎಂಬ ಒಬ್ಬನೇ ವ್ಯಕ್ತಿಯಿದ್ದರೂ ತಾನು ಒಂಟಿಯಾಗಿರುವ ಕಾರಣ ನಿಷಿದ್ಧ ವ್ಯವಸ್ಥೆಯ ಅಧೀನದಲ್ಲಿ ಸಂತೃಪ್ತನಾಗಿರಬಾರದು ಅಥವಾ ಎರಡು ಕೆಡುಕುಗಳ ಪೈಕಿ ಸಣ್ಣ ಕೆಡುಕನ್ನು ಸಹಿಸಿಕೊಳ್ಳಬೇಕೆಂಬ ಸೂತ್ರದ ನೆರವು ಪಡೆದು ಅಸತ್ಯ ವ್ಯವಸ್ಥೆಯಡಿಯಲ್ಲಿ ಅಲ್ಪಸ್ವಲ್ಪ ಧಾರ್ಮಿಕ ಜೀವನ ನಡೆಸಲೂ ಬಾರದು. ಬದಲಾಗಿ ಆತನು ದೇವನು ಮೆಚ್ಚುವ ಜೀವನ ಮಾರ್ಗದೆಡೆಗೆ ದೇವನ ದಾಸರನ್ನು ಆಹ್ವಾನಿಸುವುದೇ ಆತನಿಗಿರುವ ನೇರವಾದ ದಾರಿಯಾಗಿದೆ. ಯಾರೂ ಅದನ್ನು ಸ್ವೀಕರಿಸದಿದ್ದರೂ ಅಥವಾ ಗಮನಿಸದಿದ್ದರೂ ಆತನು

ಜೀವನ ಪರ್ಯಂತ ಸನ್ಮಾರ್ಗದಲ್ಲಿ ಅಚಲನಾಗಿದ್ದುಕೊಂಡು ಜನರನ್ನು ಅದರೆಡೆಗೆ ಆಹ್ವಾನಿಸುತ್ತಾ ಮರಣಹೊಂದಿದರೆ ಅದು ಲೋಕವು ಮೆಚ್ಚುವ ದುರ್ಮಾರ್ಗದ ಕರೆಯು ಆತನ ನಾಲಗೆಯಿಂದ ಹೊರಡುವುದಕ್ಕಿಂತ, ಕಪಟವಿಶ್ವಾಸಿಗಳ ನಾಯಕತ್ವದಲ್ಲಿ ಲೋಕ ನಡೆಯುತ್ತಿರುವ ಮಾರ್ಗದಲ್ಲಿಯೇ ಆತನು ನಡೆಯುವುದಕ್ಕಿಂತ, ಸಾವಿರ ಪಾಲು ಉತ್ತಮವಾಗಿದೆ. ಒಂದು ವೇಳೆ ಅಲ್ಲಾಹನ ಕೆಲವು ದಾಸರು ಆತನ ಕರೆಯನ್ನು ಆಲಿಸಿದರೆ ಅವರು ಒಟ್ಟಾಗಿ ಸಂಘಟನೆಯನ್ನು ರಚಿಸಿ ಆ ಸಂಘಟನೆಯು ಅದರ ಸಂಪೂರ್ಣ ಸಾಮೂಹಿಕ ಶಕ್ತಿಯನ್ನು ಈ ಉತ್ಕೃಷ್ಟ ಧ್ಯೇಯದಲ್ಲಿ ಕೇಂದ್ರೀಕರಿಸಬೇಕಾದುದು ಅನಿವಾರ್ಯವಾಗಿದೆ.

ನಾನು ಕುರ್‌ಆನ್ ಮತ್ತು ಸುನ್ನತ್‌ಗಳಿಂದ ತಿಳಿದಿರುವ ಮಟ್ಟಿಗೆ ಇದು ಧರ್ಮದ ಅನಿವಾರ್ಯ ಬೇಡಿಕೆಯಾಗಿದೆ. ಅಲ್ಲಾಹನ ಗ್ರಂಥ ಮತ್ತು ಪ್ರವಾದಿಚರ್ಯೆಯು ಇದನ್ನೇ ಬಯಸುತ್ತದೆ. ಇದು ಧರ್ಮದ ಬೇಡಿಕೆಯಲ್ಲವೆಂದು ಅಲ್ಲಾಹನ ಗ್ರಂಥ ಮತ್ತು ಪ್ರವಾದಿ ಸುನ್ನತ್‌ನ ಆಧಾರದಲ್ಲಿಯೇ ಯಾರಾದರೂ ಸಮರ್ಥಿಸುವ ತನಕ ನಾನು ನನ್ನ ನಿಲುವನ್ನು ಬದಲಿಸಲಾರೆ.

"ನಮ್ಮ ಧ್ಯೇಯವನ್ನು ತಿಳಿದ ಬಳಿಕ ಅದನ್ನು ಸಾಧಿಸಲು ಅಲ್ಲಾಹನು ಸಹಜವಾಗಿ ನಿರ್ಣಯಿಸಿರುವ ಚಿರಂತನ ಕಾನೂನುಗಳನ್ನು ತಿಳಿಯಲು ನಾವು ಪ್ರಯತ್ನಿಸಬೇಕಾಗಿದೆ. ನಾವು ವಾಸಿಸುವ ಈ ಪ್ರಪಂಚವು ಅಲ್ಲಾಹನ ನಿಯಮಾನುಸಾರ ನಿರ್ಮಾಣಗೊಂಡಿದೆ. ಅದರ ಪ್ರತಿಯೊಂದು ವಸ್ತುವೂ ಕೆಲವು ನಿಯಮ ನಿಬಂಧನೆಗಳೊಂದಿಗೆ ಜೋಡಿಸಲ್ಪಟ್ಟಿದೆ. ಇಲ್ಲಿ ಯಾವುದೇ ಸಾಧನೆಯು ಕೇವಲ ನಿಸ್ಪೃಹ ಆಶೆ ಅಥವಾ ಸದ್ಭಾವನೆಗಳಿಂದ ಕೈಗೂಡುವುದಿಲ್ಲ. ಪುಣ್ಯಾತ್ಮರ 'ಬರ್ಕತ್'ಗಳೂ ಅದನ್ನು ಯಶಸ್ವಿಗೊಳಿಸಲಾರವು. ಬದಲಾಗಿ ಅವುಗಳ ಯಶಸ್ಸಿಗೆ ದೇವನು ನಿರ್ಣಯಿಸಿರುವ ನಿಯಮ ನಿಬಂಧನೆಗಳನ್ನು ಪೂರ್ಣಗೊಳಿಸುವ ಅಗತ್ಯವಿದೆ. ನೀವು ಬೇಸಾಯ ಮಾಡಲು ನಿರ್ಧರಿಸಿದ್ದೀರೆಂದಿಟ್ಟುಕೊಳ್ಳಿ. ನೀವು ಎಷ್ಟೇ ದೊಡ್ಡ ಮಹಾತ್ಮರಾಗಿದ್ದರೂ 'ತಸ್ಬೀಹ್, ತಹ್‌ಲೀಲ್'ಗಳಲ್ಲಿ ನಿರತರಾಗಿದ್ದರೂ ಬಿತ್ತಿರುವ ಬೀಜವು ಮೊಳೆತು ಬೆಳೆಯಬೇಕಾದರೆ ನೀವು ಕೃಷಿಯ ನಿಯಮಗಳನ್ನು ನಿಖರವಾಗಿ ಪಾಲಿಸಲೇಬೇಕು. ಸತ್ಯ ವ್ಯವಸ್ಥೆಯನ್ನು ಸ್ಥಾಪಿಸುವ ಪ್ರಯತ್ನಗಳ ಸ್ಥಿತಿಯೂ ಅಷ್ಟೇ. ಅದು ಕೇವಲ ಅಭಿಲಾಷೆ ಮತ್ತು ಪ್ರಾರ್ಥನೆಗಳಿಂದ ಕೈಗೂಡಲಾರವು. ಲೋಕದಲ್ಲಿ ನಾಯಕತ್ವವು ಸ್ಥಾಪನೆಗೊಂಡು ಕೆಲವರಿಗೆ ದೊರೆತು ಕೆಲವರಿಂದ ವಶಪಡಿಸಿಕೊಳ್ಳುವ ಪ್ರಕ್ರಿಯೆಯು ಯಾವ ದೇವ ನಿಯಮದಂತೆ ನಡೆಯುತ್ತಿದೆಯೋ ಆ ನಿಯಮವನ್ನು ಚೆನ್ನಾಗಿ ಗ್ರಹಿಸಿ ಅದರ ಎಲ್ಲಾ ನಿಬಂಧನೆಗಳನ್ನು ಪೂರ್ಣಗೊಳಿಸಬೇಕಾದುದು ಅತ್ಯಗತ್ಯವಾಗಿದೆ. ಈ ಬಗ್ಗೆ ಲೇಖನ ಮತ್ತು ಭಾಷಣಗಳ ಮೂಲಕ ನಾನು ಹಲವೊಮ್ಮೆ ಸೂಚಿಸಿರುವೆನಾದರೂ ಈ ಬಾರಿ ಅದನ್ನು ಸ್ವಲ್ಪ ವಿವರಿಸಬಯಸುತ್ತೇನೆ. ಯಾಕೆಂದರೆ ಇದನ್ನು ಚೆನ್ನಾಗಿ ಗ್ರಹಿಸದೆ ನಮಗೆ ನಮ್ಮ ಕರ್ಮ ಮಾರ್ಗವು ಸ್ಪಷ್ಟವಾಗಲಾರದು-

"ಮಾನವನ ಅಸ್ತಿತ್ವವನ್ನು ವಿಶ್ಲೇಷಿಸಿದರೆ ಆತನಲ್ಲಿ ಪರಸ್ಪರ ಭಿನ್ನವಾದ ಆದರೆ ಪರಸ್ಪರ ಅಂಟಿಕೊಂಡಿರುವ ಎರಡು ವಿಭಿನ್ನ ಸ್ಥಿತಿಗಳು ಕಂಡು ಬರುತ್ತವೆ. ಮೊದಲನೆಯದಾಗಿ ಆತನಿಗೆ ನೈಸರ್ಗಿಕ ಮತ್ತು ಮೃಗೀಯವಾದ ಒಂದು ಅಸ್ತಿತ್ವವಿದೆ. ಇತರೆಲ್ಲಾ ನಿಸರ್ಗ ವಸ್ತುಗಳ ಹಾಗೂ ಜೀವಿಗಳ ಮೇಲೆ ನಡೆಯುತ್ತಿರುವ ಅದೇ ನಿಯಮವು ಮಾನವನ ಮೇಲೆಯೂ ನಡೆಯುತ್ತಿದೆ.

ಇತರೆಲ್ಲಾ ನೈಸರ್ಗಿಕ ವಸ್ತುಗಳ ಹಾಗೂ ಜೀವಜಾಲಗಳ ಉಳಿವಿಗೂ ಉನ್ನತಿಗೂ ಬೆಳವಣಿಗೆಗೂ ಪೂರಕವಾದ ಸಾಧನ ಸವಲತ್ತು ಮತ್ತು ಲೌಕಿಕ ಮಾರ್ಗಗಳು, ನೈತಿಕ ಪರಿಸ್ಥಿತಿಗಳು ಆತನ ಉಳಿವಿಗೆ ಮತ್ತು ಅಭಿವೃದ್ಧಿಗೆ ಪೂರಕವಾಗಿವೆ. ಆತನು ಏನಾದರೂ ಸಾಧಿಸುವುದಿದ್ದರೆ ಅದು ನಿಸರ್ಗ ನಿಯಮ, ಆಯುಧೋಪಕರಣ ಮತ್ತು ನೈಸರ್ಗಿಕ ಪರಿಸ್ಥಿತಿಗಳ ಮೂಲಕ ಮಾತ್ರ. ಅದರ ಪ್ರಕ್ರಿಯೆಯ ಮೇಲೆ ವ್ಯಾವಹಾರಿಕ ಲೋಕದ ಎಲ್ಲಾ ಶಕ್ತಿಗಳೂ ಅನುಕೂಲ ಅಥವಾ ಪ್ರತಿಕೂಲವಾಗಿ ಪ್ರಭಾವ ಬೀರುತ್ತದೆ. ಮಾನವನಲ್ಲಿ ಪ್ರಕಟವಾಗಿ ಎದ್ದು ತೋರುವ ಎರಡನೇ ಗುಣವು ಆತನು ಮಾನವನೆಂಬುದೇ ಆಗಿದೆ. ಇನ್ನೊಂದು ಮಾತಿನಲ್ಲಿ ಹೇಳುವುದಿದ್ದರೆ ಅವನ ನೈತಿಕ ಅಸ್ತಿತ್ವದ ಸ್ಥಿತಿ. ಈ ನೈತಿಕ ಅಸ್ತಿತ್ವವು ನೈಸರ್ಗಿಕ ಅಸ್ತಿತ್ವಕ್ಕೆ ಅಧೀನವಲ್ಲ. ಬದಲಾಗಿ ಅದು ಅವುಗಳ ಮೇಲೆ ಒಂದು ರೀತಿಯ ಆಧಿಪತ್ಯವನ್ನು ನಡೆಸುತ್ತದೆ. ಇದು ಮಾನವನ ನೈಸರ್ಗಿಕ ಮತ್ತು ಮೃಗೀಯ ಅಸ್ತಿತ್ವವನ್ನು ತನ್ನ ಒಂದು ಉಪಕರಣವೆಂಬಂತೆ ಬಳಸಿಕೊಳ್ಳುತ್ತದೆ. ಬಾಹ್ಯ ಲೋಕದ ಸಾಧನ ಸಾಮಾಗ್ರಿಗಳನ್ನು ಸ್ವಾರ್ಥ ಹಿತಕ್ಕನುಗುಣವಾಗಿ ಬಳಸಿಕೊಳ್ಳಲು ಅದು ಪ್ರಯತ್ನಿಸುವುದು. ಅಲ್ಲಾಹನು ಮಾನವನಲ್ಲಿ ಇರಿಸಿರುವ ನೈತಿಕ ಗುಣಗಳೇ ಅದರ ಚಾಲಕ ಶಕ್ತಿಯಾಗಿರುವುದು. ಅದರ ಮೇಲೆ ನಿಸರ್ಗ ನಿಯಮಗಳ ಬದಲಾಗಿ ನೈತಿಕ ನಿಯಮಗಳೇ ಅಧಿಕಾರ ಚಲಾಯಿಸುವುವು."

ಈ ಎರಡು ಸ್ಥಿತಿಗಳೂ ಮಾನವನಲ್ಲಿ ಜತೆಜತೆಗೇ ಕೆಲಸ ಮಾಡುತ್ತಿವೆ. ಸಾಮಾನ್ಯವಾಗಿ ಆತನ ವಿಜಯ-ಪರಾಜಯ, ಉತ್ಥಾನ-ಪತನ, ಭೌತಿಕ ಮತ್ತು ನೈತಿಕವಾದ ಆ ಎರಡು ವಿಧದ ಶಕ್ತಿಗಳನ್ನು ಅವಲಂಬಿಸಿರುತ್ತವೆ. ನೈತಿಕ ಶಕ್ತಿಯಿಂದಲೋ ಭೌತಿಕ ಶಕ್ತಿಯಿಂದಲೋ ಅವು ನಿರಾವಲಂಬಿಯಾಗುವುದಿಲ್ಲ. ಅವನ ಅಭಿವೃದ್ಧಿ ಅವೆರಡರ ಸಹಾಯದಿಂದ ನಡೆಯುವುದು. ಹಾಗೆಯೇ ಬುಡ ಕುಸಿದು ಬೀಳುವುದಿದ್ದರೂ ಆ ಎರಡು ಶಕ್ತಿಗಳು ಆತನಲ್ಲಿ ಮಾಯವಾಗುವುದು ಅಥವಾ ಅವು ಇತರರಿಗಿಂತ ದುರ್ಬಲವಾಗಿರುವುದೇ ಕಾರಣವಾಗಿದೆ. ಆದರೆ ಮಾನವ ಜೀವನದಲ್ಲಿ ನೈತಿಕ ಶಕ್ತಿಗೆ ನೈಜ ಪ್ರಾಮುಖ್ಯತೆವಿದೆಯೇ ವಿನಾ ಭೌತಿಕ ಶಕ್ತಿಗಳಿಗಲ್ಲವೆಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ತಿಳಿಯಬಹುದು. ಲೌಕಿಕ ಸವಲತ್ತುಗಳ ಮತ್ತು ನೈಸರ್ಗಿಕ ಮಾರ್ಗಗಳ ಬಳಕೆ ಹಾಗೂ ಬಾಹ್ಯ ಪರಿಸ್ಥಿತಿಗಳು ಅನುಕೂಲಕರವಾಗಿರುವುದು ಯಶಸ್ಸಿನ ಅನಿವಾರ್ಯ ಉಪಾಧಿಗಳಾಗಿವೆಯೆಂಬುದರಲ್ಲಿ ಸಂದೇಹವಿಲ್ಲ. ಮಾನವನು ಈ ನೈಸರ್ಗಿಕ ಲೋಕದಲ್ಲಿ ವಾಸಿಸುತ್ತಿರುವ ತನಕ ಈ ಉಪಾಧಿಗಳ ಅಗತ್ಯವೇ ಇಲ್ಲವೆಂಬ ವಾತಾವರಣ ನಿರ್ಮಾಣವಾಗಲಾರದು. ಆದರೆ ಮಾನವನ ಉತ್ಥಾನ-ಪತನಗಳಿಗೂ ಸೌಭಾಗ್ಯ-ದೌರ್ಭಾಗ್ಯಗಳಿಗೂ ನೈತಿಕ ಶಕ್ತಿಯೇ ನೈಜ ಪೂರಕ ವಸ್ತುವಾಗಿದೆ. ಮಾನವನನ್ನು ಮಾನವನಾಗಿಸುವುದುಆತನ ಸ್ಥೂಲ ಅಸ್ತಿತ್ವವೇ ಹೊರತು ಆತನ ನೈತಿಕ ಮೃಗೀಯ ಶರೀರವಲ್ಲ. ಮಾನವನನ್ನು ಇತರ ವಸ್ತುಗಳಿಂದ ಬೇರ್ಪಡಿಸುವುದು ಆತನ ಸ್ಥೂಲ ಶರೀರವಲ್ಲ, ಶ್ವಾಸೋಚ್ಛ್ವಾಸ ಅಥವಾ ಸಂತಾನೋತ್ಪಾದನೆಯಲ್ಲ, ಬದಲಾಗಿ ಆತನನ್ನು ಒಂದು ವಿಶಿಷ್ಟ ವರ್ಗವನ್ನಾಗಿ ಮಾಡಿರುವ ಅರ್ಥಾತ್ ಆತನು ಭೂಮಿಯಲ್ಲಿ ದೇವನ ಪ್ರತಿನಿಧಿಯನ್ನಾಗಿರಿಸಿರುವ ವೈಶಿಷ್ಟ್ಯವು ಆತನ ನೈತಿಕ ಅಧಿಕಾರ ಮತ್ತು ಹೊಣೆಗಾರಿಕೆಯಾಗಿದೆ. ಆದ್ದರಿಂದ ನೈಜ ಮಾನವೀಯ ಮೌಲ್ಯವು ನೈತಿಕತೆಯೆಂದಾದರೆ ಮಾನವನ ಜೀವನದ ನಿರ್ಮಾಣ- ಸಂಹಾರಗಳಲ್ಲಿ ಅದಕ್ಕೇ ನೈಜ

ಸ್ಥಾನವಿರುವುದು. ಮಾನವ ಜಯಾಪಜಯಗಳಲ್ಲಿಯೂ ಅದುವೇ ಆಧಿಪತ್ಯ ಹೊಂದಿರುವುದನ್ನು ಒಪ್ಪದೆ ನಿರ್ವಾಹವಿಲ್ಲ.

ಈ ವಾಸ್ತವಿಕತೆಯನ್ನು ಮನಗಂಡ ಬಳಿಕ ನಾವು ನೈತಿಕತೆಗಳನ್ನು ವಿಶ್ಲೇಷಿಸುವುದಿದ್ದರೆ ಮೂಲಭೂತವಾಗಿ ಅವುಗಳನ್ನು ಎರಡು ದೊಡ್ಡ ವರ್ಗಗಳಾಗಿ ವಿಂಗಡಿಸಬಹುದು.

1. ಮೂಲಭೂತ ಮಾನವೀಯ ನೈತಿಕತೆಗಳು. 2. ಇಸ್ಲಾಮಿ ನೈತಿಕತೆ.

"ಮೂಲಭೂತ ಮಾನವೀಯ ನೈತಿಕತೆಯ ತಾತ್ಪರ್ಯವು ಮಾನವನ ನೈತಿಕ ಅಸ್ತಿತ್ವದ ಬುನಾದಿಯಲ್ಲಿ ಸ್ಥಾಪನೆಗೊಂಡ ಗುಣಗಳಾಗಿವೆ. ಸರಿಯಾದ ಧ್ಯೇಯದ ಅಥವಾ ದೋಷಪೂರ್ಣ ಧ್ಯೇಯದ ಎಲ್ಲಾ ಚಟುವಟಿಕೆಗಳಲ್ಲಿ ಮಾನವನ ವಿಜಯಕ್ಕೆ ಅನಿವಾರ್ಯ ಉಪಾಧಿಯಾಗಿರುವ ಸಕಲ ಗುಣಗಳೂ ಅದರಲ್ಲಿ ಸೇರಿವೆ. ಮಾನವನು ದೇವನಲ್ಲಿ, ದೇವ ಸಂದೇಶಗಳಲ್ಲಿ, ದೇವ ಪ್ರವಾದಿಗಳಲ್ಲಿ ಮತ್ತು ಪರಲೋಕದಲ್ಲಿ ವಿಶ್ವಾಸವಿರಿಸುತ್ತಾನೋ ಇಲ್ಲವೋ: ಆತನಲ್ಲಿ ಆತ್ಮ ಶುದ್ಧಿ, ಸದುದ್ದೇಶ, ಸತ್ಕರ್ಮ ಮುಂತಾದವುಗಳಿವೆಯೇ ಆತನ ಕರ್ಮವು ಸದುದ್ದೇಶದಿಂದ ಕೂಡಿದೆಯೇ ಅಥವಾ ದುರುದ್ದೇಶದಿಂದ ಕೂಡಿದೆಯೇ ಎಂಬ ಪ್ರಶ್ನೆಗಳಿಗೆ ಈ ನೈತಿಕತೆಯಲ್ಲಿ ಪ್ರವೇಶವಿಲ್ಲ. ಕ್ರಿಯಾಶೀಲರು ಸದುದ್ದೇಶ ಅಥವಾ ದುರುದ್ದೇಶದಿಂದ ವರ್ತಿಸಲಿ, ಅಥವಾ ಅವರಲ್ಲಿ ಈಮಾನ್ ಇರಲಿ ಇಲ್ಲದಿರಲಿ, ಅವರ ಜೀವನವು ಶುದ್ಧವಾಗಿರಲಿ ಮ್ಲೇಚ್ಛವಾಗಿರಲಿ, ಧ್ಯೇಯವು ಒಳ್ಳೆಯದಾಗಿರಲಿ ಕೆಟ್ಟದಾಗಿರಲಿ ಏನಿದ್ದರೂ ಲೋಕದಲ್ಲಿ ವಿಜಯಕ್ಕೆ ಅಗತ್ಯವಿರುವ ಗುಣಗಳನ್ನು ಮೈಗೂಡಿಸಿದರೆ ವ್ಯಕ್ತಿ ಅಥವಾ ವರ್ಗಗಳು ಖಂಡಿತವಾಗಿಯೂ ವಿಜಯ ಸಾಧಿಸುವುದು. ಪ್ರಸ್ತುತ ಗುಣಗಳಲ್ಲಿ ಸಾಮಾನ್ಯವಾಗಿ ಕೆಡುಕಿರುವವರು ಪರಾಭವ ಹೊಂದುತ್ತಾರೆ. ಮೂಮಿನ್ ಅಥವಾ ಕಾಫಿರ್, ಸತ್ಕರ್ಮಿ ಅಥವಾ ದುಷ್ಕರ್ಮಿ, ಸುಧಾರಕ ಅಥವಾ ವಿಧ್ವಂಸಕ ಯಾರೇ ಆಗಿದ್ದರೂ ಲೋಕ ವ್ಯವಹಾರದಲ್ಲಿ ಯಶಸ್ಸು ಗಳಿಸಬೇಕಾದರೆ ನಿರ್ಧಾರ ಶಕ್ತಿ, ಮನೋಸ್ಥೈರ್ಯ, ಸ್ಥಿರ ಚಿತ್ತತೆ, ಸಹನೆ, ಅಡ್ಡಿ ಆತಂಕಗಳನ್ನು ಎದುರಿಸುವ ಛಲ, ವಿಶಾಲ ಮನೋಭಾವ, ಕಾರ್ಯಮಗ್ನತೆ, ಅವಿಶ್ರಾಂತ ಯತ್ನ, ಧ್ಯೇಯದ ಬಗ್ಗೆ ಅಚಲ ಪ್ರೇಮ, ಅದಕ್ಕಾಗಿ ಸರ್ವಸ್ವವನ್ನೂ ಬಲಿ ನೀಡುವ ಮನೋಭಾವ, ಎಚ್ಚರಿಕೆ, ಕಾರ್ಯದಕ್ಷತೆ, ವಿವೇಕ, ಸ್ವಂತಿಕೆ, ಶಿಸ್ತು ಪಾಲನೆ, ಕರ್ತವ್ಯ ಪ್ರಜ್ಞೆ, ಸಂದರ್ಭಕ್ಕೆ ತಕ್ಕಂತೆ ಹೊಂದಿಕೊಂಡು ಪರಿಹಾರ ಕಂಡು ಹಿಡಿಯುವ ಚಾಕಚಕ್ಯತೆ, ಭಾವಾವೇಶ ಮತ್ತು ಇಚ್ಛೆಗಳನ್ನು ನಿಯಂತ್ರಿಸುವ ಸಾಮರ್ಥ್ಯ, ಇತರರನ್ನು ಆಕರ್ಷಿಸಿ ಅವರ ಒಲವು ಗಳಿಸಿ ಅವರನ್ನು ತಮ್ಮ ಪರವಾಗಿ ಬಳಸಿಕೊಳ್ಳುವ ಸಾಮರ್ಥ್ಯ ಇತ್ಯಾದಿ ಹಲವು ಮಾನವೀಯ ಸಾಮರ್ಥ್ಯಗಳನ್ನು ಅತ್ಯಗತ್ಯವಾಗಿ ಮೈಗೂಡಿಸಿಕೊಳ್ಳಬೇಕಾಗುವುದು. ಅದಲ್ಲದೇ ಮಾನವೀಯತೆಯ ನೈಜ ಮೌಲ್ಯವನ್ನು, ಮಾನವನ ಸ್ಥಾನಮಾನ ಮತ್ತು ನೆಲೆಬೆಲೆಗಳನ್ನು ಕಾಪಾಡಿಕೊಳ್ಳುವಂತಹ ಶ್ರೇಷ್ಠ ಗುಣಗಳೂ ಅವರಲ್ಲಿ ಇರಬೇಕಾಗುತ್ತದೆ. ಉದಾ: ಸ್ವಾಭಿಮಾನ, ಔದಾರ್ಯ, ದಯೆ, ಸಹಾನುಭೂತಿ, ಅನುಕಂಪ, ನೀತಿ, ನ್ಯಾಯ, ಪ್ರಾಮಾಣಿಕತೆ, ಸತ್ಯನಿಷ್ಠೆ, ವಚನಪಾಲನೆ, ಪರಿಶುದ್ಧತೆ, ಆತ್ಮ ನಿಯಂತ್ರಣ ಇತ್ಯಾದಿ ಗುಣಗಳು ಒಂದು ಸಮುದಾಯದ ಅಥವಾ ವರ್ಗದ ಬಹುಮಂದಿಯಲ್ಲಿ ಕಂಡು ಬರುತ್ತಿದ್ದರೆ ಅವರಲ್ಲಿ ಮಾನವೀಯತೆಯ ಒಟ್ಟು ಮೌಲ್ಯವು ಉಳಿದುಕೊಂಡಿದೆಯೆಂದರ್ಥ. ತನ್ಮೂಲಕ ಒಂದು ಪ್ರಬಲ ಸಂಘಟನಾ ವ್ಯವಸ್ಥೆಯು ಸ್ಥಾಪನೆಗೊಳ್ಳಬಹುದು. ಆದರೆ ಇತರ

ಕೆಲವು ನೈತಿಕ ಗುಣಗಳ ಸಹಕಾರವಿಲ್ಲದೇ ಆ ನೈತಿಕ ಮೌಲ್ಯಗಳ ಸಮ್ಮಿಲನದಿಂದ ಬಲಿಷ್ಠ ಮತ್ತು ಉಪಯುಕ್ತವಾದ ಸಾಮಾಜಿಕ ಶಕ್ತಿಯಾಗಿ ಬೆಳೆಯಲಾರದು. ಉದಾಹರಣೆಗಾಗಿ ಎಲ್ಲರೂ ಅಥವಾ ಹೆಚ್ಚಿನ ಜನರು ಒಂದು ಸಂಘಟಿತ ಧ್ಯೇಯವನ್ನು ಒಪ್ಪಿಕೊಳ್ಳುವುದು, ಆ ಧ್ಯೇಯವನ್ನು ತಮ್ಮ ಸ್ವಾರ್ಥ ಹಿತಾಸಕ್ತಿಗಳ ಮಾತಂತಿರಲಿ ಅದನ್ನು ತಮ್ಮ ಸೊತ್ತು, ವಿತ್ತ, ಪ್ರಾಣ, ಸಂತಾನಾದಿಗಳಿಂದ ಶ್ರೇಷ್ಠವೆಂದು ಪರಿಗಣಿಸುವುದು, ಅವರಲ್ಲಿ ಪರಸ್ಪರ ಪ್ರೇಮ ಅನುಕಂಪಗಳಿರುವುದು, ಪರಸ್ಪರ ಸಹಕರಿಸಿ ಕಾರ್ಯ ನಿರ್ವಹಿಸುವ ಕುಶಲತೆ, ಸ್ವ ವ್ಯಕ್ತಿತ್ವ, ಸ್ವಾರ್ಥ ಹಿತಾಸಕ್ತಿ, ಸ್ವಾಭಿಲಾಷೆ ಇತ್ಯಾದಿಗಳನ್ನು ಕಡಿಮೆಪಕ್ಷ ಸಂಘಟಿತ ಪ್ರಯತ್ನಗಳಿಗೆ ಅಗತ್ಯವಿರುವಷ್ಟಾದರೂ ತ್ಯಜಿಸಲು ಅವರಿಗೆ ಸಾಧ್ಯವಾಗುವುದು. ಕೆಟ್ಟ ಮತ್ತು ಒಳ್ಳೆಯ ನಾಯಕತ್ವವನ್ನು ಪ್ರತ್ಯೇಕಿಸಿ ಗುರುತಿಸುವುದು, ಯೋಗ್ಯರಾದವರನ್ನೇ ತಮ್ಮ ನಾಯಕರಾಗಿ ಮಾಡುವುದು. ನಾಯಕರಲ್ಲಿ ನಿಸ್ವಾರ್ಥತೆ, ಆಡಳಿತ ನೈಪುಣ್ಯ, ನಾಯಕತ್ವಕ್ಕೆ ಅಗತ್ಯವಿರುವ ಗುಣಗಳಿರುವುದು, ಸಮುದಾಯ ಅಥವಾ ಸಂಘಟನೆಗೆ ನಾಯಕರನ್ನು ಅನುಸರಿಸುವ ಗುಣವಿರುವುದು. ಅವರಲ್ಲಿ ವಿಶ್ವಾಸವಿಟ್ಟು ತಮ್ಮ ಮಾನಸಿಕ, ಶಾರೀರಿಕ ಹಾಗೂ ಲೌಕಿಕ ಸವಲತ್ತುಗಳನ್ನು ಅವರ ವಶಕ್ಕೆ ಬಿಟ್ಟುಕೊಡಲು ಸಿದ್ಧರಾಗುವುದು, ಸಾಮಾಜಿಕ ಯಶಸ್ಸಿಗೆ ಹಾನಿಕರವಾದುದು ಬೆಳೆದು ಬರುವುದನ್ನು ಯಾವ ರೀತಿಯಿಂದಲೂ ಸಹಿಸದಂತೆ ಅವರ ಜನಾಭಿಪ್ರಾಯವು ಸದಾ ಜಾಗೃತವಾಗಿರುವುದು.

ಇದುವೇ ನಾನು ಮೂಲಭೂತ ಮಾನವೀಯ ನೈತಿಕತೆಯೆಂದು ವ್ಯಾಖ್ಯಾನಿಸಿರುವ ನೈತಿಕ ಗುಣಗಳು. ಯಾಕೆಂದರೆ ವಾಸ್ತವದಲ್ಲಿ ಈ ನೈತಿಕ ಮೌಲ್ಯಗಳೇ ಮಾನವನ ನೈತಿಕ ಬಲದ ನೈಜ ಮೂಲವಾಗಿದೆ. ಮಾನವನಲ್ಲಿ ಪ್ರಸ್ತುತ ಗುಣಗಳು ಸಕ್ರಿಯವಾಗಿ ಬೆಳೆಯದೆ ಯಾವುದೇ ಧ್ಯೇಯಕ್ಕಾಗಿ ಯಶಸ್ವಿಯಾಗಿ ಪ್ರಯತ್ನಿಸಲು ಆತನಿಂದ ಸಾಧ್ಯವಿಲ್ಲ. ಈ ನೈತಿಕ ಮೌಲ್ಯಗಳ ಉದಾಹರಣೆಯು ಉಕ್ಕಿನಂತಿದೆ. ಅದು ಬಲಿಷ್ಠವೂ ಭದ್ರವೂ ಆಗಿದೆ. ಯಾವುದಾದರೊಂದು ಉತ್ತಮ ಆಯುಧದ ತಯಾರಿಯು ಉತ್ತಮ ಉಕ್ಕಿನಿಂದಲೇ ಸಾಧ್ಯ. ಯಾವ ಉದ್ದೇಶಕ್ಕಾದರೂ- ಅದು ಉತ್ತಮವಾಗಿರಲಿ ಕೆಟ್ಟದಾಗಿರಲಿ ಮರದ ಬದಲಾಗಿ ಉಕ್ಕಿನ ಆಯುಧವೇ ಉಪಯುಕ್ತವಾಗಿರುವುದು.

"ನಿಮ್ಮ ಪೈಕಿ ಇಸ್ಲಾಮಿಗಿಂತ ಮುಂಚೆ ಒಳ್ಳೆಯವರಾಗಿದ್ದವರೇ ಇಸ್ಲಾಮಿನಲ್ಲಿಯೂ ಉತ್ತಮರು" ಎಂಬ ಪ್ರವಾದಿವಚನವು ಈ ಸತ್ಯವನ್ನೇ ಒಳಗೊಂಡಿದೆ. ಅರ್ಥಾತ್ ಅಜ್ಞಾನದಲ್ಲಿ ಮಾನವೀಯ ಮೌಲ್ಯಗಳನ್ನು ಹೊಂದಿದ್ದವರೇ ಇಸ್ಲಾಮಿನಲ್ಲಿಯೂ ಉಪಯುಕ್ತ ವ್ಯಕ್ತಿಗಳಾದರು. ಹಿಂದೆ ಅವರ ಶಕ್ತಿ ಸಾಮರ್ಥ್ಯ ತಪ್ಪು ದಾರಿಯಲ್ಲಿ ವಿನಿಯೋಗವಾಗುತ್ತಿತ್ತು. ಇಸ್ಲಾಮ್ ಆಗಮಿಸಿ ಅದನ್ನು ಸನ್ಮಾರ್ಗಕ್ಕೆ ತಿರುಗಿಸಿತು. ಅಷ್ಟೇ ವ್ಯತ್ಯಾಸ. ಯಾವ ನಿಟ್ಟಿನಲ್ಲಿಯೂ ಅರ್ಹನಲ್ಲದ ವ್ಯಕ್ತಿಯು ಜಾಹಿಲಿಯ್ಯತ್ತಿಗಾಗಲೀ ಇಸ್ಲಾಮಿಗಾಗಲೀ ಪ್ರಯೋಜನಕಾರಿಯಾಗುವುದಿಲ್ಲ. ಪ್ರವಾದಿವರ್ಯರಿಗೆ(ಸ) ಅರೇಬಿಯಾದಲ್ಲಿ ಪ್ರಬಲ ವಿಜಯ ದೊರೆತು ಅದರ ಪ್ರಭಾವವು ಅಲ್ಪಾವಧಿಯಲ್ಲಿಯೇ ಸಿಂಧೂ ದಡದಿಂದ ಅಟ್ಲಾಂಟಿಕ್ ತೀರದ ವರೆಗೆ ಲೋಕದ ಬಹುಭಾಗದಲ್ಲಿ ಗೋಚರಿಸಿರುವುದರ ಕಾರಣವು ಅರೇಬಿಯಾದಲ್ಲಿ ಪ್ರವಾದಿವರ್ಯರಿಗೆ(ಸ) ನೈತಿಕತೆಯ ಅಮೂಲ್ಯ ಮತ್ತು ಅಜೇಯ ಮಾನವೀಯ ಮೌಲ್ಯಗಳಿರುವ

ವ್ಯಕ್ತಿಗಳು ದೊರೆತುದೇ ಆಗಿದೆ. ಪ್ರವಾದಿಯ ಸುತ್ತಲೂ ಹೇಡಿಗಳು ಮತ್ತು ಅಪ್ರಾಮಾಣಿಕ ಜನರು ಸೇರಿರುತ್ತಿದ್ದರೆ ಪ್ರಸ್ತುತ ಸತ್ಪರಿಣಾಮವು ಎಂದೂ ಗೋಚರಿಸುತ್ತಿರಲಿಲ್ಲ.

## ಇಸ್ಲಾಮಿ ನೈತಿಕ ಮೌಲ್ಯಗಳು

ಇನ್ನು ನೈತಿಕತೆಯ ಎರಡನೆಯ ವರ್ಗವನ್ನು ನೋಡೋಣ- ನಾನು ಅದನ್ನು ಇಸ್ಲಾಮಿ ನೈತಿಕತೆಯೆಂದು ಹೇಳುತ್ತೇನೆ. ಇದು ಮೂಲಭೂತ ಮಾನವೀಯ ನೈತಿಕತೆಯಿಂದ ಭಿನ್ನವಾಗಿಲ್ಲ. ಅದನ್ನು ಸಮರ್ಥಿಸಿ ಪರಿಪೂರ್ಣಗೊಳಿಸುತ್ತದೆ. ಇಸ್ಲಾಮ್ ಪ್ರಥಮವಾಗಿ ಮೂಲಭೂತ ಮಾನವೀಯ ನೈತಿಕತೆಗೆ ಒಂದು ನೈಜ ಕೇಂದ್ರವನ್ನು ಒದಗಿಸುತ್ತದೆ. ಆ ಕೇಂದ್ರದ ಸಂಬಂಧದಿಂದ ಮಾನವೀಯ ನೈತಿಕತೆಯು ಆಮೂಲಾಗ್ರವಾಗಿ ಕೇವಲ ಒಳಿತಾಗಿ ಪರಿಣಮಿಸುತ್ತದೆ. ಪ್ರಾಥಮಿಕ ರೂಪದಲ್ಲಿ ಮಾನವೀಯ ನೈತಿಕತೆಯು ಕೇವಲವೊಂದು ಶಕ್ತಿಯಾಗಿದೆ. ಅದು ಒಳಿತಿನಂತೆ ಕೆಡುಕಾಗುವ ಸಾಧ್ಯತೆಯೂ ಇದೆ. ಚೂರಿಯು ಓರ್ವ ದರೋಡೆಕೋರನ ಕೈಯಲ್ಲಿ ವಿಧ್ವಂಸಕ ಅಸ್ತ್ರವಾಗುವಂತೆ, ದೇವ ಮಾರ್ಗದ ಓರ್ವ ಮುಜಾಹಿದನ ಕೈಯಲ್ಲಿ ಅದು ಒಳಿತಿನ ಉಪಕರಣವಾಗಬಹುದು. ಹಾಗೆಯೇ ಮಾನವೀಯ ನೈತಿಕ ಬಲವು ಒಂದು ವ್ಯಕ್ತಿ ಅಥವಾ ವರ್ಗಕ್ಕೆ ದೊರೆಯುವುದನ್ನು ಸ್ವಂತ ನೆಲೆಯಲ್ಲಿ ಒಳಿತೆನ್ನುವಂತಿಲ್ಲ. ಅದನ್ನು ಸರಿಯಾದ ಹಾದಿಯಲ್ಲಿ ಬಳಸುವುದರಲ್ಲಿಯೇ ಅದರ ಒಳಿತು ಅಡಕವಾಗಿದೆ. ಆ ಸಾಮರ್ಥ್ಯವನ್ನು ಸರಿದಾರಿಗೆ ಹಚ್ಚುವ ಉತ್ಕೃಷ್ಟ ಸೇವೆಯನ್ನಷ್ಟೇ ಇಸ್ಲಾಮ್ ನಿರ್ವಹಿಸುತ್ತಿದೆ. ಐಹಿಕ ಜೀವನದಲ್ಲಿ ಮಾನವನ ಎಲ್ಲಾ ಪ್ರಯತ್ನಗಳ ಏಕೈಕ ಉದ್ದೇಶವು ಅಲ್ಲಾಹನ ಸಂಪ್ರೀತಿ ಗಳಿಸುವುದೆಂಬುದೇ ಇಸ್ಲಾಮಿನ ತೌಹೀದ್‌ನ ಸಂದೇಶದ ಅನಿವಾರ್ಯ ಪರಿಣಾಮ. ತನ್ಮೂಲಕ ಮಾನವನ ವಿಚಾರ-ಕರ್ಮಗಳ ಸಂಪೂರ್ಣ ವಲಯವು ಅಲ್ಲಾಹನು ನಿರ್ಣಯಿಸಿದ ಮೇರೆಗಳಿಗೆ ಸೀಮಿತವಾಗುವುದು. ಈ ಮೂಲಭೂತ ಸುಧಾರಣೆಯಿಂದಾಗಿ ಪ್ರಸ್ತುತ ಮಾನವೀಯ ನೈತಿಕ ಮೌಲ್ಯಗಳೆಲ್ಲವೂ ಸರಿಯಾದ ಹಾದಿಯಲ್ಲಿ ಚಲಿಸಲಾರಂಭಿಸುವುವು. ಅದರಿಂದ ಹುಟ್ಟುವ ಬಲವು ಸ್ವಾರ್ಥ, ಸ್ವಕುಟುಂಬ, ಸ್ವಸಮುದಾಯ, ಸ್ವದೇಶ ಮುಂತಾದ ವಿಶಿಷ್ಟ ಹಿತಾಸಕ್ತಿಗಳಿಗಾಗಿ ವ್ಯಯವಾಗುವ ಬದಲು ಕೇವಲ ಸತ್ಯದ ಯಶಸ್ಸಿಗಾಗಿ ನ್ಯಾಯೋಚಿತ ಮಾರ್ಗಗಳ ಮೂಲಕ ವ್ಯಯವಾಗಲಾರಂಭಿಸುವುದು.ಈ ವೈಶಿಷ್ಟ್ಯವೇ ಪ್ರಸ್ತುತ ನೈತಿಕತೆಯನ್ನು ಬರೇ ಬಲವೆಂಬ ಹಂತದಿಂದ ಮೇಲೆತ್ತಿ ರಚನಾತ್ಮಕವಾಗಿ ಸಾದ್ಯಂತ ಒಳಿತು ಮತ್ತು ಲೋಕಕ್ಕೆ ಅನುಗ್ರಹವಾಗಿಸುತ್ತದೆ.

ನೈತಿಕತೆಯ ವಿಷಯದಲ್ಲಿ ಇಸ್ಲಾಮ್ ನಿರ್ವಹಿಸುವ ದ್ವಿತೀಯ ಕೆಲಸವು ಮಾನವೀಯ ನೈತಿಕತೆಯನ್ನು ಅತ್ಯಂತ ಸುಭದ್ರಗೊಳಿಸಿ ಅದರ ವ್ಯಾಪ್ತಿಯನ್ನು ಗರಿಷ್ಠವಾಗಿ ವಿಶಾಲಗೊಳಿಸುತ್ತದೆ. ಉದಾಹರಣೆಗಾಗಿ ಸಹನೆಯನ್ನು ನೋಡೋಣ. ಕೇವಲ ಲೌಕಿಕ ಹಿತಾಸಕ್ತಿಗಳಿಗಾಗಿ ತೋರುವ, 'ಶಿರ್ಕ್' ಅಥವಾ ಲೌಕಿಕ ವಿಚಾರಧಾರೆಗಳಿಂದ ಜನ್ಮ ತಾಳುವ ಸಹನಾಶಕ್ತಿಯನ್ನು ಓರ್ವನು ಎಷ್ಟೇ ಗಳಿಸಿದ್ದರೂ ಆತನ ಧೈರ್ಯ-ಸ್ಥೈರ್ಯಗಳಿಗೆ ಒಂದು ಮಿತಿ ಇರುತ್ತದೆ. ಆ ಮಿತಿ ತಲಪಿದ ಬಳಿಕ ಆತ ಧೈರ್ಯಗುಂದುತ್ತಾನೆ. ಆದರೆ ತೌಹೀದ್‌ನ ಮೂಲದಿಂದ ಹುಟ್ಟುವ ಲೌಕಿಕ ಹಿತಾಸಕ್ತಿಗಳಿಲ್ಲದ ಕೇವಲ ಲೋಕ ಪ್ರಭುವಾದ ಅಲ್ಲಾಹನಿಗಾಗಿ ಸಹನಾ ಶಕ್ತಿಯು

ಒಂದು ಅಜೇಯ ಶಕ್ತಿಯಾಗಿದ್ದು ಈ ಲೋಕದ ಯಾವ ಸಂಕಷ್ಟವೂ ಅದನ್ನು ದೋಚಲಾರದು. ಇಸ್ಲಾಮೇತರ ವಿಚಾರಧಾರೆಯಿಂದ ಹುಟ್ಟುವ ಸಹನೆಯು ಸೀಮಿತವಾಗಿದೆ. ಒಂದೊಮ್ಮೆ ಗುಂಡಿಗೆ ಹೆದರದೆ ಎದೆ ಸೆಟೆದು ನಿಲ್ಲಬಹುದಾದರೂ ಮರುಕ್ಷಣದಲ್ಲಿಯೇ ಕಾಮೋದ್ರೇಕವನ್ನು ಶಮನಗೊಳಿಸುವಂತಹ ಸಂದರ್ಭ ದೊರೆತರೆ ದೇಹೇಚ್ಛೆಯ ಕ್ಷಣಿಕ ಪ್ರೇರಣೆಯನ್ನು ಆ ಸಹನೆಯಿಂದ ತಡೆಯಲು ಸಾಧ್ಯವಿಲ್ಲ. ಆದರೆ ಸಹನೆಯನ್ನು ಇಸ್ಲಾಮ್ ಮಾನವನ ಸಮಗ್ರ ಜೀವನಕ್ಕೆ ಅನ್ವಯಗೊಳಿಸಿದೆ. ಅದು ವಿಪತ್ತು, ಅಪಾಯ ಅಥವಾ ಸಂಕಷ್ಟಗಳ ವಿರುದ್ಧ ಮಾತ್ರವಲ್ಲ, ಮಾನವನನ್ನು ಸನ್ಮಾರ್ಗದಿಂದ ತಪ್ಪಿಸುವ ಇಚ್ಛೆ, ಆಶೆ, ಭಯ ಮತ್ತು ವ್ಯಾಮೋಹಗಳ ವಿರುದ್ಧವೂ ಅಚಲವಾಗಿ ನಿಲ್ಲುವ ದೃಢಚಿತ್ತವನ್ನು ಮೈಗೂಡಿಸುವ ಅಜೇಯ ಶಕ್ತಿಯನ್ನು ಮಾನವನಲ್ಲಿ ಬೆಳೆಸುತ್ತದೆ. ವಾಸ್ತವದಲ್ಲಿ ಸತ್ಯವಿಶ್ವಾಸಿಯ ಸಂಪೂರ್ಣ ಜೀವನವನ್ನು ಇಸ್ಲಾಮ್ ಸಹನಾಮಯ ಜೀವನವಾಗಿ ಮಾರ್ಪಡಿಸುತ್ತದೆ. ಎಷ್ಟೇ ಗಂಡಾಂತರ ಮತ್ತು ಸಂಕಷ್ಟಗಳು ಮುಂದೆ ಬಂದರೂ ಐಹಿಕ ಜೀವನದಲ್ಲಿ ಯಾವ ಸತ್ಫಲ ಗೋಚರಿಸದಿದ್ದರೂ ಆಯುಷ್ಕಾಲ ಪರ್ಯಂತ ಸರಿಯಾದ ಆಚಾರ ವಿಚಾರಗಳಲ್ಲಿ ದೃಢವಾಗಿದ್ದು, ಲೌಕಿಕ ಲಾಭ, ಒಳಿತು, ಆಶೆ ಆಕಾಂಕ್ಷೆಗಳು ಕಣ್ಣ ಮುಂದೆ ನಲಿಯುತ್ತಲಿದ್ದರೂ ಆಚಾರ ವಿಚಾರಗಳಲ್ಲಿ ದುರ್ಮಾರ್ಗವನ್ನು ಸ್ವೀಕರಿಸದಿರುವುದೇ ಇಸ್ಲಾಮಿನ ಸಹನಾ ಜೀವನದ ಮೂಲ ಸಿದ್ಧಾಂತ. ಪರಲೋಕದ ಸುನಿಶ್ಚಿತ ಸತ್ಫಲಗಳ ನಿರೀಕ್ಷೆಯಿಂದ ಐಹಿಕ ಜೀವನದಲ್ಲಿ ಕೆಡುಕನ್ನು ಸಂಪೂರ್ಣವಾಗಿ ತ್ಯಜಿಸಿ, ಸನ್ಮಾರ್ಗದಿಂದ ದೂರ ಸರಿಯದೆ ಮುನ್ನಡೆಯುವುದೇ ಇಸ್ಲಾಮಿ ಸಹನೆ. ಇತರೆಲ್ಲಾ ನೈತಿಕ ಮಾನವೀಯ ಮೌಲ್ಯಗಳ ಸ್ಥಿತಿಯೂ ಹೀಗೆಯೇ ಇದೆ. ನೈಜ ವೈಚಾರಿಕ ಬುನಾದಿಯ ಕೊರತೆಯಿಂದಾಗಿ ಮುಸ್ಲಿಮೇತರರ ಜೀವನದಲ್ಲಿ ಈ ನೈತಿಕತೆ ಸಂಪೂರ್ಣ ದುರ್ಬಲ ಮತ್ತು ಪರಿಮಿತವಾಗಿದೆ. ಇಸ್ಲಾಮ್ ಅವುಗಳಿಗೆ ನೈಜ ಬುನಾದಿಯನ್ನು ಹಾಕಿಕೊಟ್ಟು ಭದ್ರಗೊಳಿಸಿ ಅತ್ಯಂತ ವ್ಯಾಪಕಗೊಳಿಸಿದೆ.

ಇಸ್ಲಾಮಿನ ಮೂರನೆಯ ಪ್ರಾಮುಖ್ಯ ಕಾರ್ಯವು ಮಾನವೀಯ ನೈತಿಕತೆಗಳ ಪ್ರಾರಂಭಿಕ ಹಂತದಲ್ಲಿ ಉತ್ಕೃಷ್ಟವಾದ ಗುಣಗಳ ಅತ್ಯುನ್ನತವಾದ ಒಂದು ಸ್ಥಾನವನ್ನು ಕಟ್ಟಿ ಬೆಳೆಸುವುದಾಗಿದೆ. ತನ್ಮೂಲಕ ಮಾನವನು ಶ್ರೇಷ್ಠತೆಯ ಅತ್ಯುತ್ಕೃಷ್ಟ ಸ್ಥಾನಕ್ಕೆ ತಲಪುತ್ತಾನೆ. ಸ್ವಾರ್ಥ, ದೇಹೇಚ್ಛೆ, ಅಕ್ರಮ, ನಿರ್ಲಜ್ಜೆ, ಸ್ವೇಚ್ಛಾಚಾರ ಮುಂತಾದ ದುರ್ಗುಣಗಳಿಂದ ಆತನು ತನ್ನನ್ನು ಶುದ್ಧಗೊಳಿಸುತ್ತಾನೆ. ದೇವಭಯ, ಸತ್ಯನಿಷ್ಠೆ, ಪ್ರಾಮಾಣಿಕತೆ ಇತ್ಯಾದಿ ಗುಣಗಳು ಆತನಲ್ಲಿ ಬೆಳೆಯುತ್ತವೆ. ನೈತಿಕ ಹೊಣೆಗಾರಿಕೆಯ ಪ್ರಜ್ಞೆಯು ಆತನಲ್ಲಿ ಬೆಳೆದು ಬರುತ್ತದೆ. ಆತನಲ್ಲಿ ಆತ್ಮನಿಯಂತ್ರಣದ ಶಕ್ತಿ ಬೆಳೆಯುತ್ತವೆ. ಎಲ್ಲ ಸೃಷ್ಟಿಗಳ ಮಟ್ಟಿಗೂ ಆತನನ್ನು ಗೌರವಾರ್ಹ, ಶ್ರೇಷ್ಠ, ಉದಾರಿ, ಸಹಾನುಭೂತಿಯುಳ್ಳವ, ಪ್ರಾಮಾಣಿಕ, ನಿಸ್ವಾರ್ಥಿ, ಹಿತಾಕಾಂಕ್ಷಿ, ನಿಷ್ಪಕ್ಷಮತಿ, ನ್ಯಾಯ ನಿಷ್ಠ ಮತ್ತು ಸತ್ಯವಂತನನ್ನಾಗಿ ಮಾಡುತ್ತದೆ. ಸದಾ ಒಳಿತನ್ನು ನಿರೀಕ್ಷಿಸುವ ಹಾಗೂ ಕೆಡುಕನ್ನು ಎಂದೂ ನಿರೀಕ್ಷಿಸದ ಅತ್ಯುನ್ನತ ಗುಣವನ್ನು ಆತನಲ್ಲಿಬೆಳೆಸುತ್ತದೆ. ಆದರೆ ಮಾನವನನ್ನು ಕೇವಲ ಸದ್ಗುಣಿಯನ್ನಾಗಿ ಮಾಡುವುದರಲ್ಲಷ್ಟೇ ಇಸ್ಲಾಮಿನ ಕಾರ್ಯ ಮುಗಿಯುವುದಿಲ್ಲ. ಅದು ಪ್ರವಾದಿಯ ಭಾಷೆಯಲ್ಲಿ ಹೇಳುವುದಿದ್ದರೆ ಆತನು ಒಳಿತಿನ ದ್ವಾರವನ್ನು ತೆರೆಯುವವನು ಹಾಗೂ ಕೆಡುಕಿನ ದ್ವಾರವನ್ನು ಮುಚ್ಚುವವನನ್ನಾಗಿಯೂ

ಮಾಡುತ್ತದೆ. ಅರ್ಥಾತ್ ಲೋಕದಲ್ಲಿ ಒಳಿತನ್ನು ಪ್ರಚಾರ ಮಾಡುವ ಮತ್ತು ಕೆಡುಕನ್ನು ತಡೆಯುವ ಮಹಾ ಕಾರ್ಯವನ್ನು ಅವನಿಗೆ ವಹಿಸಿಕೊಟ್ಟಿದೆ. ಇಸ್ಲಾಮ್ ಉಂಟು ಮಾಡುವ ಈ ಗುಣನಡತೆಯಲ್ಲಿ ಸ್ವಾಭಾವಿಕವಾಗಿಯೇ ಅನನ್ಯ ಆಕರ್ಷಣೆಯಿದೆ. ಅನ್ಯರನ್ನು ಜಯಿಸುವ ಅಜೇಯ ಶಕ್ತಿಯಿದೆ. ಪ್ರಸ್ತುತ ಗುಣ ನಡತೆಗಳನ್ನು ಮೈಗೂಡಿಸಿದ ಸುಸಂಘಟಿತ ಪಕ್ಷವು ಇಸ್ಲಾಮ್ ವಹಿಸಿಕೊಟ್ಟಿರುವ ಕರ್ತವ್ಯ ಪೂರೈಕೆಗಳಿಗಾಗಿ ಪ್ರಯತ್ನಿಸಿದರೆ, ಅದರ ಸಾರ್ವತ್ರಿಕ ಶಕ್ತಿಯ ಮುಂದೆ ಯಾವ ಲೌಕಿಕ ಶಕ್ತಿಯೂ ನೆಲೆಯೂರಲಾರದು.

ಲೋಕ ನಾಯಕತ್ವದ ಬಗ್ಗೆ ಮನುಷ್ಯಾರಂಭದಿಂದ ಜಾರಿಯಲ್ಲಿರುವ ಹಾಗೂ ಮಾನವಕುಲವು ಇದೇ ಸ್ವಭಾವದಲ್ಲಿರುವ ತನಕ ಉಳಿಯುವಂತಹ ದೇವ ನಿಯಮವನ್ನು ಸಂಕ್ಷಿಪ್ತವಾಗಿ ವಿವರಿಸುತ್ತೇನೆ.

1. ಇಸ್ಲಾಮಿ ನೈತಿಕ ಹಾಗೂ ಮಾನವೀಯ ನೈತಿಕ ಮೌಲ್ಯಗಳನ್ನು ಹೊಂದಿರುವುದರೊಂದಿಗೆ ಲೌಕಿಕ ಸವಲತ್ತನ್ನೂ ಚೆನ್ನಾಗಿ ಬಳಸಿಕೊಳ್ಳುವ ಸುಸಂಘಟಿತ ಮಾನವ ವರ್ಗವು ಲೋಕದಲ್ಲಿಲ್ಲದಿದ್ದರೆ, ಮೂಲ ಮಾನವೀಯ ನೈತಿಕತೆ ಮತ್ತು ಲೌಕಿಕ ಸವಲತ್ತುಗಳಲ್ಲಿ ಸಾಮಾನ್ಯವಾಗಿ ಇತರರನ್ನು ಮೀರಿಸುವಂತಹ ವಿಭಾಗಕ್ಕೆ ಲೋಕದ ನಾಯಕತ್ವದ ಆಧಿಪತ್ಯವು ಖಚಿತವಾಗಿ ನೀಡಲ್ಪಡುವುದು. ಯಾಕೆಂದರೆ ದೇವನು ತನ್ನ ಲೋಕದಲ್ಲಿ ಸುವ್ಯವಸ್ಥೆ ಸ್ಥಾಪಿಸ ಬಯಸಿದ್ದಾನೆ. ಈ ಅಧಿಕಾರವನ್ನು ಆತನು ಅಸ್ತಿತ್ವದಲ್ಲಿರುವ ವರ್ಗಗಳಲ್ಲಿ ಯೋಗ್ಯರಾದವರಿಗೆ ನೀಡುವನು.

2. ಆದರೆ ಇಸ್ಲಾಮಿ ನೈತಿಕತೆಯಲ್ಲಿಯೂ ಮೂಲ ಮಾನವೀಯ ನೈತಿಕತೆಯಲ್ಲಿಯೂ ಇತರ ಜನರಿಗಿಂತ ಉತ್ಕೃಷ್ಟರೂ ಅದರೊಂದಿಗೆ ಲೌಕಿಕ ಸವಲತ್ತುಗಳ ಬಳಕೆಯಲ್ಲಿ ಲೋಪ ತೋರದ ಜನವರ್ಗವೂ ಲೋಕದಲ್ಲಿ ಅಸ್ತಿತ್ವದಲ್ಲಿರುತ್ತಾ, ಅವರ ಬದಲಿಗೆ ಇತರ ವರ್ಗಗಳು ನಾಯಕತ್ವದ ಅಧಿಕಾರವನ್ನು ಗಳಿಸುವುದು ಅಸಂಭವನೀಯ. ಅದು ಲೋಕದ ಸ್ವಭಾವಕ್ಕೂ ವಿರುದ್ಧವಾಗಿದೆ. ಅದು ಮಾನವನ ಬಗ್ಗೆ ಅಲ್ಲಾಹನು ನಿರ್ಣಯಿಸಿರುವ ಕಾನೂನಿನ ವಿರುದ್ಧವಾಗಿದೆ. ಹಾಗೆಯೇ ಅದು ಅಲ್ಲಾಹನು ತನ್ನ ಗ್ರಂಥದಲ್ಲಿ ಸತ್ಯವಿಶ್ವಾಸಿಗಳಾದ ಸಜ್ಜನರೊಡನೆ ಮಾಡಿರುವ ವಾಗ್ದಾನಕ್ಕೆ ವಿರುದ್ಧವಾಗಿದೆ. ಒಂದು ವರ್ಗವು ಅಲ್ಲಾಹನ ಸಂಪ್ರೀತಿಯಂತೆ ಆತನ ಲೋಕವನ್ನು ಆಳಲು ಅರ್ಹರಾಗಿರುತ್ತಾ, ಆಡಳಿತ ಸೂತ್ರವನ್ನು ವಿನಾಶಕಾರಿಗಳ ಹಸ್ತದಲ್ಲಿಯೇ ಕೊಡುವಷ್ಟರ ಮಟ್ಟಿಗೆ ಆತನು ವಿನಾಶವನ್ನು ಮೆಚ್ಚುವುದಿಲ್ಲ. ಆದರೆ ಆ ಗುಣ ವೈಶಿಷ್ಟ್ಯಗಳನ್ನು ಹೊಂದಿರುವ ವರ್ಗವೊಂದು ಅಸ್ತಿತ್ವದಲ್ಲಿದ್ದರೆ ಮಾತ್ರ ಅದು ಸಾಕ್ಷಾತ್ಕಾರಗೊಳ್ಳುವುದು. ಓರ್ವ ಸಜ್ಜನ ವ್ಯಕ್ತಿ ಅಥವಾ ಕೆಲವರು ಅಸಂಘಟಿತ ಜನರಿದ್ದರೂ ಅವರು ವೈಯಕ್ತಿಕವಾಗಿ ಎಷ್ಟೇ ದೊಡ್ಡ ಔಲಿಯಾ ಅಥವಾ ಪ್ರವಾದಿಯೇ ಆಗಿರಲಿ, ಭೂಮಿಯ ಪ್ರಾತಿನಿಧ್ಯ ವ್ಯವಸ್ಥೆಯಲ್ಲಿ ಬದಲಾವಣೆಯಾಗದು. ಅಲ್ಲಾಹನು ಭೂಮಿಯ ಪ್ರಾತಿನಿಧ್ಯದ ಕುರಿತು ನೀಡಿರುವ ವಾಗ್ದಾನಗಳೆಲ್ಲವೂ ಅಸಂಘಟಿತ ವ್ಯಕ್ತಿಗಳಿಗಾಗಿರದೆ ಲೋಕದಲ್ಲಿ 'ಖೈರೆ ಉಮ್ಮತ್' (ಉತ್ತಮ ಸಮುದಾಯ) ಉಮ್ಮತಂವಸತ್ (ಸುಮಧ್ಯ ಸಮುದಾಯ) ಆಗಿದೆಯೆಂಬುದನ್ನು ಪ್ರತ್ಯಕ್ಷದಲ್ಲಿ ತೋರಿಸಿದ ಸಂಘಟನೆಗೆ ನೀಡಿರುವುದಾಗಿದೆ. ಅಲ್ಲದೆ ಅಂತಹ ಸಂಘಟನೆಯು ಸ್ಥಾಪನೆಗೊಂಡ ಮಾತ್ರಕ್ಕೆ ಅಧಿಕಾರದಲ್ಲಿ ಬದಲಾವಣೆ ಬರುವುದಿಲ್ಲ. ಅಂತಹ ಸಂಘಟನೆಯನ್ನು ರಚಿಸಿದ

ಕೂಡಲೇ ಆಕಾಶದಿಂದ ದೇವಚರರು ಇಳಿದು ಬಂದು ವಿನಾಶಕಾರಿಗಳನ್ನು ಅಧಿಕಾರ ಪೀಠದಿಂದ ಕೆಳಗಿಳಿಸಿ, ಅವರನ್ನು ಎತ್ತಿ ಕುಳ್ಳಿರಿಸುವುದಿಲ್ಲ. ಬದಲಾಗಿ ಆ ಸಂಘಟನೆಯು 'ಕುಫ್ರ್' ಮತ್ತು 'ಫಿಸ್ಕ್' ಶಕ್ತಿಗಳೊಂದಿಗೆ ಜೀವನದ ಎಲ್ಲಾ ರಂಗಗಳಲ್ಲಿಯೂ ನಿರಂತರ ಹೋರಾಡಬೇಕಾಗುತ್ತದೆ. ಸತ್ಯ ಸಂಸ್ಥಾಪನೆಯ ಹಾದಿಯಲ್ಲಿ ನಾನಾ ರೀತಿಯ ತ್ಯಾಗಗಳನ್ನು ಮಾಡಿ ತಮ್ಮ ಸತ್ಯ ಪ್ರೇಮ ಮತ್ತು ಅರ್ಹತೆಯನ್ನು ಸಾಬೀತುಪಡಿಸಬೇಕಾಗುತ್ತದೆ. ಇದು ವಿನಾಯಿತಿಯಿಲ್ಲದ ನಿಬಂಧನೆ, ಪ್ರವಾದಿಗಳೂ ಅದರಿಂದ ಹೊರತಲ್ಲ. ಹೀಗಿರುತ್ತಾ ಇಂದು ಅದರಿಂದ ಯಾರಿಗಾದರೂ ವಿನಾಯಿತಿ ದೊರೆತೀತೆಂದು ನಿರೀಕ್ಷಿಸುವುದು ಹೇಗೆ?

3. ಲೌಕಿಕ ಶಕ್ತಿ ಮತ್ತು ನೈತಿಕ ಶಕ್ತಿಯ ಪರಸ್ಪರ ಹೋಲಿಕೆಯ ಕುರಿತು ಕುರ್‌ಆನ್ ಮತ್ತು ಚರಿತ್ರೆಯನ್ನು ಕೂಲಂಕಷವಾಗಿ ಪರಿಶೀಲಿಸಿದರೆ, ನೈತಿಕ ಶಕ್ತಿಯು ಕೇವಲ ಮೂಲ ಮಾನವೀಯ ನೈತಿಕತೆಯಾಗಿರುವೆಡೆಗಳಲ್ಲಿ ಲೌಕಿಕ ಸವಲತ್ತುಗಳಿಗೆ ಹೆಚ್ಚಿನ ಪ್ರಾಮುಖ್ಯತೆಯಿದೆಯೆಂದು ಕಂಡು ಬರುತ್ತದೆ. ಅದಲ್ಲದೆ ಒಂದು ವರ್ಗದಲ್ಲಿ ಲೌಕಿಕ ಸವಲತ್ತುಗಳು ಅತ್ಯಧಿಕವಿದ್ದರೂ ಅತಿ ಕಡಿಮೆ ಮಾನವೀಯ ನೈತಿಕ ಶಕ್ತಿಯಿಂದಲೇ ಅದಕ್ಕೆ ಲೋಕವನ್ನು ಜಯಿಸಲು ಸಾಧ್ಯವಾಗುತ್ತದೆ. ಹಾಗೆಯೇ ಇನ್ನೊಂದು ವರ್ಗದಲ್ಲಿ ಮಾನವೀಯ ನೈತಿಕ ಶಕ್ತಿ ಅಧಿಕವಿದ್ದರೂ ಲೌಕಿಕ ಸವಲತ್ತುಗಳ ಕೊರತೆಯಿಂದಾಗಿ ಅದು ಸೋಲಬಹುದಾಗಿದೆ. ಆದರೆ ನೈತಿಕ ಶಕ್ತಿಯಲ್ಲಿ ಇಸ್ಲಾಮಿ ಮತ್ತು ಮೂಲ ಮಾನವೀಯ ನೈತಿಕತೆಗಳು ಪೂರ್ಣ ಪ್ರಮಾಣದಲ್ಲಿ ಒಳಗೊಂಡಿದ್ದರೆ, ಲೌಕಿಕ ಸವಲತ್ತುಗಳು ಕಡಿಮೆಯಿದ್ದರೂ ನೈತಿಕ ಬಲದಿಂದಲೇ ಯಶಸ್ಸು ಗಳಿಸಬಹುದು. ಕೇವಲ ಮಾನವೀಯ ನೈತಿಕತೆ ಮತ್ತು ಲೌಕಿಕ ಸವಲತ್ತುಗಳ ನೆರವಿನಿಂದ ಹುಟ್ಟುವ ಸರ್ವ ಶಕ್ತಿಗಳನ್ನು ಸೋಲಿಸಲು ಅದಕ್ಕೆ ಸಾಧ್ಯವಿದೆ. ಇದನ್ನೇ ಇನ್ನೊಂದು ಮಾತಿನಲ್ಲಿ ಹೇಳುವುದಿದ್ದರೆ ಮೂಲ ಮಾನವೀಯ ನೈತಿಕತೆಗಳೊಂದಿಗೆ ಶೇಕಡಾ ನೂರಂಶ ಲೌಕಿಕ ಶಕ್ತಿಯ ಅಗತ್ಯವಿದ್ದರೆ, ಇಸ್ಲಾಮಿ ಮತ್ತು ಮಾನವೀಯ ನೈತಿಕತೆಗಳು ಒಟ್ಟುಗೂಡಿರುವ ಶಕ್ತಿಗೆ ಕೇವಲ 25ಶೇ. ಲೌಕಿಕ ಶಕ್ತಿ ಸಾಕಾಗುವುದು. ಉಳಿದ 75ಶೇ. ಲೌಕಿಕ ಶಕ್ತಿಯ ಕೊರತೆಯನ್ನು ಇಸ್ಲಾಮಿ ನೈತಿಕ ಶಕ್ತಿಯು ತುಂಬುವುದು. ಅದಲ್ಲದೆ ಪ್ರವಾದಿವರ್ಯರ(ಸ) ಕಾಲದ ಅನುಭವದಿಂದ ತಿಳಿದು ಬರುವುದೇನೆಂದರೆ ಪ್ರವಾದಿ ಮತ್ತು ಅವರ ಸಂಗಡಿಗರು ಗಳಿಸಿದಂತಹ ಇಸ್ಲಾಮಿ ನೈತಿಕ ಶಕ್ತಿ ಉಂಟಾದರೆ ಕೇವಲ 10ಶೇ. ಲೌಕಿಕ ಶಕ್ತಿಯಿಂದಲೇ ವಿಜಯ ಸಾಧ್ಯ. ಈ ಸತ್ಯವನ್ನು ಕುರ್‌ಆನ್‌ನ ಈ ಕೆಳಗಿನ ಆಯತ್‌ನಿಂದ ಗ್ರಹಿಸಬಹುದು- "ನಿಮ್ಮ ಪಂಕ್ತಿಯಲ್ಲಿ 20 ಮಂದಿ ಸಹನ ಶೀಲರಿದ್ದರೆ ಇನ್ನೂರು ವ್ಯಕ್ತಿಗಳನ್ನು ಅವರು ಜಯಿಸುವರು" (8:65).

ಈ ಕೊನೆಯ ವಿಷಯವನ್ನು ಕೇವಲ ಪೊಳ್ಳು ಭರವಸೆಯೆಂದು ವ್ಯಾಖ್ಯಾನಿಸುವಂತಿಲ್ಲ. 'ಮುಅ್‌ಜಿಝತ್' ಕರಾಮತ್- (ಪವಾಡ) ಎಂದು ಅದನ್ನು ವರ್ಣಿಸಲಾಗದು. ಅದು ನೈಸರ್ಗಿಕ ವಾಸ್ತವಿಕತೆಯಾಗಿದೆ. ವ್ಯಾವಹಾರಿಕ ನಿಯಮಾವಳಿಯಂತೆ ಈ ಐಹಿಕ ಲೋಕದಲ್ಲಿ ಯಾವಾಗ ಬೇಕಿದ್ದರೂ ಪ್ರತ್ಯಕ್ಷವಾಗಬಹುದಾದಂತಹ ನಿಸರ್ಗ ನಿಯಮ! ಈ ಕುರಿತು ಮುಂದುವರಿಯುವುದಕ್ಕಿಂತ ಮುಂಚೆ ಇಸ್ಲಾಮಿ ನೈತಿಕತೆಯಿಂದ (ಮಾನವೀಯ ನೈತಿಕ ಮೌಲ್ಯಗಳು ಅದರಲ್ಲಿ ಸ್ವಾಭಾವಿಕವಾಗಿ ಒಳಗೊಂಡಿವೆ.) ಲೌಕಿಕ ಶಕ್ತಿಯ ಶೇ. 75 ಅಥವಾ

ಶೇ.90ರ ಕೊರತೆಯು ಹೇಗೆ ತುಂಬುವುದೆಂಬುದನ್ನು ನಾನು ಸಂಕ್ಷಿಪ್ತವಾಗಿ ವಿವರಿಸುತ್ತೇನೆ. ಈ ವಿಷಯವನ್ನು ತಿಳಿಯಲು ಇಂದಿನ ಅಂತಾರಾಷ್ಟ್ರೀಯ ಪರಿಸ್ಥಿತಿಯನ್ನೊಮ್ಮೆ ಅವಲೋಕಿಸುವುದು ಉತ್ತಮ. ಕಳೆದ ಜಾಗತಿಕ ಮಹಾಯುದ್ಧವೆಂಬ ಭೀಕರ ವಿನಾಶವು ಜರ್ಮನಿ ಮತ್ತು ಜಪಾನ್‌ಗಳ ಸೋಲಿನಲ್ಲಿ ಕೊನೆಗೊಂಡಿದೆ. ಈ ವಿನಾಶದಲ್ಲಿ ಉಭಯ ವರ್ಗಗಳೂ ಮೂಲಭೂತ ಮಾನವೀಯ ನೈತಿಕತೆಯಲ್ಲಿ ಹೆಚ್ಚಿನಂಶ ಸಮಾನವಾಗಿದ್ದುವು. ಮಾತ್ರವಲ್ಲ ಕೆಲವು ಅಂಶಗಳಲ್ಲಿ ಜರ್ಮನಿ ಮತ್ತು ಜಪಾನ್‌ಗಳಿಗೆ ವಿರೋಧಿಗಳಿಗಿಂತ ಹೆಚ್ಚು ನೈತಿಕ ಶಕ್ತಿಯಿದ್ದಿತೆಂದು ಅವರು ತೋರಿಸಿಕೊಟ್ಟಿದ್ದಾರೆ. ಭೌತ ವಿಜ್ಞಾನ ಮತ್ತು ಅವುಗಳನ್ನು ಸಮರ್ಥವಾಗಿ ಬಳಸುವ ವಿಷಯದಲ್ಲಿಯೂ ಉಭಯ ಬಣಗಳು ಸರಿಸಾಟಿಯಾಗಿದ್ದುವು. ಆದರೂ ಈ ಬಗ್ಗೆ ಜರ್ಮನಿಯೇ ಮುಂದಿತ್ತೆಂದರೂ ತಪ್ಪಾಗಲಾರದು. ಆದರೆ ಲೌಕಿಕ ಸಾಧನ, ಸವಲತ್ತುಗಳಲ್ಲಿ ಮಾತ್ರ ಒಂದು ಇನ್ನೊಂದನ್ನು ಮೀರಿಸಿತ್ತು. ಆ ಬಣದ ಜನಬಲವು ಅದರ ಇಬ್ಬರು ವಿರೋಧಿಗಳಿಗಿಂತಲೂ (ಜಪಾನ್, ಜರ್ಮನಿ) ಎಷ್ಟೋ ಪಟ್ಟು ಅಧಿಕವಿತ್ತು. ಹಾಗೆಯೇ ಸಾಧನ ಸವಲತ್ತುಗಳು ವೈರಿಗಳಿಗಿಂತ ಹೆಚ್ಚು ಅವರಿಗೆ ಲಭ್ಯವಿತ್ತು. ಅವರ ಭೌಗೋಳಿಕ ಸ್ಥಿತಿ ಶತ್ರುಗಳಿಗಿಂತ ಉತ್ತಮವಿತ್ತು. ಐತಿಹಾಸಿಕ ಕಾರಣಗಳೂ ಶತ್ರುಗಳ ವಿರುದ್ಧ ಅವರಿಗೆ ಉತ್ತಮ ವಾತಾವರಣವನ್ನು ನಿರ್ಮಿಸಿಕೊಟ್ಟಿದ್ದುವು. ಈ ಕಾರಣಗಳಿಂದಲೇ ಅವರು ಜಯ ಸಾಧಿಸಿದರು. ಸಂಖ್ಯಾಬಲ ಮತ್ತು ಲೌಕಿಕ ಸಾಧನ ಸವಲತ್ತುಗಳ ಕೊರತೆಯಿರುವ ಜನರ ಸ್ಥಿತಿಯು ಇಂದಿಗೂ ಅದೇ ಆಗಿದೆ. ಮೂಲ ಮಾನವೀಯ ನೈತಿಕತೆ ಮತ್ತು ಭೌತ ವಿಜ್ಞಾನಗಳಲ್ಲಿ ಇತರರನ್ನು ಮೀರಿಸಿದ್ದರೂ ಸಂಖ್ಯಾಬಲ ಮತ್ತು ಲೌಕಿಕ ಬಲಗಳಿರುವ ರಾಷ್ಟ್ರಗಳ ವಿರುದ್ಧ ತಲೆಯೆತ್ತುವ ಸಾಧ್ಯತೆ ಅವರ ಮಟ್ಟಿಗೆ ಇಂದಿಗೂ ಇಲ್ಲ. ಯಾಕೆಂದರೆ ಮೂಲ ನೈತಿಕತೆ ಹಾಗೂ ನಿಸರ್ಗ ವಿಜ್ಞಾನಗಳ ಮೇಲ್ಮೆಯಿಂದ ಉದಯಗೊಂಡ ಜನಾಂಗದ ಸ್ಥಿತಿಯು ಕೇವಲ ಎರಡೇ ರೀತಿಯಲ್ಲಿರುವುದು ಸಾಧ್ಯ. ಅವರು ತಮ್ಮ ರಾಷ್ಟ್ರೀಯತೆಯನ್ನು ಪೂಜಿಸುವವರೂ ಲೋಕವನ್ನು ತಮಗಾಗಿ ಜಯಿಸಬಯಸುವವರೂ ಆಗಿರುವರು, ಅಥವಾ ಅವರು ಕೆಲವು ಸಾರ್ವತ್ರಿಕ ಸಿದ್ಧಾಂತಗಳನ್ನು ಮೈಗೂಡಿಸಿ ಇತರ ಜನರನ್ನು ಅದರತ್ತ ಆಕರ್ಷಿಸುವವರಾಗುವರು. ಮೊದಲನೆಯ ವಿಧದಲ್ಲಿ ಅವರ ವಿಜಯಕ್ಕೆ ಲೌಕಿಕ ಶಕ್ತಿಯಲ್ಲಿ ಅವರು ಇತರರಿಗಿಂತ ಉನ್ನತವಾಗಿರಬೇಕೆಂಬುದರ ಹೊರತು ಬೇರೆ ಉಪಾಧಿಯಿಲ್ಲ. ಯಾಕೆಂದರೆ ಅವರ ಅಧಿಕಾರ ಮೋಹಕ್ಕೆ ಬಲಿಯಾಗಲಿರುವ ಎಲ್ಲಾ ಜನಾಂಗಗಳೂ ಅತ್ಯಂತ ಕಟುವಾಗಿ ಅವರನ್ನು ವಿರೋಧಿಸಿ ಅವರ ಮುನ್ನಡೆಯನ್ನು ತಡೆಯಲು ಸಾಧ್ಯವಿದ್ದಷ್ಟು ಪ್ರಯತ್ನಿಸುವುದು. ಎರಡನೆಯ ವಿಧದಲ್ಲಿ ಇತರರ ಮನಮಸ್ತಿಷ್ಕಗಳು ಅವರ ಆದರ್ಶ ಪ್ರಚಾರದೆಡೆಗೆ ಆಕರ್ಷಿತಗೊಳ್ಳುತ್ತಾ ಅನ್ಯರ ವಿರೋಧಗಳ ತಡೆಗೆ ವಿಶೇಷ ಶಕ್ತಿ ಪ್ರಯೋಗದ ಅಗತ್ಯವಿರಲಾರದು. ಆದರೆ ಹೃದಯ ಮಸ್ತಿಷ್ಕಗಳನ್ನು ಕೇವಲ ಕೆಲವು ಆಕರ್ಷಕ ಸಿದ್ಧಾಂತಗಳಿಂದ ವಶೀಕರಿಸಲು ಸಾಧ್ಯವಿಲ್ಲವೆಂಬುದನ್ನು ಮರೆಯುವಂತಿಲ್ಲ. ನೈಜ ಸಹಾನುಭೂತಿ, ಪ್ರಾಮಾಣಿಕತೆ, ಸತ್ಯನಿಷ್ಠೆ, ನಿಸ್ವಾರ್ಥತೆ, ವಿಶಾಲ ಮನೋಭಾವ, ಔದಾರ್ಯ, ಅನುಕಂಪ, ಗೌರವ, ನ್ಯಾಯ ಇತ್ಯಾದಿ ಗುಣಗಳಿಂದ ಮಾತ್ರ ಅವುಗಳನ್ನು ಆಕರ್ಷಿಸಬಹುದು. ಈ ಗುಣ ವೈಶಿಷ್ಟ್ಯಗಳು ಯುದ್ಧ, ಒಪ್ಪಂದ, ಗೆಲುವು, ಸೋಲು, ಮೈತ್ರಿ, ವೈರ ಇತ್ಯಾದಿ ಎಲ್ಲಾ ರಂಗಗಳ ಕಠಿಣ ಪರೀಕ್ಷೆಗಳಲ್ಲಿಯೂ

ನಿಷ್ಕಳಂಕವಾಗಿದೆಯೆಂದು ರುಜುಗೊಳಿಸಬೇಕು. ಇದಾದರೋ ಮೂಲ ನೈತಿಕತೆಯಿಂದ ಎಷ್ಟೋ ಪಟ್ಟು ಉನ್ನತವಾದ ಉತ್ತಮ ನೈತಿಕತೆಯೊಂದಿಗೆ ಸಂಬಂಧ ಹೊಂದಿದೆ. ಆದ್ದರಿಂದಲೇ ಕೇವಲ ಮೂಲ ನೈತಿಕತೆಗಳ ಹಾಗೂ ಲೌಕಿಕ ಬಲದ ಆಧಾರದಲ್ಲಿ ಎದ್ದೇಳುವ ವರ್ಗಗಳು, ಅವರು ನಗ್ನ ಕೋಮುವಾದಿಗಳಿರಲಿ ಅಥವಾ ಗುಪ್ತಕೋಮುವಾದದೊಂದಿಗೆ ಕೆಲವು ಸಾರ್ವತ್ರಿಕ ಸಿದ್ಧಾಂತಗಳ ಪ್ರಚಾರಕರೆಂದು ಕೊಚ್ಚಿಕೊಳ್ಳುತ್ತಿರಲಿ. ಎಲ್ಲಾ ಪ್ರಯತ್ನ ಮತ್ತು ಸಂಘಟನೆಗಳು ಕೊನೆಗೆ ಕೇವಲ ವೈಯಕ್ತಿಕ, ಕೋಮು ಮತ್ತು ರಾಷ್ಟ್ರೀಯ ಸ್ವಾರ್ಥಕ್ಕೆ ತಲಪುತ್ತದೆ. ಇಂದು ಅಮೇರಿಕ, ಬ್ರಿಟನ್ ಮತ್ತು ರಶ್ಯಾ ಮುಂತಾದ ರಾಷ್ಟ್ರಗಳ ದೇಶೀಯ ರಾಜಕೀಯದಲ್ಲಿ ಅದೇ ಸ್ಪಷ್ಟವಾಗಿ ಗೋಚರಿಸುತ್ತಿದೆ. ಪ್ರತಿಯೊಂದು ಜನಾಂಗವೂ ಇತರ ಜನಾಂಗಗಳ ಮುಂದೆ ಬಂಡೆಕಲ್ಲಿನಂತೆ ದೃಢವಾಗಿ ನಿಂತು ತನ್ನ ನೈತಿಕ ಮತ್ತು ಭೌತಿಕ ಶಕ್ತಿಸಾಮರ್ಥ್ಯಗಳೆಲ್ಲವನ್ನೂ ಅದರ ಪ್ರತಿರೋಧಕ್ಕೆ ಬಳಸಿ, ತನಗಿಂತ ಮಿಗಿಲಾದ ಶತ್ರುವಿನ ಭೌತಿಕ ಶಕ್ತಿಯು ತನ್ನನ್ನು ನುಚ್ಚುನೂರುಗೊಳಿಸಿ ಬಿಡುವ ತನಕ ತನ್ನ ಕ್ಷೇತ್ರದಲ್ಲಿ ಪ್ರವೇಶಿಸಲು ಬಿಡದೆ ಇರುವುದು ಇಂತಹ ಸಂಘರ್ಷಗಳ ಪ್ರಕೃತಿದತ್ತ ಸ್ವಭಾವವಾಗಿದೆ.

## ಇಸ್ಲಾಮಿ ಕಾರ್ಯಕರ್ತರಿಗೆ ಮಾನದಂಡ

ಈಗೊಮ್ಮೆ ಸ್ವಲ್ಪ ಆಲೋಚಿಸಿ ನೋಡಿರಿ- ವೈಯಕ್ತಿಕ, ವರ್ಗೀಯ ಮತ್ತು ಕೋಮು ಸ್ವಾರ್ಥಗಳಿಂದ ಮುಕ್ತವಾದ ವಿಭಾಗವೊಂದು ಇದೇ ವಾತಾವರಣದಲ್ಲಿ ಜನ್ಮ ತಾಳುತ್ತದೆ. ಆರಂಭದಲ್ಲಿ ಈ ವಿಭಾಗವು ಒಂದೇ ಸಮುದಾಯದಿಂದ ಹೊರಟಿದ್ದರೂ ಅವರು ಕೆಲವೊಂದು ವರ್ಗವೆಂಬುದರ ಬದಲಾಗಿ ಒಂದು ಸಂಘಟನೆಯೆಂಬ ನೆಲೆಯಲ್ಲಿ ಮುಂದೆ ಬರುತ್ತಾರೆ. ಕೆಲವು ವಿಶಿಷ್ಟ ಸಿದ್ಧಾಂತಗಳ ಅನುಸರಣೆಯಲ್ಲಿಯೇ ಮಾನವಕುಲದ ಯಶಸ್ಸು ಅಡಕವಾಗಿದೆಯೆಂದು ಮನಗಂಡು ಮಾನವನ ಜೀವನ ಪದ್ಧತಿಯನ್ನು ಆ ಸಿದ್ಧಾಂತಗಳ ಬುನಾದಿಯಲ್ಲಿ ಕಟ್ಟಿ ಬೆಳೆಸಲು ಅವರು ಇಚ್ಛಿಸಿದ್ದಾರೆಂಬುದರ ಹೊರತು ಅವರ ಪ್ರಯತ್ನಗಳಿಗೆ ಇನ್ನಾವ ಉದ್ದೇಶವೂ ಇರುವುದಿಲ್ಲ. ಆ ಸಿದ್ಧಾಂತಗಳ ಆಧಾರದಲ್ಲಿ ಅವರು ನಿರ್ಮಿಸುವ ಸಮಾಜದಲ್ಲಿ ಕೋಮು, ರಾಷ್ಟ್ರ, ವರ್ಗ ಅಥವಾ ಗೋತ್ರದ ನೆಲೆಯಲ್ಲಿ ಯಾವ ವ್ಯತ್ಯಾಸಗಳೂ ಇರಲಾರವು. ಅದರಲ್ಲಿ ಎಲ್ಲಾ ಮಾನವರಿಗೂ ಸಮಾನ ಹಕ್ಕು ಮತ್ತು ಸಮಾನತೆಯಿಂದ ಪಾಲ್ಗೊಳ್ಳಲು ಸಾಧ್ಯವಿರುವುದು. ಈ ಸಿದ್ಧಾಂತಗಳ ಅನುಸರಣೆಯಲ್ಲಿ ಮುಂಚೂಣಿಯಲ್ಲಿರುವ ಯಾವ ವ್ಯಕ್ತಿಯ ಮಟ್ಟಿಗೂ ಆತನ ಗೋತ್ರ, ಸಮುದಾಯ ಅಥವಾ ವರ್ಗ ಸಂಬಂಧಿ ವೈಶಿಷ್ಟ್ಯಗಳನ್ನು ನೋಡಲಾಗುವುದಿಲ್ಲ.

ಅಧೀನಗೊಳಿಸಲ್ಪಟ್ಟವರು ಈ ಸಿದ್ಧಾಂತಗಳನ್ನು ನಂಬಿ ತಾವು ಹೆಚ್ಚು ಉತ್ತಮರೆಂಬುದನ್ನು ಸಾಬೀತುಪಡಿಸಿದರೆ, ವಿಜೇತ ಮಂದಿಯು ತಮ್ಮೆಲ್ಲ ಪರಿಶ್ರಮಗಳ ಸಾಧನೆಗಳನ್ನು ಅವರ ಮುಂದೆ ಅರ್ಪಿಸಿ, ಅವರನ್ನು ತಮ್ಮ ನಾಯಕರಾಗಿ ಅಂಗೀಕರಿಸಿ ಅವರ ಅನುಯಾಯಿಗಳಾಗಿ ವರ್ತಿಸುವ ಸಂಪೂರ್ಣ ಸಾಧ್ಯತೆಯಿದೆ. ಪ್ರಸ್ತುತ ವಿಭಾಗವು ತಮ್ಮ ಸಿದ್ಧಾಂತಗಳ ಪ್ರಚಾರಕ್ಕೆ ತೊಡಗಿದಾಗ ಅದನ್ನು ಮೆಚ್ಚದ ಹಾಗೂ ಅದನ್ನು ಜಾರಿಗೊಳಿಸಲೊಪ್ಪದ ಜನರು ಅವರನ್ನು ವಿರೋಧಿಸಿ, ಅವರಿಗೆ ಆತಂಕವೊಡ್ಡಿ ಉಭಯ ವಿಭಾಗಗಳಲ್ಲಿ ಘರ್ಷಣೆ ಆರಂಭಗೊಂಡರೂ

ಘರ್ಷಣೆ ಬಲಗೊಂಡಂತೆಯೇ ಈ ವಿಭಾಗವು ಅವರ ವಿರೋಧಿಗಳಿಗಿಂತ ಹೆಚ್ಚು ಶ್ರೇಷ್ಠರು, ಯೋಗ್ಯರು ಮತ್ತು ಸದಾಚಾರಿಗಳೆಂದು ಸಾಬೀತಾಗುವುದು. ದೇವ ಸೃಷ್ಟಿಗಳ ಒಳಿತಿನ ವಿನಾ ತಮ್ಮ ಮುಂದೆ ಅನ್ಯ ಉದ್ದೇಶವಿಲ್ಲವೆಂದು ಅವರು ಕಾರ್ಯತಃ ಸಾಬೀತು ಪಡಿಸಿದರು. ಅವರ ವೈರವು ವಿರೋಧಿಗಳ ವ್ಯಕ್ತಿತ್ವ ಅಥವಾ ಸಮುದಾಯದೊಂದಿಗಿರಲಾರದು. ಬದಲಾಗಿ ಅವರ ದುರಾಚಾರ ದುಷ್ಕರ್ಮಿಗಳ ವಿರುದ್ಧವಿರುವುದು. ಅದನ್ನು ಅವರು ತೊರೆದರೆ ತಮ್ಮ ರಕ್ತಕ್ಕಾಗಿ ಹಾತೊರೆಯುತ್ತಿರುವ ವೈರಿಗಳನ್ನು ಕೂಡಾ ಅವರು ಆಲಿಂಗಿಸಲು ಸಿದ್ಧರಾಗಿರುತ್ತಾರೆ. ವಿರೋಧಿಗಳ ಸಂಪತ್ತು, ವ್ಯಾಪಾರ, ಉದ್ದಿಮೆಗಳ ಬದಲಾಗಿ ಕೇವಲ ಅವರ ಆಧ್ಯಾತ್ಮಿಕ ಮತ್ತು ನೈತಿಕ ಯಶಸ್ಸನ್ನು ಬಯಸುತ್ತಾರೆ. ಅದು ಸಾಧಿಸಲ್ಪಟ್ಟರೆ ಅವರಿಂದ ಬೇರೇನನ್ನೂ ಅವರು ಆಶಿಸುವುದಿಲ್ಲ. ಅವರು ಅತಿ ಕಠಿಣ ಪ್ರಸಂಗಗಳಲ್ಲಿಯೂ ಸುಳ್ಳು, ಮೋಸ, ವಂಚನೆ, ಕುತಂತ್ರ ಮುಂತಾದ ದುಷ್ಟ ಮಾರ್ಗಗಳನ್ನು ಅವಲಂಬಿಸುವುದಿಲ್ಲ. ಅವರು ಕುತಂತ್ರಗಳಿಗೆ ಪ್ರತ್ಯುತ್ತರವಾಗಿ ಉತ್ತಮ ತಂತ್ರವನ್ನೇ ಕೈಗೊಳ್ಳುತ್ತಾರೆ. ಅವರು ಪ್ರತೀಕಾರ ಭಾವನೆಯಿಂದ ಅನ್ಯಾಯಗಳಿಗೆ ಹೊರಡುವುದಿಲ್ಲ. ಅವರು ತಮ್ಮ ಹೋರಾಟವು ತುತ್ತ ತುದಿಗೇರಿದ ಸಂದರ್ಭದಲ್ಲಿಯೂ ತಾವು ಯಾವುದರ ಪ್ರಚಾರಕ್ಕಾಗಿ ಹೊರಟಿರುವರೋ ಆ ಸಿದ್ಧಾಂತಗಳನ್ನು ಅವರು ತ್ಯಜಿಸುವುದಿಲ್ಲ. ಅವರು ಸತ್ಯನಿಷ್ಠೆ, ವಚನ ಪಾಲನೆ ಮತ್ತು ಅತ್ಯುತ್ತಮ ವರ್ತನೆಗಳಲ್ಲಿಯೇ ಸದಾ ಅಚಲರಾಗಿರುತ್ತಾರೆ. ಅವರು ನಿಷ್ಪಕ್ಷವಾಗಿ ನ್ಯಾಯಪಾಲಿಸಿ ಆ ಸತ್ಯದ ಮಾನದಂಡದಿಂದಲೇ ತಮ್ಮನ್ನು ಅಳೆದುಕೊಳ್ಳುತ್ತಾರೆ.

ವಿರೋಧಿಗಳ, ವ್ಯಭಿಚಾರಿ, ಮದ್ಯಪಾನಿ, ಕ್ರೂರಿ ಮತ್ತು ಕಲ್ಲು ಹೃದಯದ ಸೇನೆಯೊಂದಿಗೆ ಪ್ರಸ್ತುತ ವಿಭಾಗದ ದೇವಭಕ್ತಿ, ಪರಿಶುದ್ಧ, ದೇವಾರಾದಕ, ನಿಷ್ಕಳಂಕ, ಕರುಣಾಳು ಮತ್ತು ಉದಾರಿಗಳಾದ ಸೈನಿಕರು ಸಂಘರ್ಷಿಸುವಾಗ ಅವರ ವ್ಯಕ್ತಿತ್ವವು ಶತ್ರು ಸೇನೆಯ ಪೈಶಾಚಿಕ ಹಾಗೂ ಕಿರಾತವರ್ತನೆಗಿಂತ ಉತ್ಕೃಷ್ಟವಾಗಿ ಎದ್ದು ತೋರುವುದು. ವೈರಿ ಸೇನೆಯ ಗಾಯಾಳು ಅಥವಾ ಸೆರೆಯಾಳುಗಳು ಅವರ ಅಧೀನವಾದರೆ ಅವರಲ್ಲಿ ಸರ್ವ ವ್ಯಾಪಕವಾಗಿರುವ ಒಳಿತು, ಪರಿಶುದ್ಧಿ, ಸದಾಚಾರ, ಸದ್ಗುಣ ಮತ್ತು ಪ್ರಶಾಂತವಾದ ವಾತಾವರಣದಿಂದ ಕೈದಿಗಳ ಕಶ್ಮಲ ಆತ್ಮವು ಸುಧಾರಣೆಯಾಗಲಾರಂಭಿಸುವುದು. ತದ್ವಿರುದ್ಧವಾಗಿ ಇವರೇ ಶತ್ರುಗಳ ಸೆರೆಯಾದರೆ ಅವರ ಅಂಧಕಾರಮಯ ವಾತಾವರಣದಲ್ಲಿ ಇವರ ಮಾನವೀಯ ಮೌಲ್ಯವು ಬೆಳಗುವುದು. ಅವರು ಯಾವುದಾದರೂ ಪ್ರದೇಶವನ್ನು ವಶಪಡಿಸಿಕೊಂಡರೆ ಸೇಡಿನ ಬದಲಾಗಿ ಕ್ಷಮೆ, ಅಕ್ರಮ-ಅನ್ಯಾಯಗಳಿಗೆ ಬದಲಾಗಿ ನ್ಯಾಯ-ಔದಾರ್ಯ, ಕಠೋರ ಮನಸ್ಸಿನ ಬದಲಾಗಿ ಅನುಕಂಪ, ಅಹಂಕಾರದ ಬದಲು ವಿನಯ, ಅವಾಚ್ಯ ಮತ್ತು ಆರೋಪಗಳ ಬದಲಿಗೆ ಒಳಿತಿನ ಕರೆ, ಕುಪ್ರಚಾರದ ಬದಲಾಗಿ ಸತ್ಯಸಿದ್ಧಾಂತದ ಪ್ರಚಾರವನ್ನು ಕಂಡು ಆ ನಾಡಿನ ಬದ್ಧ ವೈರಿಗಳೂ ವಿಸ್ಮಿತರಾಗುವರು. ಯಾಕೆಂದರೆ ವಿಜಯೋಲ್ಲಾಸದಿಂದ ಆಗಮಿಸಿದ ಯೋಧರು ಅವರ ಸ್ತ್ರೀಯರನ್ನು ಬಯಸುವುದಿಲ್ಲ. ಅಡಗಿಸಿಟ್ಟ ಸಂಪತ್ತನ್ನು ಅವರು ಹುಡುಕಾಡುವುದಿಲ್ಲ. ಅಲ್ಲಿನ ಕೈಗಾರಿಕಾ ರಹಸ್ಯಗಳನ್ನು ತಪಾಸಣೆ ಮಾಡುವುದಿಲ್ಲ. ಅಲ್ಲಿನ ಜನರ ಸಾಂಪತ್ತಿಕ ಬಲವನ್ನು ನಾಶಪಡಿಸುವುದಿಲ್ಲ. ಅವರ ಸಾಮಾಜಿಕ ಹಾಗೂ ಸಾರ್ವತ್ರಿಕ ನೀತಿಗೆ ಧಕ್ಕೆ ಮಾಡುವುದಿಲ್ಲ. ಆ ಯೋಧರು ಪ್ರಪ್ರಥಮವಾಗಿ ತಮ್ಮ ವಶವಾಗಿರುವ ಪ್ರದೇಶದ ನಿವಾಸಿಗಳ

ಮಾನಕ್ಕೆ ಧಕ್ಕೆಯುಂಟಾಗಬಾರದೆಂದು ಆಲೋಚಿಸುತ್ತಾರೆ. ಯಾರ ಸಂಪತ್ತೂ ನಾಶವಾಗಬಾರದು. ನ್ಯಾಯಬದ್ಧ ಹಕ್ಕುಗಳು ತಡೆಯಲ್ಪಡಬಾರದು. ಯಾವ ದುರ್ನಡತೆಯ ಅವರಲ್ಲಿ ಹುಟ್ಟಬಾರದು. ಸಾಮಾಜಿಕ ಅನ್ಯಾಯ, ಅತ್ಯಾಚಾರಗಳು ಯಾವ ರೂಪದಲ್ಲಿಯೂ ಅಲ್ಲಿ ತಲೆಯೆತ್ತಬಾರದು ಮುಂತಾದ ವಿಷಯಗಳನ್ನು ಅವರು ಗಮನಿಸುತ್ತಾರೆ.

ಆದರೆ ತದ್ವಿರುದ್ಧವಾಗಿ ಅವರ ವಿರೋಧಿಗಳು ಯಾವುದಾದರೂ ಪ್ರದೇಶವನ್ನು ವಶಪಡಿಸಿಕೊಂಡರೆ ಅಲ್ಲಿನ ನಿವಾಸಿಗಳು ಅವರ ಅನ್ಯಾಯ ಅತ್ಯಾಚಾರಗಳಿಗೆ ಬಲಿಯಾಗುತ್ತಾರೆ. ಪ್ರಸ್ತುತ ಎರಡು ವಿಭಾಗಗಳ ಹೋರಾಟಗಳಲ್ಲಿರುವ ಅಜಗಜಾಂತರವನ್ನು ನೀವೇ ಊಹಿಸಿರಿ. ಇಂತಹ ಹೋರಾಟಗಳಲ್ಲಿ ಅಜೇಯವಾಗಿ ಎದ್ದು ನಿಲ್ಲುವ ಮಾನವೀಯತೆಯು ಅತ್ಯಲ್ಪ ಲೌಕಿಕ ಸಾಧನ ಸವಲತ್ತುಗಳಿದ್ದರೂ ವಿರೋಧಿಗಳ ಉಕ್ಕಿನ ಕೋಟೆಯ ಪೈಶಾಚಿಕತೆಯನ್ನು ಕೊನೆಗೆ ಸೋಲಿಸಿ ಬಿಡುವುದು ಖಚಿತ. ಸದ್ಗುಣ ಸಂಪನ್ನ ವರ್ತನೆಯ ಆಯುಧವು ವೈರಿಗಳ ಬಂದೂಕು ಮತ್ತು ಫಿರಂಗಿಗಳಿಗಿಂತ ದೂರ ಸಿಡಿಯುವ ಆಯುಧಗಳಾಗಿ ಪರಿಣಮಿಸುವುದು. ಹೋರಾಟವು ನಡೆಯುತ್ತಿರುವಾಗಲೇ ಶತ್ರುಗಳು ಮಿತ್ರರಾಗಿ ದೇಹಗಳಿಗಿಂತ ಮುಂಚೆ ಹೃದಯವು ಶರಣಾಗಿ, ಅನೇಕ ಪ್ರದೇಶಗಳು ಹೋರಾಟವಿಲ್ಲದೆಯೇ ಅಧೀನವಾಗುವುದು. ಈ ಉತ್ತಮ ವಿಭಾಗವು ಬೆರಳೆಣಿಕೆಯಷ್ಟಿರುವ ಸಂಘಟನೆ ಮತ್ತು ಅತ್ಯಲ್ಪವಾದ ಸಾಧನ ಸವಲತ್ತುಗಳೊಂದಿಗೆ ಕಾರ್ಯಾರಂಭಿಸಿದಾಗ, ಅವರಿಗೆ ವೈರಿಗಳ ಶಿಬಿರದಿಂದಲೇ ಸೇನಾ ನಾಯಕರು, ಯೋಧರು, ತಂತ್ರಜ್ಞಾನಿಗಳು, ಆಯುಧ ಸಹಾಯ, ಯುದ್ಧ ಸಾಮಾಗ್ರಿಗಳೆಲ್ಲ ಲಭಿಸುತ್ತಲಿರುವುವು.

ನನ್ನ ಈ ಮಾತುಗಳು ಕೇವಲ ಗುಮಾನಿಯಲ್ಲ. ಪ್ರವಾದಿ ಮುಹಮ್ಮದ್(ಸ) ಮತ್ತು ಸತ್ಯ ಸಂಧರಾದ ಖಲೀಫರ ಪ್ರತಿಷ್ಠಿತ ಪಾವನ ಕಾಲದ ಐತಿಹಾಸಿಕ ಉದಾಹರಣೆಗಳು ನಿಮ್ಮ ಮುಂದಿದ್ದರೆ ಅಂದು ಹಾಗೆಯೇ ಸಂಭವಿಸಿತ್ತೆಂಬುದನ್ನು ನೀವು ಸ್ಪಷ್ಟವಾಗಿ ಮನಗಾಣಬಹುದು. ಅದನ್ನು ಇನ್ನೊಮ್ಮೆ ಪರೀಕ್ಷಿಸಿ ನೋಡುವ ಧೈರ್ಯ, ಸ್ಥೈರ್ಯ ಮತ್ತು ದೃಢ ನಿರ್ಧಾರ ಯಾರಲ್ಲಾದರೂ ಇದ್ದರೆ ಅದೇ ಪರಿಣಾಮ ಇಂದು ಮರುಕಳಿಸಬಹುದು.

"ಬಾಂಧವರೇ! ನೈತಿಕ ಶಕ್ತಿಯೇ ಶಕ್ತಿಯ ನೈಜ ಮೂಲ. ಮೂಲ ಮಾನವೀಯ ನೈತಿಕತೆ ಬಲ ಪಡೆದಿರುವ ಒಂದು ಸುಸಂಘಟಿತ ವಿಭಾಗವು ಲೋಕದಲ್ಲಿ ಅಸ್ತಿತ್ವಕ್ಕೆ ಬಂದರೆ ಅವರ ಉಪಸ್ಥಿತಿಯಲ್ಲಿ ಬೇರೆ ವಿಭಾಗವು ಲೋಕ ನಾಯಕತ್ವ ಸೂತ್ರವನ್ನು ಸ್ವಾಧೀನ ಪಡಿಸುವುದು ಬೌದ್ಧಿಕವಾಗಿಯೂ ಸ್ವಾಭಾವಿಕವಾಗಿಯೂ ಅಸಾಧ್ಯವೆಂಬ ಸತ್ಯವನ್ನು ನೀವು ಈಗಾಗಲೇ ನನ್ನ ಭಾಷಣದಿಂದ ಮನಗಂಡಿರುವಿರೆಂದು ಭಾವಿಸುತ್ತೇನೆ. ಹಾಗೆಯೇ ಮುಸ್ಲಿಮರ ಶೋಚನೀಯ ಅಧಃಪತನದ ನೈಜ ಕಾರಣವೇನೆಂದು ನೀವು ಊಹಿಸಿರಬಹುದು. ಲೌಕಿಕ ಸಾಧನ ಸವಲತ್ತುಗಳನ್ನೂ ಮೂಲ ಉಪಕರಣಗಳನ್ನೂ ಬಳಸಿಕೊಳ್ಳದ ಮತ್ತು ಮಾನವೀಯ ನೈತಿಕ ಮೌಲ್ಯಗಳನ್ನು ಮೈಗೂಡಿಸದ ಹಾಗೂ ಸಾಮಾಜಿಕವಾಗಿ ಇಸ್ಲಾಮಿ ನೈತಿಕತೆಯನ್ನು ಹೊಂದಿರದಂಥವರಿಗೆ ನಾಯಕತ್ವ ಪದವಿಗೇರಲು ಸಾಧ್ಯವಿಲ್ಲವೆಂಬುದು ಸ್ಪಷ್ಟ. ನೈತಿಕ ಮೌಲ್ಯಗಳನ್ನು ಅವಲಂಬಿಸಿ ಲೌಕಿಕ ಉಪಕರಣಗಳನ್ನು ಬಳಸಿಕೊಳ್ಳುವುದರಲ್ಲಾದರೂ ಮುಂದಿದ್ದು ಲೋಕ ನಿಯಂತ್ರಣಕ್ಕೆ ಇತರರಿಗಿಂತ ನಾವು ಅರ್ಹರೆಂದು ತೋರಿಸಿದ ಭ್ರಷ್ಟ ಜನರಿಗೆ ಮುಸ್ಲಿಮರಿಗಿಂತ ಆದ್ಯತೆ ನೀಡಿರುವುದು ಅಲ್ಲಾಹನ ನಿಶ್ಚಿತ ನಿಷ್ಪಕ್ಷ ಕಾನೂನಿನ ಅನಿವಾರ್ಯ ಪರಿಣಾಮವಾಗಿದೆ. ಈ

ಬಗ್ಗೆ ನಾವು ನಮ್ಮನ್ನೇ ದೂರಿಕೊಳ್ಳಬೇಕೇ ವಿನಾ ದೇವನ ನೀತಿ ನಿಯಮಗಳನ್ನಲ್ಲ. ಇಂತಹ ದೂಷಣೆಯ ಪರಿಣಾಮವು ನಾಯಕತ್ವದಿಂದ ಅಧೀನತೆಗೆ, ಮಾರ್ಗದರ್ಶಕ ಪದವಿಯಿಂದ ಅನುಕರಣೆಯ ಪತನಕ್ಕೆ ತಳ್ಳಿರುವ ಈ ಲೋಪದೋಷಗಳನ್ನು ನಾವು ಇನ್ನು ಮುಂದಾದರೂ ದೂರೀಕರಿಸಲು ಪ್ರಯತ್ನಿಸುವುದಾಗಿದೆ."

ಈ ಸಂದರ್ಭದಲ್ಲಿ ಇಸ್ಲಾಮಿ ನೈತಿಕ ಸಿದ್ಧಾಂತಗಳ ಬುನಾದಿಗಳನ್ನು ಸುಸ್ಪಷ್ಟವಾಗಿ ಮತ್ತು ಸವಿವರವಾಗಿ ನಿಮ್ಮ ಮುಂದಿಡುವುದು ಸೂಕ್ತವೆಂದು ಭಾವಿಸುತ್ತೇನೆ. ಯಾಕೆಂದರೆ ಈ ಬಗ್ಗೆ ಮುಸ್ಲಿಮರ ಕಲ್ಪನೆಗಳು ಸಾಮಾನ್ಯವಾಗಿ ಶೋಚನೀಯ ಗೋಜಲಿಗೆ ಸಿಲುಕಿದೆಯೆಂದು ನನಗೆ ತಿಳಿದಿದೆ. ಆದ್ದರಿಂದ ನೈಜ ಇಸ್ಲಾಮಿ ನೈತಿಕತೆಗಳೆಂದರೇನೆಂದೂ ಸುಧಾರಣೆ ಮತ್ತು ಸಂರಕ್ಷಣೆಗಾಗಿ ಯಾವೆಲ್ಲ ವಿಷಯಗಳನ್ನು ಯಾವ ಕ್ರಮದಲ್ಲಿ ಕಾರ್ಯಕರ್ತನಲ್ಲಿ ಬೆಳೆಸಬೇಕೆಂದೂ ತಿಳಿದಿರುವವರು ತೀರಾ ವಿರಳ.

## ಇಸ್ಲಾಮಿ ನೈತಿಕತೆಯ ನಾಲ್ಕು ಹಂತಗಳು

ಪವಿತ್ರ ಕುರ್‌ಆನ್ ಮತ್ತು ಹದೀಸ್‌ನ ಆಧಾರದಲ್ಲಿ ಇಸ್ಲಾಮಿ ನೈತಿಕತೆಗಳೆಂದು ವ್ಯಾಖ್ಯಾನಿಸಲಾಗುವ ವಿಷಯಗಳಿಗೆ ನಾಲ್ಕು ಹಂತಗಳಿವೆ- ಈಮಾನ್ (ವಿಶ್ವಾಸ), ಇಸ್ಲಾಮ್(ಅನುಸರಣೆ), ತಕ್ವಾ(ದೇವ ಭಕ್ತಿ), ಇಹ್ಸಾನ್(ಔದಾರ್ಯ) ಈ ನಾಲ್ಕು ಹಂತಗಳು ಸರದಿಯಂತೆ ಸ್ವಾಭಾವಿಕ ಕ್ರಮದಲ್ಲಿದೆ. ಅನಂತರದ ಪ್ರತಿಯೊಂದು ಹಂತವೂ ಅದರ ಹಿಂದಿರುವ ಹಂತದಿಂದ ಮೂಡುವುದಲ್ಲದೇ ಅನಿವಾರ್ಯವಾಗಿ ಅದನ್ನೇ ಅವಲಂಬಿಸಿರುವುದು. ಕೆಳಗಿನ ಹಂತವು ಬಲಿಷ್ಠ ಮತ್ತು ಪರಿಪಕ್ವವಾಗುವುದಕ್ಕಿಂತ ಮುಂಚೆ ಎರಡನೇ ಹಂತವನ್ನು ನಿರ್ಮಿಸುವ ಕುರಿತು ಊಹಿಸಲೂ ಸಾಧ್ಯವಿಲ್ಲ. ಈ ಸಂಪೂರ್ಣ ಕಟ್ಟಡದಲ್ಲಿ ಈಮಾನಿಗೆ ಅಡಿಪಾಯದ ಸ್ಥಾನವಿದೆ. ಅಡಿಪಾಯದ ಮೇಲೆ ಇಸ್ಲಾಮೆಂಬ ಪ್ರಥಮ ಅಂತಸ್ತನ್ನು ಕಟ್ಟಲಾಗಿದೆ. ತರುವಾಯ ತಕ್ವಾ ಮತ್ತು ಕೊನೆಗೆ ಇಹ್ಸಾನ್ (ಔದಾರ್ಯ) ಅಂತಸ್ತು ಮೂಡಿಬರುತ್ತದೆ. ಈಮಾನ್ ಇಲ್ಲದಿದ್ದರೆ ಇಸ್ಲಾಮ್, ತಕ್ವಾ ಮತ್ತು ಇಹ್ಸಾನ್‌ಗೆ ಅವಕಾಶವಿಲ್ಲ. ಒಂದು ವೇಳೆ ಈಮಾನ್ ದುರ್ಬಲವಾಗಿದ್ದರೆ ಮೇಲಿನ ಅಂತಸ್ತುಗಳ ಭಾರವನ್ನು ಹೊರಲು ಅದು ಶಕ್ತವಾಗಲಾರದು. ಇನ್ನು ಅದರ ಮೇಲೆ ಬೇರೆ ಅಂತಸ್ತುಗಳನ್ನು ಕಟ್ಟಿದರೂ ಅದು ಬುಡ ಭದ್ರವಿಲ್ಲದೇ ಅಲುಗಾಡುತ್ತಲಿರುವುದು. ಒಂದು ವೇಳೆ ಈಮಾನ್ ಪರಿಮಿತವಾಗಿದ್ದರೆ ಆ ವಲಯದಲ್ಲಿಯೇ ಇಸ್ಲಾಮ್, ತಕ್ವಾ ಮತ್ತು ಇಹ್ಸಾನ್‌ಗಳು ಸೀಮಿತವಾಗುವುದು. ಆದ್ದರಿಂದ ಈಮಾನ್ ಸಂಪೂರ್ಣ ಸರಿ, ಪರಿಪಕ್ವ ಮತ್ತು ಸಮಗ್ರವಾಗುವ ತನಕ ಇಸ್ಲಾಮ್, ತಕ್ವಾ ಮತ್ತು ಇಹ್ಸಾನ್‌ನ ನಿರ್ಮಾಣದ ಕುರಿತು ಆಲೋಚಿಸಲು ಧರ್ಮದ ಕುರಿತು ತಿಳಿದಿರುವ ಯಾರಿಗೂ ಸಾಧ್ಯವಿಲ್ಲ. ಹೀಗೆಯೇ ತಕ್ವಾಕ್ಕಿಂತ ಮುಂಚೆ ಇಸ್ಲಾಮನ್ನು, ಇಹ್ಸಾನ್‌ಗಿಂತ ಮುಂಚೆ ತಕ್ವಾವನ್ನು ಸರಿಪಡಿಸಿ ಪರಿಪಕ್ವಗೊಳಿಸಿ ಸಮಗ್ರಗೊಳಿಸಬೇಕಾದುದು ಅಗತ್ಯವಾಗಿದೆ. ಆದರೆ ಸ್ವಾಭಾವಿಕ ಹಾಗೂ ಮೂಲಭೂತವಾದ ಈ ಕ್ರಮವನ್ನು ನಿರ್ಲಕ್ಷಿಸಿ ಈಮಾನ್ ಮತ್ತು ಇಸ್ಲಾಮನ್ನು ಪೂರ್ಣಗೊಳಿಸದೆಯೇ ಕೆಲವರು 'ತಕ್ವಾ' ಮತ್ತು 'ಇಹ್ಸಾನ್'ನ ಕುರಿತು ಮಾತಿಗಾರಂಭಿಸುವುದನ್ನು ನಾವು ಹಲವೊಮ್ಮೆ ಕಾಣುತ್ತಿದ್ದೇವೆ. ಆದರೆ ಇಂದು ಜನಮನಗಳಲ್ಲಿ

ಸಾಮಾನ್ಯವಾಗಿ ಈಮಾನ್ ಮತ್ತು ಇಸ್ಲಾಮಿನ ಕುರಿತು ಅತ್ಯಂತ ಸಂಕುಚಿತ ಕಲ್ಪನೆಯಿದೆಯೆಂಬುದು ಅದಕ್ಕಿಂತ ಶೋಚನೀಯವಾಗಿದೆ. ಆದ್ದರಿಂದ ಅವರು ಕೆಲವು ವೇಷಭೂಷಣ, ವಸ್ತ್ರಧಾರಣೆ, ನಡವಳಿಕೆ, ತಿನ್ನುವ, ಕುಡಿಯುವ ಕ್ರಮವೇ ಮುಂತಾದ ಕೆಲವು ವಿಷಯಗಳನ್ನು ಒಂದು ನಿರ್ದಿಷ್ಟ ರೂಪದಲ್ಲಿ ಬೆಳೆಸಿಕೊಂಡರೆ 'ತಕ್ವಾ'ಪೂರ್ಣ ಗೊಂಡಿತೆಂದು ಭಾವಿಸುತ್ತಾರೆ. ತರುವಾಯ ಆರಾಧನೆಗಳಲ್ಲಿ ಕೆಲವು ನಫಿಲ್, ದಿಕ್ರ್ ಮತ್ತು ಔರಾದ್ ಹಾಗೂ ಅದೇ ರೀತಿಯ ಇತರ ಕೆಲವು ಆಚಾರಗಳನ್ನು ಮೈಗೂಡಿಸುವುದರಿಂದ 'ಇಹ್ಸಾನ್'ನ ಉನ್ನತ ಸ್ಥಾನ ದೊರೆಯುವುದೆಂದು ಭಾವಿಸುತ್ತಾರೆ. ಆದರೆ, ವಾಸ್ತವದಲ್ಲಿ ಅವರ ಜೀವನವನ್ನು ಪರಿಶೀಲಿಸಿದರೆ ಅಂತಹ ತಕ್ವಾ ಮತ್ತು ಇಹ್ಸಾನ್‌ಗಳಿರುತ್ತಾ ಅವರ ಈಮಾನ್ ಇನ್ನೂ ಸರಿಯಾಗಿ ಪಕ್ವಗೊಂಡಿಲ್ಲವೆಂಬುದಕ್ಕೆ ಸೂಕ್ತ ನಿದರ್ಶನಗಳು ಕಂಡುಬರುತ್ತವೆ. ಈ ಲೋಪಗಳು ಅಸ್ತಿತ್ವದಲ್ಲಿರುವ ತನಕ ಇಸ್ಲಾಮಿ ನೈತಿಕತೆಗಳ ಸರಣಿ ಪೂರ್ಣಗೊಳ್ಳುವಲ್ಲಿ ಯಶಸ್ವಿಯಾದೀತೆಂದು ನಿರೀಕ್ಷಿಸುವಂತಿಲ್ಲ. ಆದ್ದರಿಂದ ಈಮಾನ್, ಇಸ್ಲಾಮ್, ತಕ್ವಾ, ಇಹ್ಸಾನ್ ಎಂಬೀ ನಾಲ್ಕು ಹಂತಗಳನ್ನು ಚೆನ್ನಾಗಿ ಗ್ರಹಿಸುವುದರೊಂದಿಗೆ ಅವುಗಳ ಸ್ವಾಭಾವಿಕ ಕ್ರಮವನ್ನು ತಿಳಿದಿರಬೇಕಾದುದು ಈ ಸಂದರ್ಭದಲ್ಲಿ ಅತ್ಯಗತ್ಯವಾಗಿದೆ.

## ಈಮಾನ್ (ವಿಶ್ವಾಸ)

ಇಸ್ಲಾಮಿ ಜೀವನದ ಮೂಲ ಬುನಾದಿಯಾಗಿರುವ 'ಈಮಾನ್'ನ ಕುರಿತು ಪ್ರಥಮವಾಗಿ ನೋಡೋಣ. ತೌಹೀದ್ (ಏಕದೇವತ್ವ) ಮತ್ತು ರಿಸಾಲತ್ (ಪ್ರವಾದಿತ್ವ) ಗಳನ್ನು ಒಪ್ಪಿಕೊಳ್ಳುವುದರ ಹೆಸರೇ 'ಈಮಾನ್' ಎಂದು ಎಲ್ಲರಿಗೂ ತಿಳಿದಿದೆ. ಒಬ್ಬನು ಇದನ್ನು ಒಪ್ಪಿಕೊಳ್ಳುವ ಮೂಲಕ ಇಸ್ಲಾಮಿ ವಲಯದೊಳಗಿನ ಪ್ರವೇಶಕ್ಕೆ ನಿಗದಿಪಡಿಸಿರುವ ನಿಯಮ ನಿಬಂಧನೆಗಳನ್ನು ಪೂರ್ಣಗೊಳಿಸುತ್ತಾನೆ. ಅವನೊಂದಿಗೆ ಮುಸ್ಲಿಮರಂತೆಯೇ ವ್ಯವಹರಿಸಲಾಗುವುದು. ಆದರೆ ಕೇವಲ ತಾತ್ವಿಕ ಅಗತ್ಯದ ಪೂರೈಕೆಗೆ ಸಲ್ಲುವ ಈ ಒಪ್ಪಿಗೆಯು ಇಸ್ಲಾಮಿ ಜೀವನವೆಂಬ ಮೂರಂತಸ್ತಿನ ಕಟ್ಟಡದ ಅಡಿಪಾಯವಾಗುವಷ್ಟು ಬಲಿಷ್ಠವಾಗಿರುವುದೇ? ಸಾಮಾನ್ಯವಾಗಿ ಹಾಗೆಯೇ ಭಾವಿಸಲಾಗುತ್ತದೆ. ಆದ್ದರಿಂದಲೇ ಪ್ರಸ್ತುತ ಒಪ್ಪಿಗೆಯು ಸಾಕ್ಷಾತ್ಕಾರಗೊಂಡೊಡನೆಯೇ ಅದರ ಮೇಲೆ ವ್ಯಾವಹಾರಿಕ ಇಸ್ಲಾಮ್, ತಕ್ವಾ ಮತ್ತು ಇಹ್ಸಾನ್‌ನ ಕಟ್ಟಡವನ್ನು ನಿರ್ಮಿಸಲು ಅವರು ಅವಸರ ಪಡುತ್ತಾರೆ. ಅಂತಹ ಕಟ್ಟಡಗಳಿಗೆ ಗಾಳಿ ಗೋಪುರಗಳಿಗಿಂತ ಹೆಚ್ಚಿನ ಯಾವ ಮಹತ್ವವೂ ಇರಲಾರದು. ವಾಸ್ತವದಲ್ಲಿ ಒಂದು ಸಮಗ್ರ ಇಸ್ಲಾಮಿ ಜೀವನವನ್ನು ಕಟ್ಟಿ ಬೆಳೆಸಲು ಸಮಗ್ರ, ವಿಶಾಲ ಮತ್ತು ಭದ್ರವಾಗಿರುವ ಈಮಾನ್‌ನ ಅಗತ್ಯವಿದೆ. ಅದರ ಸಮಗ್ರತೆಯಿಂದ ಯಾವುದಾದರೊಂದು ಭಾಗವು ಕಡಿಮೆಯಾದರೆ ಇಸ್ಲಾಮಿ ಜೀವನದ ಆ ಭಾಗದಲ್ಲಿ ನಿರ್ಮಾಣ ಸಾಧ್ಯವಾಗಲಾರದು. ಈಮಾನಿನ ತಳಹದಿಯಲ್ಲಿ ಎಲ್ಲಿ ಲೋಪವಿರುವುದೋ ಅಲ್ಲಿ ಇಸ್ಲಾಮಿ ಜೀವನ ಸೌಧವೂ ದುರ್ಬಲವಾಗುವುದು. ಉದಾಹರಣೆಗೆ ಧರ್ಮದ ಸರ್ವ ಪ್ರಧಾನವಾದ ಅಲ್ಲಾಹನ ಮೇಲಿನ ವಿಶ್ವಾಸವನ್ನು ನೋಡೋಣ- ಅಲ್ಲಾಹನ ಮೇಲಿನ ವಿಶ್ವಾಸದ ಬಾಹ್ಯಸ್ವರೂಪವು ಅದರ ವಿವರಣೆಗಳಿಗೆ ತಲಪುವಾಗ ಅನೇಕ ರೂಪಗಳನ್ನು ತಾಳುವುದನ್ನು ನಾವು ಕಾಣುತ್ತೇವೆ. ಕೆಲವೊಮ್ಮೆ ಆ ವಿಶ್ವಾಸವು ದೇವನಿದ್ದಾನೆ

ಮತ್ತು ಆತ ಏಕಮೇವಾದ್ವಿತೀಯನೆಂಬ ವರೆಗೆ ತಲಪಿ ಕೊನೆಗೊಳ್ಳುತ್ತದೆ. ಕೆಲವೆಡೆ ಅದರ ಮಿತಿಯು ದೇವನು ನಮ್ಮ ಆರಾಧ್ಯ ಮತ್ತು ನಾವು ಆತನನ್ನು ಆರಾಧಿಸಬೇಕೆಂಬಷ್ಟಕ್ಕೆ ತಲಪುತ್ತದೆ. ಇನ್ನು ಕೆಲವೆಡೆ ದೇವನ ಗುಣ ವೈಶಿಷ್ಟ್ಯ ಮತ್ತು ಹಕ್ಕು ಅಧಿಕಾರಗಳ ಕುರಿತಾದ ಕಲ್ಪನೆಯು ಸ್ವಲ್ಪಂಶ ವಿಸ್ತಾರವಾಗಿದ್ದರೂ ಆತನು ಎಲ್ಲಾ ರಹಸ್ಯಗಳನ್ನು ಬಲ್ಲವನು, ಎಲ್ಲವನ್ನೂ ಆಲಿಸುವವನು ಮತ್ತು ನೋಡುವವನು, ಪ್ರಾರ್ಥನೆಗಳನ್ನು ಸ್ವೀಕರಿಸುವವನು, ಬೇಡಿಕೆಗಳನ್ನು ಪೂರೈಸುವವನು, ಆರಾಧನೆಗಳ ಎಲ್ಲಾ ರೂಪಗಳಿಗೂ ಅರ್ಹನಾಗಿದ್ದು ಅದರಲ್ಲಿ ಆತನಿಗೆ ಯಾರೂ ಭಾಗೀದಾರರಿಲ್ಲ. ಧಾರ್ಮಿಕ ವಿಷಯಗಳಲ್ಲಿ ದೇವ ಗ್ರಂಥವೇ ಅಂತಿಮ ಆಧಾರ ಎಂಬ ಮಿತಿಯಿಂದ ಮುಂದೆ ಹೋಗಲಾರದು. ಈ ವಿಭಿನ್ನ ಕಲ್ಪನೆಗಳಿಂದ ಒಂದೇ ರೀತಿಯ ಜೀವನ ವಿಧಾನ ರೂಪು ತಾಳುವುದಿಲ್ಲವೆಂಬುದು ವ್ಯಕ್ತ. ಕಲ್ಪನೆಯು ಪರಿಮಿತವಾಗಿರುವಷ್ಟೇ ಕರ್ಮ ಜೀವನ ಮತ್ತು ನೈತಿಕತೆಯಲ್ಲಿಯೂ ಇಸ್ಲಾಮಿ ವರ್ಣವು ಸೀಮಿತವಾಗಿರುವುದು. ಇಂದಿನ ಸಾಮಾನ್ಯ ಧಾರ್ಮಿಕ ಕಲ್ಪನೆಗಳ ಅನುಸಾರ ಅಲ್ಲಾಹನ ಮೇಲಿನ ವಿಶ್ವಾಸವು ಅತ್ಯಂತ ವಿಸ್ತಾರವಾಗಿರುವೆಡೆಗಳಲ್ಲಿಯೂ ಈ ಸಂಕುಚಿತ ಸ್ಥಿತಿ ಕಂಡು ಬರುತ್ತದೆ. ದೇವ ಧಿಕ್ಕಾರಿಯೊಂದಿಗೂ ದೇವನೊಂದಿಗೂ ಏಕಕಾಲದಲ್ಲಿ ನಿಷ್ಠೆಯಿರಿಸಿ ಕೊಳ್ಳುವ ಅಥವಾ ಇಸ್ಲಾಮಿ ವ್ಯವಸ್ಥೆಯನ್ನೂ ಇಸ್ಲಾಮೇತರ ವ್ಯವಸ್ಥೆಯನ್ನೂ ಬೆಸೆದು ಒಂದು ನೂತನ ಮಿಶ್ರಣವನ್ನು ನಿರ್ಮಿಸುವ ಪ್ರಕ್ರಿಯೆಯು ಅನಂತರವೂ ಉಳಿದು ಕೊಳ್ಳುವುದು. ಹಾಗೆಯೇ ಅಲ್ಲಾಹನ ಮೇಲಿನ ವಿಶ್ವಾಸದ ಸ್ಥಿರತೆಯ ಮಾನದಂಡವು ವಿವಿಧ ಜನರಲ್ಲಿ ವಿಭಿನ್ನವಾಗಿರುವುದು. ಕೆಲವರು ದೇವನನ್ನು ಒಪ್ಪಿಕೊಂಡರೂ ತಮ್ಮ ಅತಿ ಕ್ಷುಲ್ಲಕವಾದ ವಸ್ತುವನ್ನು ದೇವನ ಹೆಸರಲ್ಲಿ ತ್ಯಾಗ ಮಾಡಲು ಸಿದ್ಧರಿರುವುದಿಲ್ಲ. ಕೆಲವರಿಗೆ ಕೆಲವು ವಸ್ತುಗಳಿಗಿಂತ ದೇವನೇ ಮಹತ್ವದ್ದಾಗಿರಬಹುದಾದರೂ ಇತರ ಕೆಲವು ವಸ್ತುಗಳು ದೇವನಿಗಿಂತ ಮಹತ್ವದ್ದಾಗಿರುವುದು. ಕೆಲವರು ತಮ್ಮ ಪ್ರಾಣ, ಸೊತ್ತುಗಳನ್ನು ದೇವನ ಹೆಸರಲ್ಲಿ ಬಲಿ ನೀಡಲು ಸಿದ್ಧರಾಗುತ್ತಾರೆ. ಆದರೆ ತಮ್ಮ ಆಸೆ, ತತ್ವ, ಸಿದ್ಧಾಂತ, ಸ್ಥಾನಮಾನಗಳನ್ನು ಬಲಿಕೊಡಲು ಸಿದ್ಧರಿರುವುದಿಲ್ಲ. ಸಾಮಾನ್ಯವಾಗಿ ಈ ನಿಷ್ಪತ್ತಿಗನುಸಾರವಾಗಿಯೇ ಇಸ್ಲಾಮಿ ಜೀವನದ ಭದ್ರತೆ ಮತ್ತು ದೌರ್ಬಲ್ಯ ನಿರ್ಧರಿತವಾಗುತ್ತದೆ. ಈಮಾನಿನ ಬುನಾದಿಯು ಶಿಥಿಲವಾಗಿರುವೆಡೆಗಳಲ್ಲಿ ಮಾನವನ ಇಸ್ಲಾಮಿ ನೈತಿಕತೆಗೆ ಧಕ್ಕೆಯೊದಗುತ್ತದೆ. ಸಮಗ್ರ ಇಸ್ಲಾಮಿ ಜೀವನವೆಂಬ ಬಲಿಷ್ಠ ಕಟ್ಟಡವನ್ನು ಕಟ್ಟಬೇಕಾದರೆ ಮಾನವನ ವೈಯಕ್ತಿಕ ಮತ್ತು ಸಾಮಾಜಿಕವಾದ ಸಮಗ್ರ ಜೀವನವನ್ನೊಳಗೊಂಡ 'ತೌಹೀದ್'ನ ಅಂಗೀಕಾರದಿಂದ ಮಾತ್ರ ಸಾಧ್ಯ. ಅದರಲ್ಲಿ ಮಾನವನು ತನ್ನನ್ನೂ ತನ್ನ ಸಕಲ ವಸ್ತುಗಳನ್ನೂ ಅಲ್ಲಾಹನದ್ದೆಂದೂ ಪರಿಗಣಿಸಬೇಕು. ತನ್ನ ಹಾಗೂ ಸಂಪೂರ್ಣ ಪ್ರಪಂಚದ ಏಕ ಒಡೆಯ, ಆರಾಧ್ಯ, ಅನುಸರಿಸಲ್ಪಡಬೇಕಾದವ, ಆಜ್ಞೆ ನೀಡುವವ ಮತ್ತು ತಡೆಯುವವ ಅಲ್ಲಾಹನು ಮಾತ್ರ ಎಂಬುದನ್ನು ಅಂಗೀಕರಿಸಬೇಕು. ಆತ ಸನ್ಮಾರ್ಗದ ಮೂಲಕ್ಕಾಗಿ ಕೇವಲ ದೇವನನ್ನೇ ಸ್ವೀಕರಿಸಬೇಕು. ಆತನು ದೇವಾರಾಧನೆಯಿಂದ ವಿಮುಖನಾಗುವುದನ್ನು ಅಥವಾ ಆತನ ಮಾರ್ಗದರ್ಶನವನ್ನು ನಿರ್ಲಕ್ಷಿಸದೆ ಆತನ ವ್ಯಕ್ತಿತ್ವ, ಗುಣ ಮತ್ತು ಅಧಿಕಾರಗಳಲ್ಲಿ ಅನ್ಯರನ್ನು ಯಾವುದೇ ರೀತಿಯಲ್ಲಿ ಪಾಲುಗೊಳಿಸುವುದನ್ನು ದೋಷ ಪೂರ್ಣ ಮತ್ತು ದುರ್ಮಾರ್ಗವೆಂಬ ಸತ್ಯವನ್ನು ಪ್ರಜ್ಞಾಪೂರ್ವಕ ನಂಬಬೇಕು.

ತರುವಾಯ ಪ್ರಸ್ತುತ ಕಟ್ಟಡವನ್ನು ಸುಸ್ಥಿರ ಮತ್ತು ಬಲಿಷ್ಠಗೊಳಿಸಲಿಕ್ಕಾಗಿ ಮಾನವನು ಪೂರ್ಣ ಪ್ರಜ್ಞೆಯೊಂದಿಗೆ ಮತ್ತು ದೃಢ ನಿರ್ಧಾರದಿಂದ ತನ್ನ ಸರ್ವಸ್ವವೂ ಅಲ್ಲಾಹನದೆಂದೂ ಮತ್ತು ಅಲ್ಲಾಹನಿಗಿರುವುದಾಗಿದೆಯೆಂದೂ ತೀರ್ಮಾನಿಸಬೇಕು. ಆತನು ತನ್ನ ಇಷ್ಟಾನಿಷ್ಟದ ಮಾನದಂಡವನ್ನು ಕೊನೆಗೊಳಿಸಿ ಅಲ್ಲಾಹನ ಇಷ್ಟಾನಿಷ್ಟಗಳನ್ನು ಅನುಸರಿಸಬೇಕು. ಆತನು ತನ್ನ ಅಹಂಕಾರವನ್ನು ತೊರೆದು ತತ್ವ ಸಿದ್ಧಾಂತ, ಆಚಾರ-ವಿಚಾರ ಮತ್ತು ಭಾವನೆ- ಕಾಮನೆಗಳನ್ನು ದೇವನು ತನ್ನ ಗ್ರಂಥದ ಮೂಲಕ ನೀಡಿರುವ ಜ್ಞಾನಕ್ಕನುಗುಣವಾಗಿ ಎರಕ ಹೊಯ್ಯಬೇಕು. ದೇವ ನಿಷ್ಠೆಗೆ ಬದ್ಧವಲ್ಲದ ಹಾಗೂ ತದ್ವಿರುದ್ಧವಾದ ಎಲ್ಲ ರೀತಿಯ ನಿಷ್ಠೆ, ಭಕ್ತಿಗಳನ್ನು ಆತನು ತ್ಯಜಿಸಬೇಕು. ಆತನು ತನ್ನ ಹೃದಯದಲ್ಲಿ ದೇವ ಪ್ರೀತಿಗೆ ಅತ್ಯುನ್ನತ ಸ್ಥಾನ ನೀಡಬೇಕು. ದೇವನ ವಿರುದ್ಧ ಸ್ಥಾನವನ್ನು ಬಯಸುವ ಪ್ರತಿಯೊಂದು ಮೂರ್ತಿಯನ್ನು ತನ್ನ ಹೃದಯದಿಂದ ಹೊರಕ್ಕೆಸೆಯಬೇಕು. ತನ್ನ ಪ್ರೀತಿ, ದ್ವೇಷ, ಮೈತ್ರಿ, ವೈರ, ಸಂತೋಷ, ನಿರ್ಲಕ್ಷ್ಯ, ಸಂಧಾನ, ಹೋರಾಟ ಮುಂತಾದ ಎಲ್ಲವನ್ನೂ ಅಲ್ಲಾಹನ ಅಭೀಷ್ಟಕ್ಕೆ ಬದ್ಧಗೊಳಿಸಬೇಕು. ಆತನು ತನ್ನ ದೇಹಕ್ಕೆ ದೇವನು ಬಯಸುವುದನ್ನೇ ಬಯಸುವ, ದೇವನು ದ್ವೇಷಿಸಿದವುಗಳಿಂದ ಪಾರಾಗುವ ತರಬೇತಿಯನ್ನು ನೀಡಬೇಕು. ಇದುವೇ ಅಲ್ಲಾಹನ ಮೇಲೆ ವಿಶ್ವಾಸವಿರಿಸುವುದರ ನೈಜ ತಾತ್ಪರ್ಯವಾಗಿದೆ. ಪ್ರಥಮ ಬುನಾದಿಯಾಗಿರುವ ಈಮಾನೇ ಪ್ರಸ್ತುತ ತಾತ್ಪರ್ಯದಂತೆ ಸಮಗ್ರ ಮತ್ತು ಬಲಿಷ್ಠವಾಗದಿದ್ದರೆ ಆ ಬಳಿಕ ತಕ್ವಾ ಮತ್ತು ಇಹ್ಸಾನ್‌ನ ಸಾಧ್ಯತೆ ಹೇಗಿರುವುದೆಂದು ನೀವೇ ಆಲೋಚಿಸಿ ನೋಡಿರಿ. ಈ ಕೊರತೆಯನ್ನು ಗಡ್ಡದ ಉದ್ದದಿಂದ, ಉಡುಗೆಯ ವಿನ್ಯಾಸದಿಂದ ಅಥವಾ ಜಪಮಾಲೆ ತಿರುಗಿಸುವುದರಿಂದ ಪೂರ್ಣಗೊಳಿಸಲು ಹೇಗೆ ತಾನೇ ಸಾಧ್ಯ?

ಇದರೊಂದಿಗೆ ವಿಶ್ವಾಸಕ್ಕೆ ಸಂಬಂಧಿಸಿದ ಇತರ ವಿಷಯಗಳನ್ನೂ ಹೋಲಿಸಿ ನೋಡಿರಿ- ಜೀವನದ ಎಲ್ಲಾ ವ್ಯವಹಾರಗಳಲ್ಲಿಯೂ ಪ್ರವಾದಿಯನ್ನು ಮಾದರೀ ಪುರುಷನನ್ನಾಗಿ ಒಪ್ಪದ, ಪ್ರವಾದಿಯ ಮಾರ್ಗದರ್ಶಕ್ಕೆ ವಿರುದ್ಧವಾದ, ಅದರಿಂದ ಮುಕ್ತವಾದ ಎಲ್ಲಾ ಮಾರ್ಗದರ್ಶನವನ್ನೂ ಕೈ ಬಿಡದ ತನಕ ಪ್ರವಾದಿಯೊಂದಿಗಿರುವ ವಿಶ್ವಾಸವು ಪೂರ್ಣವಾಗಲಾರದು. ಹಾಗೆಯೇ ಅಲ್ಲಾಹನ ಗ್ರಂಥವು ನಿರ್ದೇಶಿಸುವ ಜೀವನ ಸಿದ್ಧಾಂತದಿಂದ ಹೊರತಾದ ಇತರ ಸಿದ್ಧಾಂತಗಳ ಆಧಿಪತ್ಯದಿಂದ ಸಂತೃಪ್ತರಾಗಿ, ಅಲ್ಲಾಹನು ಅವತೀರ್ಣಗೊಳಿಸಿರುವುದನ್ನು ಅನುಸರಿಸಿ, ಅದನ್ನು ಸಂಪೂರ್ಣ ಲೋಕದ ಜೀವನ ನಿಯಮವಾಗಿ ಮಾರ್ಪಡಿಸಲು ಹೃದಯವು ಹಾತೊರೆಯದಿರುವ ತನಕ ದೇವಗ್ರಂಥದೊಂದಿಗಿನ ವಿಶ್ವಾಸವು ಕೇವಲ ಅಪೂರ್ಣವಾಗಿರುವುದು. ಅಂತೆಯೇ ಇಹಲೋಕಕ್ಕಿಂತ ಪರಲೋಕಕ್ಕೆ ಆದ್ಯತೆ ನೀಡದೆ, ಪರಲೋಕ ಮೌಲ್ಯಗಳ ಬದಲಿಗೆ ಐಹಿಕ ಮೌಲ್ಯಗಳನ್ನು ಕೈ ಬಿಡದೆ, ಪರಲೋಕದ ಕರ್ತವ್ಯ ಪ್ರಜ್ಞೆಯಿಂದ ಜೀವನ ಪಯಣದ ಪ್ರತಿಯೊಂದು ಹೆಜ್ಜೆಯನ್ನು ಮುಂದಿಡಲು ಸನ್ನದ್ಧವಾಗದೆ ಯಾರ ಪರಲೋಕ ವಿಶ್ವಾಸವೂ ಪೂರ್ಣವಾಗದು. ಈ ಬುನಾದಿಗಳೇ ಸಂಪೂರ್ಣ ರೂಪದಲ್ಲಿ ನಿರ್ಮಾಣವಾಗದೆ, ಇಸ್ಲಾಮೀ ಜೀವನದ ಮಹಾ ಸೌಧವು ಸ್ಥಾಪಿತವಾಗಲಾರದು. ಪ್ರಸ್ತುತ ಬುನಾದಿಗಳನ್ನು ಪೂರ್ಣಗೊಳಿಸದೆಯೇ ಇಸ್ಲಾಮೀ ನೈತಿಕತೆಯನ್ನು ಕಟ್ಟಿ ಬೆಳೆಸಬಹುದೆಂದು ಸಾಮಾನ್ಯವಾಗಿ ಭಾವಿಸಲಾಗುತ್ತಿದೆ. ಈ ಭಾವನೆಗಳು ಅನೇಕ ಅನರ್ಥಗಳಿಗೆ ಎಡೆಮಾಡಿ ಕೊಟ್ಟಿದೆ. ಅಲ್ಲಾಹನ ಗ್ರಂಥದ ವಿರುದ್ಧ

ತೀರ್ಪು ನೀಡುವ ನ್ಯಾಯಾಧೀಶ, ಇಸ್ಲಾಮೇತರ ಕಾನೂನುಗಳ ಆಧಾರದಲ್ಲಿ ವಾದ ಮಂಡಿಸುವ ವಕೀಲ, 'ಕುಫ್ರ್' ವ್ಯವಸ್ಥೆಯ ಕೈಕೆಳಗೆ ಜೀವನದ ವ್ಯವಹಾರಗಳನ್ನು ವ್ಯವಸ್ಥೆಗೊಳಿಸುವ ಕಾರ್ಯಕರ್ತ, ಇಸ್ಲಾಮೇತರ ನಾಗರಿಕ- ರಾಜಕೀಯ ಸಿದ್ಧಾಂತಗಳಿಗನುಗುಣವಾಗಿ ಜೀವನವನ್ನು ಕಟ್ಟಿ ಅದನ್ನು ಸಾಕ್ಷಾತ್ಕರಿಸಲಿಕ್ಕಾಗಿ ಹೋರಾಡುವ ನಾಯಕರು ಮತ್ತು ಅನುಯಾಯಿಗಳ ಮುಂದೆ ತಕ್ವಾ ಮತ್ತು ಇಹ್ಸಾನ್‌ನ ಉನ್ನತ ಗುಣಗಳು ಪ್ರಸ್ತುತ ಭಾವನೆಯಂತೆ ಇಂದು ತೆರೆದೇ ಇವೆ. ತಮ್ಮ ಜೀವನದ ಬಾಹ್ಯ ಆಚಾರಗಳಲ್ಲಿ ಕೆಲವು ವಿಶಿಷ್ಟ ರೂಪವನ್ನು ಸ್ವೀಕರಿಸಿ, ಕೆಲವು ನಫಿಲ್, ಔರಾದ್ ಮತ್ತು ದಿಕ್ರ್‌ಗಳನ್ನು ರೂಢಿಗೊಳಿಸುವುದರಲ್ಲೇ ಅವರು ಸಂತೃಪ್ತರಾಗುತ್ತಾರೆ.

## ಇಸ್ಲಾಮ್

ಈಮಾನಿನ ಮೂಲ ಬುನಾದಿಗಳು ಸಂಪೂರ್ಣಗೊಂಡು ಬಲಿಷ್ಠವಾದಾಗ ಇಸ್ಲಾಮೆಂಬ ಕಟ್ಟಡವನ್ನು ಅದರ ಮೇಲೆ ನಿರ್ಮಿಸಬೇಕಾಗಿದೆ. ವಾಸ್ತವದಲ್ಲಿ ಇಸ್ಲಾಮ್ ಎಂದರೆ ಈಮಾನಿನ ಕ್ರಿಯಾ ರೂಪದ ಇನ್ನೊಂದು ಹೆಸರು. ಮರ ಮತ್ತು ಬೀಜದ ಪರಸ್ಪರ ಸಂಬಂಧವೇ ಈಮಾನ್ ಮತ್ತು ಇಸ್ಲಾಮ್‌ಗಳಲ್ಲಿದೆ. ಬೀಜದಲ್ಲಿ ಅಡಕವಾಗಿರುವುದೇ ಮರದ ರೂಪದಲ್ಲಿ ಸಾಕ್ಷಾತ್ಕಾರಗೊಳ್ಳುತ್ತದೆ. ಮರವನ್ನು ಪರೀಕ್ಷಿಸಿ ಬೀಜದ ಗುಣಾವಗುಣಗಳನ್ನು ಸುಲಭದಲ್ಲಿ ತಿಳಿಯಬಹುದು. ಬೀಜವಿಲ್ಲದೆ ಮರವಾಗುವುದೆಂದು ನಮಗೆ ಊಹಿಸಲೂ ಸಾಧ್ಯವಿಲ್ಲ. ಫಲವತ್ತಾದ ಹಸನು ನೆಲದಲ್ಲಿ ಬೀಜ ಬೆಳೆದು ಗಿಡವಾಗದಿರುವುದೂ ಅಸಂಭವ. ಈಮಾನ್ ಮತ್ತು ಇಸ್ಲಾಮಿನ ಸ್ಥಿತಿಯೂ ಹಾಗೆಯೇ ಇದೆ. ಈಮಾನಿರುವೆಡೆಯಲ್ಲಿ ಅದರ ಫಲವು ಮಾನವನ ಕರ್ಮಗಳು, ನೈತಿಕತೆ, ವರ್ತನೆ, ಸಂಬಂಧ, ಪರಿಶ್ರಮ, ಇಷ್ಟಾನಿಷ್ಟಗಳ ಸ್ವರೂಪ, ತ್ಯಾಗಮಾರ್ಗ, ಸಮಯ, ಸಾಮರ್ಥ್ಯ, ಪ್ರತಿಭೆಗಳ ಉಪಯೋಗ ಇತ್ಯಾದಿಗಳಲ್ಲಿ ಮಾತ್ರವಲ್ಲ ಜೀವನದ ಪ್ರತಿಯೊಂದು ಅಂಶದಲ್ಲಿಯೂ ಅದು ಗೋಚರಿಸುವುದು. ಜೀವನದ ಯಾವುದೇ ರಂಗದಲ್ಲಿ ಇಸ್ಲಾಮಿನ ಬದಲಾಗಿ ಇಸ್ಲಾಮೇತರ ಅಂಶ ಕಂಡು ಬಂದರೆ, ಆ ಭಾಗದಲ್ಲಿ ಈಮಾನ್ ಉಳಿದಿಲ್ಲ. ಒಂದು ವೇಳೆ ಉಳಿದಿದ್ದರೂ ಅದು ಸಕ್ರಿಯವಾಗಿಲ್ಲವೆಂದು ದೃಢವಾಗಿ ನಂಬಬಹುದು. ಜೀವನದ ವ್ಯವಹಾರಗಳಲ್ಲಿ ಸಾದ್ಯಂತ ಇಸ್ಲಾಮೇತರ ಚಟುವಟಿಕೆಗಳು ಕಂಡು ಬರುತ್ತಿದ್ದರೆ, ಹೃದಯದಲ್ಲಿ ಈಮಾನ್ ಉಳಿದಿಲ್ಲ ಅಥವಾ ಈಮಾನೆಂಬ ಬೀಜವು ಮೊಳಕೆ ಬರುವಷ್ಟು ನೆಲವು ಫಲವತ್ತಾಗಿಲ್ಲವೆಂದು ಗ್ರಹಿಸಬೇಕು. ಹೃದಯದಲ್ಲಿ ಈಮಾನ್ ಇರುತ್ತಾ ಬದುಕಿನಲ್ಲಿ ಇಸ್ಲಾಮ್ ಸಾಕ್ಷಾತ್ಕಾರವಾಗದಿರಲು ಯಾವ ಕಾರಣವೂ ಇಲ್ಲವೆಂದು ಕುರ್‌ಆನ್ ಮತ್ತು ಹದೀಸ್‌ನ ಆಧಾರದಿಂದ ನಾನು ಮನಗಂಡಿದ್ದೇನೆ.

ತನ್ಮಧ್ಯೆ ಒಬ್ಬ ಸದಸ್ಯರು ಎದ್ದು ನಿಂತು ಈ ರೀತಿ ಪ್ರಶ್ನಿಸಿದರು- "ಈಮಾನ್ ಮತ್ತು 'ಅಮಲ್' (ಕರ್ಮ)ಗಳನ್ನು ನೀವು ಒಂದೇ ಎಂದು ಪರಿಗಣಿಸುತ್ತೀರಾ? ಅವೆರಡಕ್ಕೆ ಪರಸ್ಪರ ಯಾವ ವ್ಯತ್ಯಾಸವೂ ಇಲ್ಲವೇ?" ಅದಕ್ಕೆ ಉತ್ತರವಾಗಿ ಅಮೀರರು ಹೀಗೆಂದರು: ಕರ್ಮಶಾಸ್ತ್ರಜ್ಞರು ಮತ್ತು ವ್ಯಾಖ್ಯಾನಕಾರು ಈ ಬಗ್ಗೆ ನಡೆಸಿರುವ ಚರ್ಚೆಗಳನ್ನು ಸದ್ಯ ಮನಸ್ಸಿನಿಂದ ಹೊರಗಿಟ್ಟು, ಈ ಬಗ್ಗೆ ಕುರ್‌ಆನ್‌ನಿಂದ ತಿಳಿದುಕೊಳ್ಳಲು ಪ್ರಯತ್ನಿಸೋಣ! ಈಮಾನ್ ಮತ್ತು ವಿಶ್ವಾಸ, ಇಸ್ಲಾಮ್ ಅಥವಾ ಕರ್ಮಕ್ಕೆ ಪರಸ್ಪರ ಅಭೇದ್ಯ ಸಂಬಂಧವಿದೆಯೆಂದು ಕುರ್‌ಆನ್‌ನಿಂದ

ಸ್ಪಷ್ಟವಾಗಿ ತಿಳಿದು ಬರುತ್ತದೆ. ಅಲ್ಲಾಹನು ಈಮಾನ್ ಮತ್ತು 'ಅಮಲ್'ಗಳನ್ನು ಪದೇ ಪದೇ ಜತೆಯಾಗಿ ಒತ್ತಿ ಹೇಳಿದ್ದಾನೆ. ಆತನು ತನ್ನ ದಾಸರಿಗೆ ನೀಡಿರುವ ವಾಗ್ದಾನಗಳೆಲ್ಲವೂ ವಿಶ್ವಾಸದಲ್ಲಿ ಮೂಮಿನ್ ಮತ್ತು ಕರ್ಮದಲ್ಲಿ ಮುಸ್ಲಿಮ್ ಆದವರಿಗೆ ಸಂಬಂಧಿಸಿವೆ. ಮುನಾಫಿಕರನ್ನು ಆಕ್ಷೇಪಿಸಿರುವ ಎಲ್ಲಾ ಕಡೆಗಳಲ್ಲಿಯೂ ಅವರ ಕರ್ಮದ ದೋಷಗಳನ್ನು ಅವರ ಈಮಾನಿನ ಕೊರತೆಗೆ ದೃಷ್ಟಾಂತವಾಗಿ ಪ್ರಸ್ತಾಪಿಸಲಾಗಿದೆ. ಕರ್ಮಕ್ಕೆ ಸಂಬಂಧಿಸಿದ ಇಸ್ಲಾಮನ್ನೇ ಆತನ ನೈಜ ಈಮಾನಿನ ದೃಷ್ಟಾಂತವಾಗಿಯೂ ನಿರ್ಧರಿಸಿದ್ದಾನೆ. ಆದರೆ ಕಾನೂನಿನ ದೃಷ್ಟಿಯಲ್ಲಿ ಒಬ್ಬ ವ್ಯಕ್ತಿಯನ್ನು ಸತ್ಯನಿಷೇಧಿಯೆಂದು ನಿರ್ಧರಿಸಿ ಮುಸ್ಲಿಮರಿಂದ ಆತನ ಸಂಬಂಧವನ್ನು ಕಡಿದು ಬಿಡುವ ವಿಚಾರವು ಭಿನ್ನವೆಂಬುದರಲ್ಲಿ ಸಂದೇಹವಿಲ್ಲ. ಈ ಬಗ್ಗೆ ಅತ್ಯಂತ ಜಾಗರೂಕತೆ ಅಗತ್ಯ. ಆದರೆ, ಇಲ್ಲಿ ನಾನು ಇಹಲೋಕದಲ್ಲಿ ಫಿಕ್ಹ್ ಸಂಬಂಧವಾದ ತೀರ್ಪುಗಳಿಗೆ ಸಂಬಂಧಿಸಿದ ಈಮಾನ್ ಮತ್ತು ಇಸ್ಲಾಮ್‌ನ ವಿಚಾರವಾಗಿ ಪ್ರತಿಪಾದಿಸುತ್ತಿರುವುದಲ್ಲ. ಬದಲಾಗಿ ಅಲ್ಲಾಹನಿಂದ ಪರಿಗಣಿಸಲ್ಪಡುವ ಹಾಗೂ ಪರಲೋಕದಲ್ಲಿ ಪ್ರತಿಫಲಗಳು ಗೋಚರವಾಗುವ ಈಮಾನ್ ಮತ್ತು ಇಸ್ಲಾಮಿನ ಬಗ್ಗೆ ನಾನು ಪ್ರತಿಪಾದಿಸುತ್ತೇನೆ. ಕಾನೂನಿನ ದೃಷ್ಟಿಕೋನವನ್ನು ಬಿಟ್ಟು ವಾಸ್ತವಿಕ ದೃಷ್ಟಿಯಿಂದ ಈ ಸಮಸ್ಯೆಯನ್ನು ಅವಲೋಕಿಸಿದರೆ ನಿಮಗೆ ಈ ವಿಷಯ ಖಂಡಿತವಾಗಿಯೂ ಸ್ಪಷ್ಟವಾಗುವುದು. ದೇಹೇಚ್ಛೆಯು ಅಲ್ಲಾಹನ ಇಚ್ಛೆಗಿಂತ ಭಿನ್ನವಾಗಿರುವೆಡೆಯಲ್ಲಿಯೂ, ಅಲ್ಲಾಹನ ನಿಷ್ಠೆಯೊಂದಿಗೆ ಅನ್ಯರ ನಿಷ್ಠೆ ಅಸ್ತಿತ್ವದಲ್ಲಿರುವೆಡೆಯಲ್ಲಿಯೂ ಅಲ್ಲಾಹನ ಧರ್ಮದ ಸಂಸ್ಥಾಪನೆಯ ಬದಲಾಗಿ ಇತರ ಕಾರ್ಯಗಳಲ್ಲಿ ತಲ್ಲೀನವಾಗಿರುವೆಡೆಗಳಲ್ಲಿಯೂ ತ್ಯಾಗ ಪರಿಶ್ರಮಗಳು ಅಲ್ಲಾಹನ ಮಾರ್ಗದ ಬದಲಾಗಿ ಇತರ ಮಾರ್ಗಗಳಲ್ಲಿ ವ್ಯಯವಾಗುತ್ತಿರುವೆಡೆಗಳಲ್ಲಿಯೂ ಈಮಾನಿಗೆ ಹಾನಿ ತಟ್ಟಿದೆ. ಹೊರ ನೋಟಕ್ಕೆ 'ಮುತ್ತಕೀ'ಗಳ ವೇಷ ತೊಟ್ಟರೂ 'ಮುಹ್‌ಸಿನ್'ಗಳ ಕೆಲವು ಆಚಾರಗಳನ್ನು ಯಥಾವತ್ತಾಗಿ ಮೈಗೂಡಿಸುವ ಪ್ರಯತ್ನ ನಡೆದರೂ ಅಪೂರ್ಣವಾದ ಈಮಾನ್‌ನ ಮೇಲೆ 'ತಕ್ವಾ' ಮತ್ತು 'ಇಹ್ಸಾನ್'ನ ಭವನವನ್ನು ಸ್ಥಾಪಿಸಲು ಖಂಡಿತ ಸಾಧ್ಯವಿಲ್ಲ. ಬಾಹ್ಯ ಆಕರ್ಷಕ ರೂಪಗಳು ವಾಸ್ತವಿಕವಾಗಿರುವ ಆತ್ಮದಿಂದ ಮುಕ್ತವಾಗಿದ್ದರೆ ಅದು ಸುರದ್ರೂಪಿಯಾದ ಓರ್ವ ಮಾನವನ ಜಡ ದೇಹಕ್ಕೆ ಸಮ. ಆ ಸುಂದರ ಶವದ ಬಾಹ್ಯ ಅಲಂಕಾರದಿಂದ ವಂಚಿತರಾಗಿ ನಾವು ಅದರಿಂದ ಏನಾದರೂ ನಿರೀಕ್ಷಿಸಿದರೆ ವ್ಯಾವಹಾರಿಕ ಲೋಕದಲ್ಲಿ ಅದರ ಪ್ರಥಮ ಪರೀಕ್ಷೆಯಲ್ಲಿಯೇ ಅದರ ನಿಷ್ಪ್ರಯೋಜಕತೆ ಸ್ಪಷ್ಟವಾಗುವುದು. ಓರ್ವ ಕುರೂಪಿಯಾದ ಮಾನವನು ಒಂದು ಸುಂದರ ಶವಕ್ಕಿಂತ ಎಲ್ಲ ರೀತಿಯಿಂದಲೂ ಉಪಯುಕ್ತನೆಂದು ಅನುಭವದಿಂದ ಸ್ವಯಂ ವೇದ್ಯವಾಗುವುದು. ಬಾಹ್ಯ ಆಕರ್ಷಣೆಯಿಂದ ಸ್ವದೇಹವನ್ನು ತಾತ್ಕಾಲಿಕವಾಗಿ ವಂಚಿಸಬಹುದಾದರೂ ವ್ಯಾವಹಾರಿಕ ಲೋಕದಲ್ಲಿ ಅದು ಸಂಪೂರ್ಣ ನಿಷ್ಫಲವಾಗಿರುವುದು. ಆದ್ದರಿಂದ ಇಹಲೋಕದಲ್ಲಿ ಅಲ್ಲಾಹನ ಧರ್ಮವನ್ನು ಉನ್ನತ ಗೊಳಿಸುವ ಹಾಗೂ ಪರಲೋಕದಲ್ಲಿ ಒಳಿತಿನ ತಟ್ಟೆಯ ಭಾರವನ್ನು ಹೆಚ್ಚಿಸುವ ನೈಜ 'ತಕ್ವಾ' ಮತ್ತು 'ಇಹ್ಸಾನ್'ನ ಬಗ್ಗೆ ನೀವು ಯೋಚಿಸುವುದಿದ್ದರೆ ಈಮಾನೆಂಬ ಅಡಿಪಾಯವನ್ನು ಬಲಿಷ್ಠಗೊಳಿಸಿ ಕರ್ಮದ ಇಸ್ಲಾಮನ್ನು ಅದರ ಮೇಲೆ ಸಂಸ್ಥಾಪಿಸಿದ ಬಳಿಕವೇ ಅದು ಸಾಧ್ಯವೆಂಬುದನ್ನು ಚೆನ್ನಾಗಿ ತಿಳಿದಿರಿ.

## ತಕ್ವಾ (ಭಯಭಕ್ತಿ)

ತಕ್ವಾದ ಕುರಿತು ಚರ್ಚಿಸುವುದಕ್ಕಿಂತ ಮುಂಚಿತವಾಗಿ ವಾಸ್ತವದಲ್ಲಿ 'ತಕ್ವಾ' ಎಂದರೇನೆಂದು ತಿಳಿಯಲು ಪ್ರಯತ್ನಿಸಿರಿ. ತಕ್ವಾ ಎಂದರೆ ಒಂದು ವಿಶಿಷ್ಟ ರೂಪ, ವೇಷ ಭೂಷಣ ಅಥವಾ ಸಂಸ್ಕೃತಿಯ ಹೆಸರಲ್ಲ. ಅದು ಅಲ್ಲಾಹನೊಂದಿಗಿರುವ ಭಯಭಕ್ತಿ ಮತ್ತು ಕರ್ತವ್ಯ ಪ್ರಜ್ಞೆಯಿಂದ ರೂಪತಾಳಿ, ಜೀವನದ ಎಲ್ಲ ರಂಗಗಳಲ್ಲಿಯೂ ಗೋಚರಿಸುವ ವಿಶಿಷ್ಟ ಸ್ಥಿತಿಯ ಹೆಸರಾಗಿದೆ. ಅಲ್ಲಾಹನ ಕುರಿತು ಹೃದಯದಲ್ಲಿ ಭಯಭಕ್ತಿ ಮತ್ತು ದಾಸ್ಯ ಪ್ರಜ್ಞೆಯಿದ್ದು ನಾನು ಅಲ್ಲಾಹನಿಗೆ ಉತ್ತರ ನೀಡಬೇಕಾಗಿದೆಯೆಂಬ ಪ್ರಜ್ಞೆ ಸದಾ ನೆನಪಿನಲ್ಲಿರುವುದೇ ನಿಜವಾದ 'ತಕ್ವಾ'. ಇಹಲೋಕವು ಒಂದು ಪರೀಕ್ಷಾಲಯ. ಅಲ್ಲಾಹನು ನಿರ್ದಿಷ್ಟ ಅವಧಿ ನೀಡಿ ನನ್ನನ್ನು ಇಲ್ಲಿಗೆ ಕಳಿಸಿದ್ದಾನೆ. ನನ್ನ ಐಹಿಕ ಜೀವನ ನಿರ್ವಹಣೆಯನ್ವಯ ಭಾವೀ ಜೀವನವು ರೂಪಿಸಲ್ಪಡುತ್ತದೆ. ನನಗೆ ನೀಡಲಾಗಿರುವ ಈ ಪರಿಮಿತ ಅವಧಿಯಲ್ಲಿ ನಾನು ನನ್ನ ಸಾಮರ್ಥ್ಯ ಮತ್ತು ಪ್ರತಿಭೆಗಳನ್ನು ಹೇಗೆ ಉಪಯೋಗಿಸುತ್ತಿದ್ದೇನೆ, ಅಲ್ಲಾಹನು ನೀಡಿರುವ ಜೀವನ ಸಾಧನಗಳನ್ನು ಹೇಗೆ ಬಳಸುತ್ತಿದ್ದೇನೆ, ಅಲ್ಲಾಹನ ನಿಯಮವು ವಿವಿಧ ರೀತಿಯಲ್ಲಿ ನನ್ನ ಜೀವನದೊಂದಿಗೆ ಜೋಡಿಸಿರುವ ಜನರೊಂದಿಗೆ ನನ್ನ ವರ್ತನೆಯು ಪರಲೋಕಗಳ ಜಯಾಪಜಯಗಳನ್ನು ಅವಲಂಬಿಸಿವೆಯೇ ಮುಂತಾದ ವಿಚಾರಗಳು ಒಬ್ಬ ಮುತ್ತಕೀಯ ನಿರಂತರ ಯೋಚನೆಗೆ ಗ್ರಾಸವಾಗುತ್ತದೆ. ಈ ಪ್ರಜ್ಞೆ ಜಾಗೃತಗೊಂಡ ವ್ಯಕ್ತಿಯ ಹೃದಯವು ಸಕ್ರಿಯವಾಗುತ್ತದೆ. ಅವನ ಇಸ್ಲಾಮಿ ಪ್ರಜ್ಞೆಯ ಬಲ ಹೆಚ್ಚುತ್ತದೆ. ಅಲ್ಲಾಹನ ಅಭೀಷ್ಟಕ್ಕೆ ವಿರುದ್ಧವಾದುದೆಲ್ಲವೂ ಆತನಿಗೆ ಅನಿಷ್ಟವಾಗಿ ತೋರಲಾರಂಭಿಸುವುದು. ಅಲ್ಲಾಹನಿಗೆ ಮೆಚ್ಚುಗೆಯಿಲ್ಲದ ಎಲ್ಲವೂ ಆತನ ಸ್ವಭಾವಕ್ಕೆ ನಿಲುಕದ್ದಾಗುವುದು. ತನ್ನಲ್ಲಿ ಬೆಳೆಯುತ್ತಿರುವ ಒಲವುಗಳ ಬಗ್ಗೆ ಆತನು ಸದಾ ಆತ್ಮಾವಲೋಕನ ನಡೆಸುವನು. ತನ್ನ ಸಮಯ, ಸಾಮರ್ಥ್ಯಗಳು ಯಾವ ಪರಿಶ್ರಮಗಳಿಗಾಗಿ ವ್ಯಯವಾಗುತ್ತಿದೆಯೆಂದು ಆತನೇ ನೋಡುವನು. ಸ್ಪಷ್ಟವಾಗಿ ನಿಷೇಧಿಸಿರುವ ವಿಷಯಗಳ ವಿಚಾರ ಹಾಗಿರಲಿ. ಸಂದೇಹಾಸ್ಪದ ವಿಷಯಗಳನ್ನೂ ಕೈಗೆತ್ತಿಕೊಳ್ಳುವ ಬಗ್ಗೆ ಆತ ಎಚ್ಚರಿಕೆ ವಹಿಸುವನು. ಸಕಲ ಆಜ್ಞೆಗಳನ್ನೂ ಪೂರ್ಣ ವಿಧೇಯತೆಯಿಂದ ಪಾಲಿಸಲು ಆತನ ಕರ್ತವ್ಯ ಪ್ರಜ್ಞೆ ಪ್ರೇರೇಪಿಸುವುದು. ಅಲ್ಲಾಹನ ಮತ್ತು ಸೃಷ್ಟಿಗಳ ಹಕ್ಕುಗಳನ್ನು ಕ್ಲಪ್ತವಾಗಿ ಪೂರೈಸುವುದೇ ಆತನ ನಿತ್ಯ ವಿಧಿಯಾಗುವುದು. ತನ್ನಲ್ಲಿ ಸತ್ಯಕ್ಕೆದುರಾದ ಏನಾದರೂ ಪ್ರವೃತ್ತಿಯು ಬಂದು ಸೇರುವುದೋ ಎಂಬ ಭೀತಿಯಿಂದ ಆತನ ಹೃದಯವು ಸದಾ ಕಂಪಿಸುತ್ತಿರುವುದು. ಈ ಸ್ಥಿತಿಯು ಆತನ ಯಾವುದಾದರೊಂದು ರೂಪ ಅಥವಾ ವಿಶಿಷ್ಟ ಕರ್ಮ ವಿಧಾನದಲ್ಲಿ ಮಾತ್ರವಲ್ಲ ಆತನ ವಿಚಾರ ಶೈಲಿಯಲ್ಲಿಯೂ ಜೀವನದ ಎಲ್ಲಾ ರಂಗಗಳಲ್ಲಿಯೂ ಅದು ಗೋಚರವಾಗುವುದು. ಆದ್ದರಿಂದ ಆತನಲ್ಲಿ ಸಂಪೂರ್ಣ ಸಂತುಲಿತವಾದ ಏಕವರ್ಣ ಸ್ವಭಾವದ ಅತುಲ್ಯ ನಡತೆಯು ಬೆಳಗುವುದು. ಅದರ ಎಲ್ಲ ಅಂಶಗಳಲ್ಲಿಯೂ ಒಂದೇ ರೀತಿಯ ಮಡಿ ಮತ್ತು ಪರಿಶುದ್ಧತೆಗಳು ಕಂಡು ಬರುತ್ತವೆ. ತದ್ವಿರುದ್ಧವಾಗಿ ಕೆಲವು ವಿಶಿಷ್ಟ ರೂಪಗಳನ್ನು ಅಳವಡಿಸಿಕೊಂಡು ಕೆಲವು ವಿಶಿಷ್ಟ ವಿಧಾನಗಳನ್ನು ಅವಲಂಬಿಸಿ ತಮ್ಮನ್ನು ಅಳೆದು ನೋಡುವಂತಹ ಒಂದು ಕೃತಕ ಅಚ್ಚಿನಲ್ಲಿ ಸ್ವಯಂ ಎರಕಹೊಯ್ದುಕೊಳ್ಳುವುದಕ್ಕೆ

'ತಕ್ವಾ' ಎಂಬ ಹೆಸರು ನೀಡಲ್ಪಟ್ಟಿರುವೆಡೆಗಳಲ್ಲಿ 'ತಕ್ವಾ'ದ ಕೇವಲ ಕೆಲವು ರೂಪಗಳನ್ನು ಕಲಿಸಿಕೊಟ್ಟು ಅದನ್ನು ಅತೀ ಶ್ರದ್ಧೆಯಿಂದ ಪಾಲಿಸುತ್ತಿರುವುದನ್ನು ಕಾಣಬಹುದು. ಆದರೆ ಅದರೊಂದಿಗೆ ಜೀವನದ ಇತರ ರಂಗಗಳಲ್ಲಿ ಗೋಚರವಾಗುವ ಆಚಾರ, ವಿಚಾರ, ಗುಣ, ನಡವಳಿಕೆಗಳು ತಕ್ವಾದ ಉತ್ಕೃಷ್ಟ ಪದವಿಗೆ ಅಯೋಗ್ಯವಾಗಿರುವುದಲ್ಲದೇ ಈಮಾನ್‌ನ ಪ್ರಾಥಮಿಕ ಬೇಡಿಕೆಗಳಿಗೂ ನಿಲುಕದ್ದಾಗಿದೆ. ಈಸಾ(ಅ) ಅವರ ಮಾತಿನಲ್ಲಿ ಹೇಳುವುದಿದ್ದರೆ, "ನುಸಿಯನ್ನು ಹೆಕ್ಕಿ ತೆಗೆಯುತ್ತಾರೆ; ಒಂಟೆಯನ್ನು ಹಾಗೆಯೇ ನುಂಗಿ ಬಿಡುತ್ತಾರೆ!"

## ನೈಜ ತಕ್ವಾ ಮತ್ತು ಕೃತಕ ತಕ್ವಾ

ನೈಜ ತಕ್ವಾ ಮತ್ತು ಕೃತಕ ತಕ್ವಾಗಳ ಪರಸ್ಪರ ವ್ಯತ್ಯಾಸವನ್ನು ನಾವು ಈ ರೀತಿ ಗ್ರಹಿಸಬಹುದು. ಒಬ್ಬರ ಹೃದಯದಲ್ಲಿ ಶುಚಿತ್ವದ ಪ್ರಜ್ಞೆ ಮತ್ತು ಪಾವಿತ್ರ್ಯತೆಯ ಸ್ವಾಭಾವಿಕ ಕಾಳಜಿ ನೆಲೆಸಿದೆಯೆಂದು ಭಾವಿಸೋಣ. ಅಂತಹ ವ್ಯಕ್ತಿಯು ಮಾಲಿನ್ಯವು ಯಾವ ರೂಪದಲ್ಲಿದ್ದರೂ ಸ್ವಾಭಾವಿಕವಾಗಿ ಅದನ್ನು ದ್ವೇಷಿಸುತ್ತಾನೆ. ಸ್ವಚ್ಛತೆ ಮತ್ತು ಪರಿಶುದ್ಧತೆಯನ್ನು ಕೈಗೊಳ್ಳುತ್ತಾನೆ. ಆತನಿಗೆ ಶುಚಿತ್ವದ ಸಕಲ ರೂಪಗಳನ್ನು ವಿವರವಾಗಿ ತಿಳಿದುಕೊಳ್ಳಲು ಈ ತನಕ ಸಾಧ್ಯವಾಗದೆ ಇರಬಹುದು. ಇನ್ನೊಬ್ಬ ವ್ಯಕ್ತಿಯನ್ನು ತೆಗೆದುಕೊಳ್ಳೋಣ- ಶುಚಿತ್ವದ ಪ್ರಜ್ಞೆಯು ಆತನ ಹೃದಯದಲ್ಲಿ ರೂಢಮೂಲವಾಗಿಲ್ಲ. ಆದರೆ ಎಲ್ಲಿಂದಲೋ ನಕಲು ಮಾಡಿದ ಮಾಲಿನ್ಯ ಮತ್ತು ಸ್ವಚ್ಛತೆಯ ಯಾದಿಯೊಂದನ್ನು ಕೈಯಲ್ಲಿ ಹಿಡಿದು ತಿರುಗುತ್ತಿದ್ದಾನೆ. ಆ ವ್ಯಕ್ತಿಯು ತನ್ನ ಯಾದಿಯಲ್ಲಿರುವ ಮಾಲಿನ್ಯಗಳ ಬಗ್ಗೆ ಅತ್ಯಂತ ಜಾಗರೂಕನಾಗಿರುವನಾದರೂ ಅವುಗಳಿಗಿಂತ ಹಲವು ಪಟ್ಟು ನೀಚವಾದ ಅನೇಕ ಮಾಲಿನ್ಯಗಳಲ್ಲಿ ಸಿಲುಕುತ್ತಾನೆ. ಯಾಕೆಂದರೆ ಅಂತಹ ಮಾಲಿನ್ಯಗಳ ಹೆಸರು, ವಿವರಗಳು ಆತನ ಪಟ್ಟಿಯಲ್ಲಿರುವುದಿಲ್ಲ. ನಾನು ಹೇಳುತ್ತಿರುವ ಈ ವ್ಯತ್ಯಾಸವು ಕೇವಲ ಒಂದು ತತ್ವವಲ್ಲ. ತಮ್ಮ ತಕ್ವಾದ ಕುರಿತು ಜಂಭ ಕೊಚ್ಚಿಕೊಳ್ಳುವ ಮಹನೀಯರ ಜೀವನದಲ್ಲಿಯೂ ಈ ವ್ಯತ್ಯಾಸವನ್ನು ನೀವು ಕಣ್ಣಾರೆ ಕಾಣಬಹುದು. ಆಂಶಿಕ ವಿಷಯಗಳ ಕುರಿತು ಅವರ ಶ್ರದ್ಧೆಯನ್ನು ಹೇಳುವುದೇನು? ಗಡ್ಡವು ಒಂದು ನಿರ್ದಿಷ್ಟ ಪ್ರಮಾಣದಿಂದ ಸ್ವಲ್ಪ ಕಮ್ಮಿಯಾಗಿ ಬಿಟ್ಟರೆ ಸಾಕು, ತಕ್ಷಣವೇ 'ಫಿಸ್ಕ್'ನ ತೀರ್ಪು ನೀಡುತ್ತಾರೆ. ವಸ್ತ್ರವು ಮಣಿಗಂಟಿನಿಂದ ಸ್ವಲ್ಪ ಕೆಳಗಿಳಿದರೆ, ನರಕದ ಬೆದರಿಕೆ ನೀಡಿ ಬಿಡುತ್ತಾರೆ. ತಮ್ಮ 'ಫಿಕ್ಹ್'ನ ಆಂಶಿಕ ನಿಯಮಗಳಿಂದ ಸ್ವಲ್ಪ ದೂರ ಸರಿದರೆ ಅವರ ದೃಷ್ಟಿಯಲ್ಲಿ ಧರ್ಮದಿಂದಲೇ ಹೊರ ಹೋಗುವುದಕ್ಕೆ ಸಮಾನವಾಗಿದೆ. ಇನ್ನೊಂದೆಡೆ ಧರ್ಮದ ಪ್ರಮುಖ ವಿಷಯಗಳ ಕುರಿತು ಅವರ ಅಸಡ್ಡೆಯು ಅದರ ಪರಾಕಾಷ್ಠೆಗೆ ಮುಟ್ಟಿದೆ. ಅವರು ಮುಸ್ಲಿಮರ ಸಂಪೂರ್ಣ ಜೀವನವನ್ನು ವಿನಾಯಿತಿಗಳ ಹಾಗೂ ರಾಜಕೀಯ ಹಿತಾಸಕ್ತಿಗಳ ಬುನಾದಿಯಲ್ಲಿ ಕಟ್ಟಿ ಬೆಳೆಸಿದ್ದಾರೆ. 'ಇಕಾಮತುದ್ದೀನ್'ನ ಪ್ರಯತ್ನಗಳಿಂದ ಜಾರಿಕೊಳ್ಳಲು ಅವರು ಹಲವು ದಾರಿಗಳನ್ನು ಹುಡುಕಿದ್ದಾರೆ. 'ಕುಫ್ರ್' ಆಡಳಿತದ ಅಧೀನದಲ್ಲಿ 'ಇಸ್ಲಾಮಿ ಜೀವನ'ದ ಯೋಜನೆಗಳನ್ನು ಸಿದ್ಧಪಡಿಸುವುದರಲ್ಲಿಯೇ ಅವರು ತಮ್ಮ ಸಮಯ, ಸಾಮರ್ಥ್ಯಗಳನ್ನು ವಿನಿಯೋಗಿಸುತ್ತಿದ್ದಾರೆ. ಒಂದು ಇಸ್ಲಾಮೇತರ ವ್ಯವಸ್ಥೆಯಲ್ಲಿದ್ದುಕೊಂಡು ಅದರ ಸೇವೆ ಮಾಡುತ್ತಾ ಧಾರ್ಮಿಕ ಜೀವನವನ್ನು ಸೀಮಿತ ವಲಯದಲ್ಲಿ ಪಾಲಿಸುವುದರಿಂದ ಧರ್ಮದ ಎಲ್ಲ ಬೇಡಿಕೆಗಳನ್ನೂ ಈಡೇರಿಸಬಹುದೆಂದು; ಅದಕ್ಕಿಂತ ಹೆಚ್ಚು ಪ್ರಯತ್ನಿಸಬೇಕಾದ ಯಾವ ಅಗತ್ಯವೂ ಇಲ್ಲವೆಂಬ

ಸಂತೃಪ್ತಿ, ಸಾಂತ್ವನದ ಮಾತು ಹೇಳಿ ಮುಸ್ಲಿಮರ ಬೆನ್ನು ತಟ್ಟಿ ಮಲಗಿಸಿರುವುದು ಪ್ರಸ್ತುತ ಕೆಟ್ಟ ಮಾರ್ಗದರ್ಶನವೇ ಆಗಿದೆ. ಆದರೆ ಇದರ ಇನ್ನೊಂದು ಹೃದಯಭೇದಕ ಅಂಶವೆಂದರೆ ಯಾರಾದರೂ ಧರ್ಮದ ನೈಜ ಬೇಡಿಕೆಯಂತೆ 'ಇಕಾಮತುದ್ದೀನ್'ನ ಪ್ರಯತ್ನದೆಡೆಗೆ ಅವರ ಗಮನ ಸೆಳೆದರೆ ಅವರು ಅದನ್ನು ಕಿವಿಗೆ ಹಾಕಿಕೊಳ್ಳದೆ ಆ ಕೆಲಸದಿಂದ ದೂರವುಳಿದು ಇತರ ಮುಸ್ಲಿಮರನ್ನೂ ಆ ಕರ್ತವ್ಯದಿಂದ ವಿಮುಖಗೊಳಿಸಲಿಕ್ಕಾಗಿ ತಮ್ಮಿಂದಾದ ಪಿತೂರಿ ಮತ್ತು ವಂಚನೆಗಳನ್ನು ಮಾಡುತ್ತಾರೆ. ಆದರೂ ಅವರ 'ತಕ್ವಾ'ಕ್ಕೆ ಯಾವ ಊನವೂ ತಟ್ಟುವುದಿಲ್ಲ. ಧಾರ್ಮಿಕ ಮನೋಭಾವದ ಇತರ ಜನರಿಗೆ ಆ ಬಗ್ಗೆ ಯಾವ ಸಂದೇಹವೂ ಇರಲಾರದು! ನೈಜ ತಕ್ವಾ ಮತ್ತು ಕೃತಕ ತಕ್ವಾದ ವ್ಯತ್ಯಾಸಗಳು ಬೇರೆ ಹಲವು ರೂಪಗಳಿಂದ ಪ್ರತ್ಯಕ್ಷವಾಗುತ್ತಲಿವೆ. ತಕ್ವಾದ ನೈಜ ಕಲ್ಪನೆಯು ನಿಮ್ಮ ಮನದಲ್ಲಿ ಸ್ಪಷ್ಟವಾಗಿದ್ದರೆ ನೀವೇ ಅದನ್ನು ತಿಳಿದುಕೊಳ್ಳಬಹುದು.

ನನ್ನ ಈ ಎಲ್ಲಾ ಮಾತಿನ ಉದ್ದೇಶವು ವೇಷ ಭೂಷಣ ಮತ್ತು ವಸ್ತ್ರಧಾರಣೆಯ ಬಾಹ್ಯ ರೂಪದಲ್ಲಿ ಪ್ರವಾದಿವರ್ಯರ(ಸ) ವಚನಗಳಿಂದ ರುಜುವಾದ ನಿಯಮ ನಿರ್ದೇಶಗಳ ಪಾಲನೆಯನ್ನು ಕ್ಷುಲ್ಲಕ ಅಥವಾ ಅನಾವಶ್ಯಕವೆಂದು ಭಾವಿಸಬೇಕೆಂದಲ್ಲ. ಅಂತಹ ದುಷ್ಟ ಚಿಂತನೆಗಳಿಂದ ನಾನು ಅಲ್ಲಾಹನ ಅಭಯ ಯಾಚಿಸುತ್ತೇನೆ. ವಾಸ್ತವದಲ್ಲಿ ತಕ್ವಾದ ಪ್ರದರ್ಶನವನ್ನಲ್ಲ; ಅದರ ನೈಜತೆಯನ್ನು ನಿಮಗೆ ಮನಗಾಣಿಸುವುದೇ ನನ್ನ ಉದ್ದೇಶ. 'ತಕ್ವಾ'ದ ವಾಸ್ತವಿಕತೆಯು ಮಾನವ ಹೃದಯದಲ್ಲಿ ದೃಢವಾದರೆ ಆತನ ಸಂಪೂರ್ಣ ಜೀವನವು ಸಂತುಲಿತ ಮತ್ತು ಏಕವರ್ಣದೊಂದಿಗೆ ಇಸ್ಲಾಮ್ ಆಗಿ ರೂಪಾಂತರಗೊಳ್ಳುವುದು. ಇಸ್ಲಾಮ್ ಅದರ ಸಮಗ್ರತೆ ಮತ್ತು ಸಂಪೂರ್ಣತೆಯೊಂದಿಗೆ ಆತನ ವಿಚಾರ, ಚಿಂತನೆ, ಭಾವನೆ, ಗುಣಸ್ವಭಾವ, ಸಮಯ, ಸಾಮರ್ಥ್ಯಗಳ ವಿನಿಯೋಗ, ಪ್ರಯತ್ನ, ಕುಟುಂಬ ಜೀವನ, ಸಂಪಾದನೆ, ವೆಚ್ಚ-ಹೀಗೆ ಆತನ ಜೀವನದ ಎಲ್ಲ ರಂಗಗಳಲ್ಲಿಯೂ ಕ್ರಮೇಣ ಅಭಿವ್ಯಕ್ತವಾಗಲಾರಂಭಿಸುವುದು. ತದ್ವಿರುದ್ಧವಾಗಿ ಪ್ರದರ್ಶನಕ್ಕೆ ವಾಸ್ತವಿಕತೆಗಿಂತ ಆದ್ಯತೆ ನೀಡಿ, ಅಗತ್ಯಕ್ಕಿಂತ ಹೆಚ್ಚು ಪ್ರಾಮುಖ್ಯ ನೀಡಿದರೆ ನೈಜ ತಕ್ವಾದ ಬೀಜ ಹಾಕಿ ಬೆಳೆಸುವ ಬದಲಾಗಿ ಕೆಲವು ಕೃತಕ ಬಾಹ್ಯಾಚಾರಗಳನ್ನು ಅಂಗೀಕರಿಸಿದರೆ ಅದರ ಪರಿಣಾಮವು ಮೇಲೆ ಹೇಳಿದಂತಾದೀತು. ಪ್ರಥಮ ಗುಣಕ್ಕೆ ಸುದೀರ್ಘಕಾಲದ ಸಹನೆಯ ಅಗತ್ಯವಿದೆ. ಅದು ಸಾವಧಾನದಿಂದ ಬೆಳೆದು ತುಂಬಾ ಸಮಯದ ಬಳಿಕ ಫಲ ಗೋಚರಿಸುವಂತಹದ್ದಾಗಿದೆ. ಆದ್ದರಿಂದಲೇ ಕೇವಲ ಚಂಚಲ ಸ್ವಭಾವದ ಜನರು ಅದರಿಂದ ದೂರವಿರಲು ಪ್ರಯತ್ನಿಸುತ್ತಾರೆ. ಎರಡನೆಯ ಮಾರ್ಗವನ್ನು ಎಲ್ಲರಿಗೂ ಸುಲಭದಲ್ಲಿ ಅವಲಂಬಿಸಲು ಸಾಧ್ಯವಿದೆ. ಒಂದು ಸೌದೆ ತುಂಡಿಗೆ ಎಲೆ, ಹೂ, ಕಾಯಿ, ಹಣ್ಣುಗಳನ್ನು ಕಟ್ಟಿ ಒಂದು ವೃಕ್ಷದ ರೂಪವನ್ನು ತಯಾರಿಸುವುದು ಬಹಳ ಸುಲಭ. ಆದ್ದರಿಂದ 'ತಕ್ವಾ' ಉಂಟುಮಾಡುವ ಈ ಸಂಪ್ರದಾಯವು ಇಂದು ಜನಪ್ರಿಯವಾಗಿದೆ. ಆದರೆ ನೈಸರ್ಗಿಕವಾಗಿ ಚಿಗುರಿ ಬೆಳೆಯುವಂತಹ ಮರದಿಂದ ನಿರೀಕ್ಷಿಸಬಹುದಾದ ಶೀಘ್ರ ಫಲಗಳನ್ನು ಈ ಕೃತಕ ಮರದಿಂದ ಯಾವ ರೀತಿಯಿಂದಲೂ ನಿರೀಕ್ಷಿಸಲು ಸಾಧ್ಯವಿಲ್ಲ.

## 'ಇಹ್ಸಾನ್'ನ ಅರ್ಥ

ಇನ್ನು ಇಸ್ಲಾಮಿನ ಅತ್ಯುನ್ನತ ಹಂತವಾಗಿರುವ 'ಇಹ್ಸಾನ್'ನ ಕುರಿತು ನೋಡೋಣ. ಮುಸ್ಲಿಮನನ್ನು ಇಸ್ಲಾಮಿನಲ್ಲಿ ಲೀನಗೊಳಿಸಲು ಯೋಗ್ಯವಾಗುವಂತೆ ಅಲ್ಲಾಹ್, ಪ್ರವಾದಿ

ಮತ್ತು ಧರ್ಮದ ಬಗ್ಗೆ ಹೃದಯಂಗಮವಾದ ಸಂಬಂಧ, ಗಾಢ ಪ್ರೀತಿ, ನಿಸ್ವಾರ್ಥ ನಿಷ್ಠೆ, ಸರ್ವಸ್ವವನ್ನು ತ್ಯಾಗ ಮಾಡುವ ಮನೋಭಾವ ಇತ್ಯಾದಿಗಳೇ 'ಇಹ್ಸಾನ್' ಆಗಿದೆ. ಅಲ್ಲಾಹನ ಕೋಪ ಶಾಪದಿಂದ ಸಂರಕ್ಷಣೆ ಪಡೆಯಲು ಮಾನವನನ್ನು ಪ್ರೇರೇಪಿಸುವ ದೇವಭಯವೇ ವಾಸ್ತವದಲ್ಲಿ ತಕ್ವಾದ ಮೂಲ ಕಲ್ಪನೆ. ಇಹ್ಸಾನ್‌ನ ಮೂಲ ಕಲ್ಪನೆಯು ಅಲ್ಲಾಹನ ಸಂಪ್ರೀತಿ ಮತ್ತು ಸಂತೃಪ್ತಿಗಳಿಸಲಿಕ್ಕಾಗಿ ಮಾನವನನ್ನು ಪ್ರೇರೇಪಿಸುವ ಅಲ್ಲಾಹನ ಮೇಲಿನ ಗಾಢ ಪ್ರೀತಿಯಾಗಿದೆ. ಇವೆರಡರ ಪರಸ್ಪರ ವ್ಯತ್ಯಾಸವನ್ನು ಒಂದು ಉದಾಹರಣೆಯ ಮೂಲಕ ತಿಳಿಯಬಹುದು. ಸರಕಾರೀ ನೌಕರರ ಪೈಕಿ ಕೆಲವರು ತಮಗೆ ವಹಿಸಲಾಗಿರುವ ಕೆಲಸಗಳನ್ನು ಸಂಪೂರ್ಣ ಕರ್ತವ್ಯ ಪ್ರಜ್ಞೆಯಿಂದ ನಿರ್ವಹಿಸುತ್ತಾರೆ. ಅವರು ಎಲ್ಲಾ ನೀತಿ ನಿಯಮಗಳನ್ನು ಸರಿಯಾಗಿ ಪಾಲಿಸುತ್ತಾರೆ. ಅವರು ಸರಕಾರವು ಆಕ್ಷೇಪಿಸುವಂತಹ ಯಾವ ಕೆಲಸವನ್ನೂ ಮಾಡುವುದಿಲ್ಲ. ಆದರೆ ಇನ್ನೊಂದು ವರ್ಗದ ನೌಕರರು ಸರಕಾರದೊಂದಿಗೆ ನಿಷ್ಕಳಂಕ ನಿಷ್ಠೆಹೊಂದಿದ್ದು, ಅದಕ್ಕಾಗಿ ಸರ್ವತ್ಯಾಗಕ್ಕೂ ಸಿದ್ಧರಿರುತ್ತಾರೆ. ಅವರು ಸಂಪೂರ್ಣವಾಗಿ ಸರಕಾರದ ಹಿತೈಷಿಗಳು ಮತ್ತು ಭಕ್ತರಾಗಿರುತ್ತಾರೆ. ಅವರು ಕೇವಲ ವಹಿಸಿಕೊಟ್ಟ ಕೆಲಸವನ್ನಷ್ಟೇ ಮಾಡುವುದಲ್ಲ, ರಾಷ್ಟ್ರದ ಹಿತಾಸಕ್ತಿಗೆ ಅಗತ್ಯವಾದ ಎಲ್ಲಾ ವಿಷಯದ ಬಗ್ಗೆಯೂ ಅವರು ಕಾಳಜಿ ವಹಿಸುತ್ತಾರೆ. ಆದ್ದರಿಂದ ಅವರು ತಮ್ಮ ಕರ್ತವ್ಯಗಳಿಗಿಂತ ಹೆಚ್ಚು ಸೇವೆ ಸಲ್ಲಿಸುತ್ತಾರೆ. ರಾಷ್ಟ್ರಕ್ಕೆ ಏನಾದರೂ ವಿಘ್ನವುಂಟಾದರೆ ಅದಕ್ಕಾಗಿ ಧನ, ಪ್ರಾಣ, ಸಂತಾನಗಳೆಲ್ಲವನ್ನೂ ತ್ಯಜಿಸಲು ಅವರು ಸಿದ್ಧರಾಗುತ್ತಾರೆ. ನಿಯಮೋಲ್ಲಂಘನೆಯು ಅವರ ಹೃದಯವನ್ನು ಘಾಸಿಗೊಳಿಸುತ್ತದೆ. ಎಲ್ಲಾದರೂ ರಾಷ್ಟ್ರದ್ರೋಹದ ಲಕ್ಷಣಗಳು ಕಂಡು ಬಂದರೆ ಅವರು ಕಳವಳಕ್ಕೀಡಾಗುತ್ತಾರೆ. ಅದನ್ನು ದಮನಿಸಲಿಕ್ಕಾಗಿ ತಮ್ಮ ಪ್ರಾಣವನ್ನೇ ಪಣವಿಟ್ಟು ಹೋರಾಡುತ್ತಾರೆ. ಮನಃಪೂರ್ವಕವಾಗಿ ರಾಷ್ಟ್ರದ ಹಿತಾಸಕ್ತಿಗಳಿಗೆ ಧಕ್ಕೆಯುಂಟುಮಾಡುವ ಮಾತಂತಿರಲೀ ಯಾವುದೇ ವಿಧದಲ್ಲಿ ಅದಕ್ಕೆ ನಷ್ಟವುಂಟಾಗುವುದನ್ನು ನೋಡುವುದೂ ಅವರಿಗೆ ಸಹಿಸಲಾಗುವುದಿಲ್ಲ. ಆ ಕುಂದುಕೊರತೆಗಳನ್ನು ಹೋಗಲಾಡಿಸಲಿಕ್ಕಾಗಿ ಅವರು ತಮ್ಮಿಂದ ಸಾಧ್ಯವಿರುವ ಎಲ್ಲಾ ಪ್ರಯತ್ನಗಳನ್ನು ನಡೆಸುತ್ತಾರೆ. ಜಗತ್ತಿನಲ್ಲಿ ನಮ್ಮ ರಾಷ್ಟ್ರವು ವಿಜಯಹೊಂದಬೇಕು, ನಮ್ಮ ಧ್ವಜವು ಎಲ್ಲೆಡೆ ಹಾರಾಡಬೇಕೆಂದು ಅವರು ಹೃತ್ಪೂರ್ವಕವಾಗಿ ಬಯಸುತ್ತಾರೆ. ಈ ಎರಡು ವರ್ಗಗಳಲ್ಲಿ ಮೊದಲನೆಯದು ಆ ಸರಕಾರದ 'ಮುತ್ತಕೀ' ಮತ್ತು ಎರಡನೆಯದು ಅದರ 'ಮುಹ್ಸಿನ್' ಆಗಿದೆ. ಅಭಿವೃದ್ಧಿ, ಭಡ್ತಿಗಳು ಮುತ್ತಕೀಗಳಿಗೂ ದೊರೆಯುತ್ತದೆ. ಅವರ ಹೆಸರು ಉತ್ತಮ ನೌಕರರ ಯಾದಿಯಲ್ಲಿಯೇ ಇರುತ್ತದೆ. ಆದರೆ 'ಮುಹ್ಸಿನ್'ರಿಗೆ ದೊರೆಯುವ ಉನ್ನತ ಪದವಿಗಳಲ್ಲಿ ಬೇರೆ ಯಾರೂ ಅವರಿಗೆ ಸಮಾನರಿರಲಾರರು. ಇಸ್ಲಾಮಿನ 'ಮುತ್ತಕೀ' ಮತ್ತು 'ಮುಹ್ಸಿನ್'ಗಳನ್ನು ಇದರೊಡನೆ ಹೋಲಿಸಿ ನೋಡಿರಿ. ಮುತ್ತಕೀಗಳು ಗಣ್ಯರು ಮತ್ತು ಪ್ರಾಮಾಣಿಕರಾಗಿದ್ದರೂ 'ಮುಹ್ಸಿನ್' ವರ್ಗವೇ ಇಸ್ಲಾಮಿನ ನೈಜ ಶಕ್ತಿಯಾಗಿರುತ್ತಾರೆ. ಈ ಲೋಕದಲ್ಲಿ ಇಸ್ಲಾಮ್ ಸಾಧಿಸ ಬಯಸುವ ನೈಜ ಕಾರ್ಯವು ಕೇವಲ ಆ ವರ್ಗದ ಮೂಲಕವೇ ಸಾಧ್ಯ.

'ಇಹ್ಸಾನ್'ನ ಈ ವಾಸ್ತವಿಕತೆಯನ್ನು ಗ್ರಹಿಸಿದ ಬಳಿಕ ನೀವು ನಿಮ್ಮ ಪರಿಸರವನ್ನೊಮ್ಮೆ ನೋಡಿರಿ. ಅಲ್ಲಾಹನ ಧರ್ಮವು 'ಕುಫ್ರ್'ನ ಅಧೀನವಾಗಿರುವುದನ್ನು ನಮ್ಮ ಕಣ್ಣುಗಳು

ಕಾಣುತ್ತಿವೆ. ಅಲ್ಲಾಹನ ಮಿತಿಗಳನ್ನು ನಿರ್ಲಕ್ಷಿಸಿರುವುದು ಮಾತ್ರವಲ್ಲ ಅದನ್ನು ಕಿತ್ತೆಸೆಯಲಾಗುತ್ತದೆ. ಅಲ್ಲಾಹನ ಕಾನೂನುಗಳನ್ನು ಕಾರ್ಯರೂಪದಲ್ಲಿ ಮಾತ್ರವಲ್ಲ ಕಾನೂನಿನ ಮೂಲಕವೂ ದುರ್ಬಲಗೊಳಿಸಲಾಗುತ್ತಿದೆ. ಅಲ್ಲಾಹನ ಭೂಮಿಯಲ್ಲಿ ಆತನ ಬದಲಾಗಿ ಆತನನ್ನು ಧಿಕ್ಕರಿಸುವವರ ಆಧಿಪತ್ಯವು ಮೆರೆದಾಡುತ್ತಿದೆ. ಕುಫ್ರ್ ವ್ಯವಸ್ಥೆಯ ಅಧಿಕಾರ-ಆಧಿಪತ್ಯಗಳ ಮೂಲಕ ಸಾಮಾನ್ಯವಾಗಿ ಮಾನವ ಸಮಾಜದಲ್ಲಿ ನೈತಿಕ, ನಾಗರಿಕ, ಸಾಂಸ್ಕೃತಿಕ, ವಿನಾಶಗಳು ಭುಗಿಲೇಳುತ್ತಿವೆ. ಅಲ್ಲದೆ ಮುಸ್ಲಿಮ್ ಸಮಾಜವೂ ಶೀಘ್ರಗತಿಯಿಂದ ಅನೈತಿಕತೆ ಮತ್ತು ದುರಾಚಾರಗಳಲ್ಲಿ ಸಿಲುಕಿಕೊಂಡಿದೆ. ಇದೆಲ್ಲವನ್ನು ನೋಡಿಯೂ ಒಂದು ಜನ ವಿಭಾಗದ ಹೃದಯದಲ್ಲಿ ಕಳವಳ ಮೂಡದಿದ್ದರೆ ಈ ದುರವಸ್ಥೆಯ ನಿವಾರಣೆಗೆ ಯಾವ ಶಕ್ತಿಯೂ ಅವರನ್ನು ಪ್ರೇರೇಪಿಸುತ್ತಿಲ್ಲವಾದರೆ ಅದಕ್ಕೆ ಬದಲಾಗಿ ಅವರು ಮತ್ತು ಮುಸ್ಲಿಮ್ ಜನ ಸಾಮಾನ್ಯರು ಇಸ್ಲಾಮೇತರ ವ್ಯವಸ್ಥೆಯ ಆಧಿಪತ್ಯಕ್ಕೆ ತಾತ್ವಿಕ ಹಾಗೂ ಕ್ರಿಯಾತ್ಮಕ ಮನ್ನಣೆ ನೀಡುತ್ತಿದ್ದರೆ ಅವರನ್ನು 'ಮುಖ್ಲಿಸ್'ಗಳೆಂದು ಪರಿಗಣಿಸುವುದಾದರೂ ಹೇಗೆ? ಅವರು ಈ ಅತಿ ಭೀಕರ ತಪ್ಪನ್ನು ಮಾಡುವುದರೊಂದಿಗೆ ತಹಜ್ಜುದ್, ಇಶ್ರಾಕ್ ನಮಾಝ್‌ಗಳನ್ನು ಮಾಡುತ್ತಾ ದಿಕ್ರ್, ಔರಾದ್ ಮತ್ತು ಮುರಾಕಬಗಳನ್ನು ನಿರ್ವಹಿಸುತ್ತಾ, ಕುರ್‌ಆನ್ ಮತ್ತು ಹದೀಸ್ ಅಧ್ಯಯನ ತರಗತಿಗಳನ್ನು ನಡೆಸುತ್ತಾ, ಕರ್ಮಶಾಸ್ತ್ರ ಸಂಬಂಧವಾದ ಆಂಶಿಕ ವಿಷಯಗಳ ಬಗ್ಗೆಯೂ ಜಾಗ್ರತೆ ವಹಿಸುತ್ತಾ ಸಣ್ಣ ಸಣ್ಣ ಸುನ್ನತ್‌ಗಳನ್ನು ಅತ್ಯಂತ ನಿಷ್ಕರ್ಷೆಯಿಂದ ಪಾಲಿಸುತ್ತಾ ಆತ್ಮ ಸಂಸ್ಕರಣೆಯ ಆಶ್ರಮದಲ್ಲಿ ಅವರು 'ಇಹ್ಸಾನ್'ನ ಉತ್ಕೃಷ್ಟ ಪದವಿಗೆ ಅರ್ಹರಾಗುವುದು ಹೇಗೆ? ಭೌತಿಕವಾದಿ ರಾಷ್ಟ್ರಗಳಲ್ಲಿಯೂ ಸಮುದಾಯಗಳಲ್ಲಿಯೂ ನಿಷ್ಠಾವಂತರ ಮತ್ತು ವಿದ್ರೋಹಿಗಳ ಸ್ಪಷ್ಟವಾದ ಇಂತಹ ವ್ಯತ್ಯಾಸವು ಅಂಗೀಕರಿಸಲ್ಪಡುತ್ತದೆ. ದೇಶದಲ್ಲಿ ಕಾನೂನುಭಂಗ ಮತ್ತು ರಾಜದ್ರೋಹವು ತಾಂಡವವಾಡಿ, ದೇಶದ ಒಂದು ಭಾಗವನ್ನು ಶತ್ರುಗಳು ವಶಪಡಿಸಿಕೊಂಡಿರುವಾಗ, ವೈರಿಗಳ ಅಥವಾ ಧಿಕ್ಕಾರಿಗಳ ಆಧಿಪತ್ಯಕ್ಕೆ ಅಂಗೀಕಾರ ನೀಡಿ ಸಂತೃಪ್ತಿ ತಾಳುವ, ಸೋಲೊಪ್ಪಿಕೊಂಡು ಅವರೊಡನೆ ಸಂಧಾನ ಮಾಡಿಕೊಳ್ಳುವ ಅಥವಾ ಅವರ ಆಧಿಪತ್ಯದ ಕೈ ಕೆಳಗೆ ಕೆಲವು ಹಕ್ಕುಗಳನ್ನು ಸ್ವೀಕರಿಸಿ ಸಂತೃಪ್ತರಾಗುವ ಜನರನ್ನು ನಿಷ್ಠಾವಂತರೆಂದು ಯಾವ ರಾಷ್ಟ್ರವೂ ಅಂಗೀಕರಿಸದು. ಅವರು ತಮ್ಮ ರಾಷ್ಟ್ರೀಯ ವೇಷ-ವಿನ್ಯಾಸಗಳನ್ನು ಎಷ್ಟೇ ನಿಷ್ಕರ್ಷೆಯಿಂದ ಉಳಿಸಿಕೊಂಡರೂ ಆಂಶಿಕ ವಿಷಯಗಳ ಬಗೆಗಿನ ನಿಯಮಗಳನ್ನು ಎಷ್ಟೇ ಶಿಸ್ತಿನಿಂದ ಪಾಲಿಸಿದರೂ ಎಲ್ಲಾ ನಿಟ್ಟಿನಲ್ಲಿಯೂ ರಾಷ್ಟ್ರದ್ರೋಹಿಗಳೆಂದೇ ಪರಿಗಣಿಸಲ್ಪಡುತ್ತಾರೆ. ಹೀಗಿರುತ್ತಾ ಲೌಕಿಕ ರಾಷ್ಟ್ರಗಳಷ್ಟಾದರೂ ನಿಷ್ಠೆಯುಳ್ಳವರನ್ನು ಮತ್ತು ಇಲ್ಲದವರನ್ನು ಬೇರ್ಪಡಿಸಿ ತಿಳಿಯಲು ಅಲ್ಲಾಹನಿಗೆ ಸಾಧ್ಯವಿಲ್ಲವೆಂಬ ಭ್ರಮೆಗೆ ನಾವು ಬಲಿಯಾಗಿದ್ದೇವೆಯೇ? ಗಡ್ಡದ ಉದ್ದ, ಜಪಸರ ತಿರುಗಿಸುವ ಸಂಖ್ಯೆ, ಔರಾದ್ ಮತ್ತು ದಿಕ್ರ್ ಮುಂತಾದ ಕೆಲವು ಬಾಹ್ಯ ಆಚಾರಗಳನ್ನು ನೋಡಿ ನಿಷ್ಠೆ ಮತ್ತು ಭಕ್ತಿಯುಳ್ಳವರೆಂದು ಅಲ್ಲಾಹನು ಭಾವಿಸಬಹುದೆಂಬುದು ನಮ್ಮ ವ್ಯಾಮೋಹವೇ?

ಸುದೀರ್ಘ ಕಾಲದ ತಪ್ಪು ಕಲ್ಪನೆಗಳಿಂದಾಗಿ ಮುಸ್ಲಿಮ್ ಜನಸಾಮಾನ್ಯರ ಮನಸ್ಸಿನಲ್ಲಿ ಆಂಶಿಕ ವಿಷಯಗಳ ಹಾಗೂ ಬಾಹ್ಯ ಪ್ರದರ್ಶನಗಳ ಕುರಿತು ಅತ್ಯಧಿಕ ಪ್ರಾಮುಖ್ಯತೆ

ಮನೆಮಾಡಿದೆ. ಧರ್ಮದ ಮೂಲ ಸಿದ್ಧಾಂತ, ಧರ್ಮಭಕ್ತಿ ಮತ್ತು ಇಸ್ಲಾಮಿ ನೈತಿಕತೆಯ ನೈಜ ಮೌಲ್ಯಗಳತ್ತ ಅದರ ಗಮನ ಹರಿಸಲು ಎಷ್ಟೇ ಪ್ರಯತ್ನಿಸಿದರೂ ಅವರ ಮನಸ್ಸು ಪುನಃ ಸುತ್ತು ಬಳಸಿ ಆ ಚಿಲ್ಲರೆ ವಿಷಯಗಳತ್ತ ತಿರುಗುತ್ತದೆ. ಅದನ್ನೇ ನೈಜ ಧರ್ಮವಾಗಿಸಿಕೊಂಡು ಸಂಪೂರ್ಣ ಗಮನವನ್ನು ಅದರಲ್ಲೇ ಕೇಂದ್ರೀಕರಿಸುತ್ತಾರೆ. ಸಾಮಾನ್ಯವಾಗಿ ಸಾರ್ವತ್ರಿಕವಾಗಿರುವ ಈ ಮಹಾರೋಗವು ನಮ್ಮೊಂದಿಗೆ ಸಂಬಂಧವಿರಿಸಿಕೊಂಡಿರುವ ಕೆಲವರಲ್ಲಿಯೂ ಅಷ್ಟಿಷ್ಟು ಕಂಡುಬರುತ್ತಿದೆ. ಧರ್ಮದ ವಾಸ್ತವಿಕತೆಯೇನು? ಯಾವ ವಿಷಯಗಳಿಗೆ ಧರ್ಮದ ನೈಜ ಮಹತ್ವವಿದೆ. ಯಾವುದು ಮೊದಲು, ಯಾವುದು ನಂತರ ಎಂಬುದನ್ನು ತಿಳಿಯಲು ನಾನು ನನ್ನ ಸಂಪೂರ್ಣ ಸಾಮರ್ಥ್ಯವನ್ನು ವ್ಯಯಿಸುತ್ತಿದ್ದೇನೆ. ಈ ರೀತಿ ಪ್ರಯತ್ನಿಸಿ ಕಂಡಿರುವುದೇನು? ಬಾಹ್ಯ ಪ್ರದರ್ಶನಗಳಲ್ಲಿರುವ ಆಸಕ್ತಿ ಹಾಗೂ ಮೂಲ ಸಿದ್ಧಾಂತಗಳಿಗಿಂತ ಹೆಚ್ಚು ಆಂಶಿಕ ವಿಷಯಗಳ ಪ್ರಾಮುಖ್ಯತೆಯು ತಲೆಗೇರಿದೆ. ಇಂದು ಈ ಬಾಹ್ಯ ಪ್ರದರ್ಶನವನ್ನೇ ಕೆಲವರು ಅಪೇಕ್ಷಿಸುತ್ತಿದ್ದಾರೆ. ಎಲ್ಲರೂ ತಮ್ಮ ಗಡ್ಡವನ್ನು ಉದ್ದ ಮಾಡಬೇಕು, ವಸ್ತ್ರವನ್ನು ಮಣಿಗಂಟಿನಿಂದ ಮೇಲಕ್ಕೆ ಉಡಬೇಕು ಮುಂತಾದ ಆಂಶಿಕ ವಿಷಯಗಳನ್ನು ಜಾರಿಗೊಳಿಸಬೇಕೆಂದು ವಿನಂತಿಸುತ್ತಿದ್ದಾರೆ. ಅದಲ್ಲದೇ ಕೆಲವರು ಜಮಾಅತ್‌ನಲ್ಲಿ ಆಧ್ಯಾತ್ಮಿಕತೆ ಕಡಿಮೆಯಿದೆಯೆಂದು ದೂರುತ್ತಿದ್ದಾರೆ. ಆದರೆ ವಾಸ್ತವದಲ್ಲಿ ಅದೇನೆಂದು ಬೆಟ್ಟು ಮಾಡಲು ಅವರಿಂದಾಗುವುದಿಲ್ಲ. ಜಮಾಅತ್‌ನ ಧ್ಯೇಯ ಮತ್ತು ಕಾರ್ಯವಿಧಾನಗಳನ್ನೇ ಅಂಗೀಕರಿಸಿ ಆತ್ಮ ಸಂಸ್ಕರಣೆಗಾಗಿ ಆಶ್ರಮಗಳಿಗೆ ಹೋಗಬೇಕೆಂದು ಬಯಸುತ್ತಾರೆ. ಇವೆಲ್ಲವುಗಳಿಂದ ನೈಜ ಧಾರ್ಮಿಕ ತಿಳುವಳಿಕೆಯು ಇನ್ನೂ ನಮ್ಮಲ್ಲಿ ಸರಿಯಾಗಿ ಮೂಡಿಲ್ಲವೆಂದು ವ್ಯಕ್ತವಾಗುತ್ತದೆ. ನಾನು ಈ ತನಕ ಇಸ್ಲಾಮ್, ಈಮಾನ್, ತಕ್ವಾ ಮತ್ತು ಇಹ್ಸಾನ್‌ಗಳ ಕುರಿತು ನೀಡಿರುವ ವಿವರಣೆಯು ಕುರ್‌ಆನ್ ಮತ್ತು ಸುನ್ನತನ್ನು ಮೀರಿದ್ದು ನನ್ನ ಸ್ವಂತ ಕೃತಿಯೆಂದು ನಿಮಗೆ ಭಾಸವಾಗುವುದಿದ್ದರೆ ನಿಸ್ಸಂಕೋಚವಾಗಿ ಅದನ್ನು ನನಗೆ ತೋರಿಸಿ ಕೊಡಿ. ತದ್ವಿರುದ್ಧವಾಗಿ ಅಲ್ಲಾಹನ ಗ್ರಂಥ ಮತ್ತು ಪ್ರವಾದಿಯ ಸುನ್ನತ್‌ಗನುಸಾರ ಪ್ರಸ್ತುತ ನಾಲ್ಕು ವಿಷಯಗಳ ವಾಸ್ತವಿಕತೆಯು ನಾನು ವಿವರಿಸಿದಂತೆಯೇ ಇದೆಯೆಂದು ನೀವು ಒಪ್ಪುವುದಿದ್ದರೆ, ಈಮಾನ್‌ನ ಶರ್ತಗಳು ಪೂರ್ಣವಾಗದೆ, ತಕ್ವಾ ಮತ್ತು ಇಹ್ಸಾನ್‌ಗಳ ಅಡಿಪಾಯವನ್ನು ಭದ್ರಪಡಿಸದೆ ನೀವು ಹುಡುಕುತ್ತಿರುವ ಆಧ್ಯಾತ್ಮಿಕತೆಯು ಹೇಗೆ ತಾನೇ ದೊರೆತೀತೆಂಬುದನ್ನು ನೀವೇ ಸ್ವಲ್ಪ ಆಲೋಚಿಸಿ ನೋಡಿರಿ. ಇಂದು ಧರ್ಮದ ಪ್ರಥಮ ಬೇಡಿಕೆಯೆಂದು ಸಾಮಾನ್ಯವಾಗಿ ಪರಿಗಣಿಸಲಾಗುತ್ತಿರುವ ಕರ್ಮಶಾಸ್ತ್ರದ ಆಂಶಿಕ ವಿಷಯಗಳ ನೈಜ ನಿಲುಮೆಯನ್ನು ನಾನು ಇನ್ನೊಮ್ಮೆ ಸ್ಪಷ್ಟಪಡಿಸಬಯಸುತ್ತೇನೆ. ತನ್ಮೂಲಕ ನಾನು ಅಲ್ಲಾಹನ ಬಳಿ ಹೊಣೆ ಮುಕ್ತನಾಗಬೇಕೆಂದು ಬಯಸುತ್ತೇನೆ.

ಶಾಂತ ಚಿತ್ತದಿಂದ ನೀವೊಮ್ಮೆ ಆಲೋಚಿಸಿ ನೋಡಿರಿ, ಅಲ್ಲಾಹನು ಯಾವ ಅಗತ್ಯಕ್ಕಾಗಿ ತನ್ನ ಪ್ರವಾದಿಗಳನ್ನು ಈ ಲೋಕಕ್ಕೆ ಕಳುಹಿಸಿಕೊಟ್ಟಿದ್ದಾನೆ? ಪ್ರವಾದಿಗಳನ್ನು ಕಳುಹಿಸುವಷ್ಟರ ಮಟ್ಟಿಗೆ ಈ ಲೋಕದಲ್ಲಿ ಏನು ಕೊರತೆಯಿತ್ತು? ಏನೆಲ್ಲಾ ದೋಷಗಳಿದ್ದುವು? ಜನರು ಗಡ್ಡ ಬೆಳೆಸುತ್ತಿರಲಿಲ್ಲವೇ? ಜನರನ್ನು ಗಡ್ಡಧಾರಿಗಳನ್ನಾಗಿ ಮಾಡಲು ಪ್ರವಾದಿಗಳು ನೇಮಕಗೊಂಡರೇ? ಜನರು ಮುಚ್ಚಿದ್ದ ಮಣಿಗಂಟನ್ನು ತೆರೆಸಲಿಕ್ಕಾಗಿ ಅವರನ್ನು ಕಳುಹಿಸಲಾಗಿತ್ತೇ?

ಇಂದು ಜನರಲ್ಲಿ ದೊಡ್ಡ ಚರ್ಚಾ ವಿಷಯವಾಗಿರುವ ಜಾರಿಯಲ್ಲಿಲ್ಲದ ಸುನ್ನತನ್ನು ಜಾರಿಗೊಳಿಸಲಿಕ್ಕೆ ಪ್ರವಾದಿಯ ಅಗತ್ಯ ಬಿತ್ತೇ? ಈ ಪ್ರಶ್ನೆಗಳ ಬಗ್ಗೆ ನೀವು ನಿಷ್ಪಕ್ಷಪಾತವಾಗಿ ಆಲೋಚಿಸಿದರೆ ಅವು ನೈಜ ಕೊರತೆಗಳಲ್ಲ, ಪ್ರವಾದಿಯನ್ನು ನೇಮಿಸಿದ ನೈಜ ಉದ್ದೇಶವು ಅದಾಗಿರಲಿಲ್ಲವೆಂಬುದನ್ನು ನೀವೇ ಮನಗಾಣುವಿರಿ. ಹಾಗಿದ್ದರೆ ನಿವಾರಣೆಯಾಗಬೇಕಿದ್ದ ನೈಜ ದೋಷಗಳು ಯಾವುದಾಗಿತ್ತು. ಅಗತ್ಯವಾಗಿ ಸ್ಥಾಪನೆಯಾಗಬೇಕಿದ್ದ ನೈಜ ಒಳಿತುಗಳು ಯಾವುವು? ಎಂಬುದೇ ಪ್ರಶ್ನೆ. ಅಲ್ಲಾಹನ ದಾಸ್ಯ ಮತ್ತು ಅನುಸರಣೆಯಿಂದ ವಿಮುಖತೆ, ಸ್ವ ನಿರ್ಮಿತ ಸಿದ್ಧಾಂತ-ನಿಯಮಗಳ ಅನುಸರಣೆ, ಅಲ್ಲಾಹನ ಮುಂದಿರುವ ಹೊಣೆಗಾರಿಕೆಯ ಮತ್ತು ಜವಾಬ್ದಾರಿಕೆ ಪ್ರಜ್ಞೆಯಿಲ್ಲದಿರುವಿಕೆ ಇತ್ಯಾದಿಗಳೇ ನೈಜ ದೋಷಗಳಾಗಿದ್ದುವು. ಆ ದೋಷಗಳ ನಿಮಿತ್ತ ದುಷ್ಟ ಸ್ವಭಾವಗಳು ಹುಟ್ಟಿ ಕೊಂಡುವು. ತಪ್ಪು ಜೀವನ ಸಿದ್ಧಾಂತಗಳು ಜಾರಿಗೆ ಬಂದುವು. ಲೋಕದಲ್ಲಿ ವಿನಾಶ ಸ್ಫೋಟಗೊಂಡಿತು. ತರುವಾಯ ಮಾನವನನ್ನು ಅಲ್ಲಾಹನ ದಾಸ್ಯ-ಅನುಸರಣೆಗೆ ಮರಳಿಸಲು, ಅಲ್ಲಾಹನ ನಿಷ್ಠೆ, ಭಯಭಕ್ತಿ ಮತ್ತು ಹೊಣೆಗಾರಿಕೆಯ ಪ್ರಜ್ಞೆಯನ್ನು ಆತನಲ್ಲಿ ಮೂಡಿಸಲು, ತನ್ಮೂಲಕ ಒಳಿತು ಅಭಿವೃದ್ಧಿಗೊಂಡು ಕೆಡುಕು ಅಳಿಯಲೆಂದು ಪ್ರವಾದಿಯ ನೇಮಕವಾಯಿತು- ಇದುವೇ ಪ್ರವಾದಿಗಳೆಲ್ಲರ ನೇಮಕದ ಏಕೈಕ ಉದ್ದೇಶವಾಗಿತ್ತು. ಕಟ್ಟಕಡೆಗೆ ಈ ಉದ್ದೇಶಾರ್ಥವಾಗಿಯೇ ಪ್ರವಾದಿ ಮುಹಮ್ಮದ್(ಸ) ಅವರ ನೇಮಕವಾಯಿತು.

ಇನ್ನು ಪ್ರಸ್ತುತ ಉದ್ದೇಶ ಸಾಧನೆಗಾಗಿ ಪ್ರವಾದಿ(ಸ) ಯಾವ ಕ್ರಮದಲ್ಲಿ ಕೆಲಸ ಮಾಡಿದರೆಂಬುದನ್ನು ನೋಡಬೇಕಾಗಿದೆ. ಪ್ರಥಮವಾಗಿ ಪ್ರವಾದಿವರ್ಯರು(ಸ) ಈಮಾನ್‌ನ ಬಗ್ಗೆ ಪ್ರಚಾರ ಮಾಡಿದರು. ಅತಿ ವಿಶಾಲ ಬುನಾದಿಗಳಲ್ಲಿ ಅದನ್ನು ಪರಿಪಕ್ವ ಮತ್ತು ಬಲಿಷ್ಠಗೊಳಿಸಿದರು. ತರುವಾಯ ಈಮಾನಿನ ಬೇಡಿಕೆಗಳನುಸಾರ, ಶಿಕ್ಷಣ ಶೀಲಗಳ ಮೂಲಕ ಕ್ರಮೇಣ ಸತ್ಯವಿಶ್ವಾಸಿಗಳಲ್ಲಿ ಕ್ರಿಯಾತ್ಮಕ ಅನುಸರಣೆ (ಇಸ್ಲಾಮ್), ನೈತಿಕ ಪಾವಿತ್ರ್ಯ (ತಕ್ವಾ), ಅಲ್ಲಾಹನೊಡನೆ ಗಾಢ ಪ್ರೇಮನಿಷ್ಠೆ ಮತ್ತು ಭಯಭಕ್ತಿ(ಇಹ್ಸಾನ್) ಬೆಳೆಸಿದರು. ಆ ಬಳಿಕ ನಿಷ್ಕಳಂಕ ಸತ್ಯವಿಶ್ವಾಸಿಗಳ ಸಂಘಟಿತ ತ್ಯಾಗ ಪ್ರಯತ್ನಗಳ ಮೂಲಕ ಅಜ್ಞಾನದ (ಜಾಹಿಲಿಯ್ಯತ್) ದುಷ್ಟಪದ್ಧತಿಯನ್ನು ಅಳಿಸಿ ಅದರ ಸ್ಥಾನದಲ್ಲಿ ದೇವ ನಿಯಮಗಳ ನೈತಿಕ ಮತ್ತು ನಾಗರಿಕ ಸಿದ್ಧಾಂತಗಳಂತೆ ಒಂದು ಉತ್ತಮ ವ್ಯವಸ್ಥೆಯನ್ನು ಸ್ಥಾಪಿಸಲಾರಂಭಿಸಿದರು. ಈ ರೀತಿಯಿಂದ ಆ ಜನರು ಅವರ ಹೃದಯ, ಮಸ್ತಿಷ್ಕ, ಸ್ವಭಾವ, ಆಚಾರ, ವಿಚಾರವೇ ಮುಂತಾದ ಸಕಲ ಸ್ಥಿತಿಗಳಲ್ಲಿಯೂ ನೈಜ ಮುಸ್ಲಿಮ್‌ಗಳಾಗಿ, ಮುತ್ತಕೀಗಳಾಗಿ ಮತ್ತು ಮುಹ್ಸಿನ್‌ಗಳಾಗಿ, ಅಲ್ಲಾಹನ ನಿಷ್ಠರಾದ ಮತ್ತು ಭಯಭಕ್ತಿಯುಳ್ಳ ಜನರು ತಾವು ನಿರ್ವಹಿಸಬೇಕಾದ ಕೆಲಸದಲ್ಲಿ ನಿರತರಾದ ನಂತರ ಅವರಿಗೆ ಪ್ರವಾದಿವರ್ಯರು(ಸ) ವೇಷಭೂಷಣ, ವಸ್ತ್ರ ಧಾರಣೆ, ಆಹಾರ ಪಾನೀಯ ಸೇವನೆ, ವರ್ತನೆ ಮುಂತಾದ ಬಾಹ್ಯ ಜೀವನದಲ್ಲಿ 'ಮುತ್ತಕೀ'ಗಳಿಗೆ ಯೋಗ್ಯವಾದ ನಡವಳಿಕೆಗಳ ಕುರಿತು ಕಲಿಸಿದರು. ಅರ್ಥಾತ್ ಮೊದಲು ಮಿಶ್ರಿತ ಚಿನ್ನವನ್ನು ಪುತ್ಥಳಿಯಾಗಿ ಮಾಡಿದರು. ತರುವಾಯ ಅದರ ಮೇಲೆ ಪವನ್‌ನ ಮುದ್ರೆ ಹಾಕಿದರು. ಮೊದಲು ಯೋಧನನ್ನು ಸಿದ್ಧಪಡಿಸಿ, ಆ ಬಳಿಕ ಆತನಿಗೆ ಸಮವಸ್ತ್ರ ತೊಡಿಸಿದರು. ಇದು ಕುರ್‌ಆನ್ ಮತ್ತು ಹದೀಸನ್ನು ಅವಲೋಕಿಸುವಾಗ ಕಂಡು ಬರುವ ಸ್ಪಷ್ಟ ಹಾಗೂ ಸೂಕ್ತ ವಿಧಾನ. ಸುನ್ನತನ್ನು

ಅನುಸರಿಸುವುದೆಂದರೆ ಪ್ರವಾದಿವರ್ಯರು(ಸ) ಅಲ್ಲಾಹನ ಅಭೀಷ್ಟವನ್ನು ಈಡೇರಿಸಲಿಕ್ಕಾಗಿ ಅಲ್ಲಾಹನ ನಿರ್ದೇಶನದಂತೆ ಅಂಗೀಕರಿಸಿದ ಕಾರ್ಯವಿಧಾನದ ಅನುಕರಣೆಯಾಗಿದೆ. ತದ್ವಿರುದ್ಧವಾಗಿ ನೈಜ ಮೂಮಿನ್, ಮುತ್ತಕೀ ಮತ್ತು ಮುಹ್ಸಿನ್‌ಗಳಾಗದೆ, ಮುತ್ತಕೀಗಳ ವೇಷತೊಟ್ಟು ಮುಹ್ಸಿನ್‌ಗಳ ಕೆಲವು ಪ್ರಮುಖ ಹಾಗೂ ಜನಪ್ರಿಯ ಕರ್ಮಗಳ ಅನುಕರಣೆಯು ಸುನ್ನತ್‌ನ ಅನುಕರಣೆಯಲ್ಲ. ಬದಲಾಗಿ ಅದರ ಧಿಕ್ಕಾರವಾಗಿದೆ. ಹಿತ್ತಾಳೆ ಮತ್ತು ತಾಮ್ರದ ತುಂಡುಗಳಿಗೆ 'ಪವನ್' ಎಂಬ ಮೊಹರು ಹಾಕಿ ಮಾರುಕಟ್ಟೆಗೆ ಹಾಕುವುದೂ ಯೋಧನ ಗುಣ ವೈಶಿಷ್ಟ್ಯ ಮತ್ತು ತ್ಯಾಗ ಸನ್ನದ್ಧತೆಯಿಲ್ಲದ ಓರ್ವನಿಗೆ ಯೋಧನ ಸಮವಸ್ತ್ರ ತೊಡಿಸಿ ಯುದ್ಧರಂಗಕ್ಕಿಳಿಸುವುದೂ ಕೇವಲ ಕೃತಕ ಹಾಗೂ ವಂಚನಾತ್ಮಕ ಕೆಲಸವಾಗಿದೆ. ತನ್ಮೂಲಕ ಮಾರುಕಟ್ಟೆಯಲ್ಲಿ ತಾಮ್ರದ ನಾಣ್ಯಕ್ಕೆ ಪವನಿನ ಬೆಲೆ ದೊರೆಯಲಾರದು. ತೋರಿಕೆಯ ಯೋಧನಿಂದ ಯುದ್ಧದಲ್ಲಿ ಜಯ ದೊರಕದು.

ಅಲ್ಲಾಹನ ಬಳಿ ನೈಜ ಸ್ಥಾನಮಾನ ಯಾವುದಕ್ಕಿರುವುದೆಂದು ಭಾವಿಸಿದ್ದೀರಿ? ಒಬ್ಬನಲ್ಲಿ ನೈಜ ವಿಶ್ವಾಸವಿದೆ, ಕರ್ತವ್ಯ ಪ್ರಜ್ಞೆಯಿದೆ, ಉತ್ತಮ ಗುಣಗಳಿವೆ, ಅಲ್ಲಾಹನ ಮಿತಿ ಮೇರೆಗಳನ್ನು ಆತ ಚೆನ್ನಾಗಿ ಪಾಲಿಸುತ್ತಾನೆ. ಆತನಲ್ಲಿ ಅಲ್ಲಾಹನ ಬಗ್ಗೆ ನಿಷ್ಠೆ, ಭಯಭಕ್ತಿ, ತ್ಯಾಗ ಮನೋಭಾವಗಳಿವೆ, ಆದರೆ ಬಾಹ್ಯ ಫ್ಯಾಶನ್‌ಗನುಸಾರ ಆತನಲ್ಲಿ ಕೆಲವು ಲೋಪಗಳಿವೆ. ಬಾಹ್ಯ ಸುಧಾರಣೆಯ ಮಾನದಂಡಕ್ಕೆ ಅವನು ಸರಿಹೊಂದುವುದಿಲ್ಲ. ಆದ್ದರಿಂದ ಆತನಲ್ಲಿ ಹೆಚ್ಚೆಂದರೆ ಒಂದಷ್ಟು ಸಭ್ಯತೆಯ ಕೊರತೆಯಿದೆಯೆಂದು ಹೇಳಬಹುದು. ಆದರೂ ಆತನು ನಿಷ್ಠೆ ಮತ್ತು ಭಕ್ತಿಯಿರುವ ಉತ್ತಮ ನೌಕರನೇ ಆಗಿರುತ್ತಾನೆ. ಆತನ ಅವಿವೇಕತನದಿಂದಾಗಿ ಪ್ರಾಯಶಃ ಆತನಿಗೆ ಉನ್ನತ ಪದವಿಗಳು ದೊರೆಯದಿರಬಹುದು ಆದರೆ ಆತನ ಅನುಸರಣೆಯ ಪ್ರತಿಫಲವು ನಷ್ಟವಾಗುವುದೆಂದೂ ಆತನ ಬಾಹ್ಯ ವೇಷ ಸರಿಯಿಲ್ಲದಿರುವುದರಿಂದ ಆತನನ್ನು ಸದಾಕಾಲ ನರಕದಲ್ಲಿರಿಸಲಾದೀತೆಂದೋ ನೀವು ಭಾವಿಸುತ್ತೀರಾ? ಈಗ ಇನ್ನೊಬ್ಬ ವ್ಯಕ್ತಿಯ ಕುರಿತು ಊಹಿಸೋಣ- ಆತನು ಅತ್ಯುತ್ತಮ ಶರಈ ಫ್ಯಾಶನ್ ಅಳವಡಿಸಿಕೊಂಡಿದ್ದಾನೆ. ಬಾಹ್ಯ ನೀತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದಾನೆ. ಆದರೆ ಆತನ ದೇವನಿಷ್ಠೆಯಲ್ಲಿ ನ್ಯೂನತೆಯಿದೆ. ಆತನ ಕರ್ತವ್ಯ ಪ್ರಜ್ಞೆಗೆ ಹಾನಿ ತಟ್ಟಿದೆ. ಆತನ ಸತ್ಯವಿಶ್ವಾಸ ದುರ್ಬಲವಾಗಿದೆ. ನೀವೇ ಆಲೋಚಿಸಿ ನೋಡಿರಿ. ಈ ನ್ಯೂನತೆಗಳಿರುತ್ತಾ ಆತನ ಬಾಹ್ಯ ಪರಿಪೂರ್ಣತೆಗೆ ಅಲ್ಲಾಹನ ಬಳಿ ಹೆಚ್ಚೆಂದರೆ ಎಷ್ಟು ಬೆಲೆ ದೊರೆಯಬಹುದು. ಇದು ಗಾಢವಾಗಿ ಆಲೋಚಿಸಿ, ಕಗ್ಗಂಟಿನಲ್ಲಿ ಸಿಲುಕಿ, ತಲೆಚಿಟ್ಟು ಮಾಡಬೇಕಾದ ಕಾನೂನು ಸಂಬಂಧೀ ಸಮಸ್ಯೆಯಲ್ಲ. ಅದನ್ನು ತಿಳಿಯಲಿಕ್ಕಾಗಿ ದೊಡ್ಡ ದೊಡ್ಡ ಗ್ರಂಥಗಳ ಪುಟಗಳನ್ನು ಮಗುಚಿ ಕಷ್ಟ ಪಡಬೇಕಾಗಿಲ್ಲ. ಈ ಎರಡು ವಿಷಯಗಳಲ್ಲಿ ನೈಜ ಬೆಲೆಯಿರುವುದು ಯಾವುದಕ್ಕೆಂಬುದನ್ನು ಸಾಮಾನ್ಯ ಬುದ್ಧಿಯಿರುವ ಪ್ರತಿಯೊಬ್ಬನಿಗೂ ಅರ್ಥಮಾಡಿಕೊಳ್ಳಲು ಸಾಧ್ಯವಿದೆ. ಹೀಗಿರುತ್ತಾ ಅಲ್ಲಾಹನ ಬಗ್ಗೆ, ಆತನು ಸ್ವರ್ಣ ಮತ್ತು ಹಿತ್ತಾಳೆಯನ್ನು ಪ್ರತ್ಯೇಕಿಸುವ ಬದಲಾಗಿ ಪವನ್‌ನ ಮೊಹರು ನೀಡಿದಾಗ ಪವನೆಂದು ಅಂಗೀಕರಿಸಬಲ್ಲನೆಂದು ತಪ್ಪು ತಿಳಿಯಲು ಸಾಧ್ಯವಿದೆಯೇ?

ಈ ನನ್ನ ಮಾತುಗಳಿಂದ ನಾನು ಬಾಹ್ಯ ಗುಣಗಳನ್ನು ನಿಷೇಧಿಸುತ್ತಿದ್ದೇನೆ ಅಥವಾ ಜೀವನದ ಬಾಹ್ಯ ಅಂಶಗಳ ಸುಧಾರಣೆಗೆ ಸಂಬಂಧಿಸಿದ ನಿಯಮಗಳನ್ನು ಅನಗತ್ಯವೆಂದು

ಭಾವಿಸುತ್ತೇನೆಂದು ಯಾರೂ ಭಾವಿಸಬೇಡಿರಿ. ಅಲ್ಲಾಹ್ ಮತ್ತು ಆತನ ಸಂದೇಶವಾಹಕರು ನೀಡುವ ಎಲ್ಲಾ ಆಜ್ಞೆಗಳನ್ನೂ ಪ್ರತಿಯೊಬ್ಬ ಸತ್ಯವಿಶ್ವಾಸಿಯು ಅನುಸರಿಸಬೇಕೆಂದು ವಾಸ್ತವದಲ್ಲಿ ನಾನು ವಾದಿಸುತ್ತಿದ್ದೇನೆ. ಇಸ್ಲಾಮ್ ಮಾನವನ ಅಂತರಂಗ-ಬಹಿರಂಗಗಳೆರಡನ್ನೂ ಸುಧಾರಿಸ ಬಯಸುತ್ತದೆಂಬುದನ್ನು ನಾನು ಒಪ್ಪುತ್ತೇನೆ. ಆದರೆ ನಾನು ನಿಮಗೆ ಮನವರಿಕೆ ಮಾಡಲು ಪ್ರಯತ್ನಿಸುತ್ತಿರುವುದೇನೆಂದರೆ- ಮೊದಲು, ಅಂತರಂಗದ ಸುಧಾರಣೆಯಾಗಬೇಕೇ ವಿನಾ ಬಾಹ್ಯವಲ್ಲವೆಂಬುದಾಗಿದೆ. ಪ್ರಥಮವಾಗಿ ಅಂತರಂಗದಲ್ಲಿ ವಾಸ್ತವಿಕ ಮೌಲ್ಯಗಳನ್ನು ಬಿತ್ತಿ ಬೆಳೆಸಲು ಪ್ರಯತ್ನಿಸಿರಿ. ತರುವಾಯ ಬಾಹ್ಯವನ್ನು ಆ ವಾಸ್ತವಿಕತೆಗನುಸಾರ ಬೆಳೆಸಿರಿ. ಪ್ರಪ್ರಥಮವಾಗಿ ನಾವು ಅಲ್ಲಾಹನ ಬಳಿ ನೈಜ ಸ್ಥಾನಕ್ಕೆ ಅರ್ಹವಾದ ಹಾಗೂ ಪ್ರವಾದಿಗಳ ನೇಮಕದ ನೈಜ ಉದ್ದೇಶವಾಗಿದ್ದ ಗುಣಗಳನ್ನು ಗಮನಿಸಬೇಕಾಗಿದೆ. ಬಾಹ್ಯ ಸುಧಾರಣೆಯು ಪ್ರಸ್ತುತ ಗುಣಗಳ ಕಾರಣ ಸ್ವಾಭಾವಿಕವಾಗಿ ಪ್ರತ್ಯಕ್ಷವಾಗುವಂಥದ್ದಾಗಿದೆ ಅಥವಾ ಅದರಲ್ಲಿ ಏನಾದರೂ ಲೋಪದೋಷ ಉಳಿದಿದ್ದರೆ ಪ್ರತಿಯೊಂದು ಹಂತವೂ ಪೂರ್ಣವಾಗುವ ಸಂದರ್ಭದಲ್ಲಿ ಆ ಕುರಿತು ಗಮನಿಸಬಹುದಾಗಿದೆ.

ಮಿತ್ರರೇ! ಅನಾರೋಗ್ಯ ಮತ್ತು ಬಳಲಿಕೆಯಿರುತ್ತಾ ನಾನು ಇಷ್ಟೊಂದು ಸುದೀರ್ಘ ಭಾಷಣ ಮಾಡಹೊರಟ ಉದ್ದೇಶವು ವಾಸ್ತವಿಕಾಂಶವನ್ನು ಸ್ಪಷ್ಟ ರೀತಿಯಲ್ಲಿ ನಿಮ್ಮ ಮುಂದಿಡುವ ಮೂಲಕ ಅಲ್ಲಾಹನ ಸನ್ನಿಧಿಯಲ್ಲಿ ಹೊಣೆ ಮುಕ್ತನಾಗುವುದೇ ಆಗಿದೆ. ಜೀವನದ ಯಾವುದೇ ಭರವಸೆಯಿಲ್ಲ. ತನ್ನ ಆಯುಷ್ಯಪೂರ್ಣವಾಗುವ ಗಳಿಗೆ ಯಾರಿಗೂ ತಿಳಿಯದು. ಆದ್ದರಿಂದ ನನಗೆ ತಿಳಿದಿರುವ ಸತ್ಯವನ್ನು ನಿಮಗೆ ತಲುಪಿಸಬೇಕಾದ ಹೊಣೆಗಾರಿಕೆಯನ್ನು ಪೂರೈಸಬೇಕಾದುದು ನನ್ನ ಕರ್ತವ್ಯವಾಗಿದೆ. ಏನಾದರೂ ವಿವರಣೆ ಬೇಕಿದ್ದರೆ ಅದನ್ನು ಕೇಳಿರಿ. ನಾನು ಸತ್ಯಕ್ಕೆದುರಾಗಿ ಏನಾದರೂ ಹೇಳಿದ್ದರೆ ಅದನ್ನು ನಿಸ್ಸಂಕೋಚವಾಗಿ ಖಂಡಿಸಿರಿ. ನಾನು ಸತ್ಯವನ್ನು ಸರಿಯಾಗಿ ಮತ್ತು ಕ್ರಮವಾಗಿ ನಿಮಗೆ ತಲುಪಿಸಿದ್ದರೆ ನೀವು ಅದಕ್ಕೆ ಸಾಕ್ಷಿಗಳಾಗಿರಿ. (ಸಭಿಕರು: ನಾವು ಸಾಕ್ಷಿಗಳಾಗಿದ್ದೇವೆ ಎಂದೂ ಕೂಗಿದರು) ನೀವು ಸಾಕ್ಷಿಗಳಾಗಿದ್ದೀರಿ. ಅಲ್ಲಾಹನೂ ಸಾಕ್ಷಿಯಾಗಿದ್ದಾನೆ. ಅಲ್ಲಾಹನು ನಮಗೆ ಆತನ ಧರ್ಮದ ಕುರಿತು ಸರಿಯಾದ ಜ್ಞಾನವನ್ನು ನೀಡಿ, ಅದರಂತೆ ಧರ್ಮದ ಬೇಡಿಕೆಗಳನ್ನು ಈಡೇರಿಸುವ ಸೌಭಾಗ್ಯ ದಯಪಾಲಿಸಲಿ. ಆಮೀನ್.

## ದೇವ ಸ್ಮರಣೆ, ಶಿಸ್ತು ಮತ್ತು ಜಮಾಅತ್‌ನ ಸಂದೇಶ

[1946ರ ಎಪ್ರಿಲ್ 5,6,7 ರಂದು ಅಲಹಾಬಾದ್‌ನಲ್ಲಿ ಜರಗಿದ ಜಮಾಅತೆ ಇಸ್ಲಾಮಿಯ ದ್ವಿತೀಯ ವಾರ್ಷಿಕ ಸಮ್ಮೇಳನದಲ್ಲಿ ಮೌಲಾನಾ ಅಮೀನ್ ಅಹ್ಸನ್ ಇಸ್ಲಾಹೀ ಮಾಡಿದ ಪ್ರಾಸ್ತಾವಿಕ ಭಾಷಣ]

ಮಿತ್ರರೇ! ಈ ಸಮ್ಮೇಳನವನ್ನು ಉದ್ಘಾಟಿಸುತ್ತಾ ನಾನು ಪ್ರಥಮವಾಗಿ ಅಲ್ಲಾಹನ ದಿಕ್ರ್(ದೇವ ಸ್ಮರಣೆ)ನ ಕುರಿತು ನಿಮಗೆ ಉಪದೇಶ ನೀಡ ಬಯಸುತ್ತೇನೆ. ನಮ್ಮ ಲೌಕಿಕ ಜೀವನದಲ್ಲಿ ಉಸಿರಾಟವಿರುವಂತೆ ಆಧ್ಯಾತ್ಮಿಕ ಜೀವನದಲ್ಲಿ ಅಲ್ಲಾಹನ ಸ್ಮರಣೆಯು ಅನುಕ್ಷಣವೂ ಅತ್ಯಗತ್ಯವಾಗಿದೆ. ಆದರೆ ದೇವ ಸ್ಮರಣೆಯನ್ನು ಹಾಳು ಗೆಡಹುವ ಕಾರಣಗಳು ಮತ್ತು ಪ್ರೇರಕ

ವಸ್ತುಗಳು ಹೆಚ್ಚಾಗಿ ಒಟ್ಟು ಸೇರುವಾಗ ನಾವು ಆ ಬಗ್ಗೆ ವಿಶೇಷ ಎಚ್ಚರಿಕೆ ವಹಿಸಬೇಕಾಗುತ್ತದೆ. ಈ ಸ್ಮರಣೆಯೇ ನಮ್ಮ ವಿಚಾರ ಹಾಗೂ ದೃಷ್ಟಿಕೋನಗಳ ಮೇಲೆ ಬೆಳಕು ಚೆಲ್ಲುತ್ತದೆ. ಈ ಸಮ್ಮೇಳನದಲ್ಲಿ ನಾವು ಚರ್ಚಿಸುವ ವಿಷಯಗಳ ಸರಿಯಾದ ಪ್ರಯೋಜನ ದೊರೆಯಬೇಕಾದರೆ ಅದರ ಸಹಾಯ ಅತ್ಯವಶ್ಯಕವಾಗಿದೆ. ಈ ಸಂದರ್ಭದಲ್ಲಿ ನಮ್ಮ ಹೃದಯ ಮತ್ತು ನಾಲಗೆಯನ್ನು ಅಸಭ್ಯತೆ, ಪರದೂಷಣೆ, ಪರಿಹಾಸವೇ ಮುಂತಾದ ದುರ್ಗುಣಗಳಿಂದ ಆ ದೇವಸ್ಮರಣೆಯೇ ರಕ್ಷಿಸುತ್ತದೆ. ಕಾರಣಾಂತರದಿಂದ ಭಿನ್ನಾಭಿಪ್ರಾಯ ಮತ್ತು ವೈಚಾರಿಕ ಸಂಘರ್ಷದ ವೇಳೆ ದೇವಸ್ಮರಣೆಯ ಈ ವಿಶೇಷ ಗುಣಗಳು ನಮ್ಮ ಸಂರಕ್ಷಣೆಗೆ ನೆರವಾಗುವುದು. ಆ ಕುರಿತು ನಾವು ಗಮನ ಹರಿಸದಿದ್ದರೆ ನಮ್ಮ ಪ್ರತಿಯೊಂದು ಹೆಜ್ಜೆಯೂ ತಪ್ಪಬಹುದು. ನಾವು ಅಲ್ಲಾಹನ ವಚನವನ್ನು ಮೊಳಗಿಸುವ ದೃಢ ನಿರ್ಧಾರದಿಂದ ಹೊರಟಿದ್ದೇವೆ. ಇಂತಹ ಸಂಘಟನೆಯಲ್ಲಿ ಅಲ್ಲಾಹನ ಅಭೀಷ್ಟಕ್ಕೆ ವಿರುದ್ಧವಾದ ಏನಾದರೂ ನಮ್ಮಿಂದ ಸಂಭವಿಸುತ್ತಿದೆಯೋ ಎಂಬುದನ್ನು ಪ್ರತಿಯೊಂದು ಮಾತು ಕೃತಿಯಲ್ಲಿ ಸದಾ ಕಡ್ಡಾಯವಾಗಿ ಪರಿಶೀಲಿಸಬೇಕು. ಹೃದಯದಲ್ಲಿ ಅಲ್ಲಾಹನ ಸ್ಮರಣೆಯನ್ನು ತುಂಬಿರುವ ಜನರಿಗೆ ಮಾತ್ರ ಅದು ಸಾಧ್ಯ.

**ದೇವ ಸ್ಮರಣೆಯ ನೈಜ ತಾತ್ಪರ್ಯ:** ಅಲ್ಲಾಹನನ್ನು ಸ್ಮರಿಸುವುದರ ತಾತ್ಪರ್ಯವು ಸಾಮಾನ್ಯವಾಗಿ ತಿಳಿದಿರುವುದಕ್ಕಿಂತ ಎಷ್ಟೋ ವಿಶಾಲವಾಗಿದೆ. ನೈಜ ದೇವಸ್ಮರಣೆಯೆಂದರೆ ಕೇವಲ ನಾಲಗೆಯಿಂದ ಅಲ್ಲಾಹನ ನಾಮವನ್ನು ಜಪಿಸುವುದಲ್ಲ. ಅಂತಹ ದಿಕ್ರ್‌ಗಳು ಕೇವಲ ನಾಲಗೆಯ ಕೆಲಸವಾಗಿ ಉಳಿದಿರುವುವು. ಮಾನವ ಜೀವನವನ್ನು ಸಂರಕ್ಷಿಸಲು ಅದು ಸಾಲದು. ವೈಚಾರಿಕತೆಯಿಂದ ಕೂಡಿದ 'ದಿಕ್ರ್' ಮಾತ್ರ ನಿಜವಾದ 'ದಿಕ್ರ್' ಆಗಿರುವುದು. ವಿಚಾರ ಶೂನ್ಯವಾದ 'ದಿಕ್ರ್' ಸಂಪೂರ್ಣ ನಿಷ್ಫಲವಾಗಿರುವುದು. ದೇವ ಸ್ಮರಣೆಯ ಅನುಗ್ರಹಗಳನ್ನು ಸಂಪೂರ್ಣ ಸವಿಯಬೇಕಾದರೆ ಅಲ್ಲಾಹನನ್ನು, ಆತನ ಶ್ರೇಷ್ಠ ಗುಣಗಳನ್ನು, ಆತನ ವಿಸ್ಮಯಕಾರೀ ಪ್ರಪಂಚ ನಿಯಂತ್ರಣವನ್ನು, ಅಜೇಯ ಶಕ್ತಿ ಸಾಮರ್ಥ್ಯಗಳನ್ನು, ನಾವು ಆತನೊಂದಿಗೆ ಮಾಡಿರುವ ಪ್ರತಿಜ್ಞೆಯನ್ನು, ಪ್ರತಿಜ್ಞಾಪಾಲನೆಗೆ ಆತನು ನೀಡಿರುವ ಭರವಸೆಗಳನ್ನು, ಪ್ರತಿಜ್ಞೆಯ ಉಲ್ಲಂಘನೆಯ ಕುರಿತು ನೀಡಿರುವ ಎಚ್ಚರಿಕೆಗಳನ್ನು ನಾವು ನೆನಪಿಡಬೇಕು. ನಮ್ಮ ಪರಿಶ್ರಮಗಳ ಏಕೈಕ ಧ್ಯೇಯವು ಅಲ್ಲಾಹನ ವಾಣಿಯನ್ನು ಮೊಳಗಿಸುವುದಾಗಿರಬೇಕು. ನಮ್ಮ ನಾಲಗೆಯಿಂದ ಏನಾದರೂ ಮಾತು ಹೊರಡುವುದಿದ್ದರೆ ಅದು ಆತನ ಅಭೀಷ್ಟಕ್ಕೆ ಅನುಸಾರವಾಗಿರಬೇಕು. ನಮ್ಮ ಪ್ರತಿಯೊಂದು ಹೆಜ್ಜೆಯೂ ಆತನ ಮಾರ್ಗದಲ್ಲಾಗಿರಬೇಕು. ಶೈತಾನನ ಮಾರ್ಗದಲ್ಲಿ ಆಗಿರಬಾರದು. ಇದುವೇ ಅಲ್ಲಾಹನು ನಮ್ಮಿಂದ ಬಯಸುವ ದಿಕ್ರ್ ಆಗಿದೆ. ಬೆಳಗು-ಬೈಗುಗಳಲ್ಲಿ ಕೇವಲ ನಾಲಗೆಯಿಂದ ಆತನ ನಾಮವನ್ನು ಜಪಿಸುತ್ತಾ ತರುವಾಯ ಆತನ ಸೇವೆಯನ್ನು ನಿರ್ಲಕ್ಷಿಸಿ ಬಿಟ್ಟರೆ ಅಂತಹ ದಿಕ್ರ್‌ಗಳಿಗೆ ಆತನ ಬಳಿ ಯಾವ ಬೆಲೆಯೂ ಇಲ್ಲ. ವಾಸ್ತವದಲ್ಲಿ ನಾವು ಅಲ್ಲಾಹನನ್ನು ಸ್ಮರಿಸಬಯಸುವುದಿದ್ದರೆ ಅಲ್ಲಾಹನ ಮತ್ತು ನಮ್ಮ ಮಧ್ಯೆ ಪ್ರವಾದಿಗಳ ಮೂಲಕ ನಡೆದಿರುವ ಆ ಮಹಾ ಪ್ರತಿಜ್ಞೆಯನ್ನು ನಾವು ಜ್ಞಾಪಿಸಿಕೊಳ್ಳಬೇಕು. ಅಲ್ಲಾಹನ ಸಮಗ್ರ ಧರ್ಮವು ಅದರಲ್ಲಿ ಒಳಗೊಂಡಿದೆ. ಜೀವನದ ಎಲ್ಲಾ ಹಂತಗಳಲ್ಲಿಯೂ ಆ ಧರ್ಮದಂತೆ ವರ್ತಿಸುವುದು, ಅದರ ಸಂಸ್ಥಾಪನೆಗಾಗಿ ಪ್ರಯತ್ನಿಸುವುದು, ಇದೇ ನೈಜ

ದೇವ ಸ್ಮರಣೆ. ನೀವು ನನ್ನೊಡನೆ ಮಾಡಿರುವ ಕರಾರನ್ನು ಜ್ಞಾಪಿಸಿರಿ. ಹಾಗಾದರೆ ನಿಮ್ಮೊಡನೆ ಮಾಡಿರುವ ಕರಾರನ್ನು ನಾನು ಜ್ಞಾಪಿಸುತ್ತೇನೆ. ನಾನು ನಿಮಗೆ ನೀಡಿರುವ ಧರ್ಮವೆಂಬ ಆ ಮಹಾ ಅನುಗ್ರಹಕ್ಕೆ ಸಂಪೂರ್ಣ ಕೃತಜ್ಞತೆಯುಳ್ಳವರಾಗಿರಿ, ಎಂದೂ ಕೃತಘ್ನರಾಗಬೇಡಿರಿ ಎಂಬ ಕುರ್‌ಆನ್ ವಾಕ್ಯವು ಆ ಸ್ಮರಣೆಯ ಬಗ್ಗೆಯೇ ಒತ್ತಿ ಹೇಳುತ್ತದೆ. ಆ ದೇವಸ್ಮರಣೆಯ ಕುರಿತಾಗಿಯೇ ನಾನೀಗ ಹೇಳುತ್ತಿದ್ದೇನೆ. ಈ ಬಗ್ಗೆ ನಾವು ಅಸಡ್ಡೆ ತೋರಿದರೆ ನಾವು ಇಷ್ಟೆಲ್ಲಾ ಮಾಡಿ ಮುಗಿಸಿದ್ದರೂ ನಮ್ಮ ಹಣ, ಸಮಯ, ಸಾಮರ್ಥ್ಯಗಳೆಲ್ಲವೂ ವ್ಯರ್ಥವಾಯಿತೆಂದು ಭಾವಿಸುತ್ತೇನೆ. ಅದಾದರೋ ಇಹ-ಪರಗಳಲ್ಲಿ ಘೋರ ನಷ್ಟವಾಗಿರುವುದು.

ಶಿಸ್ತು: ಎರಡನೆಯದಾಗಿ ನಾನು ಶಿಸ್ತಿನ ಬಗ್ಗೆ ನಿಮ್ಮ ಗಮನ ಸೆಳೆಯ ಬಯಸುತ್ತೇನೆ. ಇತರರ ಮಟ್ಟಿಗೆ ಶಿಸ್ತು ಕೇವಲ ಸಾಮೂಹಿಕ ನೀತಿಯಾಗಿದೆ. ತದ್ವಿರುದ್ಧವಾಗಿ ವರ್ತಿಸುವವನು ಪಕ್ಷದಲ್ಲಿ ಮಾತ್ರ ಅಪಹಾಸ್ಯಕ್ಕೀಡಾಗುತ್ತಾನೆ.

ಆದರೆ ಓರ್ವ ಮುಸ್ಲಿಮನ ಮಟ್ಟಿಗೆ, ಶಿಸ್ತಿಗೆ ಧಾರ್ಮಿಕ ಕರ್ತವ್ಯದ ಸ್ಥಾನವಿದೆ. ತದ್ವಿರುದ್ಧವಾಗಿ ವರ್ತಿಸುವುದರಿಂದ ಆತನು ಇಹಲೋಕದಲ್ಲಿಯೂ ನಿಂದಿತನಾಗುವನಲ್ಲದೇ ಪರಲೋಕದಲ್ಲಿ ಅಲ್ಲಾಹನ ಮತ್ತು ಪ್ರವಾದಿಯ ಅಸಂತೃಪ್ತಿಗೂ ಅದು ಕಾರಣವಾಗುತ್ತದೆ. ಸಂಘಟಿತ ಜೀವನದ ಭದ್ರತೆಗೂ ಅಭಿವೃದ್ಧಿಗೂ ಅಗತ್ಯವಾದ ಸಕಲ ವಿಷಯಗಳನ್ನು ಅಲ್ಲಾಹ್ ಮತ್ತು ಪ್ರವಾದಿ(ಸ) ನಿರ್ದೇಶಿಸುತ್ತಾರೆ. ಅವುಗಳನ್ನು ಪಾಲಿಸುವಂತೆ ಪ್ರತಿಯೋರ್ವ ಮುಸ್ಲಿಮನನ್ನು ಆದೇಶಿಸಿದ್ದಾರೆ. ಆದ್ದರಿಂದ ಸಾಂಘಿಕ ನೀತಿಯು ದುರ್ಬಲವಾದ ಸಂಘಟನೆಯಲ್ಲಿ ಪ್ರದರ್ಶಿಸಬೇಕಾದ ಗುಣ ನಡತೆಗಳ ತಿಳುವಳಿಕೆಯಿಲ್ಲದ ಜನರಿಗೆ ನೈತಿಕ ಶ್ರೇಷ್ಠತೆಯು ನಷ್ಟವಾಗುವುದು. ಅಲ್ಲದೇ ಸಾಂಘಿಕ, ನೈತಿಕ ದೌರ್ಬಲ್ಯಗಳಿಗನುಸಾರ ಅವರ ಧಾರ್ಮಿಕ ಸಂಬಂಧವು ದುರ್ಬಲವಾಗುವುದು. ಸಾಂಘಿಕ ಉನ್ನತ ನಡವಳಿಕೆಗಳನ್ನು ಮೈಗೂಡಿಸಿಕೊಳ್ಳದೇ ಯಾರೂ ಉನ್ನತ ಮಟ್ಟದ ಧರ್ಮಭಕ್ತ ಮುಸ್ಲಿಮರಾಗಲಾರರು. ಅವರು ಎಷ್ಟೇ ನಮಾಝ್ ನಿರ್ವಹಿಸಿದರೂ ಉಪವಾಸ ಆಚರಿಸಿದರೂ ಸಾಂಘಿಕ ನೈತಿಕತೆಗೆ ಪರಿಹಾರವಾಗಲಾರದು. ಉನ್ನತ ಗುಣಗಳನ್ನು ಪರಿಪೂರ್ಣಗೊಳಿಸುವುದೇ ಪ್ರವಾದಿತ್ವ ರಾಯಭಾರದ ಉದ್ದೇಶವಾಗಿದ್ದಿತ್ತು. ಇಂದು ಅಂತಹ ಉನ್ನತ ಗುಣಗಳನ್ನು ಮುಸ್ಲಿಮರು ಮಾದರಿಯಾಗಿಸಿಕೊಳ್ಳುವುದಿಲ್ಲವೆಂದಾದರೆ ಪ್ರವಾದಿಯ ನೇಮಕಾತಿಯ ಬಗ್ಗೆಯೇ ಅವರು ಅಲಕ್ಷ್ಯ ತೋರುವರೆಂದರ್ಥ.

ಪ್ರವಾದಿವರ್ಯರು(ಸ) ಸದಾಚಾರ, ನೈತಿಕತೆಗಳ ಕುರಿತು ಅಜ್ಞಾನಿಗಳಾಗಿದ್ದ ಹಾಗೂ ಕಿರಾತರಾಗಿದ್ದ ಅರಬರಿಗೆ ನೀಡಿದ ಶಿಕ್ಷಣವು ಮೂಡಿಸಿದ ಉತ್ತಮ ಸ್ವಭಾವವನ್ನು ಇರಾನಿನ ಸೇನಾಧಿಪತಿಯಾಗಿದ್ದ 'ರುಸ್ತುಮ್' ನ ಈ ಕೆಳಗಿನ ಮಾತುಗಳಿಂದ ತಿಳಿಯಬಹುದು-

"ಉಮರ್ ನನ್ನ ಕರುಳು ತಿಂದು ಬಿಟ್ಟನು. ಅವನು ನಾಯಿಗಳಿಗೆ ಶಿಸ್ತು ಕಲಿಸುತ್ತಿದ್ದಾನೆ!" ಒಂದು ಪಕ್ಷದ ಶಿಸ್ತು ನಾಗರಿಕವಾಗಿ ಮುಂದುವರಿದ ಇರಾನಿನಂತಹ ರಾಷ್ಟ್ರದ ಓರ್ವ ದಂಡನಾಯಕನೂ ಕೂಡಾ ಅಸೂಯೆ ಪಡುವಂತಿದ್ದರೆ ಆ ಪಕ್ಷದ ಸಾಂಘಿಕ ಶಿಸ್ತು ಮತ್ತು ಗುಣ ನಡತೆಗಳನ್ನೊಮ್ಮೆ ಕಲ್ಪಿಸಿ ನೋಡಿರಿ. ತರುವಾಯ ಅದನ್ನು ನಮ್ಮ ಇಂದಿನ ನೈತಿಕ ಸ್ಥಿತಿಯೊಂದಿಗೆ ಹೋಲಿಸಿ ನೋಡಿರಿ. ಅವೆರಡಕ್ಕೂ ಅಜಗಜಾಂತರವಿದೆ. ಆದ್ದರಿಂದ ನಾವಿಂದು ಸಾಧಿಸಹೊರಟಿರುವ ಅತ್ಯುನ್ನತ ಧ್ಯೇಯವನ್ನು ದೃಷ್ಟಿಯಲ್ಲಿರಿಸಿ ಅದರ ಈಡೇರಿಕೆಗಾಗಿ

ವೈಯಕ್ತಿಕ ಹಾಗೂ ಸಾಮಾಜಿಕವಾಗಿ ಅಗತ್ಯವಿರುವ ಗುಣ ನಡತೆಗಳನ್ನು ನಮ್ಮಲ್ಲಿ ಬೆಳೆಸಿಕೊಳ್ಳಲು ಅವಿಶ್ರಾಂತವಾಗಿ ಪ್ರಯತ್ನಿಸಬೇಕು.

**ಜಮಾಅತ್‌ನ ಸಂದೇಶ ಪ್ರಚಾರ:** "ಕೊನೆಯದಾಗಿ ಜಮಾಅತ್‌ನ ಸಂದೇಶದ ಮೂಲಭೂತ ಸಿದ್ಧಾಂತಗಳನ್ನು ಸಂಕ್ಷಿಪ್ತವಾಗಿ ವಿವರಿಸುತ್ತೇನೆ. ಜಗದ್ರಕ್ಷಕನಾದ ಅಲ್ಲಾಹನೇ ಈ ಇಡೀ ಪ್ರಪಂಚದ ಸೃಷ್ಟಿಕರ್ತ, ಪ್ರಭು, ಸಂರಕ್ಷಕ ಮತ್ತು ಅಧಿಪತಿಯಾಗಿದ್ದಾನೆ. ಆತನಿಗೆ ಮಾತ್ರ ಲೋಕವನ್ನು ಆಳುವ ಅಧಿಕಾರವಿದೆ. ಆಕಾಶದಲ್ಲಿ ಆತನ ಆಜ್ಞೆಯು ನಡೆಯುವಂತೆಯೇ ಭೂಮಿಯಲ್ಲಿಯೂ ಆತನ ಆಜ್ಞೆಯೇ ನಡೆಯಬೇಕು. ಅಲ್ಲಾಹನು ತನ್ನ ಪ್ರವಾದಿಗಳ ಮೂಲಕ ತನ್ನ ಇಷ್ಟಾನಿಷ್ಟಗಳನ್ನು ನಮಗೆ ತಿಳಿಸಿದ್ದಾನೆ. ಪ್ರವಾದಿಗಳ ಮೂಲಕ ನೀಡಲಾಗಿರುವ ಜೀವನ ವ್ಯವಸ್ಥೆಯಂತೆ ಜೀವನ ಸಾಗಿಸುವುದರಲ್ಲಿ ಆತನ ಸಂತೃಪ್ತಿ ಅಡಕವಾಗಿದೆ. ಜೀವನದ ಯಾವುದೇ ಅಂಶವನ್ನು ದೈವಿಕ ವ್ಯವಸ್ಥೆಯಿಂದ ಸ್ವತಂತ್ರಗೊಳಿಸಬಾರದು. ಅರ್ಥಾತ್ ಜೀವನದ ಕೆಲವು ಅಂಶಗಳಲ್ಲಿ ಅಲ್ಲಾಹನ ಮತ್ತು ಪ್ರವಾದಿಯ ಆದೇಶವನ್ನು ಸ್ವೀಕರಿಸಿ ಇತರ ಕೆಲವು ರಂಗಗಳಲ್ಲಿ ದೇಹೇಚ್ಛೆ ಅಥವಾ ಇತರ ಸೃಷ್ಟಿಗಳಿಗೆ ವಿಧೇಯರಾಗಿ ಜೀವಿಸುವುದನ್ನು ಅಲ್ಲಾಹನು ಮೆಚ್ಚುವುದಿಲ್ಲ. ಇಂತಹ ವಿಂಗಡಣೆಯು ಸಂಪೂರ್ಣ 'ಶಿರ್ಕ್' ಆಗಿದೆ. ಶಿರ್ಕ್ ಮಿಶ್ರಿತ ವಿಧೇಯತೆಯನ್ನು ಅಲ್ಲಾಹನು ಯಾವ ರೀತಿಯಿಂದಲೂ ಅಂಗೀಕರಿಸುವುದಿಲ್ಲ."

ಈ ಸಂದೇಶವನ್ನು ನಾವು ವೈಚಾರಿಕ ಬುನಾದಿಗಳಲ್ಲಿ ಲೋಕದ ಮುಂದಿಡುತ್ತೇವೆ. ಮಾನವ ಬುದ್ಧಿಯನ್ನು ಇದಕ್ಕಿಂತ ಮಿಗಿಲಾಗಿ ಆಕರ್ಷಿಸುವ ಯಾವ ಸಿದ್ಧಾಂತವೂ ಇಲ್ಲವೆಂದು ನಾವು ದೃಢವಾಗಿ ನಂಬುತ್ತೇವೆ. ನಮ್ಮ ಈ ಧರ್ಮ ಪ್ರಚಾರವು ಸಂಪೂರ್ಣ ಮಾನವಕುಲಕ್ಕೆ ಸಾರ್ವತ್ರಿಕ ಮತ್ತು ಸಮಾನವಾಗಿದೆ. ಇಸ್ಲಾಮನ್ನು ಅಂಗೀಕರಿಸಿದವರೆಂದು ವಾದಿಸುತ್ತಲಿದ್ದರೂ ಇತರ ಸಮುದಾಯಗಳಂತೆಯೇ ಅಲ್ಲಾಹನ ಆಧಿಪತ್ಯದ ಅಂಗೀಕಾರದ ವಿಷಯದಲ್ಲಿ ಹಿಂದೆ ಸರಿದಿರುವ ಮುಸ್ಲಿಮರ ಮುಂದೆಯೂ ನಾವು ಸಂದೇಶವನ್ನು ಇಡುತ್ತೇವೆ. ವಿವಿಧ ಸಮುದಾಯಗಳಲ್ಲಿ ನಮ್ಮ ಈ ಸಂದೇಶವನ್ನು ಸ್ವೀಕರಿಸಿ ಅಲ್ಲಾಹನ ಅನುಸರಣೆಯ ಮಿತಿಯೊಳಗೆ ಜೀವಿಸಲು ಸಿದ್ಧವಾಗುವ ಜನರನ್ನು ನಮ್ಮ ಧ್ಯೇಯದೆಡೆಗೆ ಒಗ್ಗಟ್ಟಿನಿಂದ ಮುನ್ನಡೆಯಲಿಕ್ಕಾಗಿ ನಾವೊಂದು ಸಂಘಟನೆಯನ್ನಾಗಿ ಮಾಡುತ್ತೇವೆ.

ಮಾನವ ಲೋಕದ ವಿನಾಶಗಳಿಗೂ ಯಾತನೆಗಳಿಗೂ ಕಳವಳಗಳಿಗೂ ಕಾರಣವಾಗಿರುವ ಇಂದಿನ ದುಷ್ಟ ಜೀವನ ವಿಧಾನದ ಬದಲಿಗೆ ಸದಾ ಕಾಲವೂ ದೇವ ಪ್ರವಾದಿಗಳಿಂದ ಪ್ರಚಾರಗೊಂಡ ಇಸ್ಲಾಮೀ ವ್ಯವಸ್ಥೆಯ ನಿರ್ಮಾಣಕ್ಕಾಗಿ ಪ್ರಯತ್ನಿಸುವುದೇ ನಮ್ಮ ಕಾರ್ಯಕ್ರಮವಾಗಿದೆ. ಇಸ್ಲಾಮಿನ ಹೊರತು ಇನ್ನಾವ ಪದ್ಧತಿಯೂ ಸೂಕ್ತ ಜೀವನ ವಿಧಾನದ ಬುನಾದಿಗಳನ್ನು ಹೊಂದಿಲ್ಲವೆಂದು ನಾವು ಖಚಿತವಾಗಿ ನಂಬಿದ್ದೇವೆ. ಆದ್ದರಿಂದ ನಾವು ಇಸ್ಲಾಮ್ ಧರ್ಮವನ್ನು ಸಂಪೂರ್ಣ ಲೋಕದ ಮುಂದಿರಿಸುತ್ತೇವೆ. ತಮ್ಮ ಮುಸ್ಲಿಮ್ ವಿರೋಧಿ ಪಕ್ಷಪಾತಗಳನ್ನು ಇಸ್ಲಾಮಿನ ವಿರುದ್ಧ ತೋರಿಸಬೇಡಿರೆಂದು ನಾವು ಎಲ್ಲ ಮನುಷ್ಯರಲ್ಲಿಯೂ ವಿನಂತಿಸುತ್ತೇವೆ. ಇಸ್ಲಾಮೀ ಶಿಕ್ಷಣ ಮೌಲ್ಯಗಳನ್ನು ಅದರದೇ ಗುಣಗಳ (Merits) ಆಧಾರದಲ್ಲಿ ಪರಿಶೀಲಿಸಬೇಕಾಗಿದೆ. ಇಸ್ಲಾಮಿನ ಕುರಿತು ಅವರು ಈ ರೀತಿಯಿಂದ ಆಲೋಚಿಸಿದರೆ ಇಂದು ಲೋಕದಲ್ಲಿ ಬಗೆಹರಿಸಲಾಗದೆ ತೊಳಲಾಡುತ್ತಿರುವ ಸಕಲ ಸಮಸ್ಯೆಗಳಿಗೂ

ಸೂಕ್ತ ಪರಿಹಾರವನ್ನು ಅವರಿಗೆ ಅದರಲ್ಲಿ ಕಾಣಬಹುದಾಗಿದೆ."

ಈ ಕೆಲಸವನ್ನು ಜನರು ಅತ್ಯಂತ ಕಠಿಣವೆಂದು ಮಾತ್ರವಲ್ಲ, ಅಸಾಧ್ಯವೆಂದೇ ಭಾವಿಸುತ್ತಿದ್ದಾರೆ. ಆದರೆ ನಾವು ಆಶಾ ಭಾವನೆಯನ್ನು ಇರಿಸಿಕೊಂಡಿದ್ದೇವೆ. ಈ ಕೆಲಸವನ್ನು ಅದರ ಸರಿಯಾದ ರೂಪದಲ್ಲಿ ನಿರ್ವಹಿಸಿದರೆ ಅದರ ವಿಜಯ ಸಾಧ್ಯತೆಯು ಇಂದು ಹಿಂದೆಂದಿಗಿಂತಲೂ ನಿಚ್ಚಳವಾಗಿದೆ. ನಾವು ಬಯಸಿದ ಸತ್ಯ ವ್ಯವಸ್ಥೆಯು ಭೂಮಿಯ ಒಂದಂಗುಲ ಸ್ಥಳದಲ್ಲಿಯೂ ಇಂದು ಅಸ್ತಿತ್ವದಲ್ಲಿಲ್ಲ ನಿಜ. ಆದರೆ ನಾವು ಈ ಅವಸ್ಥೆ ನೋಡಿ ನಿರಾಶರಾಗಬೇಕಾಗಿಲ್ಲ. ಈ ಸತ್ಯ ವ್ಯವಸ್ಥೆಯನ್ನು ಜಾರಿಗೊಳಿಸಬೇಕೆಂಬ ಬಯಕೆಯಷ್ಟು ಬಲಿಷ್ಠವಾದ ಬಯಕೆ ಯಾವುದೇ ಇತರ ವ್ಯವಸ್ಥೆಯ ಕುರಿತು ಇರಲಾರದು. ಅದು ಸಾಧ್ಯವೂ ಇಲ್ಲ. ಆದರೆ ಅದನ್ನು ಸರಿಯಾಗಿ ಮತ್ತು ಕ್ರಮಬದ್ಧವಾಗಿ ಲೋಕದ ಮುಂದಿಡುವವರು ರಂಗಕ್ಕಿಳಿಯಬೇಕಾದುದು ಅನಿವಾರ್ಯವಾಗಿದೆ. ಆದ್ದರಿಂದ ನಾವು ಭೂಮಿಯ ಬದಲಾಗಿ ಹೃದಯಗಳನ್ನು ಅವಲೋಕಿಸುತ್ತೇವೆ. ನಮ್ಮ ಸಂದೇಶವು ತಳವೂರಿದ ಹೃದಯಗಳು ಎಷ್ಟು ದೂರ ರೆಕ್ಕೆ ಬಿಚ್ಚಿ ಹಾರಾಡುವುದೋ ಭೂಮಿಯ ಆ ಭಾಗಗಳಲ್ಲಿ ಪ್ರಕಾಶ ಖಂಡಿತವಾಗಿಯೂ ಹಬ್ಬುವುದೆಂದು ನಾವು ನಂಬಿದ್ದೇವೆ.

ಇಂದು ಲೋಕದ ಮಾನಸಿಕ ಸ್ಥಿತಿಯು ಅತ್ಯಂತ ಕಲುಷಿತ ಗೊಂಡಿದೆಯಾದರೂ ನಮ್ಮ ಕೆಲಸದ ಮಟ್ಟಿಗೆ ಅದು ಅನುಕೂಲ ವಾತಾವರಣವನ್ನು ನಿರ್ಮಿಸಿ ಕೊಡುತ್ತಿದೆ. ಅಂಧಾನುಕರಣೆಗಳ ಬಂಧನದಿಂದ ಲೋಕವು ಸ್ವತಂತ್ರಗೊಂಡಿದೆ. ಈಗ ಜನರು ತೆರೆದ ಕಣ್ಣುಗಳಿಂದ ನೋಡಲೂ ತೆರೆದ ಕಿವಿಗಳಿಂದ ಆಲಿಸಲೂ ಕಲಿತಿದ್ದಾರೆ. ಜೀವನದ ಬಗ್ಗೆ ಸಾಮಾನ್ಯವಾಗಿ ಅಂಗೀಕರಿಸಲ್ಪಟ್ಟಿದ್ದ ಸಕಲ ಸಿದ್ಧಾಂತಗಳೂ ಪರೀಕ್ಷೆಯೆಂಬ ಒರೆಗಲ್ಲಿನಲ್ಲಿ ಪರಾಭವಗೊಂಡಿವೆ. ಲೋಕದ ಈ ಬೇಡಿಕೆಯನ್ನು ಈಡೇರಿಸಲು ವಿವಿಧ ಸಂಘಟನೆಗಳು ಮುಂದೆ ಬರುತ್ತಿವೆ. ಇಸ್ಲಾಮ್ ಒಂದು ಮಾತ್ರ ಲೋಕದ ಮುಂದೆ ಧೈರ್ಯದಿಂದ ಸಮರ್ಪಿಸ ಬಲ್ಲ ಸೇವಕರಿಲ್ಲದೆ ಉಳಿದುಕೊಂಡಿದೆ. ವಾಸ್ತವದಲ್ಲಿ ಇಂದು ಲೋಕದಲ್ಲಿ ಆವರಿಸಿರುವ ಕಳವಳಗಳಿಂದ ಅದನ್ನು ಪಾರುಗೊಳಿಸಲು ಇಸ್ಲಾಮಿನ ಹೊರತು ಇನ್ನಾವುದಕ್ಕೂ ಸಾಧ್ಯವಿಲ್ಲ. ಈ ಕೊರತೆಯನ್ನು ನಾವು ತುಂಬ ಬಯಸುತ್ತೇವೆ. ಈ ಘನ ಕರ್ತವ್ಯ ಪಾಲನೆಗೆ ನಮ್ಮನ್ನು ಅರ್ಹಗೊಳಿಸುವಂತೆ ನಾವು ಅಲ್ಲಾಹನೊಡನೆ ಪ್ರಾರ್ಥಿಸೋಣ.

## ಜಮಾಅತ್ ಸಂಬಂಧದ ಮಾನದಂಡ

[ಅಲಹಾಬಾದ್ ಸಮ್ಮೇಳನದಲ್ಲಿ ಮೌಲಾನಾ ಅಮೀನ್ ಅಹ್ಸನ್ ಇಸ್ಲಾಹಿಯವರು ಮಾಡಿದ ಸಮಾರೋಪ ಭಾಷಣ.]

ಬಾಂಧವರೇ!

ನಾನು ಈ ಸಂದರ್ಭದಲ್ಲಿ ಜಮಾಅತೆ ಇಸ್ಲಾಮಿಯ ಕೆಲವು ವೈಶಿಷ್ಟ್ಯಗಳನ್ನು ಸಂಕ್ಷಿಪ್ತವಾಗಿ ವಿವರಿಸ ಬಯಸುತ್ತೇನೆ. ಆ ವೈಶಿಷ್ಟ್ಯಗಳನ್ನು ವಿವರಿಸುವುದರ ಉದ್ದೇಶವು ಅವು ಈಗಾಗಲೇ ಜಮಾಅತ್ ಸದಸ್ಯರಲ್ಲಿವೆಯೆಂಬ ನೆಲೆಯಲ್ಲಾಗಿರದೆ, ಅವುಗಳನ್ನು ತಮ್ಮಲ್ಲಿ ಮೈಗೂಡಿಸಿಕೊಳ್ಳಲು ಪ್ರಯತ್ನಿಸಬೇಕೆಂಬುದಾಗಿದೆ. ಆ ವೈಶಿಷ್ಟ್ಯಗಳು ನಮ್ಮಲ್ಲಿವೆಯೇ? ಇದ್ದರೆ

ಯಾವ ನೆಲೆಯಲ್ಲಿವೆ? ಇತ್ಯಾದಿ ವಿಷಯಗಳನ್ನು ನಾವು ನಿರಂತರ ಪರಿಶೀಲಿಸಬೇಕು. ಆ ವೈಶಿಷ್ಟ್ಯವನ್ನೇ ನಾವು ಜಮಾಅತ್‌ನೊಂದಿಗೆ ನಮ್ಮ ಸಂಬಂಧದ ಮಾನದಂಡವಾಗಿ ಸ್ವೀಕರಿಸಬೇಕು. ಅವು ನಮ್ಮಲ್ಲಿ ಸುಸ್ಥಿತಿಯಲ್ಲಿದ್ದರೆ ಜಮಾಅತ್‌ನೊಂದಿಗೆ ನಮ್ಮ ಸಂಬಂಧವು ಸಾರ್ಥಕವೆಂದು ಭಾವಿಸಬಹುದು. ಅದು ಕಡಿಮೆಯಿದೆಯೆಂದಾದರೆ ನಮ್ಮ ಸಂಬಂಧವೂ ಅಪೂರ್ಣವಾಗಿರುವುದು. ಇನ್ನು ಆ ವೈಶಿಷ್ಟ್ಯಗಳು ನಮ್ಮಲ್ಲಿ ತೀರಾ ಇಲ್ಲದಿದ್ದರೆ ಜಮಾಅತ್‌ನೊಂದಿಗೆ ನಮ್ಮ ಸಂಬಂಧವು ಕೇವಲ ಸೋಗು ಮಾತ್ರ. ವಾಸ್ತವದಲ್ಲಿ ಜಮಾಅತ್‌ನೊಂದಿಗೆ ಯಾವ ಸಂಬಂಧವೂ ಇಲ್ಲವೆಂಬುದನ್ನು ಅದು ಸೂಚಿಸುತ್ತದೆ. ಆದ್ದರಿಂದ ಆ ವೈಶಿಷ್ಟ್ಯಗಳನ್ನು ಗಮನದಲ್ಲಿರಿಸಿ ನಾವು ಪ್ರತಿಯೊಬ್ಬರೂ ಸ್ವಯಂ ಆತ್ಮಾವಲೋಕನ ನಡೆಸಬೇಕು.

1. ಪ್ರಸ್ತುತ ವೈಶಿಷ್ಟ್ಯಗಳಲ್ಲಿ ಪ್ರಪ್ರಥಮವಾದುದು ಇಂದಿನ ವಾತಾವರಣದಲ್ಲಿ ತಾನು ಒಂಟಿ, ಪರಕೀಯ ಮತ್ತು ನಿರಾಶ್ರಿತನೆಂಬ ಭಾವನೆಯಾಗಿದೆ. ಅಂದರೆ ಲೌಕಿಕ ಸಾಧನ ಸವಲತ್ತುಗಳ ಕೊರತೆ ಅಥವಾ ಅಸಹಾಯಕತೆಯ ಕುರಿತು ನಾನು ಹೇಳುತ್ತಿರುವುದಲ್ಲ. ಅಂತಹ ಅಸಹಾಯಕ ಪ್ರಜ್ಞೆಯು ಓರ್ವ ನೈಜ ಮುಸ್ಲಿಮನಲ್ಲಿ ಎಂದೂ ಇರಬಾರದು. ಇಂದಿನ ವಾತಾವರಣದಲ್ಲಿ ಎಲ್ಲಿಯೂ ಹೊಂದಾಣಿಕೆ ಇಲ್ಲದಂತಹ ಪರಕೀಯತೆಯ ಕೀಳರಿಮೆಯ ಪ್ರಜ್ಞೆಯೇ ಅದರ ಉದ್ದೇಶ. ಕುಟುಂಬದಲ್ಲಿಯೂ ಸಮಾಜದಲ್ಲಿಯೂ ಆಪ್ತ ಮಿತ್ರರಲ್ಲಿಯೂ ಹಿತೈಷಿಗಳಲ್ಲಿಯೂ ತನ್ನ ವಿಚಾರಧಾರೆಯೊಂದಿಗೆ ಸಹಮತ ಇರುವವರು ಕೇವಲ ಕೆಲವೇ ಮಂದಿ ಕಂಡು ಬರುತ್ತಾರೆ. ನಮ್ಮ ಅಭಿರುಚಿಯು ಇತರರಿಗಿಂತ ಭಿನ್ನವೆಂಬುದು ಎಲ್ಲ ಸಭೆಗಳಲ್ಲಿ ಕಂಡು ಬರುವುದು. ನಮ್ಮ ಅಭಿರುಚಿ, ಪ್ರವೃತ್ತಿ, ಅಭಿಪ್ರಾಯ, ಉದ್ದೇಶ ಇತ್ಯಾದಿಗಳೆಲ್ಲವೂ ಇತರರಿಗಿಂತ ಭಿನ್ನ ಅಥವಾ ವಿರುದ್ಧವಾಗಿ ಕಂಡು ಬರುವುದು. ಈ ವಾತಾವರಣದಲ್ಲಿ ನಮ್ಮ ಸ್ಥಿತಿಯು ದಂಡೆಯಿಂದ ಸಮುದ್ರಕ್ಕೆ ಎಸೆಯಲ್ಪಟ್ಟ ನೆಲಚರ ಜೀವಿಯಂತೆ ಅಥವಾ ಸಮುದ್ರದಿಂದ ದಂಡೆಗೆಸೆಯಲ್ಪಟ್ಟಂತಹ ಜಲಚರ ಜೀವಿಯಂತಾಗಿರುವುದು. ಇತರರಿಗೆ ಅವರ ವಿಜಯದ ಹಾದಿಯು ವಿಶಾಲವಾಗಿ ಕಂಡು ಬಂದರೆ, ನಮ್ಮ ಹಾದಿಯು ತುಂಬಾ ದುರ್ಗಮ ಮತ್ತು ಇಕ್ಕಟ್ಟಾಗಿ ಕಾಣಿಸುವುದು. ಇತರರು ನಡೆಯುತ್ತಿರುವ ಹಾದಿಯಲ್ಲಿ ದೊಡ್ಡ ದೊಡ್ಡ ಯಾತ್ರಾ ತಂಡಗಳು ಸರದಿಯಂತೆ ಮುನ್ನಡೆಯುತ್ತಿರುವುವು. ಆದರೆ ನಮ್ಮ ಹಾದಿಯಲ್ಲಿ ಸಹಯಾತ್ರಿಕರು ತೀರಾ ವಿರಳ. ಇತರರಿಗೆ ಜೀವನ ಸವಲತ್ತುಗಳು ರಾಶಿ ಬಿದ್ದಿರುವಾಗ ನಾವು ಜೀವ ಉಳಿಸಿಕೊಳ್ಳಬೇಕಾದರೆ ನಖಶಿಖಾಂತ ಬೆವರಿನಲ್ಲಿ ಮಿಂದುಬೇಕಾಗುವುದು. ಆಧುನಿಕ ಜಗತ್ತಿನಲ್ಲಿ ಈ ರೀತಿಯ ಸಂಕಷ್ಟಗಳಲ್ಲಿ ಸಿಲುಕಿರುವೆವೆಂದು ಭಾಸವಾದರೆ ಅದನ್ನು ನಿವಾರಿಸಲಿಕ್ಕಾಗಿ ನೆರವಾಗುವ ಬದಲಾಗಿ ಆಪ್ತ ಮಿತ್ರರೇ ಅವುಗಳನ್ನು ಇನ್ನಷ್ಟು ಜಟಿಲಗೊಳಿಸುತ್ತಿದ್ದರೆ ಜಮಾಅತೆ ಇಸ್ಲಾಮಿಯ ಧ್ಯೇಯೋದ್ದೇಶಗಳ ಪ್ರಜ್ಞೆಯು ನಮ್ಮಲ್ಲಿ ಸಾಕಷ್ಟು ಉಂಟಾಗಿದೆ ಹಾಗೂ ಅವು ನಮ್ಮ ಅಂತರಂಗ ಬಹಿರಂಗಗಳಲ್ಲಿ ಪ್ರಕಟವಾಗ ತೊಡಗಿದೆಯೆಂದು ಸಮಾಧಾನ ಪಡಬಹುದು. ಜಮಾಅತೆ ಇಸ್ಲಾಮಿಯಲ್ಲಿ ಪ್ರವೇಶಿಸಿದ ಬಳಿಕ ಪರಿಸರದೊಂದಿಗಿನ ಸಾಮರಸ್ಯವು ಹಿಂದಿನಂತೆಯೇ ಮುಂದುವರಿಯುತ್ತಿದ್ದರೆ, ವ್ಯಾಪಕ ಸಂಬಂಧಗಳಲ್ಲಿ ಯಾವುದೇ ಬಿರುಕಾಗಲೀ ಊನವಾಗಲಿ ಗೋಚರಿಸದಿದ್ದರೆ, ನಮ್ಮ ಮಿತ್ರರು ಹಿಂದಿನಂತೆ ಸಂತುಷ್ಟರೂ ಬಂಧುಗಳು

ಮೊದಲಿನಂತೆಯೇ ಸಂತೃಪ್ತರೂ ಸಂಪಾದನೆ ಮತ್ತು ಜೀವನ ನಿರ್ವಹಣೆಯ ಮಾರ್ಗಗಳು ಎಲ್ಲವೂ ಹಿಂದಿನಂತೆಯೇ ಸುಸೂತ್ರವೂ ಆಗಿದ್ದರೆ ಯಾವ ಕಡೆಯಿಂದಲೂ ಅಸಂತೃಪ್ತಿ, ಅಸಡ್ಡೆ ಅಥವಾ ಪರಕೀಯನೆಂಬ ಪ್ರಜ್ಞೆ ಭಾಸವಾಗದಿದ್ದರೆ ನಾವು ಕೇವಲ ಜಮಾಅತ್ ಬಿಲ್ಲೆಯನ್ನು ಅಂಟಿಸಿಕೊಂಡಿದ್ದೇವೆಯೇ ಹೊರತು ಅದರ ವಾಸ್ತವಿಕತೆಯು ನಮ್ಮ ಹೃದಯಾಂತರಾಳದಲ್ಲಿ ಇಳಿದಿಲ್ಲವೆಂದು ಅರ್ಥ ಮಾಡಿಕೊಳ್ಳಬಹುದು.

ಈ ವಿಷಯವನ್ನು ನಿಮ್ಮಲ್ಲಿ ಜಮಾಅತ್‌ನೊಂದಿಗೆ ನಮ್ಮ ಸಂಬಂಧವನ್ನು ಪರೀಕ್ಷಿಸುವ ಒರೆಗಲ್ಲಾಗಿ ಸ್ವೀಕರಿಸಬೇಕಾಗಿದೆ. ತಮ್ಮಲ್ಲಿ ಪ್ರತಿಯೊಬ್ಬರೂ ಸ್ವಯಂ ಆತ್ಮಾವಲೋಕನ ನಡೆಸಿ ಜಮಾಅತ್‌ನೊಂದಿಗೆ ನಮ್ಮ ಸಂಬಂಧವು ವಾಸ್ತವಿಕವೋ ಅಥವಾ ಕೇವಲ ಪ್ರದರ್ಶನವೋ ಎಂಬುದನ್ನು ನಿರ್ಧರಿಸಬೇಕು. ನಾವು ಒಂದನೆಯ ವರ್ಗದವರನ್ನು ಹುಡುಕುತ್ತಿರುವೆವೇ ವಿನಾ ಎರಡನೆಯ ವರ್ಗದವರನ್ನಲ್ಲ. ಅವರ ಕುರಿತೇ ಪ್ರವಾದಿ(ಸ) ನನ್ನ ಬಳಿಕ ಜನರು ಮಾಡುವ ವಿನಾಶವನ್ನು ಅವರು ಸುಧಾರಿಸುವರು ಎಂದು ಶುಭವಾರ್ತೆ ನೀಡಿದ್ದಾರೆ.

2. ಎರಡನೆಯ ವೈಶಿಷ್ಟ್ಯವು ನೀವು ನಿಮ್ಮ ಸಂಪೂರ್ಣ ಸಂಬಂಧ ಮತ್ತು ಒಲವುಗಳನ್ನು ನಿಮ್ಮ ವಿಶ್ವಾಸ-ಧ್ಯೇಯಗಳಿಗೆ ಹೊಂದಿಕೊಳ್ಳುವವರೊಂದಿಗೆ ದೃಢಪಡಿಸುವುದಾಗಿದೆ. ಅಂಥವರ ಸಂಖ್ಯೆ ತೀರಾ ವಿರಳವೆಂದು ನೋಡಬೇಕಾಗಿಲ್ಲ. ಅವರ ಸಹವಾಸ ಮತ್ತು ಸಹಾಯಕ್ಕೆ ನಾವು ಪ್ರಾಮುಖ್ಯ ನೀಡಬೇಕು. ಅವರಿಗೆ ನಮ್ಮೊಡನೆ ರಕ್ತ ಸಂಬಂಧವಿಲ್ಲದಿದ್ದರೂ ಅವರನ್ನು ಕುಟುಂಬ ಸಂಬಂಧಿಕರಿಗಿಂತ ಹೆಚ್ಚು ಆಪ್ತರೆಂದು ಪರಿಗಣಿಸಬೇಕು. ಅವರು ನಮ್ಮ ಪರಂಪರಾಗತ ವಂಶದವರಲ್ಲದಿದ್ದರೂ ಅವರೊಂದಿಗೆ ಸ್ವಸಮುದಾಯದವರಿಗಿಂತ ಹೆಚ್ಚು ಪಕ್ಷಪಾತ ಮತ್ತು ಅನುಕೂಲ ಮನೋಭಾವವಿರಬೇಕು. ಈ ತನಕ ಅವರು ನಮ್ಮ ಸಮುದಾಯದ ವೈರಿಗಳಾಗಿದ್ದರೂ ಈಗ ನಾವು ಅಂಗೀಕರಿಸಿರುವ ಸತ್ಯವನ್ನು ಅವರೂ ಅಂಗೀಕರಿಸಿರುವ ಹಿನ್ನೆಲೆಯಲ್ಲಿ ನಮ್ಮ ಕಡೆಯಿಂದ ನಿಸ್ವಾರ್ಥ ಮೈತ್ರಿ ಮನೋಭಾವವಿರಬೇಕು. ಇತರೆಲ್ಲ ಕಡೆಗಳಿಂದ ವಿಚ್ಛೇದಿಸಿರುವ ಸಂಬಂಧವನ್ನು ಅವರಲ್ಲಿ ಕೇಂದ್ರೀಕರಿಸಬೇಕು. ಅವರೇ ಸಂಬಂಧಿಕರೂ ಮಿತ್ರರೂ ಹಿತೈಷಿಗಳೂ ಆಗಿರಬೇಕು. ಇತರರೊಂದಿಗೆ ಸ್ನೇಹ ಮತ್ತು ಪ್ರೀತಿಯ ಬದಲಾಗಿ ಹಿತಾಕಾಂಕ್ಷೆ ಮತ್ತು ಅನುಕಂಪದ ಸಂಬಂಧವಿರಬೇಕು. ಅರ್ಥಾತ್ ಅಲ್ಲಾಹನು ನಮಗೆ ತೆರೆದಿರುವ ಸತ್ಯವನ್ನು ಅವರಿಗೂ ಪರಿಚಯಗೊಳಿಸಲಿಕ್ಕಾಗಿ ಪ್ರಯತ್ನಿಸುವುದು.

ನಿಮ್ಮ ಕುಟುಂಬವು ಸತ್ಯದ ವಾಹಕರ ಮತ್ತು ಸತ್ಯವಿಶ್ವಾಸಿಗಳ ಕುಟುಂಬವಾಗಿರಬೇಕು. ನಿಮ್ಮ ಸಂಬಂಧವು ಸತ್ಯದೊಡನೆ ದುರ್ಬಲವಾಗಿರುವಷ್ಟೇ ಅವರೊಂದಿಗೆ ನಿಮ್ಮ ಸಂಬಂಧವು ದುರ್ಬಲವಾಗುವುದು. ನಿಮ್ಮ ಈಮಾನ್ ದೃಢವಾಗಿರುವಷ್ಟೇ ಅವರ ಮತ್ತು ನಿಮ್ಮ ಸಂಬಂಧ ದೃಢವಾಗುವುದು. ಈ ಸಿದ್ಧಾಂತವನ್ನು ಗಮನದಲ್ಲಿಟ್ಟು ನಿಮ್ಮ ಮಿತ್ರತ್ವ ಮತ್ತು ಶತ್ರುತ್ವದ ಬಗ್ಗೆ ಪುನರ್ ಪರಿಶೀಲನೆ ನಡೆಸಿರಿ. ತರುವಾಯ ಗೆಳೆತನ ಸ್ಥಾಪಿಸಬೇಕಾದವರೊಡನೆ ಹಗೆತನ ಮತ್ತು ಹಗೆತನ ತೋರಬೇಕಾದವರೊಡನೆ ಗೆಳೆತನ ಬೆಳೆಸುತ್ತಿದ್ದರೆ ಕೂಡಲೇ ಅಲ್ಲಾಹನಿಗೆ ಹೆದರಿ ಅದನ್ನು ಸರಿಪಡಿಸಿಕೊಳ್ಳಬೇಕಾಗಿದೆ. ಒಂದು ಸಿದ್ಧಾಂತದೊಡನೆ ನೀವು ಸಂಬಂಧವಿರಿಸಿಕೊಂಡಿರುವ ಹಿನ್ನೆಲೆಯಲ್ಲಿ ಅದರ ವಿರೋಧಿಗಳೊಡನೆ ನಿಮಗೆ ಮೈತ್ರಿ ಸಂಬಂಧ ಸಾಧ್ಯವಿಲ್ಲ. ಹಾಗೆಯೇ ಪ್ರಸ್ತುತ ಸಿದ್ಧಾಂತವನ್ನು ಒಪ್ಪುವ ಜನರೊಡನೆ ಹಗೆತನ

ತೋರುವುದೂ ಅಸಹಜತೆಯಾಗಿದೆ. ನಾವು ಸಂತಾನ ಪರಂಪರೆಯೆಂಬ ಮೂರ್ತಿಯ ಪೂಜಕರಲ್ಲ. ರಕ್ತ ವರ್ಣ ವ್ಯತ್ಯಾಸಗಳಲ್ಲಿಯೂ ನಮಗೆ ಆಸಕ್ತಿಯಿಲ್ಲ. ನಮ್ಮ ಕೋಪ- ಪ್ರೀತಿಗಳು ಅಲ್ಲಾಹ್ ಮತ್ತು ಪ್ರವಾದಿಯ ಸಂಬಂಧಕ್ಕೆ ಬದ್ಧವಾಗಿದೆ. ಅಲ್ಲಾಹ್ ಮತ್ತು ಪ್ರವಾದಿಯೊಂದಿಗೆ ನೈಜ ಸಂಬಂಧವನ್ನು ಯಾರೇ ಸ್ಥಾಪಿಸಿದರೂ ನಾವು ಅವರ ಮಿತ್ರರಾಗಿ ಬಿಡುತ್ತೇವೆ. ನಮ್ಮ ಮತ್ತು ಅವರ ಸಂಬಂಧವು ನೈತಿಕತೆ ಮತ್ತು ಆಧ್ಯಾತ್ಮಿಕತೆಯ ಸಂಬಂಧವಾಗಿದೆಯೇ ವಿನಾ ಲೌಕಿಕ ಬುನಾದಿಯ ಸಂಬಂಧವಲ್ಲ. ಈಮಾನ್ ಮತ್ತು ಇಸ್ಲಾಮಿನಿಂದ ಹೊರತಾದ ಸಂಬಂಧವನ್ನು ನೀವಿನ್ನೂ ಉಳಿಸಿಕೊಂಡಿದ್ದರೆ ಅದನ್ನು ತಕ್ಷಣವೇ ವಿಚ್ಛೇದಿಸಿ ಬಿಡಿರಿ. ಸಕಲ ಸಂಬಂಧಗಳನ್ನೂ ಸತ್ಯಕ್ಕೆ ಅಧೀನಗೊಳಿಸಲು ಪ್ರಯತ್ನಿಸಿರಿ. ನಮ್ಮ ಮುಂದೆ ಸತ್ವ ಪರೀಕ್ಷೆಯ ಹಂತಗಳು ಯಾವಾಗ ಬರುವುದೆಂದಾಗಲೀ, ಸತ್ಯಕ್ಕಾಗಿ ಚಿಕ್ಕಪ್ಪನು ಸಹೋದರ ಪುತ್ರನ ಹಾಗೂ ಅಳಿಯನು ಮಾವನ ವಿರುದ್ಧ ಖಡ್ಗವೆತ್ತುವ ಸಂದರ್ಭವನ್ನು ಅದು ಯಾವಾಗ ಬಯಸುತ್ತದೆಂಬುದಾಗಲೀ ನಮಗೆ ತಿಳಿದಿಲ್ಲ!

"ಎಲ್ಲಾ ಕೆಟ್ಟ ಸಂಬಂಧಗಳನ್ನು ಮನಸಾರೆ ಕಡಿದು ಕೊಳ್ಳುವುದೇ ಮೂಲಭೂತ ಹಾಗೂ ಆಧ್ಯಾತ್ಮಿಕ ವಲಸೆ(ಹಿಜ್ರತ್)ಯಾಗಿದೆ. ಒಬ್ಬನು ಸತ್ಯವನ್ನು ಸ್ವೀಕರಿಸಿ ಅದಕ್ಕಾಗಿ ಕೆಡುಕೊಂದನ್ನು ತೊರೆದ ದಿನದಿಂದ ಅದು ಆರಂಭಗೊಳ್ಳುತ್ತದೆ. ನೀವು ಈ ಆಧ್ಯಾತ್ಮಿಕ ವಲಸೆಯ ದೃಢ ನಿರ್ಧಾರ ಮಾಡಿರಿ. ಈ ಹಾದಿಯಲ್ಲಿ ಎದುರಿಸಬೇಕಾಗುವ ಎಲ್ಲಾ ಸಂಕಷ್ಟಗಳನ್ನು ನಿಭಾಯಿಸುವ ತರಬೇತಿಯನ್ನು ಮುಂದಾಗಿ ಪಡೆಯಿರಿ. ಈ ಬಗ್ಗೆ ಯಾವ ಮುಂಜಾಗ್ರತೆಯ ಅಗತ್ಯವೂ ಇಲ್ಲವೆಂದು ಕೆಲವರು ಭಾವಿಸುತ್ತಾರೆ. ಸಂದರ್ಭ ಬಂದಾಗ ಸತ್ಯಕ್ಕಾಗಿ ಯಾವ ತ್ಯಾಗಕ್ಕೂ ಸಿದ್ಧ. ಅತ್ಯಮೂಲ್ಯ ಬಂಧುಗಳನ್ನು ಸತ್ಯಕ್ಕಾಗಿ ವಿಚ್ಛೇದಿಸಲು ನಾವು ಸಿದ್ಧರಿದ್ದೇವೆಂದು ಅವರು ಭಾವಿಸುತ್ತಾರೆ. ಆದರೆ ಈ ಭಾವನೆ ಸಂಪೂರ್ಣ ತಪ್ಪು. ಮುಂದಾಗಿ ಸಂಗ್ರಹಿಸಿದ ಮನ ಮಸ್ತಿಷ್ಕ ಸಾಮರ್ಥ್ಯಗಳಷ್ಟೇ ಪರೀಕ್ಷಾ ಕಾಲದಲ್ಲಿ ಪ್ರಯೋಜನಕ್ಕೆ ಬರುವುದು. ಶತ್ರುಗಳು ಆಕ್ರಮಿಸಿದ ಬಳಿಕ ಸೇನೆಗೆ ತರಬೇತಿ ನೀಡಲಾರಂಭಿಸುವ ಜನರ ಪಾಲಿಗೆ ಸೋಲೇ ಕಟ್ಟಿಟ್ಟ ಬುತ್ತಿ."

3. ನಮ್ಮಲ್ಲಿರಬೇಕಾದ ಮೂರನೆಯ ವೈಶಿಷ್ಟ್ಯವು ಮೇಲಿನ ಗುಣಕ್ಕೆ ವಿರುದ್ಧವಾದುದಾಗಿದೆ. ಅರ್ಥಾತ್ ವಿಶ್ವಾಸ, ಧ್ಯೇಯಗಳಲ್ಲಿ ನಮ್ಮ ವಿರೋಧಿಗಳಾಗಿರುವ ಜನರಿಗೆ ನಾವು ಬಲಿಪಶುಗಳಾಗಬಾರದು. ಅವರು ನಮ್ಮನ್ನು ಪರೀಕ್ಷಿಸುವಾಗ ನಮ್ಮೊಳಗೆ ಬೆರಳು ತೂರಲೂ ಸಾಧ್ಯವಿಲ್ಲವೆಂದು ಅವರಿಗೆ ಮನದಟ್ಟಾಗಬೇಕು. ಅವರ ಧ್ಯೇಯೋದ್ದೇಶಗಳಿಗಾಗಿ ನಮ್ಮನ್ನು ಅಸ್ತ್ರವನ್ನಾಗಿ ಬಳಸಲು ಅವರಿಗೆ ಸಾಧ್ಯವಾಗಬಾರದು. ಪ್ರಥಮ ವರ್ಗಕ್ಕೆ ನೀವೆಷ್ಟು ಸೌಮ್ಯರೂ ಉದಾರಿಗಳೂ ಪ್ರೀತಿ ಭಾಜನರೂ ಆಗಿ ಕಾಣುತ್ತೀರೋ ಈ ವರ್ಗಕ್ಕೆ ನೀವು ಅಷ್ಟೇ ಸಮರ್ಥರೂ ಸ್ವಂತಿಕೆಯಿರುವವರೂ ಆದರ್ಶ ವಾದಿಗಳೂ ಸಿದ್ಧಾಂತದಲ್ಲಿ ಒಂದಿಷ್ಟೂ ಔದಾರ್ಯ ತೋರದವರೂ ಆಗಿದ್ದೀರೆಂದು ವೇದ್ಯವಾಗಬೇಕು. ನಮ್ಮ ಮೇಲೆ ಅವರ ಬಣ್ಣ ಲೇಪಿಸಲು ಅಥವಾ ಅವರ ಅಚ್ಚಿನಲ್ಲಿ ನಮ್ಮನ್ನು ಎರಕ ಹೊಯ್ಯಲು ಅವರಿಗೆ ನೀವೆಂದೂ ಅವಕಾಶ ನೀಡಬಾರದು. ಈ ಗುಣವು ನಿಮ್ಮಲ್ಲಿ ಉಂಟಾಗದೆ ಜಮಾಅತೆ ಇಸ್ಲಾಮಿಯ ಧ್ಯೇಯದ ಕುರಿತು ಸರಿಯಾದ ಪ್ರಜ್ಞೆ ನಿಮ್ಮಲ್ಲಿ ಬೆಳೆಯಲಾರದು. ಅಲ್ಲದೆ ಜಮಾಅತೆ ಇಸ್ಲಾಮಿಯ ಮುಂದಿರುವ ಧ್ಯೇಯ ಸಾಧನೆಗೆ ಪೂರಕವಾದ ಉತ್ತಮ ನಡವಳಿಕೆಯು ನಿಮ್ಮಲ್ಲಿ ಹುಟ್ಟಲಾರದು.

ಪವಿತ್ರ ಕುರ್‌ಆನಿನಲ್ಲಿ ಸತ್ಯವಿಶ್ವಾಸಿಗಳನ್ನು ಧರ್ಮ ಧಿಕ್ಕಾರಿಗಳಿಗೆ ಅತೀ ಕಠೋರರು ಎಂದು ವರ್ಣಿಸಲಾಗಿದೆ. ಅಲ್ಲಾಹನ ಸೇನೆಯನ್ನು ಸೇರಿರುವ ಮಂದಿ ವೈರಿಗಳ ಕಹಳೆಗಳ ನಾದವನ್ನು ಆಲಿಸಿ ಪಥ ಸಂಚಲನ ಆರಂಭಿಸುವುದು ಸರಿಯಲ್ಲ. ತಾತ್ಕಾಲಿಕ ಲಾಭದಾಸೆಯಿಂದ ವೈರಿಗಳ ಧ್ವನಿ ಮೊಳಗಿಸಲು ಅಥವಾ ಅವರ ಕೂಲಿಯಾಳಾಗಿ ಹೋರಾಡಲು ಅವರಿಗೆ ಯಾವ ರೀತಿಯಿಂದಲೂ ಸಾಧ್ಯವಿಲ್ಲ. ಸತ್ಯ ಮತ್ತು ಅಸತ್ಯದೊಡನೆ ಜಂಟಿಯಾಗಿ ಸಂಬಂಧ ಸ್ಥಾಪಿಸಬಯಸುವವರು ವಾಸ್ತವದಲ್ಲಿ ಕೇವಲ ಅಸತ್ಯದೊಂದಿಗೆ ಸಂಬಂಧವಿರಿಸುತ್ತಾರೆ. ಅಂತಹ ಸಹಭಾಗಿತ್ವವನ್ನು ಸತ್ಯವು ಯಾವ ರೀತಿಯಿಂದಲೂ ಸಹಿಸಲಾರದು. ನಿಮ್ಮೊಳಗೆ ಕೆಡುಕಿನ ಪ್ರವೇಶಕ್ಕೆ ಹಾದಿ ಸುಗಮಗೊಳಿಸುವ ನಿಮ್ಮ ನಡವಳಿಕೆಗಳ ನ್ಯೂನತೆಯು ವಾಸ್ತವದಲ್ಲಿ ನಿಮ್ಮ ಈಮಾನ್‌ನ ದೌರ್ಬಲ್ಯವನ್ನು ಸಾಬೀತು ಪಡಿಸುತ್ತದೆ. ಪ್ರಾಥಮಿಕ ಕರ್ತವ್ಯವು ಅಂತಹ ದೌರ್ಬಲ್ಯಗಳನ್ನು ದೂರಗೊಳಿಸಲಿಕ್ಕಾಗಿ ಪ್ರಯತ್ನಿಸುವುದೇ ಆಗಿದೆ.

ಈ ಒಂದೆರಡು ವಿಷಯಗಳನ್ನು ಆತ್ಮಾವಲೋಕನದ ಒರೆಗಲ್ಲೆಂಬ ನೆಲೆಯಲ್ಲಿ ನಾನು ನಿಮ್ಮ ಮುಂದಿಟ್ಟಿರುತ್ತೇನೆ. ನೀವು ನಿಮ್ಮನ್ನು ಆ ಒರೆಗೆ ಹಚ್ಚಿ ಜಮಾಅತ್‌ನೊಂದಿಗೆ ನಿಮ್ಮ ಸಂಬಂಧವು ಯಾವ ರೀತಿಯಿದೆಯೆಂದು ಪರಿಶೀಲಿಸಿ ನೋಡಿದರೆ ಹೃದಯವು ಹಿಂದೆ ಸಂಚರಿಸುತ್ತಿದ್ದ ಕಡೆಗಳಲ್ಲಿಯೇ ಸಂಚರಿಸುತ್ತಿದೆಯೇ? ಅಥವಾ ನಾಲಗೆ ಮತ್ತು ಹೃದಯದೊಂದಿಗೆ ನೀವು ಜಮಾಅತ್‌ನೊಂದಿಗೆ ಸಂಬಂಧ ಸ್ಥಾಪಿಸಿಕೊಂಡಿದ್ದೀರಾ? ಎಂಬುದು ನಿಮಗೆ ಚೆನ್ನಾಗಿ ಮನವರಿಕೆಯಾಗಬಹುದು.

ಮಿತ್ರರೇ! ನೀವು ಇಲ್ಲಿಂದ ನಿರ್ಗಮಿಸುವುದಕ್ಕಿಂತ ಮುಂಚಿತವಾಗಿ ನಿಮಗೆ ದಾರಿಯಲ್ಲಿಯೂ ಮನೆಗೆ ತಲುಪಿದ ಬಳಿಕವೂ ಉಪಯುಕ್ತವಾಗುವಂತಹ ಅಮೂಲ್ಯ ಸಂಪತ್ತೊಂದನ್ನು ನಿಮಗೆ ವಹಿಸಿಕೊಡಬಯಸುತ್ತೇನೆ. ನೀವು ಸರಿಯಾದ ರೀತಿಯಲ್ಲಿ ಅದನ್ನು 'ಗೌರವಿಸಿದರೆ ಎಲ್ಲಾ ಕಾಲಗಳಲ್ಲಿಯೂ ಅದು ನಮಗೆ ಪ್ರಯೋಜನಕಾರಿಯಾಗಬಹುದು. ಅದು ಅಲ್ಲಾಹನ ಕುರಿತಾದ ಪ್ರಜ್ಞೆ ಮತ್ತು ಸ್ಮರಣೆಯ ವಿನಾ' ಬೇರೇನೂ ಅಲ್ಲ. ಅಲ್ಲಾಹನ ಗ್ರಂಥ ಮತ್ತು ಪ್ರವಾದಿವರ್ಯರ(ಸ) ಪುಣ್ಯ ವಚನಗಳಿಂದ ನಾವು ಸ್ಪಷ್ಟವಾಗಿ ತಿಳಿದಿರುವುದೇನೆಂದರೆ ಸರ್ವ ಶಕ್ತಿಗಳ ಮೂಲವು ಅಲ್ಲಾಹನ ಕುರಿತಾದ ಪ್ರಜ್ಞೆಯಾಗಿದೆ. ಆದ್ದರಿಂದ ನಿಮ್ಮ ಮನಸ್ಸು ಅಲ್ಲಾಹನ ನೆನಪಿನಿಂದ ಎಂದೂ ಬರಿದಾಗಿರಬಾರದು. ನೆನಪು ಎಂಬುದರ ತಾತ್ಪರ್ಯವು ಸ್ಮರಣೆ ಮತ್ತು ವಿಚಾರವಾಗಿದೆ. ಕೇವಲ ನಾಲಿಗೆಗೆ ಸೀಮಿತವಾದ 'ದಿಕ್ರ್ ಸಂಪ್ರದಾಯ' ಇಲ್ಲಿ ನನ್ನ ಉದ್ದೇಶವಲ್ಲ. ಅಂತಹ ದಿಕ್ರ್‌ಗಳಿಗೆ ಹೃದಯ ಮಸ್ತಿಷ್ಕಗಳೊಂದಿಗೆ ಯಾವ ಸಂಬಂಧವೂ ಇರುವುದಿಲ್ಲ. ಆದ್ದರಿಂದ ಅದು ಯಾವ ಪ್ರಯೋಜನವನ್ನೂ ಕೊಡಲಾರದು. ನನ್ನ ಮಟ್ಟಿಗೆ ಅಲ್ಲಾಹನ ವಾಣಿಯನ್ನು ಮೊಳಗಿಸುವ ಸಕಲ ಪ್ರಯತ್ನಗಳೂ ದೇವಸ್ಮರಣೆಯಲ್ಲಿ ಸೇರಿವೆ. ವಾಸ್ತವದಲ್ಲಿ ಅದುವೇ ನೈಜ ಸ್ಮರಣೆಯಾಗಿದೆ. ಇಂತಹ ದಿಕ್ರ್‌ನ ಬಗ್ಗೆ ನೀವು ಗಮನಹರಿಸಬೇಕು. ನಿಮ್ಮ ಮುಂದೆ ಬರಲಿರುವ ಹಂತಗಳಲ್ಲಿ ಅದು ನಿಮಗೆ ಅತ್ಯಂತ ಫಲಕಾರಿಯಾಗಿರುವುದು. ಎಲ್ಲ ಸಂದಿಗ್ಧತೆಗಳನ್ನೂ ತನ್ಮೂಲಕ ಹಗುರಗೊಳಿಸಬಹುದು. ಅಲ್ಲಾಹನು ನಮಗೆ ಸತ್ಯದ ನೈಜ ಪ್ರಜ್ಞೆಯನ್ನು ದಯಪಾಲಿಸುವುದರೊಂದಿಗೆ ಸತ್ಯದ ಸೇವೆಯಲ್ಲಿ ಧೈರ್ಯ ಸ್ಥೈರ್ಯಗಳನ್ನು ದಯಪಾಲಿಸಲಿ.

## ಇಸ್ಲಾಮಿ ಪ್ರಚಾರ ಮತ್ತು ಅದರ ಪ್ರೇರಕಗಳು

[ಮೌಲಾನಾ ಅಮೀನ್ ಅಹ್ಸನ್ ಇಸ್ಲಾಹಿಯವರ ಸಾರ್ವಜನಿಕ ಭಾಷಣ]

ಬಂಧುಗಳೇ! ಈ ಸಂದರ್ಭದಲ್ಲಿ ನಾನು ಸುದೀರ್ಘ ಭಾಷಣ ಮಾಡಬೇಕಾದ ಅವಶ್ಯಕತೆ ಕಂಡುಬರುವುದಿಲ್ಲ. ಕಳೆದ ಎರಡು ಮೂರು ದಿನಗಳಿಂದ ನಾನು ಆಗಾಗ್ಗೆ ನನ್ನ ವಿಚಾರಗಳನ್ನು ನಿಮ್ಮ ಮುಂದಿಟ್ಟಿದ್ದೇನೆ. ಈಗ ಜಮಾಅತ್ ಅಧ್ಯಕ್ಷರ ಭಾಷಣವೇ ಪ್ರಾಮುಖ್ಯವಾಗಿರುವುದು. ಕೇವಲ ಆಜ್ಞಾಪಾಲನೆಗಾಗಿ ನಾನಿಲ್ಲಿ ನಿಂತಿದ್ದೇನೆ. ನಾವು ಯಾವುದರ ಪ್ರಚಾರಕ್ಕಾಗಿ ನೆಲೆಗೊಂಡಿದ್ದೇವೆ, ಅದಕ್ಕಾಗಿ ನಮಗೆ ಪ್ರೇರಣೆ ನೀಡುವ ನಿರ್ಣಾಯಕ ಶಕ್ತಿ ಮತ್ತು ಕಾರಣಗಳು ಯಾವುವು ಎಂಬುದನ್ನು ಸಂಕ್ಷಿಪ್ತವಾಗಿ ವಿವರಿಸುತ್ತೇನೆ.

ಓರ್ವ ಮನುಷ್ಯ ಹಾಗೂ ವಿಚಾರಶಕ್ತಿಯುಳ್ಳ ಜೀವಿಯೆಂಬ ನೆಲೆಯಲ್ಲಿ ಈ ಲೋಕದ ಆಗು ಹೋಗುಗಳ ಬಗ್ಗೆ ಆಲೋಚಿಸುವಾಗ ಮತ್ತು ಇದರಲ್ಲಿ ನಮ್ಮ ಸ್ಥಾನಮಾನವೇನೆಂಬುದನ್ನು ನಿರ್ಧರಿಸುವಾಗ, ನಾವು ಸೃಷ್ಟಿಕರ್ತರೋ ಅಥವಾ ಸೃಷ್ಟಿಗಳೋ ಸ್ವತಂತ್ರರೋ ಅಥವಾ ಪರತಂತ್ರರೋ ಹೊಣೆಗಾರಿಕೆಯುಳ್ಳವರೋ ಜವಾಬ್ದಾರರೋ ಅಥವಾ ಕರ್ತವ್ಯರಹಿತರೋ ಪರಮಾಧಿಕಾರಿಗಳೋ ಎಂದು ಆಲೋಚಿಸುವಾಗ ನಾವು ಹೇಗೆ ಜೀವಿಸಬೇಕು, ನಮ್ಮ ಸದಾಚಾರ ಕರ್ಮಗಳು ಹೇಗಿರಬೇಕು, ನಮಗೆ ಸೂಕ್ತವಾದ ಸಾಮಾಜಿಕ, ಆರ್ಥಿಕ, ರಾಜಕೀಯ ವ್ಯವಸ್ಥೆಗಳು ಯಾವುವು? ಎಂಬಿತ್ಯಾದಿ ಸಮಸ್ಯೆಗಳ ಕುರಿತು ಆಲೋಚಿಸುವಾಗ ನಮ್ಮ ಮನಸ್ಸಿನಲ್ಲಿ ಕೆಲವು ವಿಚಾರಗಳು ಹೊಳೆಯುತ್ತವೆ. ಈ ಲೋಕವು ಕೇವಲ ಆಕಸ್ಮಿಕವಾಗಿ ಸೃಷ್ಟಿಯಾದುದಲ್ಲ. ಇದರ ಹಿಂದೆ ಯುಕ್ತಿಪೂರ್ಣವಾದ ಉದ್ದೇಶ ಕೆಲಸ ಮಾಡುತ್ತಿದೆ. ಹಾಗೆಯೇ ಇದು ಅನಿಯಂತ್ರಿತ ಹಾಗೂ ಕುರುಡು ಲೋಕವಲ್ಲ. ಅದರ ಪ್ರತಿಯೊಂದು ಮೂಲೆಯಲ್ಲಿಯೂ ಯುಕ್ತಿ ಮತ್ತು ಧ್ಯೇಯ ಅಭಿವ್ಯಕ್ತವಾಗುತ್ತದೆ. ಇವೆಲ್ಲವೂ ಓರ್ವ ನಿಯಂತ್ರಕನಿಲ್ಲದೆ ನಡೆಯುವುದೆಂದು ಊಹಿಸಲೂ ಸಾಧ್ಯವಿಲ್ಲ. ಇದರಲ್ಲಿ ಸಮರ್ಥ ನಿಯಂತ್ರಣ ಮತ್ತು ಯುಕ್ತಿ ಗೋಚರವಾಗುತ್ತದೆ. ಆಡಳಿತ ಮತ್ತು ರಕ್ಷಣಾಧಿಕಾರದ ಕಾರ್ಯಾಚರಣೆಗಳನ್ನು ನಾವು ಕಾಣುತ್ತಿದ್ದೇವೆ. ಓರ್ವ ರಕ್ಷಕ ಅಥವಾ ಪಾಲಕ ಪ್ರಭುವಿಲ್ಲದೇ ಅವು ನಡೆಯುತ್ತಿವೆಯೆಂದು ಕಲ್ಪಿಸಲೂ ಸಾಧ್ಯವಿಲ್ಲ. ಇಲ್ಲಿನ ಪ್ರತಿಯೊಂದು ಹೆಜ್ಜೆಯಲ್ಲಿಯೂ ಕುದ್ರತ್(ಶಕ್ತಿ) ಮತ್ತು ಹಿಕ್ಮತ್‌ನ (ಯುಕ್ತಿ) ಕಸೂತಿಯಿದೆ. ಇತರೆಲ್ಲವನ್ನೂ ನಿಷೇಧಿಸಿದರೂ ಇದು ಸರ್ವಶಕ್ತನಾದ ಸೃಷ್ಟಿಕರ್ತನ ನಿಯಂತ್ರಣ ಹಾಗೂ ಮಿಶ್ರಣ, ಕಲಾಕಾರನ ಕಲಾ ವೈಭವವೆಂಬ ಸತ್ಯವನ್ನು ಯಾರಿಂದಲೂ ನಿಷೇಧಿಸಲಾಗದೆಂಬುದೇ ಸತ್ಯ.

ಈ ಸೃಷ್ಟಿಯ ಹಿಂದೆ ಓರ್ವ ಯುಕ್ತಿ ಮತ್ತು ಶಕ್ತಿವಂತನಾದ ದೇವನ ಕ್ರಿಯೆಯಿದೆಯೆಂದು ಒಪ್ಪಿದ ಬಳಿಕ ನಮ್ಮ ಮುಂದೆ ಇನ್ನೊಂದು ಸತ್ಯವು ವ್ಯಕ್ತವಾಗುತ್ತದೆ. ಇದೆಲ್ಲವನ್ನೂ ಸೃಷ್ಟಿಸಿ ತನ್ನ ಶಕ್ತಿ ಮತ್ತು ಯುಕ್ತಿಯ ನೈಪುಣ್ಯವನ್ನು ಈ ರೀತಿಯಲ್ಲಿ ಪ್ರಸ್ತುತ ಪಡಿಸುತ್ತಿರುವ ಹಾಗೂ ಮಾನವನಿಗೆ ಅತ್ಯುತ್ತಮ ಸಾಮರ್ಥ್ಯ ಮತ್ತು ಪ್ರತಿಭೆಗಳನ್ನು ನೀಡಿರುವ ಆ ಮಹಾ ಮಹಿಮನು ಆತನಿಗೆ ಸುವ್ಯಕ್ತ ಜೀವನ ಹಾದಿಯನ್ನು ತೋರಿಸದಿರುತ್ತಾನೆಯೇ? ತೋರಿಸಿರಲಾರನೆಂದು ಹೇಳಲು ಯಾವ ನ್ಯಾಯವೂ ಇಲ್ಲ. ಆತನು ಈ ಲೋಕದಲ್ಲಿ ಮಾನವನ ಲೌಕಿಕ ಜೀವನ

ಸಾಮಗ್ರಿಗಳನ್ನು ಇಲ್ಲಿ ಸಿದ್ಧಗೊಳಿಸಿರುವಂತೆಯೇ ಆತನ ಬೌದ್ಧಿಕ, ನೈತಿಕ ಜೀವನದ ಸಾಮಗ್ರಿಗಳನ್ನೂ ಸಿದ್ಧ ಪಡಿಸಿರಲೇ ಬೇಕು. ಹಾಗೆಂದೇ ನಮ್ಮ ಬುದ್ಧಿಯು ಬಯಸುತ್ತದೆ. ಆಕಾಶ ಭೂಮಿಗಳ ಸ್ಥಿತ್ಯಂತರಗಳಲ್ಲಿ ಅಂತರ್ಲೀನವಾಗಿರುವ ಈ ಶಿಸ್ತು ವ್ಯವಸ್ಥೆಯೂ ಆ ವಾಸ್ತವಿಕತೆಯನ್ನೇ ಬೆಟ್ಟು ಮಾಡುತ್ತಿದೆ. ಮಾನವ ಪ್ರಕೃತಿಯು ರೂಪಿಸಲ್ಪಟ್ಟಿರುವ ಕ್ರಮವು ಅದರ ಸೃಷ್ಟಿ-ಸ್ವಭಾವದಿಂದ ಅದನ್ನೇ ಸಾಬೀತು ಪಡಿಸುತ್ತದೆ. ಹಾಗಿದ್ದರೆ ಇಲ್ಲಿ ಇನ್ನೊಂದು ಪ್ರಶ್ನೆ ಉದ್ಭವಿಸುತ್ತದೆ. ಹೃದಯ ಬಯಸುವ ಹಾಗೂ ಬುದ್ಧಿಗೆ ನಿಲುಕುವ ಈ ವಿಷಯವು ಸಾಕ್ಷಾತ್ಕಾರಗೊಂಡಿದೆಯೆಂಬುದಕ್ಕೆ ಏನಾದರೂ ದೃಷ್ಟಾಂತವಿದೆಯೇ? ಈ ನಿಟ್ಟಿನಲ್ಲಿ ನಾವು ಆಲೋಚಿಸುವಾಗ ಮಾನವ ಸಮಾಜದ ಒಂದು ಪಕ್ಷವು ನಮ್ಮ ಕಣ್ಣ ಮುಂದೆ ಬರುತ್ತದೆ. ಅವರು ಸದಾಚಾರ ನಡವಳಿಕೆಗಳ ಮಟ್ಟಿಗೆ ಅತ್ಯುನ್ನತ ಮಾದರೀ ಪುರುಷರಾಗಿದ್ದಾರೆ. ಮಾನಸಿಕ ಹಾಗೂ ನೈತಿಕ ನಿಟ್ಟಿನಲ್ಲಿ ನೋಡಿದರೆ ಅವರು ತಮ್ಮ ಕಾಲದ ಸಮುದಾಯಗಳಿಗೆ ಉತ್ತಮ ಸಾಕ್ಷಿಗಳಾಗಿದ್ದಾರೆ. ಮಿತ್ರರು ಅವರಲ್ಲಿ ಸಂಪೂರ್ಣವಾಗಿ ಭರವಸೆಯಿರಿಸಿದರು. ಶತ್ರುಗಳು ಅವರಲ್ಲಿ ತಪ್ಪು ಹುಡುಕಲು ತೀವ್ರ ಪ್ರಯತ್ನ ನಡೆಸಿದರು. ಆದರೆ ಅವರು ಅದರಲ್ಲಿ ಯಶಸ್ವಿಯಾಗಿರಲಿಲ್ಲ. ಆ ಮಹಾ ಪುರುಷರ ಮೂಲ ಹೇಳಿಕೆಯು ಸದಾ ಒಂದೇ ಆಗಿದ್ದಿತು- "ಮಾನವರ ಮಾರ್ಗದರ್ಶನಕ್ಕಾಗಿ ಅಲ್ಲಾಹನು ನಮ್ಮ ಮೂಲಕ ಒಂದು ನೀತಿ ಸಂಹಿತೆಯನ್ನು ಅವತೀರ್ಣ ಗೊಳಿಸಿರುತ್ತಾನೆ." ಅವರು ಅದನ್ನು ತಮ್ಮ ಕಾಲದಲ್ಲಿಯೇ ಕಾರ್ಯಗತಗೊಳಿಸಿ ಅದರ ಪ್ರಸ್ತುತತೆ ಮತ್ತು ಪ್ರಯೋಜನಗಳನ್ನು ಲೋಕಕ್ಕೆ ತೋರಿಸಿ ಕೊಟ್ಟರು. ಅವು ಅತ್ಯುತ್ತಮ ನಿಯಮಗಳೆಂಬುದನ್ನು ಅನುಭವ ಸಿದ್ಧವಾಗಿ ಸಾಬೀತು ಪಡಿಸಿದರು. ಅದರ ಕುಶಾಗ್ರತೆ ಮತ್ತು ಮೇಲ್ಮೆಗಳನ್ನು ಚಿಂತಕರು ಕೊಂಡಾಡಿದರು. ಕಣ್ಣಿದ್ದವರು ಅದರ ಅನುಗ್ರಹಗಳನ್ನು ಮತ್ತು ಸತ್ಫಲಗಳನ್ನು ನೋಡಿ ಆನಂದಿಸಿದರು. ಈ ನಿಯಮದ ಮೂಲಕ ಒಂದು ಸಾರ್ವತ್ರಿಕ ನ್ಯಾಯ ವ್ಯವಸ್ಥೆಯು ಸ್ಥಾಪನೆಗೊಂಡಿತು. ಜನರ ನಾನಾ ವಿಧ ವಿವಾದಗಳಿಗೆ ಅದು ಸೂಕ್ತ ಪರಿಹಾರ ಮಾರ್ಗವನ್ನು ಸೂಚಿಸಿತು. ಸಾಮಾಜಿಕ ಹಾಗೂ ಆರ್ಥಿಕ ರಂಗಗಳಲ್ಲಿ ಸಾರ್ವತ್ರಿಕ ಒಳಿತು ಮತ್ತು ಅನುಗ್ರಹಗಳು ಲಾಸ್ಯವಾಡಿದುವು.

ಈ ವಾಸ್ತವಿಕತೆಯನ್ನು ಗ್ರಹಿಸಿದ ಬಳಿಕ ಇಲ್ಲಿ ಮತ್ತೊಂದು ಪ್ರಶ್ನೆ ಸ್ವಾಭಾವಿಕವಾಗಿ ಮೂಡಿದೆ. ದೇವ ನಿಶ್ಚಿತ ನಿಯಮ ಮತ್ತು ಜೀವನ ವ್ಯವಸ್ಥೆಗಳು ಲೋಕದಲ್ಲಿ ಅಸ್ತಿತ್ವದಲ್ಲಿರುವಾಗ ಕೇವಲ ದೇವ ಸೃಷ್ಟಿಯಾದ ಮಾನವ ಬೇರೆ ನಿಯಮಗಳಿಗೆ ಶರಣಾಗಬಹುದೇ? ಅರ್ಥಾತ್ ದೇವನು ನೀಡಿದ ಜೀವನ ವ್ಯವಸ್ಥೆಯ ಬದಲಾಗಿ ಬೇರೆ ಜೀವನ ವ್ಯವಸ್ಥೆಯನ್ನು ಅಂಗೀಕರಿಸಬಹುದೇ? ಸ್ವಯಂಕೃತ ನಿಯಮ ವ್ಯವಸ್ಥೆಯೇ ಅಥವಾ ಇತರರು ನಿರ್ಮಿಸಿದ ನಿಯಮ ವ್ಯವಸ್ಥೆಯೇ ಎಂಬುದು ಇಲ್ಲಿ ಪ್ರಶ್ನೆಯಲ್ಲ. ಹಾಗೆಯೇ ಸ್ವಂತ ಅಭಿಪ್ರಾಯದಂತೆ ಅದು ಸರಿಯೋ ತಪ್ಪೋ ಎಂಬುದು ಗಮನಾರ್ಹವಲ್ಲ. ದೇವ ನಿಯಮ ಇರುವಾಗ ಬೇರೊಂದು ನಿಯಮವನ್ನು ಕ್ಷಣ ಕಾಲವಾದರೂ ಸ್ವೀಕರಿಸಬಹುದೇ ಎಂಬುದು ಪ್ರಶ್ನೆ. ಅದಕ್ಕೆ ಉತ್ತರ ಕಂಡುಹಿಡಿಯಬೇಕಾಗಿದೆ. ಈ ಪ್ರಶ್ನೆಗೆ ನಮ್ಮ ಬಳಿ ಇರುವ ನೇರ ಹಾಗೂ ಸ್ಪಷ್ಟ ಉತ್ತರ ಒಂದೇ- 'ಕೂಡದು.' ದೇವನ ದಾಸರ ಮಟ್ಟಿಗೆ ದೇವ ನಿಯಮವು ಅಸ್ತಿತ್ವದಲ್ಲಿರುತ್ತಾ ಬೇರೊಂದು ನಿಯಮವನ್ನು ಅನುಸರಿಸಲು ಎಂದೆಂದಿಗೂ ಅನುಮತಿಯಿಲ್ಲ. ಅದು ಕೃತಘ್ನತೆ,

ಧಿಕ್ಕಾರ ಹಾಗೂ ಮಹಾ ಅನ್ಯಾಯವಾಗಿದೆ. ಮಾತ್ರವಲ್ಲ ಶಿರ್ಕ್ ಹಾಗೂ ದೇವನ ವಿರುದ್ಧ ಯುದ್ಧ ಘೋಷಣೆಯಾಗಿದೆ. ಅಂತಹ ರಾಜ್ಯದ್ರೋಹಕ್ಕೆ ಇಹಲೋಕದಲ್ಲಿ ಭೀಕರ ಅನ್ಯಾಯಗಳ ಬೆದರಿಕೆ ಹಾಗೂ ಪರಲೋಕದ ಘೋರ ಶಿಕ್ಷೆಯ ಕುರಿತು ಭಯಪಡದ ದುಷ್ಕರ್ಮಿಗಳ ವಿನಾ ಇತರರು ಮುಂದಾಗಲಾರರು.

ಇದು ನಮ್ಮ ಸಂದೇಶ ಪ್ರಚಾರದ ಆರಂಭ ಬಿಂದು. ನಾವು ದೇವನ ದಾಸ್ಯ-ಅನುಸರಣೆಯನ್ನು ಮಾತ್ರ ಸ್ವೀಕರಿಸುವಂತೆ ಸಮಗ್ರ ಮಾನವಕುಲವನ್ನು ಆಹ್ವಾನಿಸುತ್ತೇವೆ. ದೇವ ನಿಯುಕ್ತರಾದ ಪ್ರವಾದಿಗಳು ಮತ್ತು ಸಂದೇಶವಾಹಕರು ತೋರಿಸಿಕೊಟ್ಟ ಜೀವನ ಮಾದರಿಯನ್ನು ಸ್ವೀಕರಿಸುವುದೇ ಅದಕ್ಕಿರುವ ವ್ಯಾವಹಾರಿಕ ಮಾರ್ಗ. ಅಲ್ಲಾಹನು ತನ್ನ ಪ್ರವಾದಿಗಳ ಮೂಲಕ ಎಲ್ಲಾ ಕಾಲಗಳಲ್ಲಿಯೂ ಮಾನವರಿಗೆ ತನ್ನ ಅಭೀಷ್ಟ ಮತ್ತು ವಿಧಿ ನಿಷೇಧಗಳನ್ನು ತಿಳಿಸಿಕೊಟ್ಟಿದ್ದಾನೆ. ಆತನ ಕಾನೂನು, ನಿಯಮ ನಿರ್ದೇಶಗಳನ್ನು ಸಾರುವ ಪ್ರವಾದಿಗಳು ಎಲ್ಲಾ ಸಮುದಾಯಗಳಲ್ಲಿಯೂ ಬಂದಿದ್ದಾರೆ. ಆದರೆ ಕಾಲ ಕ್ರಮೇಣ ತಮ್ಮ ಅಸಡ್ಡೆ ಮತ್ತು ದೌರ್ಬಲ್ಯಗಳ ಕಾರಣ ಆ ಸಮುದಾಯಗಳು ದಾರಿ ತಪ್ಪಿದುವು. ಪ್ರವಾದಿಗಳು ನಿರ್ದೇಶಿಸಿದ ವಿಷಯಗಳಿಂದ ಕೆಲವನ್ನು ಮರೆತು ಅಥವಾ ತಮ್ಮಿಷ್ಟದಂತೆ ಕೆಲವನ್ನು ಸೇರಿಸಿ ವಿಕೃತಗೊಳಿಸಿದರು. ಕೊನೆಗೆ ಅಲ್ಲಾಹನು ಪ್ರವಾದಿ ಮುಹಮ್ಮದರನ್ನು(ಸ) ಅಖಿಲ ಲೋಕದ ಮಾರ್ಗದರ್ಶಕ ಮತ್ತು ನಾಯಕರಾಗಿ ನಿಯೋಗಿಸಿದನು. ಅವರ ಮೂಲಕ ಅಲ್ಲಾಹನು ಒಂದೆಡೆ ಪೂರ್ವ ಪ್ರವಾದಿಗಳ ಶಿಕ್ಷಣ ಶೀಲಗಳನ್ನು ಪುನರ್ಜೀವಗೊಳಿಸಿ ಇನ್ನೊಂದೆಡೆ ತನ್ನ ಧರ್ಮವನ್ನು ಪೂರ್ಣ ಗೊಳಿಸಿದನು. ಪ್ರವಾದಿವರ್ಯರ(ಸ) ಬೋಧನೆಗಳನ್ನು ನಾವು ಈ ದೃಷ್ಟಿಯಿಂದಲೇ ನೋಡುತ್ತೇವೆ. ಅವರ ಬೋಧನೆಗಳು ಗತ ಪ್ರವಾದಿಗಳೆಲ್ಲರ ಬೋಧನೆಗಳ ನೈಜ ಕ್ರೋಡೀಕರಣ ಹಾಗೂ ಧರ್ಮದ ಸಂಪೂರ್ಣತೆಯೆಂದು ನಮಗೆ ದೃಢ ವಿಶ್ವಾಸವಿದೆ. ನಮ್ಮ ಈ ವಿಶ್ವಾಸವು ಅನುಕರಣಾತ್ಮಕವಾಗಿರದೆ ಸಂಪೂರ್ಣ ಸ್ವಾತಂತ್ರ್ಯ ಹಾಗೂ ಯುಕ್ತಿಪೂರ್ಣವಾಗಿ ಇಸ್ಲಾಮಿನ ಕುರಿತು ಆಲೋಚಿಸಿದ ಬಳಿಕ ನಾವು ತಲುಪಿದ ನಿಷ್ಕರ್ಷೆಯಾಗಿದೆ. ಈಗ ಸಮಗ್ರ ಲೋಕದ ಮುಂದೆ ನಾವು ಈ ಸಂದೇಶವನ್ನು ಸಮರ್ಪಿಸುತ್ತಿದ್ದೇವೆ. ಅನೇಕ ಮುಸ್ಲಿಮೇತರ ಬಾಂಧವರಿಗೆ ನಮ್ಮ ಈ ಅಭಿಪ್ರಾಯ ಜೀರ್ಣವಾಗದಿರಬಹುದು. ಆದರೆ ನಾವು ಅವರೊಡನೆ ವಿನಂತಿಸುವುದೇನೆಂದರೆ, ಧಾರ್ಮಿಕ ವಿಷಯವು ಕ್ಷುಲ್ಲಕವಲ್ಲ. ಇಸ್ಲಾಮಿನ ಬಗ್ಗೆ ಗಾಢವಾಗಿ ಆಲೋಚಿಸಬೇಕಾದುದು ಅವರ ಕರ್ತವ್ಯವೂ ಹೌದು. ವಿವಿಧ ಕಾರಣಗಳಿಂದ ಅವರ ಮತ್ತು ಮುಸ್ಲಿಮರ ಮಧ್ಯೆಯಿರುವ ಪಕ್ಷಪಾತಗಳು ಇಸ್ಲಾಮಿನ ಬಗ್ಗೆ ವಿಚಾರ ಮಾಡುವುದಕ್ಕೆ ತಡೆಯಾಗಬಾರದು. ಇಸ್ಲಾಮ್ ಕೇವಲ ಮುಸ್ಲಿಮರ ಗದ್ದುಗೆಯಲ್ಲ; ಅದು ಅಖಿಲ ಲೋಕದ ಸಾರ್ವಜನಿಕ ಸೊತ್ತಾಗಿರುವ ಧರ್ಮವಾಗಿದೆ. ಲೋಕಕ್ಕೆ ಬಂದ ಪ್ರವಾದಿಗಳೆಲ್ಲರೂ ತಂದ ಸತ್ಯ ಅದರಲ್ಲಿ ಅಡಕವಾಗಿದೆ. ಮುಸ್ಲಿಮರೊಂದಿಗಿರುವ ಪಕ್ಷಪಾತದ ನಿಮಿತ್ತ ಯಾವುದೇ ಜನಾಂಗವು ನೈಜ ಇಸ್ಲಾಮಿನ ಕುರಿತು ವಿಚಾರ ಮಾಡಲು ಹಿಂಜರಿಯುವುದಿದ್ದರೆ ಅದರಿಂದ ದುರ್ಗಂಧಕ್ಕಾಗಿ ಸ್ವಂತ ಮೂಗನ್ನು ಕತ್ತರಿಸಿಕೊಂಡ ಪರಿಣಾಮವಷ್ಟೇ ಆಗಬಹುದು. ಹೌದು, ಮುಸ್ಲಿಮೇತರ ಬಾಂಧವರು ಪಕ್ಷಪಾತದ ನಿಮಿತ್ತ ಇಸ್ಲಾಮಿನ ಕುರಿತು ಆಲೋಚಿಸಲು ಔದಾಸೀನ್ಯ ತೋರಿದರೆ ಮುಸ್ಲಿಮರಿಗಾಗಲೀ ಇಸ್ಲಾಮಿಗಾಗಲೀ ಅದರಿಂದ ಯಾವ ನಷ್ಟವೂ ಇಲ್ಲ. ಅವರೇ ಸ್ವತಃ

ನಷ್ಟಕ್ಕೊಳಗಾಗುವರು. ವಾಯು, ನೀರು, ಬೆಳಕು ಇತ್ಯಾದಿ ದಿವ್ಯಾನುಗ್ರಹಗಳಲ್ಲಿ ಮುಸ್ಲಿಮರಂತೆ ಮುಸ್ಲಿಮೇತರರಿಗೂ ಸಮಾನ ಪಾಲಿರುವಂತೆಯೇ ಇಸ್ಲಾಮೆಂಬ ದಿವ್ಯಾನುಗ್ರಹದಲ್ಲಿ ಎಲ್ಲಾ ಜನಾಂಗಗಳಿಗೂ ಸಮಾನಾವಕಾಶವಿದೆ. ಮುಸ್ಲಿಮರೊಂದಿಗಿರುವ ತಕರಾರಿನಿಂದ ಆ ದಿವ್ಯಾನುಗ್ರಹಗಳಿಗೆ ತಡೆಯಿಲ್ಲವೆಂದಾದರೆ ಅದೇ ಕಾರಣಕ್ಕಾಗಿ ಇಸ್ಲಾಮ್ ಕೂಡಾ ತಡೆಯಿರಬಾರದು.

ಎಲ್ಲಾ ರೀತಿಯ ಪಕ್ಷಪಾತಗಳಿಂದ ಮುಕ್ತರಾಗಿ ಇಸ್ಲಾಮನ್ನು ಕಲಿಯಬಯಸುವ ಜನರಿಗಾಗಿ ನಾವು ಉತ್ತಮ ಸಾಹಿತ್ಯವನ್ನು ತಯಾರುಗೊಳಿಸುತ್ತಿದ್ದೇವೆ. ಇಸ್ಲಾಮಿನ ಕುರಿತು ತಿಳಿಯಲು ಮುಂದೆ ಬರುವ ಮುಸ್ಲಿಮೇತರ ಸತ್ಯಾಕಾಂಕ್ಷಿಗಳಿಗಾಗಿ ಸೇವೆ ಸಲ್ಲಿಸುವ ಅವಕಾಶವು ನಮಗೆ ತುಂಬಾ ಸಂತೋಷದ ವಿಷಯವಾಗಿದೆ.

ಈ ಸಂದರ್ಭದಲ್ಲಿ ಮುಸ್ಲಿಮರೊಡನೆಯೂ ಒಂದು ವಿಚಾರ ಸ್ಪಷ್ಟಪಡಿಸಬೇಕಾಗಿದೆ. ಅವರು ಅಲ್ಲಾಹನ ಧರ್ಮವನ್ನು ತಮ್ಮ ಪಿತ್ರಾರ್ಜಿತ ಸೊತ್ತೆಂದು ಭಾವಿಸಬಾರದು. ಇಸ್ಲಾಮಿನೊಂದಿಗಿರುವ ನೈಜ ಸಂಬಂಧವು ಇಸ್ಲಾಮಿ ನಂಬಿಕೆಗಳಲ್ಲಿ ವಿಶ್ವಾಸವಿರಿಸಿ, ಅದರ ವಿಧಿ-ನಿಷೇಧಗಳನ್ನು ವ್ಯಾವಹಾರಿಕವಾಗಿ ಪಾಲಿಸುವುದಾಗಿದೆ. ಕೇವಲ ಮುಸ್ಲಿಮರ ಮನೆಯಲ್ಲಿ ಜನಿಸುವುದರಿಂದ ಮುಸ್ಲಿಮನಾಗುವುದಿಲ್ಲ. ಮುಸ್ಲಿಮರ ಈ ತಪ್ಪು ತಿಳುವಳಿಕೆಯೇ ಇಂದು ಇಸ್ಲಾಮಿಗೆ ಭೀಕರ ನಷ್ಟವನ್ನು ತಂದೊಡ್ಡಿವೆ. ಇದರಿಂದಾಗಿ ಅವರಿಗೂ ಇಸ್ಲಾಮಿನ ಅನುಗ್ರಹವು ತಡೆಯಲ್ಪಟ್ಟಿದೆಯಲ್ಲದೇ ಇತರರಲ್ಲಿಯೂ ತಪ್ಪು ತಿಳುವಳಿಕೆ ಮತ್ತು ದುರಭಿಪ್ರಾಯ ಮೂಡಿಸಲಿಕ್ಕೆ ಕಾರಣವಾಗಿದೆ. ಒಂದು ದೈವಿಕ ಪಕ್ಷವೆಂಬುದರ ಬದಲಾಗಿ ಕೇವಲ ಒಂದು ಸಮುದಾಯವಾಗಿ ಲೋಕದ ಮುಂದೆ ಅಸ್ತಿತ್ವದಲ್ಲಿರುವ ತನಕ ಇಸ್ಲಾಮಿ ಪ್ರಚಾರವು ಗ್ರಹಿಸಲಸಾಧ್ಯ ವಿಷಯವಾಗಿದೆ. ಅವರು ನೈಜ ಮುಸ್ಲಿಮರಾಗಬೇಕು. ಅದಲ್ಲದಿದ್ದರೆ ಒಂದು ಸಮುದಾಯವಾಗಿಯೇ ಉಳಿಯಬೇಕು. ಇವೆರಡರಲ್ಲಿ ಯಾವುದಾದರೊಂದು ನೆಲೆಯನ್ನು ಸ್ವೀಕರಿಸುವುದಗತ್ಯ. ಒಂದು ಸಮುದಾಯ ಮತ್ತು ಒಂದು ತಾತ್ವಿಕ ಪಕ್ಷದ ಮಧ್ಯೆ ಅಜಗಜಾಂತರವಿದೆ. ಇವೆರಡರ ವೈಶಿಷ್ಟ್ಯಗಳೂ ಭಿನ್ನವಾಗಿದೆ. ಮುಸ್ಲಿಮರು ಅವುಗಳನ್ನು ಒಟ್ಟೊಟ್ಟಿಗೆ ತಮ್ಮೊಂದಿಗಿರಿಸಿಕೊಳ್ಳಲು ಪ್ರಯತ್ನಿಸಬಾರದು. ದ್ವಿಮುಖ ನೀತಿಯು ಅವರನ್ನು ಎಲ್ಲಿಗೂ ತಲಪಿಸಲಾರದು. ಹೌದು, ಅವರ ಸ್ಥಿತಿಯು ಧರ್ಮಕ್ಕೂ ಸಲ್ಲದವರು ಲೋಕಕ್ಕೂ ಸಲ್ಲದವರು ಎಂಬಂತಾಗುವುದು! ವಾಸ್ತವದಲ್ಲಿ ತಾವೊಂದು ಇಸ್ಲಾಮಿ ಪಕ್ಷವೆಂದಾದರೆ ಇಸ್ಲಾಮಿ ಸಿದ್ಧಾಂತಗಳೊಂದಿಗಿನ ಸಂಪೂರ್ಣ ಸಂಬಂಧವನ್ನು ಅಭಿವ್ಯಕ್ತ ಗೊಳಿಸಬೇಕು. ಸಾರ್ವಜನಿಕ ಹಿತಾಸಕ್ತಿಗಳಿಗೆ ಬದ್ಧವಾದ ಎಲ್ಲಾ ಹಕ್ಕೊತ್ತಾಯಗಳನ್ನು ಅವರು ಹಿಂತೆಗೆದುಕೊಳ್ಳಬೇಕು. ಈ ದ್ವಿಮುಖ ಧೋರಣೆಯು ಅವರ ಸ್ಥಿತಿಯನ್ನು ಬಹುವಂಶ ಕೆಡಿಸಿದೆ. ತನ್ಮೂಲಕ ಮುಸ್ಲಿಮೇತರರ ಮನದಲ್ಲಿಯೂ ಇಸ್ಲಾಮಿನ ಕುರಿತು ತೀಕ್ಷ್ಣ ಪಕ್ಷಪಾತಗಳು ಹುಟ್ಟಿವೆ. ಮುಸ್ಲಿಮರು ಜಾತೀಯ ಸಂಸ್ಕೃತಿಯಲ್ಲಿಯೂ ಇತರ ಸಾರ್ವಜನಿಕ ವೈಶಿಷ್ಟ್ಯಗಳಲ್ಲಿಯೂ ತೀರಾ ಭಿನ್ನ ನಿಲುಮೆ ಹೊಂದಿರುವುದರಿಂದ ಅವರ ಪವಿತ್ರ ಇಸ್ಲಾಮಿನ ಶಿಕ್ಷಣ ಶೀಲಗಳ ಕುರಿತು ಇತರ ಸಮುದಾಯಗಳು ಗಮನಿಸುವುದೇ ಇಲ್ಲ.

ಆಧುನಿಕ ಮುಸ್ಲಿಮರ ಈ ದ್ವಂದ್ವ ನೀತಿಯಿಂದಾಗಿ ಒಂದು ಇಸ್ಲಾಮಿ ಪಕ್ಷವನ್ನು ರಚಿಸುವುದು ನಮಗೆ ಅನಿವಾರ್ಯವಾಯಿತು. ಈ ಪಕ್ಷಕ್ಕೆ ಕೇವಲ ಇಸ್ಲಾಮಿ ಸಿದ್ಧಾಂತಗಳೊಂದಿಗೆ

ಸಂಬಂಧವಿದೆ. ಈ ಪಕ್ಷವು ಜಾತಿ, ಸಮುದಾಯ, ದೇಶ ಮುಂತಾದ ಎಲ್ಲ ಪಕ್ಷಪಾತಗಳಿಂದ ಮುಕ್ತವಾಗಿದೆ. ಈ ಪಕ್ಷದ ಧ್ಯೇಯವು ಅಲ್ಲಾಹನ ಭೂಮಿಯಲ್ಲಿ ಆತನ ಧರ್ಮಕ್ಕೆ ಕಾಯಾ, ವಾಚಾ, ಮನಸಾ ಸಾಕ್ಷ್ಯ ವಹಿಸುವುದಾಗಿದೆ. ಸತ್ಯ ವ್ಯವಸ್ಥೆಯೆಂದು ನಾವು ಚೆನ್ನಾಗಿ ಮನಗಂಡಿರುವ ಈ ಧರ್ಮವನ್ನು ನಮ್ಮ ಜನ್ಮ ಭೂಮಿಯಾಗಿರುವ ಈ ದೇಶದ ಪ್ರಜೆಗಳ ಮುಂದೆ ಸಮರ್ಪಿಸಬೇಕಾದುದು ನಮ್ಮ ಪ್ರಥಮ ಪ್ರಧಾನ ಕರ್ತವ್ಯವೆಂದು ನಾವು ಭಾವಿಸುತ್ತೇವೆ. ಈ ಬಗ್ಗೆ ನಮಗೆ ಯಾವ ಸ್ವಾರ್ಥ ಹಿತಾಸಕ್ತಿಯೂ ಇಲ್ಲ. ಸ್ವದೇಶಿಯರೆಂಬ ನೆಲೆಯಲ್ಲಿ ಪರಸ್ಪರ ಇರಬೇಕಾದ ಹಿತಾಕಾಂಕ್ಷೆಯೇ ಅದರ ಪ್ರೇರಕ ಶಕ್ತಿ.

ಆಧುನಿಕ ಯುಗದಲ್ಲಿ ಸಾವಿರಾರು ಕೆಡುಕುಗಳಿದ್ದರೂ ಅದರೊಂದಿಗೆ ಕೆಲವು ಒಳಿತುಗಳೂ ಇವೆ. ಅಂಧಾನುಕರಣೆಯ ಪ್ರಾಮುಖ್ಯತೆ ಕಡಿಮೆಯಾಗುತ್ತಿದೆ. ಎಲ್ಲ ವಿಚಾರಗಳ ಕುರಿತು ಜನರು ಸ್ವತಂತ್ರವಾಗಿ ಆಲೋಚಿಸಲಾರಂಭಿಸಿದ್ದಾರೆ. ಅವುಗಳ ಒಳಿತು ಕೆಡುಕುಗಳನ್ನು ಮಾತ್ರ ಅವಲಂಬಿಸಿ ಗುಣ ದೋಷಗಳನ್ನು ನಿರ್ಧರಿಸುತ್ತಾರೆ. ಈ ಸ್ವತಂತ್ರ ಹಾಗೂ ನಿಷ್ಪಕ್ಷ ಬುದ್ಧಿಯಿಂದ ಇಸ್ಲಾಮಿನ ಬಗ್ಗೆಯೂ ವಿಚಾರ ಮಾಡಬಹುದೆಂದು ನಾವು ನಿರೀಕ್ಷಿಸುತ್ತಿದ್ದೇವೆ. ಈ ರೀತಿ ಮಾಡಿದರೆ ಅವರ ಎಲ್ಲ ಸಮಸ್ಯೆಗಳಿಗೂ ಇಸ್ಲಾಮಿನಲ್ಲಿ ಉತ್ತಮ ಪರಿಹಾರ ದೊರೆಯುವುದೆಂದು ನಮಗೆ ದೃಢ ನಂಬಿಕೆಯಿದೆ.

ಎಲ್ಲಾ ಸಾಮಾಜಿಕ ಪಕ್ಷಪಾತಗಳನ್ನೂ ಜಾತಿ, ಪ್ರದೇಶ ಮುಂತಾದ ಸಕಲ ಸಂಕುಚಿತ ದೃಷ್ಟಿಕೋನಗಳನ್ನೂ ಬಿಟ್ಟು ಮಾನವಕುಲವನ್ನು ಸಂಪೂರ್ಣವಾಗಿ ಒಂದಾಗಿಸುವ ಸಾರ್ವತ್ರಿಕ ಸಿದ್ಧಾಂತಗಳ ಆಧಾರದಲ್ಲಿ ಆಡಳಿತ ಮತ್ತು ನಾಗರಿಕತೆಗಳ ಭದ್ರ ಬುನಾದಿ ಹಾಕಬೇಕೆಂದು ಆಧುನಿಕ ಯುಗದ ಪ್ರವೃತ್ತಿಯು ಬಲವಾಗಿ ಅಪೇಕ್ಷಿಸುತ್ತಿದೆ. ಇದು ಲೋಕದ ಸಹಜ ಬೇಡಿಕೆಯಾಗಿದ್ದರೆ ಅದನ್ನು ಸಾಧಿಸಲೇ ಬೇಕು. ಸಾಧಿಸದಿದ್ದರೆ ಅಖಿಲ ಲೋಕಕ್ಕೆ ಸೂಕ್ತವಾದ ಸಾರ್ವಲೌಕಿಕ ಸಿದ್ಧಾಂತವು ದೊರೆಯದಿದ್ದರೆ ಈ ಲೋಕದ ವಿನಾಶ ಅನಿವಾರ್ಯವಾಗುವುದು. ವಿವಿಧ ರಾಷ್ಟ್ರೀಯ ಸರಕಾರಗಳ ಕಾಲವು ಅಸ್ತಮಿಸುತ್ತಲಿದೆ. ಹಾಗೆಯೇ ಯಾವುದಾದರೊಂದು ರಾಷ್ಟ್ರಕ್ಕೆ ಇಡೀ ವಿಶ್ವವನ್ನು ಅಥವಾ ಅದರ ಬಹು ಭಾಗವನ್ನು ಆಳಬಹುದಾಗಿದ್ದ ಕಾಲವೂ ಕಳೆದು ಹೋಗಿದೆ. ಹೀಗಿದ್ದರೂ ಅದರೊಂದಿಗೆ ಅನೇಕ ಭೀಕರ ಗಂಡಾಂತರಗಳು ಲೋಕವನ್ನು ದುರುಗುಟ್ಟಿ ನೋಡುತ್ತಿದೆ. ಕೆಲವಾರು ವಿಪತ್ತುಗಳನ್ನು ನೀವು ಇತ್ತೀಚೆಗೆ ನೋಡಿರುವಿರಲ್ಲವೇ. ಇಸ್ಲಾಮೆಂಬ ಆ ಪಾವನ ಪದ್ಧತಿಯೇ ಸಂಕಷ್ಟಗಳ ದಿವ್ಯ ಔಷಧ. ಮಾನವನ ಮೇಲೆ ಮಾನವನ ಆಧಿಪತ್ಯದ ಬದಲಾಗಿ ದೇವನ ಆಧಿಪತ್ಯ ನಡೆಯಬೇಕು. ಅರ್ಥಾತ್ ಸಕಲ ಪ್ರಪಂಚದ ನೈಜ ಸಾರ್ವಭೌಮ ಮತ್ತು ನ್ಯಾಯಾಧಿಪತಿಯಾದ ದೇವನ ಕಾನೂನನ್ನು ಮಾನವರೆಲ್ಲರೂ ಅನುಷ್ಠಾನಕ್ಕೆ ತರಬೇಕು.

ಇಸ್ಲಾಮ್ ಪ್ರತಿಪಾದಿಸುವ ಜೀವನ ವ್ಯವಸ್ಥೆಯು ಎರಡು ಮೂಲ ಸಿದ್ಧಾಂತಗಳನ್ನು ಒಳಗೊಂಡಿದೆ. ಏಕದೇವತ್ವ ಮತ್ತು ಏಕ ಮಾನವಕುಲ. ಈ ಎರಡು ಸಿದ್ಧಾಂತಗಳನ್ನು ಅಂಗೀಕರಿಸದೆ ನ್ಯಾಯನಿಷ್ಠ, ಸಾರ್ವತ್ರಿಕ, ಸಾಮಾಜಿಕ ವ್ಯವಸ್ಥೆ ಬೆಳೆಯಲು ಸಾಧ್ಯವಿಲ್ಲ. ನೈಜ ಏಕದೇವ ವಿಶ್ವಾಸವನ್ನು ಅಂಗೀಕರಿಸದೆ ಮತ್ತು ವಿವಿಧ ದೇವತ್ವವಾದಿಗಳ ಆಧಿಪತ್ಯವನ್ನು ಅಳಿಸದೆ, ಆದಮನ ಸಂತಾನಗಳೆಂಬ ನೆಲೆಯಲ್ಲಿ ಎಲ್ಲರೂ ಏಕದೇವನ ಪಾವನ ನಿಯಮವನ್ನು

ಸಮಾನವಾಗಿ ಅಂಗೀಕರಿಸದೆ ಇರುವ ತನಕ, ಈ ಲೋಕವು ನಾನಾ ದೇವತೆಗಳ ವಿಹಾರ ಕೇಂದ್ರ ಹಾಗೂ ವಿವಿಧ ಉದ್ಧಟರ ಸ್ಪರ್ಧಾ ಕಣವಾಗಬಹುದು. ಕರಿಯ-ಬಿಳಿಯನ ವ್ಯತ್ಯಾಸ ಉಳಿಯುವುದು. ಉಚ್ಚ-ನೀಚತೆ ಅಸ್ತಿತ್ವದಲ್ಲಿರುವುದು. ಅರಬರು ಮತ್ತು ಅರಬೇತರರು ಪರಸ್ಪರ ಕಚ್ಚಾಡುವರು. ಪ್ರಸ್ತುತ ಸಿದ್ಧಾಂತಗಳನ್ನು ಅಂಗೀಕರಿಸಿದರೆ ಎಲ್ಲಾ ಯುದ್ಧಗಳೂ ತನ್ನಿಂತಾನೇ ಕೊನೆಗೊಳ್ಳುವುದು. ಸರ್ವ ಮಾನವರೂ ಏಕ ದೇವನ ಪ್ರಜೆಗಳು ಮತ್ತು ಪರಸ್ಪರ ಸಹೋದರರಾಗಿ ವರ್ತಿಸುವರು. ತರುವಾಯ ಮಾನವ ಸಹೋದರರ ನಡುವೆ ಯಾವ ಅಸಮಾನತೆಯೂ ಇರಲಾರದು. ಧರ್ಮ ಮತ್ತು ದೇವ ಭಕ್ತಿಯ ಅಧಾರದಲ್ಲಿಯಲ್ಲದೆ. ಅರ್ಥಾತ್ ದೇವ ನಿಯಮವನ್ನು ಹೆಚ್ಚು ನಿಷ್ಠೆಯಿಂದ ಪಾಲಿಸಿ ಮಾನವಕುಲದೊಡನೆ ನ್ಯಾಯ ನಿಷ್ಠೆಯಿಂದ ವ್ಯವಹರಿಸುವ ಜನರಿಗೆ ಮಾತ್ರ ಆ ವ್ಯವಸ್ಥೆಯಲ್ಲಿ ಆದ್ಯತೆ ದೊರೆಯುವುದು. ಭೂಮಿಯಲ್ಲಿ ಗೊಂದಲ ನಿರ್ಮಿಸಿ ಸ್ವಯಂ ಒಡೆಯರೆಂದೂ ದೇವರೆಂದೂ ವಾದಿಸುವ ಜನರಿಗೆ ಆ ವ್ಯವಸ್ಥೆಯಲ್ಲಿ ಯಾವ ಸ್ಥಾನವೂ ಇರಲಾರದು. ಈ ಬಗ್ಗೆ ನಿಮಗೆ ಏನಾದರೂ ಸಂದೇಹವಿದ್ದರೆ ನೀವು ಇಸ್ಲಾಮಿನ ಕುರಿತು ಚೆನ್ನಾಗಿ ವಿಶ್ಲೇಷಣೆ ಮಾಡದಿರುವುದು ಅದಕ್ಕೆ ಕಾರಣವಾಗಿದೆ. ನೀವು ಕೇವಲ ಮುಸ್ಲಿಮರನ್ನೇ ಮಾನದಂಡವಾಗಿಟ್ಟುಕೊಂಡು ಇಸ್ಲಾಮನ್ನು ತಿಳಿಯಲು ಪ್ರಯತ್ನಿಸದಿರಿ. ನೀವು ಹಾಗೆ ಮಾಡಿರುವುದು ನ್ಯಾಯೋಚಿತವೇ ಆಗಿದೆ. ಸಾಮಾನ್ಯವಾಗಿ ಯಾವುದೇ ಜೀವನ ಸಿದ್ಧಾಂತವನ್ನು ಅದರ ಹೆಸರಿನಲ್ಲಿ ಜೀವಿಸುತ್ತಿರುವ ಜನರನ್ನು ನೋಡಿಯೇ ತಿಳಿದುಕೊಳ್ಳಲು ಪ್ರಯತ್ನಿಸಲಾಗುತ್ತದೆ. ಆದರೆ ಇಸ್ಲಾಮಿನ ಮಟ್ಟಿಗೆ ಈ ಭಾವನೆಯು ಕೇವಲ ತಪ್ಪು ತಿಳುವಳಿಕೆ ಮತ್ತು ವಿಚಾರ ಗೊಂದಲಗಳಿಗಷ್ಟೆ ದಾರಿ ಮಾಡುವುದು. ಮುಸ್ಲಿಮ್ ಸಮುದಾಯದಲ್ಲಿ ಇಂದು ಅಷ್ಟರ ಮಟ್ಟಿಗೆ ದುಷ್ಟ ಕಂದಾಚಾರಗಳು ನೆಲೆಸಿವೆ ಎಂದೇ ಹೇಳಬೇಕಾಗಿದೆ. ಇಸ್ಲಾಮಿನ ನೈಜ ರೂಪವನ್ನು ನೋಡಬೇಕಾದರೆ, ಇಸ್ಲಾಮನ್ನು ನೇರವಾಗಿ ಕಲಿಯಲು ಪ್ರಯತ್ನಿಸುವುದೇ ಏಕೈಕ ಮಾರ್ಗ. ಈ ನಿಟ್ಟಿನಲ್ಲಿ ನೀವು ಆಲೋಚಿಸಿದರೆ ಇಂದು ಪರೀಕ್ಷಾ ಕಣದಲ್ಲಿರುವ ಎಲ್ಲ ಜೀವನ ವ್ಯವಸ್ಥೆಗಳಿಗಿಂತಲೂ ಇಸ್ಲಾಮ್ ನಿಮಗೆ ಅತ್ಯುತ್ತಮವಾಗಿ ತೋರುವುದೆಂದು ನಾವು ಖಚಿತವಾಗಿ ನಂಬುತ್ತೇವೆ. ಅದು ದೇವನಿಯುಕ್ತರಾದ ಸಕಲ ಪ್ರವಾದಿಗಳ ಪಾವನ ಬೋಧನೆಗಳ ಸುರಕ್ಷಿತ ಸಮಾಹಾರವಾಗಿದ್ದು ಅಂತಿಮ ಪ್ರವಾದಿ ಮುಹಮ್ಮದ್‌ರಿಂದ(ಸ) ಪೂರ್ಣಗೊಳಿಸಲ್ಪಟ್ಟ ಕೊನೆಯ ಹಾಗೂ ಸಮಗ್ರ ಧರ್ಮವಾಗಿದೆ. ಅದು ಸಾಮಾಜಿಕ, ರಾಜಕೀಯ ವ್ಯವಸ್ಥೆಯೆಂಬ ದೃಷ್ಟಿಯಿಂದ ದೇವಾಧಿಪತ್ಯ ಮತ್ತು ಪ್ರಜಾಧಿಪತ್ಯದಲ್ಲಿರುವ ಸರ್ವ ಒಳಿತುಗಳ ಸಂಗಮವಾಗಿದೆ. ಆದರೆ ಅದು ಅವುಗಳಲ್ಲಿರುವ ನಾನಾ ವಿಧ ಕೆಡುಕು ಮತ್ತು ನ್ಯೂನತೆಗಳಿಂದ ಸಂಪೂರ್ಣ ಶುದ್ಧವಾಗಿದೆ. ಈ ವ್ಯವಸ್ಥೆಯನ್ನು ಜಾರಿಗೊಳಿಸಲು ಸಚ್ಚರಿತರಾದ ಸಜ್ಜನರನ್ನು ಅದು ಸಿದ್ಧ ಗೊಳಿಸುತ್ತದೆ. ಹೌದು, ಅದು ಉತ್ತಮ ಮಾನವರ ನಿರ್ಮಾಣ ಯಂತ್ರವಾಗಿದೆ.

ನಾನು ಈಗ ನನ್ನ ಭಾಷಣವನ್ನು ಕೊನೆಗೊಳಿಸುತ್ತಿದ್ದೇನೆ. ನಾನು ನಿಮ್ಮೊಡನೆ ಇನ್ನೊಮ್ಮೆ ಹೇಳುತ್ತಿದ್ದೇನೆ- ಒಂದು ಜೀವನ ವ್ಯವಸ್ಥೆಯೆಂಬ ದೃಷ್ಟಿಯಿಂದ ಇಸ್ಲಾಮಿನ ಬಗ್ಗೆ ವಿಚಾರ ಮಾಡ ಬಯಸುವ ಸರ್ವರನ್ನೂ ನಾವು ಸ್ವಾಗತಿಸುತ್ತೇವೆ. ಅವರಿಗೆ ನೆರವಾಗಲು ನಾವು ಸಿದ್ಧರಿದ್ದೇವೆ. ಅವರಿಗಾಗಿ ನಮ್ಮ ಸೇವೆ ಸದಾ ಸಿದ್ಧವಿದೆ. ಕೊನೆಯದಾಗಿ ಮುಸ್ಲಿಮರೊಡನೆ

ನನ್ನ ವಿನಂತಿಯೇನೆಂದರೆ ನೀವು ಅಲ್ಲಾಹನಿಗಾಗಿ ದ್ವಿಮುಖ ನೀತಿಯನ್ನು ಕೈಬಿಡಬೇಕು. ಇಸ್ಲಾಮನ್ನು ಕ್ರಮಬದ್ಧವಾಗಿ ಅಂಗೀಕರಿಸಬೇಕು. ಅದಲ್ಲದೆ ಅದರ ಹಾದಿಯಲ್ಲಿ ವಿಘ್ನಗಳನ್ನಾದರೂ ಸೃಷ್ಟಿಸಬಾರದು. ಹೀಗೆಯೇ ನಮ್ಮ ಮುಸ್ಲಿಮೇತರ ಬಾಂಧವರೊಡನೆಯೂ ನಮ್ಮ ಒಂದು ಬಿನ್ನಹವಿದೆ. ಪ್ರಾಚೀನ ಸಂಘರ್ಷಗಳ ಕಾರಣ ಇಸ್ಲಾಮ್ ವಿರೋಧಿ ಪಕ್ಷಪಾತಕ್ಕೆ ಸಿಲುಕಬೇಡಿರಿ. ದೇವಾನುಗ್ರಹಕ್ಕೆ ತಕ್ಕುದಾದ ಬೆಲೆ ನೀಡಬೇಕು. ಅದರಿಂದ ಪ್ರಯೋಜನ ಪಡೆಯುವ ವಿಷಯದಲ್ಲಿ ಯಾವ ಸಂಕೋಚವೂ ಸಲ್ಲದು.

## ಒಂದು ಹೊಸ ವಿಶ್ವ ವ್ಯವಸ್ಥೆ

ಇಂದು ಆಧುನಿಕ ವಿಜ್ಞಾನ ಮತ್ತು ತಾಂತ್ರಿಕತೆಯು ಬಹಳಷ್ಟು ಪ್ರಗತಿ ಸಾಧಿಸಿದೆ. ಆಧುನಿಕ ಸಾರಿಗೆ ಸಂಪರ್ಕಗಳ ಅಭಿವೃದ್ಧಿಯಿಂದಾಗಿ ರಾಷ್ಟ್ರಗಳನ್ನು ಮತ್ತು ಜನತೆಯನ್ನು ವಿಂಗಡಿಸಿದ ಭೌಗೋಳಿಕ ಹಾಗೂ ನೈಸರ್ಗಿಕ ಮಿತಿಮೇರೆಗಳು ಅಳಿದಿವೆ. ಈಗ ಇಡೀ ವಿಶ್ವವೇ ಒಂದು ರಾಷ್ಟ್ರವಾಗಿ ಪರಿಣಮಿಸಿದೆ. ಈ ಹಿಂದೆ ನಾವು ವಿವಿಧ ರಾಷ್ಟ್ರಗಳೆಂದು ಕರೆಯುತ್ತಿದ್ದ ಖಂಡಗಳು ವಿಶ್ವರಾಷ್ಟ್ರದ ಜಿಲ್ಲೆಗಳಾಗಿರುವಂತೆ ಭಾಸವಾಗುತ್ತಿದೆ. ತಾಂತ್ರಿಕತೆಯಲ್ಲಿ ಮುಂದುವರಿದ ರಾಷ್ಟ್ರಗಳ ಪರಸ್ಪರ ಸಂಬಂಧವು ದೇಹ ಮತ್ತು ನರನಾಡಿಗಳಂತೆ ಅತ್ಯಂತ ನಿಕಟವಾಗಿದೆ. ಈ ಹಿಂದೆ ಅತ್ಯಂತ ಮುಂದುವರಿದ ರಾಷ್ಟ್ರಗಳು ವಿಭಿನ್ನ ಜಿಲ್ಲೆಗಳಂತಿರಲಿ, ವಿವಿಧ ಪ್ರಾಂತ್ಯಗಳೊಳಗೂ ಇದ್ದಿರದಂತಹ ಸಂಪರ್ಕ ಸೌಲಭ್ಯಗಳು ಇಂದು ಜಗತ್ತಿನ ವಿಭಿನ್ನ ರಾಷ್ಟ್ರಗಳು ಹೊಂದಿವೆ. ಹಿಂದುಳಿದ ರಾಷ್ಟ್ರಗಳ ಅನೇಕ ಭಾಗಗಳಲ್ಲಿ ಇಂದಿಗೂ ಅಂತಹ ಸೌಲಭ್ಯವೇರ್ಪಟ್ಟಿಲ್ಲ. ಇಂದು ವಿವಿಧ ರಾಷ್ಟ್ರಗಳು ಮತ್ತು ಜನತೆ ತುರ್ತು ಸ್ಥಿತಿಯಲ್ಲಿ ಒಂದೇ ಮೊಹಲ್ಲದಲ್ಲಿ ವಾಸಿಸುವಂತೆ ಕ್ಷಿಪ್ರವಾಗಿ ಒಂದೆಡೆ ಸಮಾವೇಶಗೊಳ್ಳಲು ಸಾಧ್ಯವಿದೆ. ಈ ವೈಜ್ಞಾನಿಕ ಮತ್ತು ತಾಂತ್ರಿಕ ಪ್ರಗತಿ ಹಾಗೂ ಪರಸ್ಪರ ನಿಕಟತೆಯಿಂದ ಸ್ವಾಭಾವಿಕವಾಗಿ ವಿವಿಧ ರಾಷ್ಟ್ರಗಳು ಮತ್ತು ಜನರ ನಡುವೆ ಸೌಹಾರ್ದ ಸಂಬಂಧ, ಹಿತಾಕಾಂಕ್ಷೆ, ಸಹಕಾರ ಮನೋಭಾವಗಳು ಬೆಳೆಯಬೇಕಾಗಿತ್ತು. ಸದಾಚಾರ ಮತ್ತು ಮಾನವೀಯತೆಯು ಸಕಲ ಪೈಶಾಚಿಕತೆಗಳನ್ನೂ ಮೆಟ್ಟಿನಿಲ್ಲಬೇಕಾಗಿತ್ತು. ಆದರೆ ಇಂದು ಪರಿಸ್ಥಿತಿ ತೀರಾ ವಿರುದ್ಧವಾಗಿದೆ. ವಿವಿಧ ರಾಷ್ಟ್ರಗಳು ಹಸಿದ ತೋಳಗಳಂತೆ ಪರಸ್ಪರ ಕಚ್ಚಾಡಿ ಹರಿದು ತಿನ್ನುವಂತೆ ವರ್ತಿಸುತ್ತಿದೆ. ಈ ತಂಡ ಭೌಗೋಳಿಕ ಪಂಜರದ ಸಲಾಕೆಯೊಳಗಿದ್ದು ಆ ಸಲಾಕೆಗಳು ಅಳಿದು ಹೋದೊಡನೆಯೇ ಹೊರ ಬಂದು ಕಚ್ಚಾಡುವಂತೆಯೇ ಪರಸ್ಪರ ಹರಿಹಾಯುತ್ತಿವೆ.

ಇಂತಹ ಪರಿಸ್ಥಿತಿ ಹೇಗೆ ಉದ್ಭವಿಸಿತೆಂಬ ಬಗ್ಗೆ ಎಲ್ಲ ಬುದ್ಧಿಜೀವಿಗಳು ಮಾನವ ಪ್ರೇಮಿಗಳು ಆಲೋಚಿಸಬೇಕಾಗಿದೆ, ಆಲೋಚಿಸುತ್ತಲೂ ಇದ್ದಾರೆ. ತಾಂತ್ರಿಕ ಪ್ರಗತಿಯಿಂದ ಅತ್ಯುನ್ನತ ಶಿಖರಕ್ಕೇರಿರುವ ಮಾನವನು ಮಾನವೀಯ ಗುಣಗಳನ್ನು ಕಳೆದು ಕೊಂಡು ಸಹ ಜೀವಿಗಳಿಗೆ ನಾಯಿಗಿಂತಲೂ ಭೀಕರನಾಗುತ್ತಿದ್ದಾನೆ. ಮಾನವನ ವೈಯಕ್ತಿಕ ವರ್ತನೆ, ಸಾಮಾಜಿಕ ಕಾರ್ಯಕ್ರಮ, ದೇಶದ ಮತ್ತು ವಿದೇಶಗಳ ನೀತಿಯನ್ನು ನೋಡುವಾಗ ಉತ್ತಮ ಪೋಷಾಕುಗಳನ್ನು ಧರಿಸುವ ಪ್ರಾಣಿಗಳು ತಾಂತ್ರಿಕ ಜ್ಞಾನ ಮತ್ತು ಅಧಿಕಾರವನ್ನು ವಶಪಡಿಸಿವೆಯೇ ಎಂಬ ಸಂದೇಹ ಮೂಡುತ್ತಿದೆ.

ಈ ಸಾರ್ವತ್ರಿಕ ಕೆಡುಕು ಮತ್ತು ಮಾನವ ರೋಗದ ಬಗ್ಗೆ ಸ್ವಲ್ಪ ಆಲೋಚಿಸಿದರೆ ಇಂದು ಜಗತ್ತಿನಾದ್ಯಂತ ಒಂದು ಸಾಂಕ್ರಾಮಿಕ ರೋಗದಂತೆ ವ್ಯಾಪಿಸಿರುವ ತಪ್ಪು ವಿಚಾರ, ದೃಷ್ಟಿಕೋನ ಮತ್ತು ದೇವಭಯ ರಹಿತ ಜೀವನ ವಿಧಾನವೇ ಅದಕ್ಕೆ ಕಾರಣವಾಗಿದೆಯೆಂದು ಕಂಡುಬರುತ್ತದೆ. ಅದನ್ನು ಪ್ರತಿಯೊಂದು ರಾಷ್ಟ್ರದ ಜನಸಾಮಾನ್ಯರು ಮತ್ತು ನಾಯಕರು ಹಾಗೂ ಅವರ ಶಿಕ್ಷಣ ತರಬೇತಿಗಳು ತಿಳಿದೋ ತಿಳಿಯದೆಯೋ ತಮ್ಮಲ್ಲಿ ಪ್ಲೇಗಿನ ಕ್ರಿಮಿಗಳಂತೆ ಹಬ್ಬಿಸಿ ಬಿಟ್ಟಿದ್ದಾರೆ. ಆದ್ದರಿಂದ ಪೂರ್ವ ಮತ್ತು ಪಶ್ಚಿಮದ ಎಲ್ಲ ರಾಷ್ಟ್ರಗಳೂ ಈ ಮಾರಕ ಪ್ಲೇಗಿಗೆ ತುತ್ತಾಗಿವೆ. ಕೆಲವೆಡೆ ಅದು ಜನಾಂಗೀಯತೆಯ ರೂಪದಲ್ಲಿದ್ದರೆ ಇನ್ನು ಕೆಲವೆಡೆ ರಾಷ್ಟ್ರೀಯತೆಯ ರೂಪ ತಾಳಿದೆ. ಕೆಲವೆಡೆ ವರ್ಗ ಭೇದದ ರೂಪದಲ್ಲಿ ಸ್ಫೋಟಿಸಿದ್ದರೆ ಇನ್ನು ಕೆಲವೆಡೆ ಪ್ರಾಂತೀಯತೆಯ ಜ್ವರವಾಗಿ ಪರಿಣಮಿಸಿದೆ. ಕ್ರಿಮಿಯಂತೂ ತನ್ನ ಪ್ರಭಾವವನ್ನು ಎಲ್ಲೆಡೆ ಬೀರಿದೆ. ಕೆಲವು ರಾಷ್ಟ್ರಗಳು ಈಗಾಗಲೇ ಸತ್ತಿವೆ. ಅದರ ಕೊಳೆತ ಶವಗಳು ಇತರ ರಾಷ್ಟ್ರಗಳ ನೈತಿಕ ಆರೋಗ್ಯವನ್ನು ಕೆಡಿಸುತ್ತಿವೆ. ಕೆಲವು ರಾಷ್ಟ್ರಗಳು ಮರಣಶಯ್ಯೆಯಲ್ಲಿ ಬಿದ್ದು ರೋದಿಸುತ್ತಿವೆ. ತಮ್ಮ ವೈದ್ಯರನ್ನೂ ಚಿಕಿತ್ಸಕರನ್ನೂ ಹೊರೆ ಹೊರುವವರನ್ನೂ ಕರೆದು ಸಲಹೆಗಳನ್ನು ಪದೇ ಪದೇ ಕೇಳುತ್ತಿವೆ. ಆದರೆ ರೋಗವು ದೇಹ ಮತ್ತು ಪ್ರಾಣವನ್ನು ನಿರಂತರ ಕೊರೆಯುತ್ತಿವೆ. ಎಲ್ಲ ಚಿಕಿತ್ಸೆಗಳು ವಿಫಲವಾಗುತ್ತಿವೆ. ಅವರಿಗೆ ದೊರೆಯುತ್ತಿರುವ ಸಲಹೆ ಮತ್ತು ಪರಿಹಾರಗಳು ರೋಗವನ್ನು ಶಮನಿಸುವ ಬದಲಾಗಿ ಇನ್ನಷ್ಟು ಉಲ್ಬಣಗೊಳಿಸುತ್ತಿವೆ. ಪ್ರಸಕ್ತ ವಿಚಾರ ಸಿದ್ಧಾಂತ ಮತ್ತು ಜೀವನ ವಿಧಾನಗಳು ಜನಾಂಗಗಳಿಗೆ ಜನಾಂಗೀಯತೆ, ರಾಷ್ಟ್ರಗಳಿಗೆ ರಾಷ್ಟ್ರೀಯತೆ ಮತ್ತು ವರ್ಗಗಳಿಗೆ ವರ್ಗೀಯತೆಯ ಪಾಠ ಹೇಳಿಕೊಟ್ಟಿದ್ದುವು. ಮಾತ್ರವಲ್ಲ ಆ ಆಧಾರದಲ್ಲಿ ಸಂಘಟಿಸುವುದಲ್ಲದೆ ಬೇರೆ ದಾರಿಯೂ ಇರಲಿಲ್ಲ. ಆದ್ದರಿಂದ ಕುಲ ಸಂಬಂಧವನ್ನು ಬೆಳೆಸಿಕೊಂಡಿದ್ದ ಜನತೆಯು ತಮ್ಮ ಕುಲ ಭೇದಗಳ ಆಧಾರದಲ್ಲಿ, ತಮ್ಮ ಕುಲಭೇದವಿಲ್ಲದವರು ಜನಾಂಗೀಯತೆಯ ಆಧಾರದಲ್ಲಿ ಮತ್ತು ರಾಷ್ಟ್ರಗಳು ರಾಷ್ಟ್ರೀಯತೆಯ ಆಧಾರದಲ್ಲಿ ಸಂಬಂಧ ಪ್ರಾರಂಭಿಸಿದವು. ಆದ್ದರಿಂದ ಜಗತ್ತಿನ ವಿವಿಧ ರಾಷ್ಟ್ರಗಳು ಮತ್ತು ಜನತೆಯಲ್ಲಿ ಸಂಪೂರ್ಣ ವಿರುದ್ಧವಾದ ವಿಭಿನ್ನ ಸಂಘಟನೆಗಳು ಹುಟ್ಟಿಕೊಂಡವು.

ಸಮಯ ಮತ್ತು ದೂರದ ಮೇಲೆ ವಿಜಯ ಸಾಧಿಸಿದ ಬಳಿಕ ಜಗತ್ತಿನ ವಿವಿಧ ರಾಷ್ಟ್ರಗಳು ಅವುಗಳಲ್ಲಿರುವ ಜಿಲ್ಲೆಗಳಂತೆ ನಿಕಟವಾದರೂ ಅದರಲ್ಲಿ ವಾಸಿಸುವ ಜನತೆಯು ತಮ್ಮ ಕುಲಭೇದ, ಜನಾಂಗೀಯತೆ ಅಥವಾ ರಾಷ್ಟ್ರೀಯತೆಯ ಕಾರಣಗಳಿಂದ ಬೇರೆ ಬೇರೆ ಗುಂಪುಗಳಾಗಿ ಮಾರ್ಪಟ್ಟುವು. ಅವುಗಳೊಳಗೆ ಯಾವುದೇ ಸಮಾನ ಕಾರ್ಯಕ್ರಮ ಅಥವಾ ಜೀವನ ವಿಧಾನವಿಲ್ಲದೆ ಜನಾಂಗೀಯ, ರಾಷ್ಟ್ರೀಯತೆಯ ಹಿತ ಅಥವಾ ಭಯದ ಹೊರತು ಅವುಗಳನ್ನು ಒಂದುಗೂಡಿಸುವ ಯಾವುದೇ ಪ್ರೇರಣೆಯಿಲ್ಲದಿರುವ ತನಕ ಅವುಗಳ ಪರಸ್ಪರ ಸಂಘರ್ಷ ಅನಿವಾರ್ಯವಾಗುತ್ತದೆ. ಯಾಕೆಂದರೆ ಜನಾಂಗ ಪ್ರೇಮ ಅಥವಾ ರಾಷ್ಟ್ರ ಭಕ್ತಿಗಳ ನೈಸರ್ಗಿಕ ಬೇಡಿಕೆಯು ತನ್ನ ಜನಾಂಗ ಅಥವಾ ರಾಷ್ಟ್ರವು ಸತ್ಯದಲ್ಲಿರಲಿ, ಅಸತ್ಯದಲ್ಲಿರಲಿ ಎಲ್ಲಾ ಸ್ಥಿತಿಗಳಲ್ಲಿಯೂ ಅದನ್ನು ಬೆಂಬಲಿಸುವುದೇ ಆಗಿದೆ. ಅಂದರೆ ಜನಾಂಗದ ಪ್ರತಿಯೊಬ್ಬ ವ್ಯಕ್ತಿಯು ಸಂಘಟನೆಯ ನೆಲೆಯಲ್ಲಿ ಇಡೀ ಜನಾಂಗ ಅಥವಾ ರಾಷ್ಟ್ರಕ್ಕೆ ಲಾಭದಾಯಕವಾದ ಎಲ್ಲಾ ಕೆಲಸಗಳನ್ನು ಮಾಡುವುದು ಮತ್ತು ಅದಕ್ಕೆ ಹಾನಿಕರವಾದ ಎಲ್ಲವನ್ನೂ ಸಕಲ ಶಕ್ತಿ

ಉಪಯೋಗಿಸಿ ತಡೆಯುವುದು. ಅದು ಇತರ ರಾಷ್ಟ್ರೀಯ ಜನಾಂಗಗಳಿಗೆ ಎಷ್ಟೇ ದೊಡ್ಡ ನಷ್ಟವಾದರೂ ಸರಿ. ಅವರ ಒಳಿತು- ಕೆಡುಕುಗಳ ಮಾನದಂಡವು ಕೇವಲ ತಮ್ಮ ಜನಾಂಗ ಮತ್ತು ದೇಶದ ಒಳಿತು ಕೆಡುಕುಗಳು ಮಾತ್ರವಾಗಿರುವುದು. ಇತರರ ಮೇಲೆ ಅದು ಯಾವ ಪರಿಣಾಮ ಬೀರುವುದೆಂಬುದನ್ನು ಅವರು ಗಮನಿಸುವುದಿಲ್ಲ.

ಈ ಜಾಗತಿಕ ಕೆಡುಕು ಪೂರ್ವದಿಂದ ಪಶ್ಚಿಮದ ತನಕ ಜಗತ್ತಿನ ಎಲ್ಲಾ ಭಾಗಗಳನ್ನು ವ್ಯಾಪಿಸಿದೆಯೆಂಬ ಬಗ್ಗೆ ಯಾರಿಗೂ ಭಿನ್ನಾಭಿಪ್ರಾಯವಿಲ್ಲ.

ಪ್ರಚಲಿತ ವಿಚಾರ ಸಿದ್ಧಾಂತಗಳ ಆಧಾರದಲ್ಲಿ ಜನಾಂಗೀಯತೆ, ರಾಷ್ಟ್ರೀಯತೆ, ಕೋಮುವಾದಗಳು-ದೇವ ಭಯ ರಹಿತವಾದ ಜೀವನದಿಂದ ಹುಟ್ಟಿಕೊಂಡಿವೆ. ತಮ್ಮ ವಿಚಾರ ಸಿದ್ಧಾಂತಗಳ ಮಾರಕ ವಿಷ ಬೀಜವನ್ನು ಬಿತ್ತಿ, ಬೆವರು-ನೆತ್ತರು ಸುರಿಸಿ, ಅವುಗಳನ್ನು ಬೆಳೆಸಿ ಜಗತ್ತಿನ ಎಲ್ಲೆಡೆ ಹಬ್ಬಿಸಿದ ಜನರು ಮತ್ತು ಜನಾಂಗಗಳಿಗೆ ಇಂದು ಅದರ ಬಗ್ಗೆ ಜಿಗುಪ್ಸೆ ಹುಟ್ಟಿದೆ. ಅವರ ಚಿಂತಕರು ಜನಾಂಗೀಯತೆ ಮತ್ತು ರಾಷ್ಟ್ರೀಯತೆಯ ವಿರುದ್ಧ ಮಾತ್ರವಲ್ಲ ರಾಷ್ಟ್ರ ಪ್ರೇಮದ ಸ್ಫೂರ್ತಿಯ ವಿರುದ್ಧವೂ ಆಣೆ ಹಾಕಿ ಹೇಳುತ್ತಿದ್ದಾರೆ. ಈ ಸ್ಫೂರ್ತಿಯು ಎಷ್ಟೇ ಉತ್ತಮವಾಗಿದ್ದರೂ ಮಾನವನಿಗೆ ಕೇವಲ ರಾಷ್ಟ್ರಪ್ರೇಮವೇ ಸಾಲದು, ಅದಕ್ಕಿಂತ ಹೆಚ್ಚಾಗಿ ಮಾನವನ ನೀತಿ-ನಡವಳಿಕೆಗಳಲ್ಲಿ ವಿಶಾಲತೆಯನ್ನು ಬೆಳೆಸುವ ಅಗತ್ಯವಿದೆ. ಆಧುನಿಕ ತಾಂತ್ರಿಕ ಸೌಲಭ್ಯದ ದುಷ್ಪರಿಣಾಮಗಳಿಂದ ಆತನು ಕೇವಲ ಜ್ಞಾನವನ್ನು ಒಪ್ಪುವುದಿಲ್ಲ. ಮಾತ್ರವಲ್ಲ ಮಾನವನು ನೈಸರ್ಗಿಕ ಜ್ಞಾನವನ್ನು ಬಹಳವಾಗಿ ಪಡೆದಿದ್ದಾನೆ. ಆದರೆ ಆತನು ಸ್ವತಃ ಮಾನವನ ಮತ್ತು ಮಾನವೀಯತೆಯ ಬಗ್ಗೆ ಸಂಪೂರ್ಣ ಪ್ರಜ್ಞಾವಂತನಾಗಿಲ್ಲವೆಂದು ಹೇಳತೊಡಗಿದ್ದಾರೆ. ಅದರಿಂದಲೇ ಮಾನವನು ತನ್ನ ಆತ್ಮದ ಮೇಲೆ ನಿಯಂತ್ರಣ ಸಾಧಿಸಬಲ್ಲನು. ಯಾಕೆಂದರೆ ಮಾನವನಿಗೆ ಜ್ಞಾನಕ್ಕಿಂತ ಸದ್ವಿಚಾರ ಮತ್ತು ಜಾಣ್ಮೆಯ ಅಗತ್ಯ ಬಹಳಷ್ಟು ಇದೆ. ರಷ್ಯವು ಜನಾಂಗೀಯತೆ ಮತ್ತು ರಾಷ್ಟ್ರೀಯತೆಗಿಂತ ಒಂದು ಹೆಜ್ಜೆ ಮುಂದಿಟ್ಟು ಎಲ್ಲಾ ಜನಾಂಗಗಳ ಕಾರ್ಮಿಕರನ್ನು ಒಂದುಗೂಡಿಸಿ ಒಂದು ಜಾಗತಿಕ ಚಳವಳಿಯನ್ನು ಹೆಣೆಯಿತು. ಆದರೆ ಇದು ವಾಸ್ತವಿಕತೆಯ ರೂಪದಲ್ಲಿ ಸ್ವಲ್ಪ ಕಾಲವೂ ನಡೆಯಲಿಲ್ಲ. ಅದು ಕ್ಷಿಪ್ರವಾಗಿ ರಶ್ಯನ್ ರಾಷ್ಟ್ರೀಯತೆಯ ರೂಪತಾಳಿತು. ಒಂದು ವೇಳೆ ಪೂರ್ಣ ಯಶಸ್ವಿಯಾಗಿದ್ದರೂ ಅದು ಮಾನವ ಪ್ರಕೃತಿ ಮತ್ತು ಬೇಡಿಕೆಗಳಿಗೆ ವಿರುದ್ಧವಾಗಿರುತ್ತದೆ. ಜನಾಂಗೀಯತೆ ಮತ್ತು ರಾಷ್ಟ್ರೀಯತೆಯ ದುರಂತಕ್ಕಿಂತಲೂ ಮಹಾ ದುರಂತವನ್ನು ತಂದೊಡ್ಡುತ್ತಿತ್ತು. ಯಾಕೆಂದರೆ ಅದು ಕೂಡಾ ಒಂದು ನಿರ್ದಿಷ್ಟ ವರ್ಗದ ಜನರ ಹಿತ- ಕಲ್ಯಾಣಗಳನ್ನು ಮಾತ್ರ ಧ್ಯೇಯವಾಗಿರಿಸಿಕೊಂಡಿತ್ತು. ಈ ಚಳವಳಿಯ ಬಗ್ಗೆ ನಮ್ಮ ಮುಂದಿರುವ ಸಂಕ್ಷಿಪ್ತ ಚರಿತ್ರೆಯಲ್ಲಿ ರಾಷ್ಟ್ರೀಯತೆ ಮತ್ತು ಜನಾಂಗೀಯತೆಗಳ ಚರಿತ್ರೆಯಲ್ಲಿ ನಡೆದುದಕ್ಕಿಂತ ಹೆಚ್ಚು ರಕ್ತಪಾತಕ್ಕೆ ಕಾರಣವಾಯಿತೆಂದು ತಿಳಿದು ಬರುತ್ತಿದೆ.

ಹಾಗಿದ್ದರೆ ಆಧುನಿಕ, ನಾಗರಿಕ ಹಾಗೂ ಸುಸಂಸ್ಕೃತ ಜನಾಂಗಗಳ ಧರ್ಮ ಸಿದ್ಧಾಂತಗಳ ಸ್ಥಾನಪಡೆದಿರುವ ಜನಾಂಗೀಯತೆ, ರಾಷ್ಟ್ರೀಯತೆ ಮತ್ತು ಸಮತಾವಾದಗಳು ಅವುಗಳ ಸಾವಿರಾರು ವರ್ಷಗಳ ಅನುಭವ ಹಾಗೂ ಈ ಹಿಂದಿನ ಸಾಂಘಿಕ ಹಾಗೂ ರಾಜಕೀಯ ವ್ಯವಸ್ಥೆಗಳನ್ನು ರದ್ದುಗೊಳಿಸಿ ಅಂಗೀಕರಿಸಲಾಗಿದೆ. ಅವು ಮಾನವ ಜೀವನದ ಸಮಸ್ಯೆಗಳನ್ನು ಪರಿಹರಿಸುವ

ನಿಟ್ಟಿನಲ್ಲಿ ವಿಫಲವಾಗಿವೆ. ಹಾಗೆಯೇ ಸ್ಥಿತಿಗತಿಗಳು ಹಾಗೂ ನಮ್ಮ ಅನುಭವಗಳು ಈ ಜೀವನ ವ್ಯವಸ್ಥೆಗಳೂ ಹಿಂದಿನ ವ್ಯವಸ್ಥೆಗಿಂತ (ಉದಾ: ಗೋತ್ರ ಪದ್ಧತಿ, ಜಾಗೀರುದಾರೀ ಪದ್ಧತಿ, ರಾಜಶಾಹಿತ್ವ ಮತ್ತು ಅರಿಸ್ಟೋಕ್ರೆಸಿ ಇತ್ಯಾದಿ) ಕಡಿಮೆ ಹಾನಿಕಾರಕವಲ್ಲವೆಂದು ಸಾಬೀತುಪಡಿಸಿದೆ. ಹಾಗಿದ್ದರೆ ಸರಿಯಾದ ವ್ಯವಸ್ಥೆ ಯಾವುದು?

ಇದುವೇ ಇಂದು ಜಗತ್ತಿನ ಮಹಾ ಸಮಸ್ಯೆಯಾಗಿದೆ. ಇದು ಜಗತ್ತಿನ ದೊಡ್ಡದೊಡ್ಡ ವಿಚಾರವಂತರನ್ನು ಕಂಗೆಡಿಸಿದೆ. ವಿವಿಧ ರಾಷ್ಟ್ರ ಮತ್ತು ಜನತೆಯನ್ನು ಒಟ್ಟು ಸೇರಿಸಿ ಸಮಗ್ರ ರೂಪದ ಬಗ್ಗೆ ಆಲೋಚಿಸಲಾಗುತ್ತಿದೆ. ಕೆಲವೊಮ್ಮೆ Common wealthನ ಪ್ರಸ್ತಾಪ ಮಾಡಲಾಗುತ್ತಿದೆ. ಇನ್ನು ಕೆಲವೊಮ್ಮೆ ವಿವಿಧ ಜನಾಂಗಗಳನ್ನು ಒಂದುಗೂಡಿಸಿ ರಾಷ್ಟ್ರೀಯ ಒಕ್ಕೂಟಗಳನ್ನು ರಚಿಸುವ ಪ್ರಯತ್ನ ನಡೆಸಲಾಗುತ್ತಿದೆ. ಇನ್ನೊಮ್ಮೆ ಏಷಿಯಾಟಿಕ್ ಕಾನ್ಫರೆನ್ಸ್‌ನ ಡಂಗುರ ಸಾರಿ ಕೃತಕ ಶಾಂತಿಗಾಗಿ ಕೈಕಾಲು ಹೊಡೆಯಲಾಗುತ್ತಿದೆ. ಆದರೆ ವಿಶ್ವ ಶಾಂತಿಯ ಕಗ್ಗಂಟನ್ನು ಬಿಡಿಸಲು ಪ್ರಯತ್ನಿಸಿದಷ್ಟೂ ಅದು ಇನ್ನಷ್ಟು ಜಟಿಲವಾಗುತ್ತಿದೆ.

ರಾಷ್ಟ್ರಗಳಂತೆಯೇ ವಿಶ್ವದಲ್ಲಿ ಶಾಂತಿ ಸ್ಥಾಪಿಸುವ ಮಾರ್ಗ ಒಂದೇ ಇರುವುದೆಂಬುದು ವ್ಯಕ್ತ. ಅಸ್ತಿತ್ವದಲ್ಲಿರುವ ವಿಭಿನ್ನ ರಾಜಕೀಯ ವ್ಯವಸ್ಥೆ ಮತ್ತು ಸಾಂಘಿಕ ಚಳವಳಿಗಳನ್ನು ಕೊನೆಗೊಳಿಸಿ ಸಾಧ್ಯಂತ ಒಂದೇ ವ್ಯವಸ್ಥೆಯನ್ನು ಸ್ಥಾಪಿಸುವುದು, ಅದರಲ್ಲಿ ವಾಸಿಸುವ ಎಲ್ಲ ವ್ಯಕ್ತಿ ಮತ್ತು ಜನತೆಯ ಮನದಿಂದ ತಂತಮ್ಮ ಪ್ರತ್ಯೇಕ ಅಸ್ತಿತ್ವದ ಪ್ರಜ್ಞೆಯನ್ನು ಹೋಗಲಾಡಿಸಿ ಅವರೆಲ್ಲರೂ ಒಂದೇ ಪರಿವಾರದವರಾಗಿದ್ದವರು, ಸುದೀರ್ಘ ಕಾಲದಿಂದ ಪರಸ್ಪರ ದೂರವಿದ್ದು ಅನ್ಯರಾಗಿ ಹೋಗಿರುವವೆಂಬ ಭಾವನೆಯನ್ನು ಅವರಲ್ಲಿ ಬೆಳೆಸುವುದು.

ಸಮಗ್ರ ಶಾಂತಿ ಮತ್ತು ರಾಜಕೀಯ ವ್ಯವಸ್ಥೆಯು ಪರಸ್ಪರ ಅನಿವಾರ್ಯವಾಗಿರುವಂತೆಯೇ ರಾಜಕೀಯ ವ್ಯವಸ್ಥೆ ಮತ್ತು ಅದಕ್ಕೆ ಸಂಬಂಧಿಸಿದ ಎಲ್ಲರೂ ಅಥವಾ ಬಹುಸಂಖ್ಯಾತರು ಒಂದು ರಾಷ್ಟ್ರದ ಅಥವಾ ಪ್ರದೇಶದ ಎಲ್ಲರೂ ಅಥವಾ ಕನಿಷ್ಠ ಅವರ ಬಹುಸಂಖ್ಯಾತರು ಯಾವುದಾದರೊಂದು ಆಡಳಿತಕ್ಕೆ ಬದ್ಧವಾಗಿಲ್ಲದಿದ್ದರೆ ಯಾವುದೇ ರಾಜಕೀಯ ವ್ಯವಸ್ಥೆಯೂ ಉಳಿಯಲಾರದು. ಈ ಸ್ಥಿತಿ ಬಾಕಿಯಿರುವ ತನಕ ಶಾಂತಿ, ಶಿಸ್ತು ಉಳಿಯುವುದು. ಆ ಸ್ಥಿತಿ ಬದಲಾದರೆ ಅಥವಾ ಇಲ್ಲವಾದರೆ ಅಷ್ಟೇ ಪ್ರಮಾಣದಲ್ಲಿ ಅಶಾಂತಿ ಮತ್ತು ಅವ್ಯವಸ್ಥೆ ಆರಂಭವಾಗುವುದು. ಹಾಗಿದ್ದರೆ ಇಡೀ ವಿಶ್ವದಲ್ಲಿ ಶಾಂತಿ ಸ್ಥಾಪಿಸುವ ಬಯಕೆಯಿದ್ದರೆ (ವಿವಿಧ ರಾಷ್ಟ್ರಗಳ ಪರಸ್ಪರ ಮಿಲನದಿಂದ ಯಾವುದೇ ರಾಷ್ಟ್ರದಲ್ಲಿ ಶಾಂತಿ ಸ್ಥಾಪನೆಯಾಗಬಹುದೆಂಬ ಆಸೆಯೂ ಈಗ ಉಳಿದಿಲ್ಲ) ಈ ಕೆಳಗಿನ ವೈಶಿಷ್ಟ್ಯಗಳಿರುವ ಆಡಳಿತಗಾರರನ್ನು ಹುಡುಕಿ ನೇಮಿಸುವುದು ಅನಿವಾರ್ಯವಾಗಿದೆ.

1. ಆತನ ಅಧಿಕಾರವು ಶಾಶ್ವತ ಮತ್ತು ಚಿರಂತನವಾಗಿರುವುದರೊಂದಿಗೆ ಅದು ವಿಶ್ವ ವ್ಯಾಪಿಯಾಗಿರಬೇಕು. ಅಲ್ಲದೆ, ಆತನಿಗೆ ಜಗತ್ತಿನ ಎಲ್ಲ ಜನಾಂಗಗಳ ಮೇಲೆ ಆಡಳಿತ ನಡೆಸುವ ಅಧಿಕಾರವಿರಬೇಕು.

2. ಯಾವನೇ ವ್ಯಕ್ತಿ, ಜನಾಂಗ, ರಾಷ್ಟ್ರ ಅಥವಾ ವಿಭಾಗದ ಜನರಿಗೆ ಆತನ ಮುಂದೆ ತಲೆಬಾಗುವ ಬಗ್ಗೆ ಲಜ್ಜೆಯಿರಬಾರದು.

3. ಆತನು ಎಲ್ಲ ಲೋಪ, ದೋಷ ಮತ್ತು ದೌರ್ಬಲ್ಯಗಳಿಂದ ಮುಕ್ತನಾಗಿರಬೇಕು.

4. ಆತನ ಸಂಬಂಧವು ಸಂಪೂರ್ಣ ಮಾನವಕುಲದೊಂದಿಗೆ ಸಮಾನ ಪ್ರಭುತ್ವದ ಹಾಗೂ ಮಾನವರಿಗೆ ಆತನೊಂದಿಗಿನ ಸಮಾನ ದಾಸತ್ವದ ಸಂಬಂಧವಿರಬೇಕು.

5. ಆತನ ಶಕ್ತಿ ಸಾಮರ್ಥ್ಯವು ಲೋಕದ ಅತಿದೊಡ್ಡ ರಾಷ್ಟ್ರಕ್ಕೆ, ಜನಾಂಗಕ್ಕೆ ಅಥವಾ ಲೋಕದ ಸಮಸ್ತ ಜನರಿಗೆ ಆತನ ವಿರುದ್ಧ ಸೊಲ್ಲೆತ್ತುವ ಧೈರ್ಯವಿಲ್ಲದಷ್ಟು ಪ್ರಚಂಡವಾಗಿರಬೇಕು. ಮಾತ್ರವಲ್ಲ ಆತನು ಇಡೀ ಜನಾಂಗ ಮತ್ತು ವಿಶ್ವದ ಜನರನ್ನು ಏಕ ಕಾಲದಲ್ಲಿ ವಿಚಾರಣೆ ಮಾಡುವ ಸಾಮರ್ಥ್ಯವನ್ನು ಹೊಂದಿರಬೇಕು. ಹಾಗೆಯೇ ಹಕ್ಕುದಾರರಿಗೆ ಅವರ ಹಕ್ಕುಗಳನ್ನು ಸಂಪೂರ್ಣವಾಗಿ ನೀಡಲು ಮತ್ತು ಅಪರಾಧಿಗಳ ಅಪರಾಧಕ್ಕೆ ತಕ್ಕ ಶಿಕ್ಷೆ ನೀಡುವ ಹಾಗೂ ಯಾವ ವ್ಯಕ್ತಿಗೂ ಆತನ ಕೈಯಿಂದ ಯಾವ ರೀತಿಯಿಂದಲೂ ತಪ್ಪಿಸಲಾಗದಂತಹ ಸಾಮರ್ಥ್ಯವಿರಬೇಕು.

6. ಆತನಿಗೆ ಮಾನವ ಸ್ವಭಾವ, ವ್ಯಕ್ತಿತ್ವ, ಆವೇಶ, ಬೇಡಿಕೆ, ಆತನ ಸುಪ್ತ ಹಾಗೂ ಪ್ರತ್ಯಕ್ಷ ಸಾಮರ್ಥ್ಯ ಮತ್ತು ದೌರ್ಬಲ್ಯಗಳ ತಿಳುವಳಿಕೆಯಿರಬೇಕು. ಅಷ್ಟೇ ಅಲ್ಲದೆ, ಲೋಕದ ಕ್ರಿಯಾಶೀಲವಾಗಿರುವ ಎಲ್ಲ ಶಕ್ತಿಗಳ ಪರಿಪೂರ್ಣ ಜ್ಞಾನವಿರಬೇಕು. ಆತನ ದೃಷ್ಟಿಯು ಮಾನವಕುಲದ ಮತ್ತು ಜಗತ್ತಿನ ಎಲ್ಲ ಭೂತ-ವರ್ತಮಾನ-ಭವಿಷ್ಯಗಳನ್ನು ಆವರಿಸಿದ್ದು ಆತನು ಎಲ್ಲ ಜನಾಂಗ, ವರ್ಗ ಮತ್ತು ರಾಷ್ಟ್ರಗಳ ಜನಜೀವನದ ದೋಷಗಳನ್ನು ಅರಿತುಕೊಂಡು ಕಲ್ಯಾಣಕಾರೀ ನೀತಿಯನ್ನು ಅಳವಡಿಸುವವನಾಗಿರಬೇಕು.

7. ತನ್ನ ದೃಷ್ಟಿ, ಶ್ರವಣ ಮತ್ತು ಜ್ಞಾನದ ವಲಯದಿಂದ ಯಾವ ವಸ್ತುವೂ ತಪ್ಪಿ ಹೋಗದಷ್ಟು ಆತನು ಸಮರ್ಥನಿರಬೇಕು.

8. ಆತನ ಘನತೆಯಲ್ಲಿ ಇನ್ನಾರೂ ಪಾಲುದಾರರು ಅಥವಾ ಸಹಭಾಗಿಗಳಿರಬಾರದು. ಈ ವಿಶ್ವ ಅಧಿಪತಿಯ ಗುಣ ವೈಶಿಷ್ಟ್ಯಗಳ ಹಿನ್ನೆಲೆಯಲ್ಲಿ ಈ ಲೋಕದ ವಿವಿಧ ಆಜ್ಞಾಧಿಕಾರಿಗಳನ್ನು ಅವಲೋಕಿಸಿದರೆ ಪ್ರಥಮ ನೋಟದಲ್ಲಿಯೇ ಅಂತಹ ಸಾಮರ್ಥ್ಯಗಾರರು ಯಾರೂ ಇಲ್ಲವೆಂಬುದು ವ್ಯಕ್ತವಾಗುತ್ತದೆ. ಮಾತ್ರವಲ್ಲ ಪ್ರಸ್ತುತ ಗುಣ ವೈಶಿಷ್ಟ್ಯಗಳನ್ನು ಹೊಂದಿರುವ ಆಜ್ಞಾಧಿಕಾರಿಯ ಹೊರತು ಇನ್ನಾರನ್ನಾದರೂ ಅನುಸರಿಸಲು ಎಲ್ಲ ಜನಾಂಗಗಳಂತಿರಲಿ, ಅವರಲ್ಲಿ ಕೆಲವರಾದರೂ ಒಲವು ತೋರಲಾರರು. ಯಾಕೆಂದರೆ ಓರ್ವ ಮನುಷ್ಯನು ತನ್ನಂತೆಯೇ ಮೂಳೆ, ಮಾಂಸವನ್ನು ಹೊಂದಿರುವ ಇನ್ನೊಬ್ಬನ ಆಜ್ಞೆಯನ್ನು ಯಾಕೆ ಪಾಲಿಸಬೇಕು. ಒಂದು ರಾಷ್ಟ್ರವು ತನ್ನಂತಹ ಇನ್ನೊಂದು ರಾಷ್ಟ್ರದ ಮುಂದೆ ಅಥವಾ ಒಂದು ವರ್ಗವು ತನ್ನಂತಹ ಇನ್ನೊಂದು ವರ್ಗದ ಮುಂದೆ ಯಾಕೆ ತಲೆಬಾಗಬೇಕು. ತಾತ್ಕಾಲಿಕವಾಗಿ ಒಂದು ಜನಾಂಗ ಅಥವಾ ಸಂಘಟನೆಯು ಅನ್ಯ ಜನಾಂಗ ಅಥವಾ ಸಂಘಟನೆಯ ಮೇಲೆ ಕೆಲವು ಕಾಲ ಪ್ರಭಾವ ಬೀರಿ ಅದರ ಒಲವು ಗಳಿಸಬಹುದು. ಆದರೆ ಈ ಪ್ರಭಾವ ಹೆಚ್ಚು ಕಾಲ ಉಳಿಯಲಾರದು.

## ವಿಶ್ವದ ಏಕೈಕ ಆಜ್ಞಾಧಿಕಾರಿ

ಈ ವಿಶ್ವ ಪ್ರಭುತ್ವದ, ಅರಬಿಯಲ್ಲಿ ಹೇಳುವುದಿದ್ದರೆ 'ಇಲಾಹುಲ್ ಆಲಮೀನ್'ನ

ಶೋಧನೆಯಲ್ಲಿ ನಮ್ಮ ಸುತ್ತ ಮುತ್ತ ಮತ್ತು ಭೂಮಿ-ಆಕಾಶಗಳಲ್ಲಿ ವ್ಯಾಪಿಸಿರುವ ದೇವನ ಅಸಂಖ್ಯಾತ ಸೃಷ್ಟಿಗಳನ್ನು ಅವಲೋಕಿಸಿದಾಗ ನಮಗೆ ಎರಡು ವಾಸ್ತವಿಕತೆಗಳು ವ್ಯಕ್ತವಾಗುತ್ತವೆ.

1. ಈ ವಿಶ್ವದ ಸೃಷ್ಟಿಕರ್ತನು ಮಾನವನ ಪ್ರತಿಯೊಂದು ಬೇಡಿಕೆಯನ್ನು ಪೂರೈಸುವ ಪರಿಪೂರ್ಣ ಸವಲತ್ತುಗಳನ್ನು ಈ ಜಗತ್ತಿನಲ್ಲಿ ಒದಗಿಸಿ ಕೊಟ್ಟಿದ್ದಾನೆ. ಹಸಿವು ಬಾಯಾರಿಕೆಗಳನ್ನು ಹೊಂದಿರುವ ಮಾನವನಿಗೆ ಅದರ ಉಪಶಮನಕ್ಕಾಗಿ ಭೂಮಿಯಾದ್ಯಂತ ವಿವಿಧ ರೀತಿಯ ಆಹಾರ ಪದಾರ್ಥಗಳನ್ನು ಸೃಷ್ಟಿಸಿದ್ದಾನೆ. ಆತನ ಜೀವನ ನಿರ್ವಹಣೆಗೆ ಗಾಳಿಯ ಅಗತ್ಯವಿದ್ದರೆ ಅದನ್ನು ಭೂಮಿಯ ಮೂಲೆ ಮೂಲೆಗಳಲ್ಲಿ, ಗಿರಿ ಕಂದರಗಳಲ್ಲಿ, ಉನ್ನತ ಶಿಖರಗಳಲ್ಲಿ, ವಾತಾವರಣದ ಎಲ್ಲೆಡೆಯಲ್ಲಿ ಧಾರಾಳವಾಗಿ ತುಂಬಿದ್ದಾನೆ. ಆತನಿಗೆ ಮಾತನಾಡುವ ಶಕ್ತಿಯನ್ನು ನೀಡಿರುವಂತೆಯೇ ಅಸಂಖ್ಯಾತ ಚರ್ಚಾ ವಿಷಯಗಳನ್ನು ಒದಗಿಸಿದ್ದಾನೆ. ಆತನಿಗೆ ಬುದ್ಧಿ ಮತ್ತು ವಿವೇಕವನ್ನು ನೀಡಿರುವಂತೆಯೇ ಜೀವನದ ಕೊನೆಯ ವರೆಗೂ ಅದನ್ನು ಬಳಸಿದರೆ, ಮುಗಿಯದಂತಹ ಸಮಸ್ಯೆಗಳನ್ನೂ ನೀಡಿದ್ದಾನೆ. ಒಟ್ಟಿನಲ್ಲಿ ನಾವು ಎಲ್ಲಿ ಯಾವ ಕಡೆಗೆ ನೋಡಿದರೂ ಯಾವುದೇ ಕೊರತೆ ಅಥವಾ ಲೋಪ ಕಂಡು ಬರುವುದಿಲ್ಲ.

2. ಹಾಗೆಯೇ ಈ ಅಖಿಲ ವಿಶ್ವ ಮತ್ತು ಅದರಲ್ಲಿರುವ ಪ್ರತಿಯೊಂದು ಕಣವೂ ಪ್ರಚಂಡ ಹಾಗೂ ಸಮರ್ಥ ಆಜ್ಞಾಧಿಕಾರಿಯ ಕಾನೂನು ಮತ್ತು ವ್ಯವಸ್ಥೆಗೆ ಬದ್ಧವಾಗಿದೆಯೆಂಬುದು ವ್ಯಕ್ತವಾಗುತ್ತದೆ. ಅವುಗಳ ಪೈಕಿ ಒಂದಕ್ಕೂ ಆ ಕಾನೂನನ್ನು ಉಲ್ಲಂಘಿಸಲು ಅಥವಾ ಅವರ ವಿರುದ್ಧ ವರ್ತಿಸಲು ಆಗುವುದಿಲ್ಲ. ಸೂರ್ಯ, ಚಂದ್ರ, ಭೂಮಿ ಮುಂತಾದ ಖಗೋಳ ಸೃಷ್ಟಿಗಳು, ಅಗ್ನಿ, ನೀರು, ಗಾಳಿ, ಜಡ ವಸ್ತುಗಳು, ಮರಗಿಡಗಳು, ಮೃಗಗಳು, ಜನನ, ಆರೋಗ್ಯ, ಅನಾರೋಗ್ಯ, ಮರಣ, ಗೌರವ, ಅಪಮಾನ, ಆಹಾರ ಮತ್ತಿತರ ಸೌಲಭ್ಯಗಳ ಆಧಿಕ್ಯ ಮತ್ತು ಕೊರತೆ, ದೃಷ್ಟಿ, ಶ್ರವಣ, ಮಾತು ಮುಂತಾದ ಸಾಮರ್ಥ್ಯ ಹಾಗೂ ವಿಶ್ವದಲ್ಲಿ ಕಾರ್ಯವೆಸಗುತ್ತಿರುವ ಇತರೆಲ್ಲ ಶಕ್ತಿಗಳೂ ಸ್ವತಂತ್ರ ಸ್ವಾವಲಂಬಿಗಳೋ ಅಲ್ಲ. ಬದಲಾಗಿ ಯಾವುದೋ ಆಜ್ಞೆ ಮತ್ತು ಕಾನೂನಿಗೆ ಬದ್ಧವಾಗಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಹಾಗೆಯೇ ಅವುಗಳಲ್ಲಿ ಪ್ರತಿಯೊಂದಕ್ಕೂ ಒಂದು ನಿರ್ದಿಷ್ಟ ಕಾರ್ಯಸೂಚಿ, ಉದ್ದೇಶ, ಕಾರ್ಯಕ್ರಮ ಮತ್ತು ಸಮಗ್ರ ಕಾನೂನು ಅಸ್ತಿತ್ವದಲ್ಲಿದೆ. ಈ ವಿಶ್ವದ ಹಿಂದೆ ಕ್ರಿಯಾಶೀಲವಾಗಿರುವ ಈ ಕಾನೂನು ಮತ್ತು ವ್ಯವಸ್ಥೆಯನ್ನೇ ದೇವನನ್ನು ನಿರಾಕರಿಸುತ್ತಾ ವಿಜ್ಞಾನಿಗಳು ನೈಸರ್ಗಿಕ ಕಾನೂನು ಅಥವಾ 'ಲಾ ಆಫ್ ನೇಚರ್ಸ್' ಎಂದು ಹೆಸರಿಸಿದ್ದಾರೆ. ಇಸ್ಲಾಮ್ ಅದನ್ನು ಅಲ್ಲಾಹನ ದೃಷ್ಟಾಂತಗಳು (ಆಯತುಲ್ಲಾಹ್) ಎಂದು ಕರೆಯುತ್ತದೆ. ಯಾಕೆಂದರೆ ಮಾನವನು ಬಯಸಿದರೆ ಅದರ ಸಹಾಯದಿಂದ ತನ್ನ ಹಾಗೂ ಈ ವಿಶ್ವದ ವಾಸ್ತವಿಕತೆಯ ಕುರಿತು ಮಾರ್ಗದರ್ಶನವನ್ನು ಪಡೆಯಬಹುದು. ಆದರೆ ಅದಕ್ಕಾಗಿ ಆತನಲ್ಲಿ ಹ.ಇಬ್ರಾಹೀಮ್‌ರಂತೆ(ಅ) ಸತ್ಯವನ್ನು ಕಂಡುಕೊಳ್ಳುವ ತೀವ್ರ ಆಸಕ್ತಿ ಇರಬೇಕು.

ಪ್ರಸ್ತುತ ವಾಸ್ತವಿಕತೆಗಳನ್ನು ಗಮನದಲ್ಲಿಟ್ಟು ಮಾನವನ ಜೀವನವನ್ನು ಅವಲೋಕಿಸಿದಾಗ ಈ ವಿಶ್ವ ಮತ್ತು ಸ್ವಯಂ ಮಾನವನ ಜೀವನಕ್ಕಾಗಿ ವಿಶ್ವ ಆಜ್ಞಾಧಿಕಾರಿಯ ಅಸ್ತಿತ್ವವಿದೆ ಮತ್ತು ಆತನ ವಿಶ್ವ ನಿಯಮವು ಎಲ್ಲೆಡೆ ಸಂಪೂರ್ಣ ಶಕ್ತಿ ಮತ್ತು ಪ್ರಭಾವದಿಂದ ಜಾರಿಯಲ್ಲಿದೆ ಎಂದು ವ್ಯಕ್ತವಾಗುತ್ತದೆ. ಮಾನವನ ಪ್ರತಿಯೊಂದು ಬೇಡಿಕೆ ಮತ್ತು ಅಗತ್ಯವನ್ನು ಮನಗಂಡು

ಸಕಲ ಸವಲತ್ತುಗಳನ್ನೂ ಸಜ್ಜುಗೊಳಿಸಲಾಗಿದೆ. ಆದರೆ ಮಾನವ ಐಚ್ಛಿಕ ಅಂಶ ಅರ್ಥಾತ್ ಆತನ ಸಾಮಾಜಿಕ, ನೈತಿಕ, ರಾಜಕೀಯ ಜೀವನಕ್ಕಾಗಿ ಯಾವುದೇ ಪ್ರತ್ಯಕ್ಷ ವಿಶ್ವ ಆಜ್ಞಾಧಿಕಾರಿ ಅಥವಾ ವಿಶ್ವ ನಿಯಮ ಗೋಚರಿಸುವುದಿಲ್ಲ. ಆತನ ದೈಹಿಕ ಅವಶ್ಯಕತೆಗಳಿಗಿಂತ ಹೆಚ್ಚಿನ ಯಾವುದೇ ವ್ಯವಸ್ಥೆಯನ್ನೂ ಅದಕ್ಕಾಗಿ ಮಾಡಿರುವುದು ಕಂಡು ಬರುವುದಿಲ್ಲ. ವ್ಯಕ್ತಿ, ಜನಾಂಗ, ರಾಷ್ಟ್ರಗಳೆಲ್ಲವೂ ತಾವಿಚ್ಛಿಸುವ ಮಾರ್ಗ ಅಥವಾ ಜೀವನ ಕ್ರಮವನ್ನು ಸ್ವೀಕರಿಸಲು ಸ್ವತಂತ್ರವಾಗಿದೆ ಮತ್ತು ಆತನು ಹಾಗೆಯೇ ಮಾಡಿದ್ದಾನೆ. ಆದರೆ ಈಗಿನ ವಿಶ್ವದ ಸ್ಥಿತಿ ಮತ್ತು ಅದರ ಸೃಷ್ಟಿಕರ್ತನ ಸಮಗ್ರ ಯೋಜನೆಯನ್ನು ವೀಕ್ಷಿಸುವಾಗ ಈ ಪರಿಸ್ಥಿತಿಯು ನಿಸರ್ಗ ವಿರುದ್ಧ ಮತ್ತು ವಿಶ್ವ ವ್ಯವಸ್ಥೆಯಿಂದ ಸಂಪೂರ್ಣ ಭಿನ್ನವಾಗಿರುವಂತೆ ಭಾಸವಾಗುತ್ತದೆ. ಮಾನವನ ಪ್ರತಿಯೊಂದು ಸಣ್ಣಪುಟ್ಟ ಅವಶ್ಯಕತೆಯನ್ನು ಪೂರೈಸುವಾತನು, ಮಾನವನ ಈ ಪ್ರಮುಖ ಅಂಶವನ್ನು ಗಮನಿಸಿಲ್ಲವೆಂಬುದು ನಿಜಕ್ಕೂ ವಿಚಿತ್ರವೆನಿಸುತ್ತದೆ. ಅಣುವಿನಿಂದ ಸೂರ್ಯನ ತನಕ ಎಲ್ಲದಕ್ಕೂ ಸಮಗ್ರ ಜೀವನ ವ್ಯವಸ್ಥೆಯನ್ನು ನಿರ್ದಿಷ್ಟ ಪಡಿಸಿರುವಾತನು ಮಾನವ ಜೀವನದ ಈ ಪ್ರಮುಖ ಅಂಶದ ಬಗ್ಗೆ ಯಾವ ಕಾನೂನು ವ್ಯವಸ್ಥೆಯನ್ನೂ ನಿರ್ಮಿಸಲಿಲ್ಲವೇ? ಬುದ್ಧಿ, ಆತ್ಮವಿಚಾರ, ವಿಶ್ವ ಪ್ರಕೃತಿ, ಭೌತಿಕ ವಿಜ್ಞಾನಗಳೆಲ್ಲವೂ ಈ ಕಲ್ಪನೆಯ ವಿರುದ್ಧವಾಗಿದ್ದು ಹಾಗಿರಲು ಸಾಧ್ಯವಿಲ್ಲವೆಂದು ಒಕ್ಕೊರಳಿನಿಂದ ಹೇಳುತ್ತವೆ. ಮಾನವನ ಸಾಮಾಜಿಕ ಮತ್ತು ರಾಜಕೀಯ ಜೀವನಕ್ಕೂ ಅಖಿಲ ವಿಶ್ವ ಮತ್ತು ಮಾನವನ ಭೌತಿಕ ಜೀವನಕ್ಕೆ ಇರುವಂತಹ ಆಜ್ಞಾಧಿಕಾರಿ ಮತ್ತು ವಿಶ್ವ ವ್ಯವಸ್ಥೆಯ ಅಗತ್ಯವಿದೆ.

ಈ ಕಲ್ಪನೆಯ ಮಟ್ಟಕ್ಕೆ ಪ್ರತಿಯೊಬ್ಬ ವಿವೇಕವಂತ ಹಾಗೂ ನಿಷ್ಪಕ್ಷಪಾತಿ ವ್ಯಕ್ತಿಯು ತಲಪುತ್ತಾನೆ. ಈ ಸ್ಥಾನದಲ್ಲಿ ನಿಂತು ಆರಂಭದಿಂದ ಈ ತನಕದ ಮಾನವ ಇತಿಹಾಸ ಹಾಗೂ ಜಾಗತಿಕ ಘಟನಾವಳಿಗಳನ್ನು ಅವಲೋಕಿಸಿದರೆ ಒಂದೆರಡಲ್ಲ, ಲಕ್ಷಗಟ್ಟಲೆ ಜನರ ಗುಂಪೊಂದು ಸದಾ ಕಾಲವು ತಂತಮ್ಮ ಸಮಾಜಗಳಲ್ಲಿ ಅತ್ಯುತ್ತಮ ಗುಣ ನಡತೆ, ಚಾರಿತ್ರ್ಯ ಹಾಗೂ ಶತ್ರು-ಮಿತ್ರರ ವಿಶ್ವಾಸಕ್ಕೆ ಸಮಾನ ಪಾತ್ರವಾಗಿದ್ದಿತೆಂದು ವ್ಯಕ್ತವಾಗುತ್ತದೆ. ಅವರಲ್ಲಿ ಪ್ರತಿಯೊಬ್ಬ ವ್ಯಕ್ತಿಯಲ್ಲಿ ವೈರಿಗಳಿಗೂ ಯಾವುದೇ ಕೆಡುಕು ಶೋಧಿಸಲೂ ಸಾಧ್ಯವಾಗುತ್ತಿರಲಿಲ್ಲ. ಇವರೆಲ್ಲರೂ ಕೇವಲ ಯಾವುದಾದರೂ ಒಂದು ಜನಾಂಗ, ರಾಷ್ಟ್ರ, ಕಾಲ ಅಥವಾ ವರ್ಗಗಳಿಗೆ ಸೀಮಿತವಾದವರಲ್ಲ. ಎಲ್ಲ ಜನಾಂಗ, ರಾಷ್ಟ್ರ, ಕಾಲ, ವರ್ಗಗಳಲ್ಲಿಯೂ ಅಂತಹ ವ್ಯಕ್ತಿಗಳಿದ್ದರು. ಅವರೆಲ್ಲರೂ ಒಕ್ಕೊರಳಿನಿಂದ ಹೇಳುತ್ತಿದ್ದುದೇನೆಂದರೆ ಯಾವ ವಸ್ತುವನ್ನು ನಿಮ್ಮ ಬುದ್ಧಿ, ಪ್ರಜ್ಞೆ, ಜ್ಞಾನ, ವಿಚಾರ ಮತ್ತು ದೈಹಿಕ ಬೇಡಿಕೆಯು ಬಯಸುತ್ತಿದೆಯೋ ಅದು ವಾಸ್ತವಿಕತೆಯಾಗಿದೆ. ಈ ಪ್ರಪಂಚ ಮತ್ತು ನಿಮ್ಮ ಜೀವನದ ದೈಹಿಕ ಅಂಶಗಳಲ್ಲಿ ಯಾವ ರೀತಿಯಲ್ಲಿ ಸೃಷ್ಟಿಕರ್ತನ ಸಾರ್ವಭೌಮತೆಯಿದೆಯೋ ಹಾಗೆಯೇ ನಿಮ್ಮ ಸಾಮಾಜಿಕ, ನೈತಿಕ ಮತ್ತು ರಾಜಕೀಯ ಜೀವನದ ಮೇಲೆಯೂ ಈ ವಿಶ್ವದ ಹಾಗೂ ಅದರ ಸಕಲ ಚರಾಚರ ಸೃಷ್ಟಿಕರ್ತನ ಸಾರ್ವಭೌಮತೆಯಿದೆ. ಆತನ ಕಾನೂನು ಮತ್ತು ಆಜ್ಞೆಗಳು ಈ ವಿಶ್ವದ ಕಾರ್ಯಾಗಾರದಲ್ಲಿ ಜಾರಿಯಲ್ಲಿವೆ. ನೀವೆಲ್ಲರೂ ಆತನ ಅವಲಂಬಿತರಾಗಿದ್ದೀರಿ. ಆತನ ಹಸ್ತಗಳಲ್ಲಿಯೇ ನಿಮ್ಮೆಲ್ಲರ ಜೀವನ, ಮರಣ, ಆರೋಗ್ಯ, ಹಿತ, ಕಲ್ಯಾಣ, ಆಹಾರ ಮತ್ತು ನಿಮ್ಮ ಎಲ್ಲ ಲೌಕಿಕ ವಸ್ತುಗಳೂ ಇವೆ. ಆತನೇ ಈ ವಿಶ್ವದ ನೈಜ ಒಡೆಯ ಮತ್ತು ಆಜ್ಞಾಧಿಕಾರಿ. ನೀವು ನಿಮ್ಮ

ನೈಸರ್ಗಿಕ ಜೀವನದಲ್ಲಿ ಆತನ ಆಜ್ಞಾ ಪಾಲನೆಯನ್ನು ಮಾಡುತ್ತಿರುವಂತೆಯೇ ನಿಮ್ಮ ಐಚ್ಛಿಕ ಜೀವನದಲ್ಲಿಯೂ ಆತನ ಆಜ್ಞಾನುಸರಣೆ ಮಾಡಬೇಕಾದುದು ನಿಮ್ಮ ಮೇಲೆ ಕಡ್ಡಾಯವಾಗಿದೆ.

ಈಗ ಈ ವಿಶ್ವದೊಡೆಯ ಮತ್ತು ಸೃಷ್ಟಿಕರ್ತನನ್ನು ವಿಶ್ವ ಆಜ್ಞಾಧಿಕಾರಿಯ ಪೂರ್ವೋಕ್ತ ನಿರ್ದಿಷ್ಟ ವೈಶಿಷ್ಟ್ಯಗಳೊಡನೆ ಹೋಲಿಸಿ ನೋಡೋಣ-

ಆತನು ಚಿರಂತನನು, ಸ್ವಯಂಪೂರ್ಣನು, ಸರ್ವ ಸಮರ್ಥನು ಮತ್ತು ನಿರಪೇಕ್ಷನಾಗಿದ್ದಾನೆ. ಆತನಿಗೆ ಯಾವ ರೀತಿ ಭೂಮಿ, ಆಕಾಶ ಮತ್ತಿತರ ವಸ್ತುಗಳ ಒಡೆತನ ಮತ್ತು ಆಜ್ಞಾಧಿಕಾರವಿದೆಯೋ ಹಾಗೆಯೇ ಸಂಪೂರ್ಣ ಮಾನವಕುಲದ ಮೇಲೆಯೂ ಆತನಿಗೆ ಸಂಪೂರ್ಣ ಆಜ್ಞಾಧಿಕಾರವಿದೆ. ಯಾಕೆಂದರೆ ಆತನೇ ನಮ್ಮನ್ನು ಸೃಷ್ಟಿಸಿದನು. ಆತನ ಭೂಮಿಯಲ್ಲಿಯೇ ನಾವು ವಾಸವಾಗಿದ್ದೇವೆ. ಆತನು ನೀಡಿರುವ ಆಹಾರವನ್ನು ನಾವು ತಿನ್ನುತ್ತೇನೆ. ಆತನ ಗಾಳಿಯಿಂದಲೇ ಉಸಿರಾಡುತ್ತೇವೆ. ನಾವು ನಮ್ಮ ಪ್ರತಿಯೊಂದು ಅಗತ್ಯ ಮತ್ತು ಬೇಡಿಕೆಗಳಿಗೆ ಆತನನ್ನು ಅವಲಂಬಿಸಿದ್ದೇವೆ. ಈ ಕಣ್ಣು, ಕಿವಿ, ಮೂಗು, ನಾಲಗೆ, ಹೃದಯ, ಮಿದುಳು, ನಮ್ಮ ದೇಹ ಮತ್ತು ಈ ವಿಶ್ವದ ಪ್ರತಿಯೊಂದು ಕಣವೂ ಆತನ ಒಡೆತನಕ್ಕೆ ಮತ್ತು ಆಜ್ಞೆಗೆ ಅಧೀನವಾಗಿದೆ. ಆತನು ಇಚ್ಛಿಸುವ ತನಕ ನಾವು ಅದರಿಂದ ಪ್ರಯೋಜನ ಪಡೆಯುತ್ತೇವೆ. ಆತನು ಬಯಸಿದಾಗ ನಾವು ಅದರಿಂದ ವಂಚಿತರಾಗುತ್ತೇವೆ.

ಆತನು ಎಲ್ಲ ಲೋಪ-ದೋಷ, ದೌರ್ಬಲ್ಯಗಳಿಂದಲೂ ವಿರಹಿತನಾಗಿದ್ದಾನೆ. ಆತನು ಎಲ್ಲರ ಸಮಾನ ಪ್ರಭುವಾಗಿದ್ದಾನೆ. ಆತನ ಮುಂದೆ ತಲೆಬಾಗುವುದು ಅಗೌರವದ ವಿಷಯವಲ್ಲ. ಆತನ ಶಕ್ತಿ-ಸಾಮರ್ಥ್ಯಗಳು ನಿಸ್ಸೀಮವಾಗಿದೆ. ಈ ಅಖಿಲ ವಿಶ್ವ ವ್ಯವಸ್ಥೆಯನ್ನು ನಡೆಸುವುದಕ್ಕೆ ಅವನಿಗೆ ಯಾವ ಸಹಕಾರಿಯ ಅಗತ್ಯವೂ ಇಲ್ಲ. ಸಂಪೂರ್ಣ ಜನಾಂಗ ಅಥವಾ ರಾಷ್ಟ್ರಗಳನ್ನು ಮಾತ್ರವಲ್ಲ ಇಡೀ ವಿಶ್ವವನ್ನೇ ತಾನಿಚ್ಛಿಸಿದಾಗ ನಾಶ ಗೊಳಿಸಲು ಆತನು ಶಕ್ತನಾಗಿದ್ದಾನೆ. ಸಂಕ್ಷಿಪ್ತದಲ್ಲಿ ಓರ್ವ ವಿಶ್ವ ಸಾರ್ವಭೌಮನ ಬಗ್ಗೆ ನಾವು ಕಲ್ಪಿಸಬಹುದಾದ ಎಲ್ಲ ಗುಣ ವೈಶಿಷ್ಟ್ಯಗಳೂ ಆತನಲ್ಲಿವೆ.

## ನಮ್ಮ ನೈಜ ಕರೆ

ಒಂದು ವಿಶ್ವ ಸಾರ್ವಭೌಮ ಅರ್ಥಾತ್ ಏಕ ಆರಾಧ್ಯನ ಪ್ರಶ್ನೆಯನ್ನು ಹೀಗೆ ಬಗೆಹರಿಸಿಕೊಂಡ ಬಳಿಕ ಸಮಗ್ರ ವಿಶ್ವಶಾಂತಿಗೆ ಅನಿವಾರ್ಯ ಅಗತ್ಯವಾಗಿರುವ ಏಕ ಮಾನವಕುಲದ ಬಗ್ಗೆ ಆಲೋಚಿಸಿದರೆ ಮಾನವಕುಲದ ವಿವಿಧ ಜನಾಂಗ, ವಂಶ ಮತ್ತು ವರ್ಗಗಳೊಳಗಿನ ಪರಸ್ಪರ ದ್ವೇಷ, ಕಚ್ಚಾಟಗಳು ನಿರಾಧಾರ ಮತ್ತು ಕೃತಕವಾಗಿದ್ದು ಅದಕ್ಕೆ ಯಾವುದೇ ವಾಸ್ತವಿಕತೆ ಕಾರಣವಲ್ಲವೆಂಬುದು ತಿಳಿಯುತ್ತದೆ. ಗುಣ ನಡತೆ, ವರ್ಣ ಭೇದಗಳ ಹೆಸರಿನಲ್ಲಿ ಜನರು ತಮ್ಮನ್ನು ತಾವೇ ವಿವಿಧ ಕುಲಗೋತ್ರಗಳಾಗಿ ವಿಂಗಡಿಸಿ ಗೊಂದಲವೆಬ್ಬಿಸುವ ಪ್ರಕ್ರಿಯೆಯು ಕೆಲವೊಮ್ಮೆ ಒಂದೇ ಜನಾಂಗದಲ್ಲಿ ಮಾತ್ರವಲ್ಲ, ಒಂದೇ ತಾಯಿಯ ಇಬ್ಬರು ಮಕ್ಕಳಲ್ಲಿಯೂ ಕಂಡು ಬರಬಹುದು. ಮಾನವನ ಪರಸ್ಪರ ಒಮ್ಮತ ಅಥವಾ ಭಿನ್ನಾಭಿಪ್ರಾಯವು ಕೇವಲ ವಿಚಾರ, ವಿಶ್ವಾಸ ಮತ್ತು ಗುಣ ನಡತೆಗಳ ಬುನಾದಿಯಲ್ಲಿರಬೇಕಾದುದು ಅನಿವಾರ್ಯವಾಗಿದೆ. ಓರ್ವ ಮಾತೆಯ ಇಬ್ಬರು ಪುತ್ರರಲ್ಲಿ ಹಲವು ವಿಷಯಗಳಲ್ಲಿ

ಅಜಗಜಾಂತರವಿದ್ದರೂ ಅವರು ಒಗ್ಗಟ್ಟಿನಿಂದ ಜೀವಿಸಲು ಸಾಧ್ಯವಿದೆ. ಇನ್ನು ವಂಶ, ವರ್ಣ, ಭಾಷೆ, ದೇಶಗಳ ಭಿನ್ನತೆಯನ್ನು ಮಿತ್ರತ್ವ-ಶತ್ರುತ್ವಗಳ ಬುನಾದಿಯನ್ನಾಗಿ ಮಾಡುವುದು ಅರ್ಥ ಶೂನ್ಯವಾಗಿದೆ. ಒಂದು ನಿರ್ದಿಷ್ಟ ನದಿ, ಬೆಟ್ಟ ಅಥವಾ ಗಡಿಯ ಈಚೆ ಬದಿಯಲ್ಲಿ ಹುಟ್ಟಿದ ಹಾಗೂ ನಿರ್ದಿಷ್ಟ ಬಣ್ಣ ಮತ್ತು ಭಾಷೆ ಮಾತನಾಡುವ ಮಗುವು ನಮ್ಮದು ಮತ್ತು ಅದಕ್ಕೆ ನಮ್ಮ ಮೇಲೆ ಎಲ್ಲಾ ಹಕ್ಕುಗಳು ಇವೆಯೆಂಬ ಹಾಗೂ ಆಚೆ ಬದಿಯಲ್ಲಿ ಹುಟ್ಟಿದ ಬೇರೆ ಬಣ್ಣ ಮತ್ತು ಬೇರೆ ಭಾಷೆ ಮಾತಾಡುವ ಮಗುವು ಪರಕೀಯವಾಗಿದ್ದು ನಮ್ಮೊಂದಿಗೆ ಅದಕ್ಕೆ ಯಾವ ರೀತಿಯ ಸಂಬಂಧವೂ ಇಲ್ಲವೆಂಬ ವಿಚಾರ ಧಾರೆಯು ತೀರಾ ಬಾಲಿಷವಾಗಿದೆ. ಪ್ರಚಲಿತವಿರುವ ದೃಷ್ಟಿಕೋನ ಮತ್ತು ವಿಚಾರಧಾರೆಗಳನ್ನು ನೋಡುವಾಗ ಅವು ಹೇಗೆ ಹುಟ್ಟಿಕೊಂಡವು ಮತ್ತು ಬುದ್ಧಿ ವಿವೇಕವು ಅದನ್ನು ಹೇಗೆ ಒಪ್ಪಿ ಅದನ್ನು ಪ್ರಚುರಪಡಿಸುವ ಅವಕಾಶ ನೀಡಿತೆಂಬ ಬಗ್ಗೆ ನಮಗೆ ಅಚ್ಚರಿಯಾಗುತ್ತದೆ. ಬಿಳಿಯ-ಕರಿಯ, ಆಂಗ್ಲೇಯ-ಜರ್ಮನಿಯವ ಅಥವಾ ಭಾರತ ಮತ್ತು ಭಾರತೀಯೇತರರಲ್ಲಿರುವ ವ್ಯತ್ಯಾಸವು ಎತ್ತು ಮತ್ತು ಕುದುರೆ, ಒಂಟೆ ಮತ್ತು ಆಡುಗಳಲ್ಲಿರುವಂತೆ ವಿಭಿನ್ನ ಪ್ರಾಣಿಯೆನ್ನುವಷ್ಟರ ಮಟ್ಟಿಗೆ ಇಲ್ಲವೆಂಬ ಸತ್ಯವು ಅಲ್ಪಜ್ಞಾನಿಗಳಿಗೂ ತಿಳಿಯಬಹುದು. ಬಿಳಿಯ-ಕರಿಯ, ಆಂಗ್ಲ-ಜರ್ಮನಿಯವ, ಭಾರತೀಯ ಮತ್ತು ಭಾರತೀಯೇತರ- ಹೀಗೆ ಎಲ್ಲರೂ ಒಂದೇ ರೀತಿಯ ಮೂಳೆ, ಮಾಂಸಗಳಿಂದ ಕೂಡಿದವರಾಗಿದ್ದಾರೆ. ಅವರ ದೇಹ, ಮಿದುಳು, ಅಂಗಾಂಗಗಳ ಕಾರ್ಯ ಚಟುವಟಿಕೆಗಳೂ ಸಾಮಾನವಾಗಿದೆ. ಅವರ ವ್ಯಕ್ತಿತ್ವ, ಶಕ್ತಿ, ಸಾಮರ್ಥ್ಯ, ದೌರ್ಬಲ್ಯಗಳೆಲ್ಲವೂ ಸಮಾನವಾಗಿದೆ. ಪ್ರತ್ಯೇಕ ಜೀವಿಯೆಂದು ಹೇಳಬಹುದಾದ ಯಾವ ಭಿನ್ನತೆಯೂ ಅವರಲ್ಲಿಲ್ಲ. ಮನುಷ್ಯನಿಗೆ ಸಂಬಂಧಿಸಿದ ಪ್ರತಿಯೊಂದು ವಸ್ತುವೂ ಅವರೆಲ್ಲರೂ ಮಾನವ ಸಮಾನರೆಂದು ತರ್ಕ ಬದ್ಧವಾಗಿ ಸಮರ್ಥಿಸುತ್ತದೆ. ಇಲ್ಲಿ ನಾವು ಪುನಃ ಬುದ್ಧಿ ಮತ್ತು ಸಾಕ್ಷ್ಯದ ಈ ಬೇಡಿಕೆಗೆ ತಲಪಿದಾಗ, ನಮ್ಮ ವಿಶ್ವ ಸಾರ್ವಭೌಮತ್ವದ ಪ್ರಶ್ನೆಯನ್ನು ಬಗೆಹರಿಸಿದ ಅದೇ ಉತ್ತಮ ವರ್ಗದ ಕಲ್ಪನೆಯು ಕಣ್ಣ ಮುಂದೆ ಬರುತ್ತದೆ. ಬುದ್ಧಿ ಮತ್ತು ಜ್ಞಾನದ ಈ ಬೇಡಿಕೆಯೂ ಸಂಪೂರ್ಣ ಸತ್ಯವೆಂದು ವ್ಯಕ್ತವಾಗುತ್ತದೆ. ಮಾನವನು ಬಿಳಿಯನಾಗಿರಲಿ, ಕರಿಯನಾಗಿರಲಿ, ಅರಬನಾಗಿರಲಿ, ಅರಬೇತರನಾಗಲಿ ಎಲ್ಲರೂ ಆದಮನ ಸಂತಾನಗಳು. ಅವರ ಕುಲ ಗೋತ್ರಗಳ ಭಿನ್ನತೆಯು ಅವರು ಪರಸ್ಪರ ಗುರುತಿಸುವುದಕ್ಕಾಗಿದೆ. ಅದಕ್ಕಿಂತ ಹೆಚ್ಚಿನ ಯಾವ ಮಹತ್ವವೂ ಅದಕ್ಕಿಲ್ಲ.

ಈ ಎರಡು ವಾಸ್ತವಿಕಾಂಶಗಳನ್ನು ಅರ್ಥಾತ್ 'ಏಕ ಆರಾಧ್ಯ ಮತ್ತು ಏಕ ಮಾನವ ಕುಲ'ವೆಂಬ ತತ್ವವನ್ನೇ ಆ ಗತಕಾಲೀನ ವರ್ಗಗಳ ಪ್ರತಿಯೊಬ್ಬ ವ್ಯಕ್ತಿಯೂ ತಂತಮ್ಮ ಕಾಲಗಳಲ್ಲಿ ಆಯಾ ಜನತೆಗೆ ಪ್ರಚಾರ ಮಾಡಿದರು. ನಮ್ಮ ಮತ್ತು ಇಸ್ಲಾಮಿನ ಕರೆಯೂ ಆ ಎರಡು ಮೂಲಭೂತ ವಾಸ್ತವಿಕತೆಗಳನ್ನೇ ಅವಲಂಬಿಸಿದೆ. ಇಸ್ಲಾಮ್ ಹೊಸ ಧರ್ಮವೇನಲ್ಲ. ಪವಿತ್ರ ಕುರ್‌ಆನ್ ಹೊಸ ಗ್ರಂಥವೂ ಅಲ್ಲ. ಪ್ರವಾದಿವರ್ಯರ(ಸ) ಸಂದೇಶವೂ ಅಪೂರ್ವವೇನಲ್ಲ. ಹಿಂದಿನ ಕಾಲದ ದೇವನ ಉನ್ನತ ದಾಸರೂ ಅದೇ ಸಂದೇಶವನ್ನು ಪ್ರಚಾರ ಮಾಡಿದ್ದರು. ಮಾನವೇತಿಹಾಸದ ಆರಂಭದಿಂದ ಎಲ್ಲರಾಷ್ಟ್ರ ಮತ್ತು ಜನಾಂಗಗಳಲ್ಲಿ ಬಂದ ಪ್ರವಾದಿಗಳು ಪ್ರಚಾರ ಪಡಿಸಿದ್ದ ಸದ್ಧರ್ಮ ಮತ್ತು ಸಂದೇಶದ ಪ್ರಸಕ್ತ ಹೆಸರೇ 'ಇಸ್ಲಾಮ್'.

ಕುರ್‌ಆನ್ ಆ ಸತ್ಯಧರ್ಮ ಮತ್ತು ಸತ್ಯಸಂದೇಶದ ಅಧಿಕೃತ ಆವೃತ್ತಿಯಾಗಿದೆ. ಪ್ರವಾದಿ ಮುಹಮ್ಮದ್(ಸ) ಈ ಸತ್ಯಸಂದೇಶದ ಕೊನೆಯ ವಕ್ತಾರರಾಗಿದ್ದಾರೆ. ಭಾರತ, ಚೀನಾ, ಯುರೋಪ್, ಅಮೇರಿಕಾ, ಇರಾನ್, ಅರೇಬಿಯಾ ಮುಂತಾದ ಎಲ್ಲೆಡೆ ಆಗಮಿಸಿದ ದೇವನ ಸಾಮಾಜಿಕ ಮತ್ತು ನೈತಿಕ ಸುಧಾರಕರೆಲ್ಲರೂ ಇದೇ ಜೀವನ ಪದ್ಧತಿಯನ್ನು ಬೋಧಿಸಿದ್ದರು. ಅದನ್ನೇ ಅಲ್ಲಾಹನು ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯ ಮೂಲಕ ಶಾಶ್ವತವಾಗಿ ಸುರಕ್ಷಿತಗೊಳಿಸಿದನು. ಅದು ಸಮಗ್ರ ಮಾನವಕುಲದ ಆಸ್ತಿಯಾಗಿದೆ. ಯಾವುದೇ ರಾಷ್ಟ್ರ, ಕುಲ ಮತ್ತು ವರ್ಗದ ಗುತ್ತಿಗೆಯಲ್ಲ. ಇಸ್ಲಾಮ್ ಮತ್ತು ಪವಿತ್ರ ಕುರ್‌ಆನ್ ಮಾನವ ಕುಲವನ್ನುದ್ದೇಶಿಸಿ ತನ್ನ ಮೂಲಭೂತ ಕರೆಯನ್ನು ಈ ರೀತಿ ಮಂಡಿಸಿದೆ-

"ಓ ಜನರೇ! ನಿಮ್ಮನ್ನೂ ನಿಮ್ಮ ಪೂರ್ವಿಕರನ್ನೂ ಸೃಷ್ಟಿಸಿದ ನಿಮ್ಮ ಪ್ರಭುವಿನ ಇಬಾದತ್ (ದಾಸ್ಯ-ಆರಾಧನೆ) ಮಾಡಿರಿ. (ಹೀಗೆ ಮಾಡಿದರೆ) ಪಾಪ ಬಾಧೆಯಿಂದ ನೀವು ರಕ್ಷಣೆ ಹೊಂದಬಹುದು. ಆತನು ನಿಮಗೆ ಭೂಮಿಯನ್ನು ಹಾಸಿಗೆಯಾಗಿಯೂ ಆಕಾಶವನ್ನು ಮೇಲ್ಛಾವಣಿಯಾಗಿಯೂ ರಚಿಸಿಕೊಟ್ಟನು. ಮೇಲ್ಭಾಗದಿಂದ ಮಳೆಸುರಿಸಿ ಅದರ ಮೂಲಕ ನಿಮಗೆ ಆಹಾರವಾಗಿ ಬಗೆಬಗೆಯ ಫಲ-ಕಾಯಿಗಳನ್ನು ಉತ್ಪಾದಿಸಿದನು. (ಈ ಯಥಾರ್ಥವನ್ನು) ಅರಿತಿರುವ ನೀವು ಯಾರನ್ನೂ ಅಲ್ಲಾಹನಿಗೆ ಸರಿ ಸಮಾನರಾಗಿಸದಿರಿ." ಯಾಕೆಂದರೆ, "ಅಲ್ಲಾಹ್- ಆತನ ಹೊರತು ದೇವನಿಲ್ಲ, ಚಿರಂತನನು, ಸ್ವಯಂಸ್ಥಿರನು, ಸರ್ವ ನಿಯಂತ್ರಕನು, (ಜಗನ್ನಿಯಾಮಕನು) ತೂಕಡಿಕೆಯಾಗಲೀ, ನಿದ್ರೆಯಾಗಲೀ ಆತನನ್ನು ಬಾಧಿಸದು. ಭೂಮಿ-ಆಕಾಶಗಳಲ್ಲಿರುವುದೆಲ್ಲವೂ ಆತನದೇ. ಆತನ ಅನುಮತಿಯಿಲ್ಲದೆ ಆತನಲ್ಲಿ ಶಿಫಾರಸು ಮಾಡಬಲ್ಲವರಾರು? ಅವರ ಮುಂದಿರುವ ಮತ್ತು ಹಿಂದಿರುವ ಎಲ್ಲವನ್ನೂ ಆತನು ಅರಿಯುತ್ತಾನೆ. ಆತನ ಜ್ಞಾನ ಭಂಡಾರದಲ್ಲಿರುವ ಯಾವೊಂದು ಸಂಗತಿಯನ್ನೂ ಅವರು ಅರಿಯರು- ಆತನೇ ಉದ್ದೇಶಿಸಿದ್ದನ್ನು ಹೊರತು. ಆತನ ಸಿಂಹಾಸನವಾದರೋ ಭೂಮಿ-ಆಕಾಶಗಳನ್ನು ವ್ಯಾಪಿಸಿದೆ. ಅವೆರಡರ ರಕ್ಷಣೆ ಆತನಿಗೇನೂ ದುಸ್ತರವಲ್ಲ. ಆತನು ಸರ್ವೋಚ್ಚನೂ ಮಹಾನನೂ ಆಗಿರುತ್ತಾನೆ. ಧರ್ಮದ (ನೈತಿಕ ಮತ್ತು ಸಾಮಾಜಿಕ ಜೀವನದಲ್ಲಿ ಅಲ್ಲಾಹನ ದಾಸ್ಯ-ಆರಾಧನೆ ಸ್ವೀಕರಿಸುವ) ವಿಷಯದಲ್ಲಿ ಯಾವ ಬಲಾತ್ಕಾರವೂ ಇಲ್ಲ. ಸನ್ಮಾರ್ಗ ಮತ್ತು ದುರ್ಮಾರ್ಗಗಳನ್ನು ನಿಮ್ಮ ಮುಂದೆ ನಿಚ್ಚಳಗೊಳಿಸಲಾಗಿದೆ. ಅನ್ಯರನ್ನು ಬಿಟ್ಟು ಅಲ್ಲಾಹನ ಅನುಸರಣೆ ಮತ್ತು ದಾಸ್ಯವನ್ನು ಸ್ವೀಕರಿಸಿದವರು ಎಂದೆಂದಿಗೂ ಮುರಿಯಲಾರದ ಆಶ್ರಯವನ್ನು ಭದ್ರವಾಗಿ ಹಿಡಿದುಕೊಂಡರು. ಅಲ್ಲಾಹನು ಸರ್ವಶ್ರುತನೂ ಸರ್ವಜ್ಞನೂ ಆಗಿದ್ದಾನೆ."

"ಓ ಜನರೇ! ನಿಮ್ಮ ಪ್ರಭುವನ್ನು ಭಯಪಡಿರಿ. ಆತನು ನಿಮ್ಮನ್ನು ಒಂದೇ ಆತ್ಮದಿಂದ ಸೃಷ್ಟಿಸಿದನು, ಅದರಿಂದಲೇ ಅದರ ಜೊತೆಯನ್ನು ಸೃಷ್ಟಿಸಿದನು ಮತ್ತು ಅವೆರಡರಿಂದ ಲೋಕದಲ್ಲಿ ಅನೇಕ ಸ್ತ್ರೀ- ಪುರುಷರನ್ನು ಹಬ್ಬಿಸಿದನು. ಯಾರ ಹೆಸರಲ್ಲಿ ನೀವು ಪರಸ್ಪರ ಹಕ್ಕುಗಳನ್ನು ಕೇಳುತ್ತಿರುವಿರೋ ಮತ್ತು ಪರಸ್ಪರ ಸಂಬಂಧ ಕೆಡುವುದರ ಬಗ್ಗೆ ಎಚ್ಚರಿಕೆಯಿಂದಿರುವಿರೋ ಆ ಅಲ್ಲಾಹನನ್ನು ಭಯಪಡಿರಿ. ಅಲ್ಲಾಹನು ಖಂಡಿತವಾಗಿಯೂ ನಿಮ್ಮನ್ನು ವೀಕ್ಷಿಸುತ್ತಿದ್ದಾನೆ."

"ಓ ಜನರೇ! ನಿಮ್ಮನ್ನೊಬ್ಬ ಪುರುಷ ಮತ್ತು ಓರ್ವ ಸ್ತ್ರೀಯಿಂದ ನಾವು ಸೃಷ್ಟಿಸಿದೆವು ಮತ್ತು ನಿಮ್ಮನ್ನು ಅನೇಕ ಜನಾಂಗಗಳಾಗಿಯೂ ವಂಶಗಳಾಗಿಯೂ ಮಾಡಿದೆವು, ಪರಸ್ಪರರನ್ನು ನೀವು ಗುರುತಿಸುವಂತಾಗಲೆಂದು. ನಿಮ್ಮ ಪೈಕಿ (ಅಲ್ಲಾಹನ) ಅತ್ಯಧಿಕ ಭಯಭಕ್ತಿವುಳ್ಳವನೇ ಅಲ್ಲಾಹನ ಸೃಷ್ಟಿಯಲ್ಲಿ ಅತ್ಯಂತ ಗೌರವಾರ್ಹನು." ಅಲ್ಲಾಹನ ವತಿಯಿಂದ ಎಲ್ಲಾ ಕಾಲ ಮತ್ತು ಪ್ರದೇಶಗಳಲ್ಲಿ ಅವತೀರ್ಣಗೊಂಡ ಯಾವುದೇ ಗ್ರಂಥ ಮತ್ತು ಯಾವುದೇ ಕಾಲ ಮತ್ತು ಪ್ರದೇಶದಲ್ಲಿ ಆತನ ವತಿಯಿಂದ ಬಂದ ಪ್ರವಾದಿಗಳೆಲ್ಲರ ಬೋಧನೆಯೂ ಇದೇ ಮೂಲಭೂತ ಸಿದ್ಧಾಂತವನ್ನು ಒಳಗೊಂಡಿತ್ತು. ಅದೇ ಬುನಾದಿಯಲ್ಲಿ ತನ್ನ ವೈಯಕ್ತಿಕ ಮತ್ತು ಸಾಮಾಜಿಕ ಜೀವನವನ್ನು ಕಡ್ಡಾಯವಾಗಿ ಕಟ್ಟಿ ಬೆಳೆಸಬೇಕಾದುದು ಮತ್ತು ತನ್ನ ಜೀವನದ ಎಲ್ಲ ರಂಗಗಳಲ್ಲಿಯೂ ಆ ಎರಡು ಮೂಲಭೂತ ಸತ್ಯಗಳಿಗೆ ವಿರುದ್ಧವಾದ ಎಲ್ಲವನ್ನೂ ತೊರೆಯಬೇಕಾದುದು ಅದರಲ್ಲಿ ವಿಶ್ವಾಸವಿರಿಸುವ ಪ್ರತಿಯೊಬ್ಬ ಮಾನವನ ಕರ್ತವ್ಯವಾಗಿದೆ.

ಅಲ್ಲಾಹನ ಆ ಉನ್ನತ ದಾಸರ ಧರ್ಮ ಪ್ರಚಾರ ಮತ್ತು ಅಭಿಯಾನದ ನಿರ್ವಹಣೆಗಾಗಿಯೇ ಜಮಾಅತೆ ಇಸ್ಲಾಮಿಯು ಸ್ಥಾಪನೆಗೊಂಡಿದೆ. ಈ ಉದ್ದೇಶಾರ್ಥವಾಗಿ ರಾಷ್ಟ್ರ ಮತ್ತು ಜನಾಂಗಭೇದವಿಲ್ಲದೇ ಈ ಸಂದೇಶವನ್ನು ಅದರ ನೈಜ ವಾಹಕರು ಅರ್ಥಾತ್ ಸಹಾಬಿಗಳು ಪ್ರಸ್ತುತಪಡಿಸಿದಂತೆ ಸಂಪೂರ್ಣ ಮಾನವಕುಲದ ಮುಂದೆ ಸಮರ್ಪಿಸುತ್ತಿದೆ. ನಾವು ಆ ಮಾರ್ಗದರ್ಶಕರ ಮಾದರಿಯಂತೆ ವರ್ಗ, ವಂಶ, ರಾಷ್ಟ್ರ ಇತ್ಯಾದಿ ಸಂಕುಚಿತ ಭಾವನೆಯನ್ನು ತೊರೆದು ಅಡಿಯಿಂದ ಮುಡಿ ತನಕ ಅದೇ ಸಂದೇಶ ಮತ್ತು ಸಿದ್ಧಾಂತಗಳನ್ನು ಪರಿಚಯಪಡಿಸುವ ನಿರ್ಧಾರ ಮತ್ತು ಪ್ರತಿಜ್ಞೆ ಕೈಗೊಂಡಿದ್ದೇವೆ. ಇವು ಇಡೀ ಮಾನವ ಕುಲದೊಡನೆ ಮುಖ್ಯವಾಗಿ ಪ್ರಸಕ್ತ ಪರಿಸ್ಥಿತಿಯಿಂದ ಅಸಂತುಷ್ಟರಾಗಿರುವ ಅಥವಾ ಹತಾಶರಾಗಿರುವ, ನಿತ್ಯದ ಘಟನೆಗಳ ಕುರಿತು ರಾತ್ರಿ ಹಗಲೆನ್ನದೆ ಕಳವಳ ಪಡುತ್ತಿರುವ, ವಿಶ್ವಶಾಂತಿಯನ್ನು ಬಯಸುವ, ಪ್ರಸಕ್ತ ಜೀವನ ವ್ಯವಸ್ಥೆಯಿಂದ ಜಿಗುಪ್ಸೆಗೊಂಡ ಹಾಗೂ ಅದಕ್ಕೆ ಪ್ರತಿಯಾಗಿ ಸತ್ಯ, ನ್ಯಾಯ ಮತ್ತು ಪ್ರಾಮಾಣಿಕತೆಯನ್ನು ಬಯಸುವ ಎಲ್ಲ ಜನರೊಡನೆ ನಮ್ಮ ವಿನಂತಿಯೇನೆಂದರೆ ವಂಶ, ವರ್ಗ ವ್ಯತ್ಯಾಸವನ್ನು ಮೀರಿ ನಮ್ಮ ಈ ಕರೆಯನ್ನು ಕೇಳಿ ಅದನ್ನು ತಿಳಿಯಲು ಪ್ರಯತ್ನಿಸಿ. ಲೋಕದ ಇತರ ತತ್ವಸಿದ್ಧಾಂತಗಳನ್ನು ಮತ್ತು ವಿಚಾರಧಾರೆಗಳನ್ನು ಬಿಚ್ಚು ಮನಸ್ಸಿನಿಂದ ಪರಿಶೀಲಿಸುವಂತೆ ಇದರ ಒಳಿತು-ಕೆಡುಕುಗಳನ್ನು ಪರಿಶೀಲಿಸಿರಿ. ಈ ಕಾಲದಲ್ಲಿ ಎಲ್ಲ ಜನಾಂಗ ಮತ್ತು ರಾಷ್ಟ್ರಗಳನ್ನು ಒಂದುಗೂಡಿಸಬಲ್ಲಂತಹ ಹಾಗೂ ಇಡೀ ಮಾನವಕುಲಕ್ಕೆ ಸೂಕ್ತವಾದ ಒಂದು ಸಾಮಾಜಿಕ ಜೀವನ ವ್ಯವಸ್ಥೆಯು ಬಹಳ ಅಗತ್ಯವಾಗಿದೆ. ರಾಷ್ಟ್ರ ಮತ್ತು ಜನಾಂಗಗಳ ವಿಭಿನ್ನ ಸಂಘಟನೆಗಳ ಮತ್ತು ವಿಭಿನ್ನ ರಾಜಕೀಯ ವ್ಯವಸ್ಥೆಯ ಕಾಲವು ಕಳೆದು ಹೋಯಿತು. ಮುಂದೆ ಲೋಕದಲ್ಲಿ ಇಡೀ ಮಾನವಕುಲವನ್ನು ಏಕೀಕರಿಸಿ, ಒಂದೇ ಸಾಮಾಜಿಕ ವ್ಯವಸ್ಥೆಯನ್ನು ನಿರ್ಮಿಸ ಬಲ್ಲಂತಹ ಸಂದೇಶ, ವಿಚಾರಧಾರೆ, ತತ್ವ ಸಿದ್ಧಾಂತಗಳು ಸರ್ವ ವ್ಯಾಪಕವಾಗಬಹುದು ಮತ್ತು ಉಳಿದುಕೊಳ್ಳಬಹುದು. ಈ ಹಿಂದೆ ಹೇಳಿದಂತೆ ಈ ತತ್ವ ಸಿದ್ಧಾಂತವು ಪ್ರವಾದಿಗಳ ಸಂದೇಶಗಳಲ್ಲಿ ಹೊರತು ಬೇರೆಲ್ಲಿಯೂ ಅಸ್ತಿತ್ವದಲ್ಲಿಲ್ಲ. ಆದ್ದರಿಂದ ಲೋಕವು ವಾಸ್ತವದಲ್ಲಿ ತನ್ನ ಸಮಸ್ಯೆಗಳ ನೈಜ ಪರಿಹಾರದ ಬಗ್ಗೆ ಗಂಭೀರವಾಗಿ ಆಲೋಚಿಸುವುದಿದ್ದರೆ ಅದಕ್ಕೆ ಈ ಕರೆಯನ್ನು ಸ್ವೀಕರಿಸದೆ ನಿರ್ವಾಹವಿಲ್ಲ. ಸಂಕುಚಿತತೆ ಮತ್ತು ಹಠಮಾರಿತನದ ನಿಮಿತ್ತ ಇನ್ನೂ

ಹೆಚ್ಚು ನಷ್ಟ ಅನುಭವಿಸಿದ ಬಳಿಕ ಅದರ ಬಗ್ಗೆ ಗಮನಿಸುವುದಾದರೆ ಅದು ಬೇರೆ ವಿಷಯ.

ನಮ್ಮ ನೈಜ ಮತ್ತು ಮೂಲಭೂತ ಕರೆಯು ಲೋಕವು ತನ್ನ ಸಮಸ್ಯೆಗಳ ಉತ್ತಮ ಹಾಗೂ ಸಮಗ್ರ ಪರಿಹಾರವನ್ನು ಬಯಸುವುದಿದ್ದರೆ ತನ್ನ ನೈತಿಕ, ಸಾಮಾಜಿಕ ಮತ್ತು ರಾಜಕೀಯ ಜೀವನದಲ್ಲಿ ಪ್ರವಾದಿಗಳ ನೇತೃತ್ವವನ್ನು ಅಂಗೀಕರಿಸಬೇಕು. ನಾವು ಇದೇ ಕರೆಯನ್ನು ರಾಷ್ಟ್ರ ಅಥವಾ ಜನಾಂಗಭೇದವಿಲ್ಲದೆ ಇಡೀ ಮಾನವಕುಲಕ್ಕೆ ನೀಡುತ್ತಿದ್ದೇವೆ. ಆದರೆ ಮುಖ್ಯವಾಗಿ ಪ್ರವಾದಿಗಳ ಉತ್ತರಾಧಿಕಾರಿಗಳೆಂದೂ ಅವರ ಸಂದೇಶವಾಹಕರೆಂದೂ ಅವರ ಶಿಕ್ಷಣ ಶೀಲಗಳ ಅನುಗಾಮಿಗಳೆಂದೂ ಪರಿಗಣಿಸಲ್ಪಡುವ ಮುಸ್ಲಿಮರೊಂದಿಗೆ ಇನ್ನೂ ಕೆಲವು ವಿಷಯಗಳನ್ನು ಹೇಳಲಿಕ್ಕಿದೆ- ಅವರು ವಾಸ್ತವದಲ್ಲಿ ಪ್ರವಾದಿಗಳ ಉತ್ತರಾಧಿಕಾರಿಗಳೆಂದೂ ಅವರ ಸಂದೇಶದ ವಾಹಕರೆಂದೂ ಅವರ ಶಿಕ್ಷಣ ಶೀಲಗಳ ಅನುಗಾಮಿಗಳೆಂದೂ ವಾದಿಸುವುದಿದ್ದರೆ ಮುಸ್ಲಿಮನೆಂದು ಬಹಿರಂಗಪಡಿಸುವುದರ ಅರ್ಥ ಅದೇ ಆಗಿದೆ. ಅವರು ತಮ್ಮ ವೈಯಕ್ತಿಕ, ಸಾಮಾಜಿಕ, ರಾಜಕೀಯ ಜೀವನ ಮತ್ತು ಗುಣ ನಡತೆ, ಲೇವಾದೇವಿ, ಆರ್ಥಿಕ, ವಾಣಿಜ್ಯವ್ಯವಹಾರ ಹಾಗೂ ತಮ್ಮ ವೈಯಕ್ತಿಕ, ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಸಂಬಂಧಗಳು ಎಷ್ಟರ ಮಟ್ಟಿಗೆ ಇಸ್ಲಾಮಿಗೆ ಅನುಗುಣವಾಗಿದೆಯೆಂಬುದನ್ನು ಪರಿಶೀಲಿಸಿ ನೋಡಲಿ. ಅವರು ಇಸ್ಲಾಮನ್ನು ತಮ್ಮ ಧರ್ಮವೆಂದು ಪರಿಗಣಿಸುವುದಿದ್ದರೆ, ಆ ಧರ್ಮವನ್ನು ನಿಜವಾಗಿಯೂ ತಮ್ಮ ಧರ್ಮವನ್ನಾಗಿ ಮಾಡಿಕೊಳ್ಳಲಿ. ಅದನ್ನು ವೈಯಕ್ತಿಕವಾಗಿ ತನ್ನ ಜೀವನದಲ್ಲಿ ಮತ್ತು ಸಾಮೂಹಿಕವಾಗಿ ತನ್ನ ಮನೆಯಲ್ಲಿ, ತನ್ನ ಸಮಾಜದಲ್ಲಿ, ತನ್ನ ಶಿಕ್ಷಣಾಲಯಗಳಲ್ಲಿ, ತನ್ನ ನೀತಿ ನಡವಳಿಕೆಗಳಲ್ಲಿ, ವ್ಯಾಪಾರ ವಹಿವಾಟುಗಳಲ್ಲಿ, ವ್ಯವಹಾರಗಳಲ್ಲಿ, ತನ್ನ ಸಂಘ ಸಂಸ್ಥೆಗಳಲ್ಲಿ ಮತ್ತು ಸಾಮೂಹಿಕವಾಗಿ ತನ್ನ ರಾಷ್ಟ್ರೀಯ ಧೋರಣೆಗಳಲ್ಲಿ ಕಾರ್ಯತಃ ಸಂಸ್ಥಾಪಿಸಿ ತನ್ನ ಮಾತು ಕೃತಿಗಳಿಂದ ಇಸ್ಲಾಮ್ ತೋರಿಸಿಕೊಟ್ಟಿರುವ ಹಾದಿಯೇ ಹಿತ ಮತ್ತು ಮೋಕ್ಷದಾಯಕವೆಂದು ಸಾಕ್ಷ್ಯ ವಹಿಸಬೇಕು. ಮುಸ್ಲಿಮನೆಂಬ ನೆಲೆಯಲ್ಲಿ ಧರ್ಮವನ್ನು ಸರಿಯಾಗಿ ಸ್ಥಾಪಿಸಿ ಸತ್ಯದ ಸಾಕ್ಷಿಗಳಾಗುವುದು ನಿಮ್ಮ ನೈಜ ಮತ್ತು ಏಕೈಕ ಜೀವನೋದ್ದೇಶವೆಂದು ನಾವು ಅವರಿಗೆ ಜ್ಞಾಪಿಸಿಕೊಡುತ್ತೇವೆ. ನಿಮ್ಮ ಎಲ್ಲ ಕಾರ್ಯ ಚಟುವಟಿಕೆಗಳ ಉದ್ದೇಶ ಮತ್ತು ಮಾನದಂಡವು ಇಸ್ಲಾಮಿಗೆ ವಿರುದ್ಧವಾದ ಎಲ್ಲ ವಸ್ತುಗಳಿಂದಲೂ ದೂರ ಸರಿಯುವುದೇ ಆಗಿರಬೇಕು. ಇಸ್ಲಾಮನ್ನು ಗಮನದಲ್ಲಿಟ್ಟು ತಮ್ಮೆಲ್ಲ ಮಾತು, ಕೃತಿಗಳ ಮರು ಪರಿಶೀಲನೆ ನಡೆಸಬೇಕು ಮತ್ತು ತಮ್ಮೆಲ್ಲ ಪ್ರಯತ್ನ ಪರಿಶ್ರಮಗಳನ್ನು ಸಂಪೂರ್ಣವಾಗಿ ಧರ್ಮ ಸಂಸ್ಥಾಪನೆಯ ಕಾರ್ಯದಲ್ಲಿ ತೊಡಗಿಸಬೇಕು. ಅದರ ಸತ್ಯ ಸಾಕ್ಷ್ಯದ ಹೊಣೆಯನ್ನು ಸರಿಯಾಗಿ ಪೂರೈಸಬೇಕು. ಅದರೊಂದಿಗೆ ಲೋಕಕ್ಕೆ ಅಲ್ಲಾಹನ ಧರ್ಮದ ಬಾಧ್ಯತೆ ಸಂಪೂರ್ಣಗೊಳ್ಳುವ ರೀತಿಯಲ್ಲಿ ಕರೆ ನೀಡಬೇಕು. ನೀವು ಒಂದು ವೇಳೆ ಈ ಕಾರ್ಯಕ್ಕೆ ಸಿದ್ಧರಿಲ್ಲವೆಂದಾದರೆ ನಿಮ್ಮ ಕೆಲಸ ಕಾರ್ಯ ಮತ್ತು ಘೋಷಣೆಗಳಲ್ಲಿ ಇಸ್ಲಾಮಿನ ಹೆಸರೆತ್ತಿ ಅದಕ್ಕೆ ಕಳಂಕ ಹಚ್ಚುವುದರಿಂದಲಾದರೂ ದೂರವಿರಿ. ನಿಮ್ಮ ಕಲಹ, ಸಂಘರ್ಷಗಳಲ್ಲಿ ಅನಗತ್ಯವಾಗಿ ಇಸ್ಲಾಮನ್ನು ಒಂದು ಪಕ್ಷವಾಗಿಸಿ ಇತರರನ್ನು ಮೆಚ್ಚಿಸಬೇಡಿರಿ. ನಾವು ಮುಸ್ಲಿಮ್ ಬಾಂಧವರೊಡನೆ ಸ್ಪಷ್ಟವಾಗಿ ಹೇಳುತ್ತೇವೆ- ಮುಸ್ಲಿಮನಾಗಿ ಮುಸ್ಲಿಮೇತರನಾಗಿರುವುದು ಮತ್ತು ಇಸ್ಲಾಮಿನ ತಪ್ಪು ಮಾರ್ಗದರ್ಶನ ನೀಡಿ ಇತರರನ್ನೂ

ಅಲ್ಲಾಹನ ಧರ್ಮದಿಂದ ವಂಚಿಸುವುದು, ತನ್ಮೂಲಕ ಇತರರಿಗೂ ಸನ್ಮಾರ್ಗದ ದ್ವಾರವನ್ನು ಮುಚ್ಚುವುದು ಘೋರ ಪಾಪವಾಗಿದೆ. ಅದರಿಂದ ನಿಮಗೆ ಇಹದಲ್ಲಿಯೂ ಸುಖ ದೊರೆಯದು. ಪರಲೋಕದಲ್ಲಿಯೂ ಶಿಕ್ಷೆಯಿಂದ ವಿನಾಯಿತಿ ದೊರೆಯದು. ಈ ಪಾಪಕ್ಕೆ ನೀಡಲಾಗಿರುವ ಶಿಕ್ಷೆಯ ಕುರಿತು ನೀವು ಕುರ್‌ಆನಿನಲ್ಲಿ ಓದಿದ್ದೀರಿ. ಯಹೂದಿ ಜನಾಂಗವು ಅಲ್ಲಾಹನ ಧರ್ಮದ ಬಗ್ಗೆ ಇದೇ ನೀತಿಯನ್ನು ಅನುಸರಿಸಿತ್ತು. ಅವರ ಉದಾಹರಣೆಯು ನಿಮ್ಮ ಕಣ್ಣ ಮುಂದಿದೆ. ಇತರ ಜನಾಂಗಗಳೂ ಅಲ್ಲಾಹನ ಧರ್ಮದೊಂದಿಗೆ ಅದೇ ನೀತಿಯನ್ನು ಅನುಸರಿಸಿದರೆ ಅವರೂ ಅದರ ಅಂತಿಮ ಪರಿಣಾಮದಿಂದ ಸುರಕ್ಷಿತರಾಗಲಾರರು.

---